# ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ಶ್ರೀಕಾಂತ.ಎಲ್

ಮಾರ್ಗದರ್ಶಕರು

ಡಾ.ಎಚ್.ಡಿ.ಪ್ರಶಾಂತ್

ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ

ಅಭಿವೃದ್ಧಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)

**ಸಂಶೋಧಕರು**
**ಶ್ರೀಕಾಂತ.ಎಲ್**
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹಂಪಿ-೫೮೩೨೭೬

**ಮಾರ್ಗದರ್ಶಕರು**
**ಡಾ.ಎಚ್.ಡಿ.ಪ್ರಶಾಂತ್**
**ಪ್ರಾಧ್ಯಾಪಕರು**
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹಂಪಿ-೫೮೩೨೭೬



**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹಂಪಿ-೫೮೩೨೭೬
೨೦೧೮

## ಸಂಶೋಧಕರ ಘೋಷಣಾ ಪತ್ರ

**ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ೨೦೧೮-೧೯ನೇ ಶೈಕ್ಷಣಿಕ ಸಾಲಿನಲ್ಲಿ ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ.ಎಚ್.ಡಿ.ಪ್ರಶಾಂತ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 06/12/18
ಸ್ಥಳ :ವಿದ್ಯಾರಣ್ಯ

**ಸಂಶೋಧಕರು**
**(ಶ್ರೀಕಾಂತ.ಎಲ್)**
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹಂಪಿ-೫೮೩೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀಕಾಂತ.ಎಲ್** ಇವರು ೨೦೧೮-೧೯ನೇ ಶೈಕ್ಷಣಿಕ ಸಾಲಿನಲ್ಲಿ ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಅರ್ಥಶಾಸ್ತ್ರ ವಿಷಯದ ಕುರಿತು ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ : ವಿದ್ಯಾರಣ್ಯ

ಮಾರ್ಗದರ್ಶಕರು
**(ಡಾ. ಎಚ್.ಡಿ. ಪ್ರಶಾಂತ್)**
**ಪ್ರಾಧ್ಯಾಪಕರು**
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹಂಪಿ-೫೮೩೨೭೬

## ಪರಿವಿಡಿ

# ಪರಿಶಿಷ್ಟ

## ಕೋಷ್ಟಕಗಳು

# ಅಧ್ಯಾಯ ಒಂದು

## ಅಧ್ಯಯನ ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಮಹತ್ವ

೧.೧ ಪ್ರಸ್ತಾವನೆ
೧.೨ ಪ್ರಮುಖ ಅಧ್ಯಯನಗಳ ಸಮೀಕ್ಷೆ
೧.೩ ಅಧ್ಯಯನದ ಉದ್ದೇಶ
೧.೪ ಅಧ್ಯಯನದ ವಿಧಾನ
೧.೫ ಅಧ್ಯಯನದ ವ್ಯಾಪ್ತಿ
೧.೬ ಮಿತಿ ಮತ್ತು ಮಹತ್ವ
೧.೭ ಅಧ್ಯಾಯಗಳ ವಿನ್ಯಾಸ
೧.೮ ಪರಾಮರ್ಶನ ಗ್ರಂಥಗಳು

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಮಹತ್ವ

### ೧.೧ ಪ್ರಸ್ತಾವನೆ

ಗಣಿಗಾರಿಕೆಯು ಗ್ರಾಮೀಣ ಜನರ ಸಾಮಾಜಿಕ, ಆರ್ಥಿಕ ಮತ್ತು ಪರಿಸರದ ಬದುಕಿನ ಮೇಲೆ ಬೀರಿರುವ ಪರಿಣಾಮಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಆಶಯ. ಗಣಿಗಾರಿಕೆಯು ಕೇವಲ ಆರ್ಥಿಕ ಬೆಳವಣಿಗೆಯ ದೃಷ್ಟಿಕೋನಕ್ಕೆ ಪೂರಕವಾದ ಅಭಿವೃದ್ಧಿ ಚಟುಚಟಿಕೆಗಳನ್ನು ಸಾಧಿಸುವ ಸಾಧನವಾಗಿ ಕಂಡು ಬರುತ್ತದೆ. ಇದು ಕೇವಲ ಆರ್ಥಿಕ ಬೆಳವಣಿಗೆಯ ಸಂಗತಿಗಳಿಗೆ ಪೂರಕವಾಗಿದೆ. ಹೀಗಾಗಿ ಇದನ್ನು ಜನರ ಬದುಕಿನ ನೆಲೆಯಲ್ಲಿ ಅಭಿವೃದ್ಧಿ ಎಂದು ಹೇಳಲಾಗುವುದು ಅಥವಾ ಕರೆಯುವುದು ಕಷ್ಟಸಾಧ್ಯ. ಏಕೆಂದರೆ ಗಣಿಗಾರಿಕೆಯು ಆರ್ಥಿಕ, ಸಾಮಾಜಿಕ, ಪರಿಸರ, ಸಾಂಸ್ಕೃತಿಕ ಮತ್ತು ಜನರ ಬದುಕಿಗೆ ಅಗತ್ಯವಾದ ಜೀವನಾವಶ್ಯಕತೆಗಳಾದ ಅನ್ನ, ಅಕ್ಷರ, ಆರೋಗ್ಯ, ಕುಡಿಯುವ ನೀರು, ದುಡಿಮೆಯ ಅವಕಾಶಗಳು, ವಸತಿ ಇತ್ಯಾದಿ ಸಂಗತಿಗಳನ್ನು ಒಳಗೊಳ್ಳದಿರುವುದು ಗಣಿಗಾರಿಕೆಗೆ ಒಳಪಟ್ಟಿರುವ ಪ್ರದೇಶಗಳಲ್ಲಿ ಕಣ್ಣಿಗೆ ರಾಚುವಂತೆ ಕಾಣುತ್ತದೆ. ಆದರೆ ಗಣಿಗಾರಿಕೆಯಿಂದ ಕೆಲವರ ಆದಾಯ ಅಧಿಕವಾಗಿದೆ. ಗಣಿ ಪ್ರದೇಶದ ಗ್ರಾಮೀಣ ಜನ ಸಮುದಾಯಗಳು ಅದರಲ್ಲಿಯೂ ಬಡತನ, ದುಡಿಮೆಯಲ್ಲಿನ ಅವಕಾಶದ ಬಿಕ್ಕಟ್ಟುಗಳನ್ನು, ಆದಾಯದಲ್ಲಿನ ಅಸಮಾನತೆಯನ್ನು, ಕೃಷಿ ನಷ್ಟ, ಕುಡಿಯುವ ನೀರು, ವಸತಿ–ನೈರ್ಮಲ್ಯದ ಕೊರತೆಯನ್ನು, ಪರಿಸರ ಮಾಲಿನ್ಯದಿಂದಾದ ಆರೋಗ್ಯದ ಸವಾಲುಗಳನ್ನು ಎದುರಿಸುತ್ತಿವೆ. ಇದು ನೈಸರ್ಗಿಕ ಸಂಪನ್ಮೂಲಗಳ ದುರ್ಬಳಕೆಯೇ ಅಭಿವೃದ್ಧಿಯಂತೆ ಕಾಣುವಂತೆ ಮಾಡಿದೆ. ಸಾಮಾಜಿಕ ಅಭಿವೃದ್ಧಿ ನೆಲೆಯಿಂದ ಇದನ್ನು ಅಭಿವೃದ್ಧಿ ಎಂದು ಮಾಪನ ಮಾಡುವುದು ಜೀವ ವಿರೋಧಿಯಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಗಣಿಗಾರಿಕೆಯು ಮುಖ್ಯವಾಗಿ ನಡೆಯುತ್ತಿದೆ. ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯದ ಗ್ರಾಮೀಣ ಪ್ರದೇಶ ಹಾಗೂ ಅದರ ಸುತ್ತಮುತ್ತ ಪ್ರದೇಶದ ಮೇಲೆ ಗಬೀರವಾದ ಪರಿಣಾಮಗಳನ್ನು ಉಂಟುಮಾಡಿದೆ. ಇದರ ಪರಿಣಾಮಗಳು ಕೇವಲ ಪರಿಸರ ಮತ್ತು ಆರ್ಥಿಕತೆ ವ್ಯವಸ್ಥೆಯ ಮೇಲೆ ಮಾತ್ರ ಉಂಟಾಗದೆ, ಇಡ್ಡಿ ಸಮಾಜದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯದ ಬದುಕಿನಲ್ಲಿ ಹಲವು ಸ್ಥಿತ್ಯಂತರಗಳನ್ನು ತಂದಿದೆ. ಗಣಿಗಾರಿಕೆಯ ದಂಧೆ ವ್ಯಾಪಕವಾಗಿ ನಡೆಯುತ್ತಿರುವ ಪ್ರದೇಶದಲ್ಲಿ ಜನರ ಬದುಕಿನ ಮೇಲೆ ಅದು ಉಂಟುಮಾಡಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಪರಿಸರದ ಬಿಕ್ಕಟ್ಟುಗಳನ್ನು ತಂದಿದೆ. ಆ ಬಿಕ್ಕಟ್ಟುಗಳು ಯಾವುವೆಂದರೆ, ಆರೋಗ್ಯ, ಆಹಾರ, ಅಕ್ಷರ, ಕೃಷಿ, ಕೃಷಿ ಸಂಬಂಧಿ, ಆದಾಯ, ವೃತ್ತಿ, ವಸತಿ, ಪರಿಸರ ಮಾಲಿನ್ಯ, ಕುಡಿಯುವ ನೀರು, ಧೂಳು ಮತ್ತು ಹೂಳು ಇನ್ನೂ ಮುಂತಾದವುಗಳಾಗಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಗಣಿಗಾರಿಕೆಯಿಂದ ಕಳೆದ ಎರಡು ದಶಕಳಿಂದಲೂ ನಡೆಯುತ್ತಿರುವ ಕಾನೂನಾತ್ಮಕ ಮತ್ತು ಕಾನೂನು ಬಾಹಿರ ಮೈನಿಂಗ್ ಮಾಫಿಯಾ ಎಲ್ಲಾ ಕ್ಷೇತ್ರಗಳನ್ನು ಪ್ರತೇಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರಭಾವಿಸಿದೆ. ಅನಿಯಮಿತ ಗಣಿಗಾರಿಕೆಯು ಕೃಷಿಕರ ಬದುಕಿನ ಮೇಲೆ ನೇರವಾಗಿ ಪ್ರಭಾವಿಸಿದೆ. ಗ್ರಾಮೀಣ ಪ್ರದೇಶದ ಕೃಷಿ ಜಮೀನಿನಲ್ಲೂ ಖನಿಜ ಸಂಪನ್ಮೂಲಗಳು ಎರಡು ರಿಂದ ಮೂರು ಅಡಿಯ ಆಳದಲ್ಲಿ ಇರುವುದರಿಂದ ಕೃಷಿ ಭೂಮಿಯಲ್ಲಿ ಕಬ್ಬಿಣದ ಅದಿರು ತೆಗೆಯುವ ಸಣ್ಣ ಮತ್ತು ಅತಿ ಸಣ್ಣ ರೈತರು ಮಾಡಿದ್ದಾರೆ. ಈ ಗಣಿಗಾರಿಕೆಯು ಕೃಷಿ ಭೂಮಿಗೂ ವ್ಯಾಪಿಸಿರುವುದರಿಂದ ರೈತರು ಕೃಷಿ ಉತ್ಪನ್ನದ ಇಳುವರಿ ಮತ್ತು ಕೃಷಿ ಉತ್ಪಾದನಾ ಚಟುವಟಿಕೆಗಳು ಮಹತ್ವವನ್ನು ಕಳೆದುಕೊಂಡವು. ಕೃಷಿ ದುಡಿಮೆಗಿಂತ ಹೆಚ್ಚು ಆದಾಯವನ್ನು ಕಡಿಮೆ ಅವಧಿಯಲ್ಲಿ ಗಣಿಗಾರಿಕೆಯು ನೀಡುತ್ತದೆ ಎಂದು ತಿಳಿದ ಕೃಷಿಯಲ್ಲಿ ವೈಫಲ್ಯ ಕಂಡಾಗ ಕೃಷಿಕರು ಗಣಿಗಾರಿಕೆಯ ಚಟುವಟಿಕೆಯನ್ನು ಹೆಚ್ಚು ಅವಲಂಬಿಸಿದ್ದರು. ಆಗ ಕೃಷಿಕರು ತಮ್ಮ ಜಮೀನಿನಲ್ಲಿ ಇರುವ

ಖನಿಜವನ್ನು ಹೊರ ತೆಗೆಯುವ ಕೆಲಸಕ್ಕೆ ಮುಂತಾದ ಸಂದರ್ಭದಲ್ಲಿ ಗಣಿಗಾರಿಕೆಯು ಕೃಷಿ ಭೂಮಿ ಮತ್ತು ಕೃಷಿ ಸಮಾಜದಲ್ಲಿ ಹಲವು ಬಿಕ್ಕಟುಗಳನ್ನು ಹುಟ್ಟು ಹಾಕಿತು. ಮತ್ತೊಂದಡೆ ಕೃಷಿಕರು ವ್ಯವಸಾಯ ಮಾಡಲು ಗಣಿಗಾರಿಕೆ ನಡೆದ ಸಂದರ್ಭದಲ್ಲಿ ವಾಹನಗಳ ಓಡಾಟದಿಂದಾಗುವ ಧೂಳು ಬೆಳೆಗಳಿಗೆ ಹಾನಿ ಉಂಟು ಮಾಡಿದೆ. ಹೀಗೆ ಕಾಲ ಕ್ರಮೇಣ ಗಣಿಗಾರಿಕೆ ವ್ಯಾಪಕವಾದಾಗ ಕೃಷಿ ಬದುಕಲ್ಲಿ ಪಲ್ಲಟಗಳು ಉಂಟಾಗಿದೆ. ಈ ಪಲ್ಲಟಗಳು ಕೃಷಿ ಆದಾಯ ಮತ್ತು ಉತ್ಪಾದನಾ ಪ್ರಮಾಣವನ್ನು ಕುಂಠಿತಗೊಳ್ಳುವಂತೆ ಮಾಡಿವೆ. ಇದು ಕೃಷಿಕರನ್ನು ಕೃಷಿ ಚಟುವಟಿಕೆಯಿಂದ ದೂರ ಉಳಿಯುವಂತೆ ಮಾಡಿದೆ. ಗಣಿ ಗ್ರಾಮೀಣ ಪ್ರದೇಶದಲ್ಲಿ ಸಂಪೂರ್ಣವಾಗಿ ಕೃಷಿಕರ ಆದಾಯ ಮಟ್ಟವನ್ನು ಕುಸಿತಗೊಳ್ಳಿಸಿ, ಜನ ಸಾಮಾನ್ಯರು ಕೆಳಮಟ್ಟದ ಜೀವನ ಸಾಗಿಸುವಂತೆ ಮಾಡಿದೆ. ಗಣಿ ಗ್ರಾಮೀಣ ಪ್ರದೇಶದ ರೈತರು ಗಣಿಗಾರಿಕೆಗಾಗಿ ಮತ್ತು ಗಣಿಕೈಗಾರಿಕೆಗೆ ತಮ್ಮ ಕೃಷಿ ಜಮೀನನ್ನು ಮಾರಾಟ ಮಾಡಿ, ಗಣಿಯಲ್ಲಿ ಕೆಳದರ್ಜೆಯ ವೃತ್ತಿಯಲ್ಲಿ ತೊಡಗಿರುವುದು ಕಾಣಬಹುದಾಗಿದೆ. ಈ ಗಣಿ ಹಾವಳಿಯಿಂದ ಭೂಸವಕಳಿ, ಭೂಸವೆತ, ಭೂ ಅವನತಿ, ನೆಲ ಸಮದಟ್ಟತೆಯ ಕೊರತೆ ಇತ್ಯಾದಿ ಅಂಶಗಳು ಉದ್ಭವಗೊಂಡಿದೆ. ಗಣಿಗಾರಿಕೆ ಚಟುವಟಿಕೆಯಲ್ಲಿ ತೊಡಗದೆ ಕೃಷಿಯನ್ನೇ ಅವಲಂಬಿತರಾಗಿರುವ ರೈತ ಕುಟುಂಬಗಳಿದರೂ ಅವರ ಸಮಸ್ಯೆಗಳೆ ಭಿನ್ನವಾಗಿದೆ. ಅಂದರೆ ಗಣಿಯಿಂದ ಉದ್ಭವಗೊಳ್ಳುವ ಕೆಂಧೂಳು, ಜಲಕಲ್ಮಷ ಮತ್ತು ಭೂ ಅಗೆತಗಳಂತಹ ಮಾಲಿನ್ಯಗಳು ರೈತ ಬೆಳೆದಿರುವ ಇಳುವರಿಯ ಮೇಲೆ ಪರಿಣಾಮ ಬೀರಿದೆ. ಈ ಪರಿಣಾಮಗಳಿಂದಾಗಿ ರೈತ ಬೆಳೆದಿರುವ ಇಳುವರಿ ಪ್ರಮಾಣ ಪ್ರಸ್ತುತವಾಗಿ ಹೊಲಿಸಿಕೊಂಡರೆ ಶೇ.೭೦ರಷ್ಟು ಕಡಿಮೆಯಾಗಲು ಗ್ರಾಮೀಣ ಭಾಗದಲ್ಲಿ ನಡೆದಿರುವ ಗಣಿಗಾರಿಕೆಯೇ ಪ್ರಮುಖ ಕಾರಣವಾಗಿದೆ. ಇದಕ್ಕೆ ಉತ್ತಮ ನಿರ್ದಶನವೆಂದರೆ ಎಚ್.ಡಿ.ಪ್ರಶಾಂತ್ ಅವರ 'ಮಹಿಳೆಯರನ್ನು ಒಳಗೊಳದಿರುವುದೇ ಅಭಿವೃದ್ಧಿ ಮಂತ್ರ' ಎನ್ನುವ ಲೇಖನ ಕರ್ನಾಟಕದಲ್ಲಿ ಕಳೆದ ಹತ್ತು ವರ್ಷಗಳಿಂದ ಕೈಗಾರಿಕೆ ವಲಯ, ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ರಸ್ತೆಗಳ ಅಭಿವೃದ್ಧಿಗಾಗಿ ೯೨೮ ಗ್ರಾಮಗಳ ವ್ಯಾಪ್ತಿಯಲ್ಲಿ ೧೧ಲಕ್ಷ ಎಕರೆಗೂ ಹೆಚ್ಚು ಭೂಮಿಯನ್ನು ಖಾಸಗಿ ಮತ್ತು ಕಾರ್ಪೋರೇಟ್ ಕಂಪನಿಗಳು ಅತ್ಯಂತ ಕಡಿಮೆ ಬೆಲೆಗೆ ಪಡೆದು ಕೃಷಿ ಭೂಮಿಯನ್ನು ಕೃಷಿಯೇತರ ಚಟವಟಿಕೆಗೆ ರೂಪಾಂತರಿಸಿ, ಕೃಷಿ ಬಿಕ್ಕಟ್ಟನ್ನು ಸೃಷ್ಠಿಸಿದೆ. ಈ ಬಗೆಯ ಕೃಷಿ ಬಿಕ್ಕಟ್ಟುಗಳು ಬಳ್ಳಾರಿ ಜಿಲ್ಲೆಯಲ್ಲಿ ನಡೆಯುತ್ತಿರುವ ಗಣಿಗಾರಿಕೆಗೆ ಒಂದು ಉತ್ತಮ ನಿರ್ದಶನವಾಗಿದೆ. ಬಳ್ಳಾರಿ ಗಣಿಗಾರಿಕೆಯು ಕಳೆದ ೨೦ ವರ್ಷಗಳಲ್ಲಿ ಸುಮಾರು ೨೦ಸಾವಿರ ಎಕರೆಗೂ ಹೆಚ್ಚು ಕೃಷಿ ಭೂಮಿಯನ್ನು ಆಡಳಿತವರ್ಗ, ಆಳುವವರ್ಗ, ಕೊಳ್ಳುವವರ ನಡುವೆ ನಡೆಯುವ ಸಂದರ್ಭದಲ್ಲಿ ಗಣಿ ವಲಯ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಮಹಿಳೆಯರು, ಮಕ್ಕಳು, ಹಿರಿಯರು, ಸ್ಥಳೀಯ ಯುವಕರು ಗಣಿ ಪರಿಣಾಮಗಳಿಗೆ ತುತ್ತಾಗಿದ್ದಾರೆ. ಗಣಿಗಾರಿಕೆಯಿಂದ ಗಣಿ ವಲಯದ ಗ್ರಾಮದಲ್ಲಿರುವ ಯುವಕರು ದುಷ್ಚಚಟಗಳಿಗೆ ಬಲಿಯಾಗುವಂತೆ ಮಾಡಿದೆ. ಹಾಗೂ ಇಲ್ಲಿನ ಮಹಿಳೆಯರು ಮತ್ತು ಮಕ್ಕಳು ಪೌಷ್ಟಿಕ ಕೊರತೆಯ ಪರಿಣಾಮಗಳಿಂದ ಗಂಭೀರವಾಗಿ ಬಳಲುವಂತೆ ಮಾಡಿದೆ. ಒಟ್ಟಾರೆ ಈ ಅಭಿವೃದ್ಧಿಯ ಪರಿಕಲ್ಪನೆಗೆ ಸಂಬಂಧಿಸಿದಂತೆ ಸರ್ಕಾರವು ರೂಪಿಸಿರುವ ಯೋಜನೆಗಳು ದುಡಿಯುವ ವರ್ಗಗಳ ಪರವಾಗಿರದೇ, ಬಂಡವಾಳಶಾಹಿ ಮತ್ತು ಆಳುವ ವರ್ಗದ ಪರವಾಗಿರುವುದು ಯೋಜನೆಯ ವಿಫಲತೆಗೆ ಪ್ರಮುಖ ಕಾರಣವಾಗಿದೆ. ಹಾಗಾಗಿ ಇಂದು ಯೋಜನೆಗಳನ್ನು ರೂಪಿಸುವಾಗ ದುಡಿಯುವ ವರ್ಗದ ಪರವಾಗಿ ನೋಡದೆ ಇರುವುದು ಅಭಿವೃದ್ಧಿ ಪರಿಕಲ್ಪನೆಯ ಒಂದು ಮಂತ್ರ – ತಂತ್ರವಾಗಿಯೇ ಉಳಿದಿದೆ ಎಂದು ಅಭಿವೃದ್ಧಿ ಚಿಂತಕರ ವಾದ ಪ್ರಬಲವಾಗಿದೆ(ಎಚ್.ಡಿ ಪ್ರಶಾಂತ್, ೨೦೧೬). ಈ ಹಿನ್ನಲೆಯಲ್ಲಿ ಗಣಿಗಾರಿಕೆಗೂ ಗ್ರಾಮೀಣ ಜನರ ಬದುಕಿಗೂ ಇರುವ ಸಂಬಂಧವನ್ನು, ಅದು ಉಂಟು ಮಾಡಿರುವ ಪರಿಣಾಮಗಳನ್ನು ಅಧ್ಯಯನ ಮಾಡಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನ ಮಾಡಲಾಗಿದೆ.

ಗಣಿಗಾರಿಕೆಯ ಖನಿಜ ಸಂಪತ್ತು ಕೇವಲ ಒಂದು ಪ್ರದೇಶಕ್ಕೆ ಸಿಮಿತವಾಗಿರುವುದಿಲ್ಲ, ಅದು ಇಡೀ ಪ್ರಪಂಚದ ಉದ್ದಕ್ಕೂ ವ್ಯಾಪಿಸಿದೆ. ಆಧುನಿಕವಾದದ ನಂತರ ಇದರ ಪ್ರಯೋಜನಕ್ಕಿಂತಲೂ ಜನ ಸಮುದಾಯದ ಮತ್ತು ಸಮಾಜದ ಮೇಲಾಗಿರುವ ಹಾನಿಕರಕಗಳೇ ದುಪ್ಪಟ್ಟಾಗಿದೆ. ಈ

ಗಣಿಗಾರಿಕೆಯು ಪ್ರಮುಖವಾಗಿ ಜಪಾನ್, ಚೀನಾ, ಕೆನೆಡ, ಜರ್ಮನಿ, ಆಸ್ಟ್ರೇಲಿಯಾ, ಅರ್ಜೆಂಟೀನಾ, ಭಾರತ ಮುಂತಾದ ರಾಷ್ಟ್ರಗಳಲ್ಲಿಯೇ ಕಂಡು ಬರುತ್ತದೆ. ಭಾರತದಲ್ಲಿ ಗಣಿಗಾರಿಕೆಯು ಕೆಲವು ಶತಮಾನಗಳಿಂದ ಬಂದಿದ್ದಲ್ಲ. ಅದು ಸಾವಿರಾರು ವರ್ಷಗಳ ಹಿಂದೆಯೇ ನಮ್ಮ ಪೂರ್ವಜರು ಗಣಿಗಾರಿಕೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಮುಂದುವರೆದು ಭಾರತದ ಗಣಿಗಾರಿಕೆಯು ಕರ್ನಾಟಕ, ಆಂಧ್ರ ಪ್ರದೇಶ, ಗೋವಾ ಇತ್ಯಾದಿ ಪ್ರದೇಶಗಳಲ್ಲೂ ಹರಡಿದೆ. ಕರ್ನಾಟಕದಲ್ಲಿ ಬಳ್ಳಾರಿ, ತುಮಕೂರು, ಚಿತ್ರದುರ್ಗಗಳಲ್ಲಿ ಕಬ್ಬಿಣದ ಅದಿರಿನ ಗಣಿಗಾರಿಕೆಯೂ ವ್ಯಾಪಕವಾಗಿ ಹರಡಿವೆ. ಅದು ಅಲ್ಲಿಯ ಜನರ ಸಾಮಾಜಿಕ, ಆರ್ಥಿಕ ಸ್ಥಿತಿಯನ್ನು ಪ್ರಭಾವಿಸುವಷ್ಟೆ ಅಭಿವೃದ್ಧಿಯನ್ನು ಸಾಧಿಸಿ ಪ್ರೇರಕ ಶಕ್ತಿಯಾಗಿ ಬೆಳೆದಿತ್ತು. ಆದರೆ ಕಬ್ಬಿಣದ ಅದಿರು, ತಾಮ್ರ ಮ್ಯಾಂಗನೀಸ್, ಬಾಕ್ಸೈಟ್, ಕ್ಯಾಲ್ಸಿಯಂ, ಅಲ್ಯೂಮಿನಿಯಂ, ಗ್ರಾನೈಟ್ ಇತ್ಯಾದಿ ಖನಿಜ ರಾಶಿಯನ್ನು ತನ್ನ ಮಡಿಲಲ್ಲಿ ಇರಿಸಿಕೊಂಡಿದೆ. ಈ ಭೂ ಗರ್ಭದಲ್ಲಿ ಅಡಗಿಕೊಂಡಿರುವ ಖನಿಜಾಂಶಗಳನ್ನು ಹೊರಗೆ ಅಗೆದು ತೆಗೆದಾಗ ಅವು ಸ್ಥಳೀಯರ ಮೇಲೆ, ಕೃಷಿಯ ಮೇಲೆ ಪರಿಣಾಮ ಬೀರತೊಡಗಿತ್ತು. ಇದರಿಂದ ಕೃಷಿ ಭೂಮಿಯ ಫಲವತ್ತತೆ ಕಡಿಮೆಯಾಗಿ ಇಳುವರಿ ಕಡಿಮೆಯಾಗುತ್ತಿದೆ. ಕೃಷಿ ಸಂಪೂರ್ಣವಾಗಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕುಂಠಿತಗೊಂಡಿದೆ. ಗಣಿಗಾರಿಕೆಗಾಗಿಯೇ ರೈತರ ಕೃಷಿ ಭೂಮಿಯನ್ನು ಖಾಸಗಿ ಕಂಪನಿ ಮತ್ತು ಕಾರ್ಪೊರೇಟ್ ಕಂಪನಿಗಳು ಸ್ವಾಧೀನ ಪಡೆಸಿಕೊಂಡು ಅಲ್ಲಿ ಗಣಿ ಪೂರಕ ಕೈಗಾರಿಕೆಗಳನ್ನು ನಿರ್ಮಿಸಿಕೊಂಡಿರುವ ಪರಿಣಾಮ ಕೃಷಿಕರು ತಮ್ಮ ಕೃಷಿ ಭೂಮಿಯನ್ನು ಕಳೆದುಕೊಂಡು ಕೃಷಿ ಚಟುವಟಿಕೆಯಲ್ಲಿ ತೊಡಗುವುದು ನಿಷ್ಕ್ರೀಯವಾಯಿತು. ಗಣಿಗಾರಿಕೆ ನಡೆದಾಗ ಭೂ ಗರ್ಭದಲ್ಲಿ ಅಡಗಿರುವ ಖನಿಜ ಸಂಪತ್ತು ತೀವ್ರವಾಗಿ ಅಗೆಯಲು ಪ್ರಾರಂಭಿಸಿದಾಗ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಪ್ರತಿದಿನ ೬೦೦೦ಕ್ಕೂ ಹೆಚ್ಚಿನ ಲಾರಿಗಳು ಅದಿರನ್ನು ತುಂಬಿಕೊಂಡು ಕೃಷಿ ಭೂಮಿ ರಸ್ತೆಯ ಎರಡು ಬದಿಯಲ್ಲೂ ಸಂಚರಿಸುತ್ತಿದ್ದವು. ಈ ಲಾರಿಗಳ ಸಂಚಾರದಿಂದಾಗುವ ಧೂಳು ಸುತ್ತಲೂ ಇರುವ ನೂರಾರು ಕೃಷಿ ಭೂಮಿಯಲ್ಲಿ ಬೆಳೆದಿರುವ ಬೆಳೆಗಳ ಮೇಲೆ ಅಪಾರ ಹಾನಿಯನ್ನು ಉಂಟು ಮಾಡಿವೆ. ಈ ಪರಿಣಾಮ ಗಣಿಗಾರಿಕೆ ನಡೆದಾಗ ಅಧಿಕವಾಗಿ ಕಂಡು ಬಂದರೂ, ಗಣಿ ಸ್ಥಗಿತತೆಯ ನಂತರ ಸ್ವಲ್ಪ ಮಟ್ಟಿನ ಬದಲಾವಣೆಯಾಗಿವೆ. ಗಣಿಗಾರಿಕೆ ಚಟುವಟಿಕೆ ನಿಷ್ಕ್ರೀಯವಾದ ನಂತರ ಅದರ ಪರಿಣಾಮಗಳು ಕಾಲಕ್ರಮೇಣ ಗ್ರಾಮೀಣ ಪ್ರದೇಶದಲ್ಲಿ ಹಾಗೆ ಇರುವುದು ವಾಸ್ತವವಾಗಿರುವ ಅಂಶವಾಗಿದೆ. ಗಣಿಗಾರಿಕೆಯಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಕಣಗಳು ರೈತ ಬೆಳೆದ ಪೈರು ಎಲೆಗಳ ಸಂದುಗಳಲ್ಲಿ ಆವರಿಸಿಕೊಂಡಾಗ ಬೆಳೆಗಳು ಎತ್ತರವಾಗಿ ಬೆಳೆಯದೆ ಕುಬ್ಜ ವ್ಯವಸ್ಥೆಯಲ್ಲಿಯೇ ನಾಶ ಹೊಂದುತ್ತಿದ್ದವು. ಆದರೆ ಗಣಿ ಸ್ಥಗಿತತೆಯ ನಂತರ ಇಳುವರಿಯ ಪ್ರಮಾಣಗಳನ್ನು ಪ್ರಸ್ತುತ ದಿನಗಳಲ್ಲಿ ಹೋಲಿಸಿಕೊಂಡರೆ ಶೇ.೬೦ರಷ್ಟು ಕಡಿಮೆಯಾಗುತ್ತಿದೆ. ಹಾಗಾಗಿ ಈ ಪ್ರಸ್ತುತ ಅಧ್ಯಯನದಲ್ಲಿ ಗಣಿಗಾರಿಕೆಯ ವಿಷಯ ವಸ್ತುವನ್ನು ಆಯ್ಕೆ ಮಾಡಲು ಸ್ಥಳೀಯ ವ್ಯಕ್ತಿಯಾಗಿ ಆಶಕ್ತನಾಗಿರುತ್ತೇನೆ. ಗಣಿಗಾರಿಕೆಯು ಮುಖ್ಯವಾಗಿ ನಗರ ಪ್ರದೇಶಗಳಿಗೆ ನೇರವಾದ ಪರಿಣಾಮ ಬೀರದೆ, ಗ್ರಾಮೀಣ ಪ್ರದೇಶದ ಮೇಲೆ ಬೀರುವ ಪ್ರತ್ಯೇಕ್ಷ ಪರಿಣಾಮ ಮತ್ತು ಜನರ ಬದುಕಿನ ಮೇಲಾಗಿರುವ ಪರಿಣಾಮಗಳ ಬದಲಾವಣೆಯು ಗಣಿಗಾರಿಕೆ ನಡೆದಾಗ, ಹಾಗೂ ಗಣಿಗಾರಿಕೆಯ ಸ್ಥಗಿತತೆಯ ನಂತರದಲ್ಲಾಗಿರುವ ಸಾಮಾಜಿಕ, ಆರ್ಥಿಕ, ಪರಿಸರದ ಪರಿಣಾಮಗಳನ್ನು ಅಧ್ಯಯನ ಮಾಡುವುದಾಗಿದೆ.

೧೯೯೦ರ ನಂತರ ಬಳ್ಳಾರಿ ಜಿಲ್ಲೆಯಲ್ಲಿ ಗಣಿಗಾರಿಕೆಯ ಪ್ರಭಾವ ಅಧಿಕವಾಗಿದೆ. ಅಧ್ಯಯನದ ದೃಷ್ಟಿಯಿಂದ ಈ ಬೆಳವಣಿಗೆಯನ್ನು ಎರಡು ಕಾಲಘಟ್ಟಗಳಾಗಿ ಕಾಣಸಿಗುತ್ತದೆ. ಜಿಲ್ಲೆಯ ಗಣಿಗಾರಿಕೆಯು ೧೯೯೦ ರಿಂದ ೨೦೦೦ರವರೆಗೆ ಮತ್ತು ೨೦೦೧ ರಿಂದ ೨೦೧೦ರವರೆಗೆ ಈ ಎರಡು ಕಾಲಾವಧಿಯವರೆಗೆ ಗಣಿ ಚಟುವಟಿಕೆ ನಡೆದಾಗ ಆಗಿರುವ ಪರಿಣಾಮಗಳು ಹಾಗೂ ಗಣಿ ಸ್ಥಗಿತತೆಯ ನಂತರದ ಅಂದರೆ ೨೦೧೦ರಿಂದ ಪ್ರಸ್ತುತ ಅವಧಿಯವರೆಗೆ ಗ್ರಾಮೀಣ ಪ್ರದೇಶದ ತಳಸಮುದಾಯಗಳ ಮೇಲಾಗಿರುವ ಪರಿಣಾಮಗಳ ವೈರುದ್ಯಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಲು ಈ ಮಹಾಪ್ರಬಂಧ ಪ್ರಯತ್ನಿಸುತ್ತದೆ. ಗಣಿ ಚಟುವಟಿಕೆ ಮತ್ತು ಆರ್ಥಿಕತೆಯ

ಅಂಶಗಳಿಗೂ ಪೂರಕವಾದ ಸಂಬಂಧವನ್ನು ಹೊಂದಿದೆ. ಈ ಪ್ರಕ್ರಿಯೆಯು ಅಲ್ಪಾವಧಿಗೆ ಮಾತ್ರ ಸಿಮಿತವಾರಗಿದೆ, ಗಣಿಗಾರಿಕೆಯಿಂದಾದ ಸಾಮಾಜಿಕ, ಪರಿಸರ ಮತ್ತು ಆರ್ಥಿಕತೆಯ ಅಂಶಗಳ ಮೇಲೆ ಬೀರುವ ಪ್ರಭಾವವು ಅಲ್ಪಕಾಲಿಕ ಮತ್ತು ದೀರ್ಘಾವಧಿಯ ಪರಿಣಾಮವನ್ನು ಹೊಂದಿರುತ್ತದೆ. ಗಣಿಗಾರಿಕೆಯು ಸಾಮಾಜಿಕ, ಆರ್ಥಿಕ, ಪರಿಸರಕ್ಕೆ ಸಂಬಂಧಿಸಿದ ವಿವಿಧ ಆಯಾಮಗಳ ಮೇಲೆ ನಕಾರಾತ್ಮಕವಾದ ಅಥವಾ ಸಕಾರಾತ್ಮಕವಾದ ಪರಿಣಾಮಗಳು ಆಗಿರಬಹುದು. ಇದರಿಂದ ಗ್ರಾಮೀಣ ಜನರ ಬದುಕಿನಲ್ಲಿ ವೈಪರಿತ್ಯಗಳನ್ನು ಊಹಿಸಿಕೊಳ್ಳಲು ಸಾಧ್ಯವಾಗಿದೆ. ಗಣಿಗಾರಿಕೆಯು ಉದ್ಯೋಗ, ಕೃಷಿ, ಆದಾಯ, ಇಳುವರಿ, ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ವಸತಿ, ನೈರ್ಮಲ್ಯ ಇತ್ಯಾದಿ ಅಂಶಗಳ ಮೇಲಾದ ಪರಿಣಾಮಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಈ ಪರಿಣಾಮಗಳು ಗಣಿಗಾರಿಕೆ ನಡೆಸುವ ಪ್ರದೇಶಗಳಲ್ಲಿ ಸಹಜವೆಂದು ಕಂಡು ಬರುವ ಲಕ್ಷಣಗಳಾಗಿವೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ೨೦೦೦ದ ಇಸವಿಯ ನಂತರ ಕಾನೂನಿನ ಮತ್ತು ಎಲ್ಲಾ ನಿಯಮಗಳು ಉಲ್ಲಂಘನೆಯಾಗಿ, ವಿಸ್ತೃತ ತೆರೆದ ಗಣಿಗಾರಿಕೆ ನಡೆದಿರುತ್ತದೆ. ಇದಕ್ಕೆ ಮುಖ್ಯವಾದ ಕಾರಣ ಕಬ್ಬಿಣದ ಅದರಿಗೆ ಹೆಚ್ಚಿನ ಬೇಡಿಕೆ ಬಂದಿದ್ದು ಎಂದು ಹೇಳಲಾಗುತ್ತದೆ. ಈ ಬೇಡಿಕೆಯನ್ನು ಸಾದನವಾಗಿ ಮಾಡಿಕೊಂಡು ಹೋಲ, ಅರಣ್ಯ, ಗುಡ್ಡ ಕೆಲವು ಸಂದರ್ಭಗಳಲ್ಲಿ ಮನೆಯ ಒಳಗೂ ಜನ ಕಬ್ಬಿಣದ ಕಲ್ಲುಗಳನ್ನು ಹುಡುಕಿ ಅಗೆದಿದ್ದು ಈ ಗ್ರಾಮೀಣ ಪ್ರದೇಶದ ಕಥೆ. ಇದು ಕೇವಲ ಗಣಿಗಾರಿಕೆ ಮತ್ತು ಪರಿಸರಕ್ಕೆ ಸಂಬಂಧಿಸಿದ ವಿಷಯವಾದರೇ, ಜನರ ಜೀವನಾವಶ್ಯಕತೆಯ ವಿಷಯವು ಆಗಿದೆ. ವಿಶೇಷವಾಗಿ ಈ ಭಾಗದ ಜನರ ಅಂದರೆ ಜನರ ಸಹಜ ಬದುಕನ್ನು ಅಸಹಜಗೊಳಿಸಿದ್ದು ಗಣಿಗಾರಿಕೆ ಎಂಬುವುದರಲ್ಲಿ ಅನುಮಾನವಿಲ್ಲ. ಹೀಗೆ ಅಸಹಜಗೊಳಿಸಿದ್ದು ಸಾಮಾಜಿಕ ಸಂಘ–ಸಂಸ್ಥೆಗಳು, ಸಾಮಾಜಿಕ ಅಭಿವೃದ್ಧಿ, ರಾಜಕೀಯ ಸಂಘ–ಸಂಸ್ಥೆಗಳು ರಾಜಕೀಯ ಪ್ರಕ್ರಿಯೆಯನ್ನು ಬುಡಮೇಲೂ ಮಾಡಿದೆ. ಸಮಾನತೆಯ ನೆಲೆಯಲ್ಲಿ ಪ್ರಕೃತಿಕ ಸಂಪತ್ತು ಹಂಚಿಕೆಯಾಗದ ಬದಲಿಯಾಗಿ ಕೆಲವೇ ಕೆಲವರ ಹಿಡಿತಕ್ಕೆ ಸೇರತೊಡಗಿತ್ತು. ಇದು ಕೇವಲ ಬಳ್ಳಾರಿ ಸುತ್ತಮುತ್ತಲಿನ ವಿಷಯ ಮಾತ್ರವಾಗದೆ, ವಿಸ್ತೃತವಾಗಿ ಇಡೀ ಇಂಡಿಯಾ ಮತ್ತು ವಿಶ್ವವ್ಯಾಪ್ತಿಯಾಗಿ ಕೆಲವರ ಸಂಪತ್ತು ಮತ್ತು ಆಸ್ತಿ ನೂರಾರು ಪಟ್ಟು ಹೆಚ್ಚಿರುವುದನ್ನು ಕುರಿತು ಪ್ರಪಂಚ ಅಸಮಾನತೆಯ ವರದಿ ತಿಳಿಸುತ್ತದೆ. ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ೨೫ ವರ್ಷಗಳಿಂದ ನಡೆದಿರುವ ಗಣಿಗಾರಿಕೆಯ ಪ್ರಕ್ರಿಯೆಗಳು ಜನರ ಬದುಕನ್ನು ಹೇಗೆ ಒಳ ಮಾಡಿಕೊಳ್ಳಿದೆ ಮತ್ತು ಹೇಗೆ ಹೊರತರಲಿದೆ ಎಂಬುವುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿತ್ತದೆ. ಈ ಹಿನ್ನಲೆಯಲ್ಲಿ ವಿಶಾಲವಾಗಿ ಅಭಿವೃದ್ಧಿ, ಗಣಿಗಾರಿಕೆ ಹಾಗೂ ಆರ್ಥಿಕ ಬೆಳವಣಿಗೆಯನ್ನು ಕುರಿತು ನಡೆದಿರುವ ಪ್ರಮುಖ ಅಧ್ಯಯನಗಳನ್ನು ಹಾಗೂ ನನ್ನ ಗಮನಕ್ಕೆ ಬಂದ ಸಾಹಿತ್ಯವನ್ನು ಕಾಲಮಿತಿಯ ಒಳಗೆ ಓದಿ ನನ್ನ ಸಂಶೋಧನ ವಿಷಯಕ್ಕೆ ಪೂರಕವಾದಂತೆ ಕೆಲವು ಪ್ರಶೆಗಳನ್ನು ಎತ್ತಲೂ ಪ್ರಯತ್ನಿಸಿದ್ದೇನೆ.

### ೧.೨. ಪ್ರಮುಖ ಅಧ್ಯಯನಗಳ ಸಮೀಕ್ಷೆ

ಗಣಿಗಾರಿಕೆ ಕುರಿತು ನಡೆದಿರುವ ಪ್ರಮುಖ ಅಧ್ಯಯನಗಳ ಸಮೀಕ್ಷೆಯನ್ನು ಓದಿ ಅವುಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ಮಾಡಲಾಗಿದೆ.

**ಎಂ.ಕೆ.ಕೃಷ್ಣಕುಮಾರಿ ಮತ್ತು ಶ್ರೀಮತಿ ಹರಿಪ್ರಸಾದ್** ಅವರು (೧೯೮೦) ಅವರ **ಪರಿಸರ ಮಾಲಿನ್ಯ** ಎಂಬ ಕೃತಿಯಲ್ಲಿ ಪರಿಸರ ಮಾಲಿನ್ಯದ ಪರಿಣಾಮಗಳು ಹೇಗೆ ಉದ್ದೇಶ ಪೂರಕವಾಗಿದೆ ಮತ್ತು ನಿರುದ್ದೇಶ ಪೂರಕವಾಗಿದೆ ಎಂಬ ಸಂಗತಿಗಳ ಬಗ್ಗೆ ಚರ್ಚಿಸಿದ್ದಾರೆ. ಕೈಗಾರೀಕರಣದಿಂದ ಪರಿಸರದ ವಾಯು, ಜಲ ಮಲೀನಗೊಂಡು ಮನುಕುಲದ ಆರೋಗ್ಯದ ಮೇಲೆ ಪರಿಣಾಮ ಬೀರುತ್ತಿದೆ. ಬೃಹತ್ ಕೈಗಾರಿಕೆಗಳಲ್ಲಿ ಉದ್ಭವಿಸುವ ಸ್ಫೋಟದಿಂದ ತೀವ್ರಗತಿಯ ಮಾಲಿನ್ಯ ಉಂಟಾಗಿ ವಾಯುಮಾಲಿನ್ಯ, ಜಲಮಾಲಿನ್ಯ, ಆಹಾರದಲ್ಲಿ ಕಲಬೆರಕೆ, ಬ್ಯಾಕ್ಟೀರಿಯಾ ಮಾಲಿನ್ಯ, ಕೀಟ ನಾಶಕಗಳಿಂದಾಗುವ ಮಾಲಿನ್ಯ, ಗ್ರಾಮಸಾಲ ಹಾಗೂ ಮಾಲಿನ್ಯ ವಿಕಿರಣಗಳಿಂದಾಗುವ ಮೂಲ ಆತಂಕಕಾರಿ ಅಪಾಯಗಳ ಬಗ್ಗೆ ಸ್ಪಷ್ಟವಾಗಿ ವಿವರಿಸಿದ್ದಾರೆ.

**ಪ್ರತಾಪ್ ದಾಸ ಗುಪ್ತ (೧೯೮೨)** ಅವರು **ದಿ ಕಂಟ್ರೋಲ್ ಆಫ್ ರೀಸೋರ್ಸ್** ಎಂಬ ಗ್ರಂಥದಲ್ಲಿ ಒಟ್ಟು ಹತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಅದರಲ್ಲಿ ಮುಖ್ಯವಾಗಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಾಯ-೯ ದಿ ಎಕನಾಮಿಕ್ಸ್ ಆಫ್ ಪೊಲ್ಯೂಷನ್ ಕಂಟ್ರೂಲ್, ಅಧ್ಯಾಯ-೪ ಎನ್ವಾರೆನ್ಮೆಂಟಲ್ ಕಂಟ್ರೋಲ್ ಅಂಡರ್ ಆನ್‌ಸರ್ಟೈನಿಟಿ ಈ ಎರಡು ಅಧ್ಯಾಯಗಳ ಪರಾಮರ್ಶನೆಗೆ ಬಳಸಿಕೊಂಡಿದೆ. ಈ ಅಧ್ಯಾಯಗಳಲ್ಲಿ ಮುಖ್ಯವಾಗಿ ಪರಿಸರ ಮಲೀನತೆಯಿಂದ ಭೂಮಿ ಮತ್ತು ಅರಣ್ಯ ಪ್ರದೇಶ ನಾಶವಾಗುತ್ತದೆ. ಖನಿಜಗಳ ಮಿತಿಮೀರಿದ ಬಳಕೆಯು ಸಂಪನ್ಮೂಲಗಳ ಮಿಗುತೆಯನ್ನು ಉಂಟು ಮಾಡುತ್ತದೆ. ಇದರ ನಿಯಂತ್ರಣ ಅತ್ಯಾವಶ್ಯಕವಾಗಿದೆ. ಈ ರೀತಿಯಾದ ಸಂಪನ್ಮೂಲದ ಅಸಮರ್ಪಕ ಬಳಕೆಯಿಂದ ಅದಿರು ಮತ್ತು ಕೃಷಿ ಉತ್ಪಾದನೆಯ ಮೇಲೆ ನೇರವಾದ ಪರಿಣಾಮ ಬರುತ್ತದೆ. ಭೂ ಸಂಪತ್ತಿನ ಕಬಳಕೆಯು ಪರಿಸರ ಮಾಲಿನ್ಯ ಉಂಟಾಗಲು ಕಾರಣವಾಗಿದೆ. ಇದರಿಂದಾಗಿ ಅಲ್ಲಿ ವಾಸವಾಗಿರುವ ಜನಸಮುದಾಯಗಳ ಯೋಗಕ್ಷೇಮದ ಮೇಲೆ ಪರಿಣಾಮ ಬೀರಿವೆ ಎಂಬ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ.

**ದಕ್ಷಿಣಮೂರ್ತಿ.ಕೆ.ಸಿ. (೧೯೮೬)** ಅವರ **ಪಾಲಿಟಿಕ್ಸ್ ಆಫ್ ಎನ್ವಾರನ್ಮೆಂಟ್** ಎಂಬ ಲೇಖನದಲ್ಲಿ ಪರಿಸರವನ್ನು ದೇಶದ ಒಂದು ಪ್ರಮುಖ ವಿಷಯವಾಗಿ ಚರ್ಚಿಸಲಾಗುತ್ತಿದೆ. ಪರಿಸರ ನಾಶಕ್ಕೆ ಕೈಗಾರಿಕೆಗಳು ಹಾಗೂ ಮರಗಳನ್ನು ಅಡುಗೆಗೆ ಇಂಧನವಾಗಿ ಬಳಸಿರುವುದು ಪ್ರಮುಖ ಕಾರಣವಾಗಿದೆ. ಈ ನಿಟ್ಟಿನಲ್ಲಿ ಉರುವಲು ಕಟ್ಟಿಗೆಯ ಪೂರೈಕೆಗಾಗಿ ನಾಶವಾಗುತ್ತಿರುವ ಕಾಡಿನ ರಕ್ಷಣೆಗೆ ಸರ್ಕಾರವು ಕ್ರಮ ಕೈಗೊಳ್ಳಬೇಕು. ಇದರಿಂದಾಗಿ ಸರ್ಕಾರವು ಸಾಮಾಜಿಕ ಅರಣ್ಯೀಕರಣದ ಪರಿಕಲ್ಪನೆಯನ್ನು ಹುಟ್ಟು ಹಾಕಿತ್ತು. ಈ ಕಾರ್ಯಕ್ರಮವನ್ನು ಅತ್ಯಂತ ಹುಮ್ಮಸ್ಸಿನಿಂದ ಕೈಗೆತ್ತಿಕೊಂಡ ಸರ್ಕಾರವು ಇದನ್ನು ತನ್ನ ನೀತಿಗಳಿಗೆ ಅನುಕೂಲಕರವಾಗಿ ಬಳಸಿಕೊಂಡಿತು. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು ನೀಲಗಿರಿ ಮರವನ್ನು ಬೆಳೆಸಲು ಪ್ರೋತ್ಸಾಹ ನೀಡಿತ್ತು. ಆದರೆ ಇದನ್ನು ಬಳಸುವುದು ಕೇವಲ ಕೈಗಾರಿಕೆಗಳು ಮಾತ್ರ, ಇದರಿಂದಾಗಿ ಹಸುಗಳಿಗಾಗಲಿ ಜನರಿಗಾಗಲೀ ಅಥವಾ ಅರಣ್ಯೀಕರಣಕ್ಕಾಗಲಿ ಯಾವ ಉಪಯೋಗವಿಲ್ಲ. ಏಕೆಂದರೆ ಇದರ ಹಿಂದೆ ವಾಣಿಜ್ಯದ ಉದ್ದೇಶವಿರುವುದು ಸ್ಪಷ್ಟವಾಗಿದೆ. ಸಿ ಮತ್ತು ಡಿ-ಶ್ರೇಣಿಯ ಭೂಮಿಯನ್ನು ಹಾಗೂ ಗೋಮಾಳದ ಭೂಮಿಯನ್ನು, ಹಸಿರು ಪಟ್ಟಿ ಕಾರ್ಯಕ್ರಮದಡಿ ಕಾಡಿನಲ್ಲಿ ನಿಲಗಿರಿ ಮರಗಳನ್ನು ನೆಡಲು ಸರ್ಕಾರ ಯೋಜಿಸಿದರೂ ಇದಕ್ಕೆ ಪ್ರಬಲ ವಿರೋಧ ವ್ಯಕ್ತವಾಗಲಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಚಂದ್ರಶೇಖರ್.ಬಿ.ಎಂ. (೧೯೮೭)** ಅವರ **ಸೋಷಿಯಲ್ ಪಾರೆಸ್ಟ್ರೀ ಎನ್ ಕರ್ನಾಟಕ ಆ್ಯನ್ ಇಂಪ್ಯಾಕ್ಟ್ ಅನಲೈಸಿಸ್** ಎಂಬ ಲೇಖನದಲ್ಲಿ ಅರಣ್ಯ ಆಧಾರಿತ ಕೈಗಾರಿಕೆಗಳು ಅರಣ್ಯ ನಶಿಸುವಿಕೆಯಲ್ಲಿ ಪ್ರಮುಖ್ಯ ಪಾತ್ರವವನ್ನು ವಹಿಸಿದೆ. ಪ್ರಸ್ತುತ ಕರ್ನಾಟಕದಲ್ಲಿ ಅನೇಕ ಹಳೆಯ ಮತ್ತು ಹೊಸ ಕೈಗಾರಿಕೆಗಳಿಗೆ ಇಂಧನ, ಕಚ್ಚಾ ಸಾಮಾಗ್ರಿಗಳನ್ನು ಒದಗಿಸಲು ವಿಸ್ತಾರವಾದ ನೈಸರ್ಗಿಕ ಅರಣ್ಯ ಸಂಪತ್ತು ನಾಶವಾಗಿದೆ. ಈ ಪ್ರದೇಶಗಳಲ್ಲಿ ಬೆಳೆಸಲು ವ್ಯವಸ್ಥಿತವಾದ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡಿದೆ. ಇದು ಭೂ ಸುಧಾರಣೆಗಳು ಅನುಷ್ಠಾನಗೊಂಡ ಸಮಯದಲ್ಲಿಯೇ ಪ್ರಾರಂಭವಾದ ಕರ್ನಾಟಕ ಸಾಮಾಜಿಕ ಅರಣ್ಯೀಕರಣ ಕಾರ್ಯಕ್ರಮವನ್ನು ಪ್ರಸ್ತುತ ಅಧ್ಯಯನ ಪರಿಶೀಲಿಸುತ್ತದೆ. ಈ ಕಾರ್ಯಕ್ರಮಗಳಿಂದಾಗಿ ನಿಲಗಿರಿ ಪ್ಲಾಂಟೇಶನ್‌ನಿಂದ ಆವೃತ್ತಗೊಂಡು ಭೂಮಿಯಲ್ಲಿ ಬೆಳೆ ಬೆಳೆಯಲಾಗದೇ ಸ್ಥಿತಿಯಲ್ಲಿ ಇರುವ ಬಹುತೇಕ ಸಣ್ಣ ಮತ್ತು ಅತಿ ಸಣ್ಣ ರೈತರು ಆಹಾರ ಧಾನ್ಯಗಳನ್ನು ಕೃಷಿಯಿಂದ ಬೆಳೆಸಲು ಹಿಂದೆ ಸರಿದಿದ್ದಾರೆ ಎಂಬ ವಾಸ್ತವಾಂಶವನ್ನು ಪ್ರಚಾರ ಪಡೆಸುವುದರತ್ತ ಈ ಲೇಖನ ಗಮನ ಸೆಳೆಯುತ್ತದೆ.

**ಪುರುಷೋತ್ತಮ ರೆಡ್ಡಿ (೧೯೯೦)** ಅವರ **ಖನಿಜಗಳು** ಎಂಬ ಕಿರು ಹೊತ್ತಿಗೆಯಲ್ಲಿ ಖನಿಜಶಾಸ್ತ್ರ ಸಾವಿರಾರು ವರ್ಷಗಳ ಹಿಂದೆಯೇ ಪ್ರಾರಂಭವಾಗಿದೆ. ೪೦೦೦ ವರ್ಷಗಳ ಮುಂಚೆಯೇ ಲೋಹಯುಕ್ತ ಖನಿಜಗಳನ್ನು ಗಣಿಗಾರಿಕೆಯಿಂದ ಹೊರತೆಗೆದು ಲೋಹಗಳನ್ನು ಉತ್ಪಾದಿಸವುದು ಬಳಕೆಯಲ್ಲಿ ಇತ್ತು ಎಂಬುವುದಕ್ಕೆ ಸಾಕಷ್ಟು ಆಧಾರಗಳಿವೆ. ಇಂದು ಅಧುನಿಕ ಜೀವನದಲ್ಲಿ ಖನಿಜಗಳ ಪಾತ್ರ ಬಹುಮುಖ್ಯವಾಗಿದೆ. ಅವು ಒಂದು ದೇಶದ ನೈಸರ್ಗಿಕ ಉತ್ಪನ್ನಗಳಲ್ಲಿ ಅಮೂಲ್ಯವಾದ ಆಸ್ತಿ ಆಗಿದ್ದು, ಇಂತಹ ಅತ್ಯಮೂಲ್ಯವಾದ ಖನಿಜಗಳ ಬಗ್ಗೆ ವಿವರಿಸಿದ್ದಾರೆ.

**ಗೋಶ.ಎಂ.ಎನ್** (೧೯೯೧) ಅವರು **ಖನಿಜ ಸಂಸ್ಕರಣ ಪರಿಚಯ** ಎಂಬ ಕಿರು ಹೊತ್ತಿಗೆಯಲ್ಲಿ ಶೋಧನಾತ್ಮಕ ಆಶಯವನ್ನು ಹೊಂದಿದ್ದು, ಇದರಲ್ಲಿ ಖನಿಜ ಸಂಸ್ಕರಣದ ಇತಿಹಾಸ, ಖನಿಜದ ಗುಣ ಧರ್ಮಗಳು, ಸಂಸ್ಕರಣ ವಿಧಾನ, ಅದರ ಮಹತ್ವದ ಕುರಿತು ಮಾಹಿತಿಯನ್ನು ಒದಗಿಸಿದ್ದಾರೆ. ಖನಿಜ ಮತ್ತು ಅದಿರು ಸಂಸ್ಕರಣದ ವಿವಿಧ ಮಾದರಿಗಳಿದ್ದು, ಈ ಮಾದರಿಗಳಲ್ಲೇ ಕಬ್ಬಿಣದ ಅದಿರಿನ ಸಂಸ್ಕರಣೆ, ತಾಮ್ರ ಅದಿರಿನ ಸಂಸ್ಕರಣೆ, ಮ್ಯಾಗ್ನೇಸೈಟ್ ಅದಿರಿನ ಸಂಸ್ಕರಣ, ಈ ರೀತಿಯ ಖನಿಜ ಸಂಸ್ಕರಣೆ ಮಾಡುವಾಗ ಉದ್ಭವಿಸುವ ಹಲವು ಪರಿಕರಗಳು ನಶಿಸಿದಾಗ ಜಲಮಾಲಿನ್ಯ, ಶಬ್ದಮಾಲಿನ್ಯ, ಭೂಮಾಲಿನ್ಯ ಸಂಭವಿಸುತ್ತದೆ ಎಂದು ವ್ಯಕ್ತಪಡಿಸಿದ್ದಾರೆ.

**ನಾಡಕರ್ಣಿ.ಎಂ.ವಿ. ಮತ್ತಿತರರು** (೧೯೯೨) ಅವರ **ಸೋಷಿಯಲ್ ಫಾರೆಸ್ಟ್ರಿ ಪ್ರಾಜೆಕ್ಟ್ ಇನ್ ಕರ್ನಾಟಕ** ಎಂಬ ಲೇಖನದಲ್ಲಿ ಕರ್ನಾಟಕದ ಕೆಲವು ಯೋಜನೆಗಳನ್ನು ಯಾದೃಚಿಕವಾಗಿ ಆಯ್ಕೆ ಮಾಡಿಕೊಂಡು ಸಾಮಾಜಿಕ ಅರಣ್ಯೀಕರಣವೆಂಬ ಅಂಶ ಕೇವಲ ಆರ್ಥಿಕವಾಗಿ ಹಾಗೂ ಹಣಕಾಸಿನ ನಿಟ್ಟಿನಲ್ಲಿ ಕಾರ್ಯ ಸಾಧ್ಯವಾಗಿದೆ ಎಂದು ನಿರೂಪಿಸಿದ್ದಾರೆ. ಈ ಪ್ರಕ್ರಿಯೆಯಲ್ಲಿ ಕೆಲವು ಮೂಲ ತಾಂತ್ರಿಕ ಪ್ರಶ್ನೆಗಳನ್ನು ಎತ್ತುತ್ತಾ, ಸ್ಥಿರ ಬೆಲೆಯಲ್ಲಿ ನಗದು ಹಿಂದಿನ ಹೆಚ್ಚಿನ ದರದ ರಿಯಾಯಿತಿ ನೀಡುವುದನ್ನು ಆಕ್ಷೇಪಿಸಿದ್ದಾರೆ. ಈ ಕಾರ್ಯ ಸಾಧ್ಯತೆಯನ್ನು ಮೂರು ಮಾನ ದಂಡಗಳಿಂದ ಸಾಬೀತು ಪಡಿಸಿದ್ದಾರೆ. ಅವುಗಳೆಂದರೆ ಎನ್.ಪಿ.ವಿ. ನೆಟ್ ಪ್ರೆಸೆಂಟ್ ವ್ಯಾಲ್ಯೂ, ಬಿ.ಸಿ.ಆರ್–ಬಿಸಿಫಿಟ್ ಕಾಸ್ಟ್ ಮತ್ತು ಐ.ಐ.ಆರ್. ಇಂಟರ್ನಲ್ ರೇಟ್ ಆಫ್ ಇಂಟ್ರಸ್ಟ್, ಅಲ್ಲದೇ ನೇರವಾಗಿ ಆಗುವ ಅನುಕೂಲದ ಆಧಾರದ ಮೇಲೆ ಇವುಗಳನ್ನು ಸಾಬೀತು ಪಡಿಸಲಾಗಿದೆ. ಒಂದು ವೇಳೆ ಪರೋಕ್ಷವಾಗಿ ಆಗುವ ಅನುಕೂಲಗಳನ್ನು ಪರಿಗಣಿಸಿದ್ದರೆ ಇದರ ಆರ್ಥಿಕ ಸಾಮರ್ಥ್ಯ ಇನ್ನು ಹೆಚ್ಚುತ್ತಿತ್ತು. ಇದಕ್ಕಿಂತ ಮುಖ್ಯವಾದದ್ದು, ಸಾಮಾಜಿಕ ಅರಣ್ಯೀಕರಣವು ತನ್ನ ಖರ್ಚನ್ನು ತಾನೇ ಭರಿಸಿಕೊಳ್ಳುತ್ತದೆ. ಆದರೆ ಸ್ಥಳೀಯ ಬಡಜನರ ಬಯೋಮಾಸ್ ಅಗತ್ಯಗಳನ್ನು ಪೂರೈಸಿದರೂ ಈ ಯೋಜನೆಗಳ ಆರ್ಥಿಕ ಸಾಮರ್ಥ್ಯವು ಕಡಿಮೆಯಾಗುವುದಿಲ್ಲ. ಇದರ ಪರಿಣಾಮವು ಗ್ರಾಮೀಣ ಪ್ರದೇಶದಲ್ಲಿ ಇದು ಉದಾರತೆಯನ್ನು ತೋರುವುದಿಲ್ಲ. ಹಾಗಾಗಿ ಈ ಪ್ರಸ್ತುತ ಲೇಖನವು ಕೆಲವು ಪೂರ್ವಗ್ರಹಗಳನ್ನು ಹಾಗೂ ಊಹೆಗಳನ್ನು ಮುಂದಿಟ್ಟು ಈ ಪೂರ್ವ ಗ್ರಹಗಳ ಕಾರ್ಯ ಸಾಧ್ಯವಾದಿತೇ ಎಂದು ಪರೀಕ್ಷಿಸುತ್ತದೆ.

**ಚಂದ್ರಶೇಖರ್ ಟಿ.ಆರ್.** (೧೯೯೪) ಅವರ **ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು** ಎಂಬ ಗ್ರಂಥವನ್ನು ಅವಲೋಕಿಸಿದಾಗ ಗಣಿಗಾರಿಕೆಯ ಅದಿರು ನಿಕ್ಷೇಪಗಳನ್ನು ಅಭಿವೃದ್ಧಿಯ ದೃಷ್ಟಿಕೋನವನ್ನು ಇಟ್ಟುಕೊಂಡು ಅಲ್ಲಿನ ಜನ ಸಮುದಾಯದ ಮೇಲಾಗುವ ಸ್ಥಿತ್ಯಾಂತರಗಳನ್ನು ವಿವರಿಸುವ ಆಶಯವನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶದ ಸಾಕ್ಷರತ ಮತ್ತು ಶಿಕ್ಷಣದ ಮೇಲಾಗುವ ಪರಿಣಾಮಗಳ ಅಂಕಿ–ಅಂಶವನ್ನು ವಿವರಣೆಗೆ ಒಳಪಡಿಸಲಾಗಿದೆ. ಈ ಕೃತಿಯಲ್ಲಿ ಗಣಿಗಾರಿಕೆ ನಡೆಯುತ್ತಿರುವ ಗ್ರಾಮೀಣ ಪ್ರದೇಶಗಳಲ್ಲಿ ಜನಸಾಮಾನ್ಯರ ಮೂಲಭೂತ ಸೌಲಭ್ಯಗಳ ಕೊರತೆ, ತಾಪಮಾನದಲ್ಲಿ ಏರಿಕೆ, ಆರೋಗ್ಯದ, ದುಸ್ಥಿತಿ, ಅನಕ್ಷರತೆ ಬಡ ಮಹಿಳೆಯರು ಮತ್ತು ಮಕ್ಕಳ ಮೇಲಾಗಿರುವ ಪರಿಣಾಮಗಳು ಅತೀ ಆತಂಕಕಾರಿಯಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ವಾಸುಕಿ ಕೆ.ಜಿ** (೧೯೯೪) ಅವರು **ಕರ್ನಾಟಕ ಪರಿಸರ** ಎಂಬ ಕೃತಿಯಲ್ಲಿ ಗಣಿ ಸ್ಫೋಟಗಳಿಂದಾಗಿ ಭೂಕಂಪ ಸಂಭವಿಸುವ ಸೂಚನೆ, ವಿಜ್ಞಾನ, ಪರಿಸರ, ಕೈಗಾರಿಕೆ ಮತ್ತು ಜಲಮಾಲಿನ್ಯದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಅರಣ್ಯದ ಅವಶ್ಯಕತೆ ಮತ್ತು ಪಶ್ಚಿಮಘಟ್ಟದ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಡೆಸುವುದರಿಂದ ಪ್ರಾಣಿ–ಸಸ್ಯ ಸಂಕುಲಗಳ ಮೇಲಾಗುವ ಪರಿಣಾಮಗಳ ಕುರಿತು ಚರ್ಚಿಸಿದ್ದಾರೆ.

**ಪ್ರಭಾಕರ್.ಬಿ.ಸಿ.** (೧೯೯೪) ಅವರ **ತಾಮ್ರದ ನಿಕ್ಷೇಪಗಳು** ಎಂಬ ಕಿರು ಹೊತ್ತಿಗೆಯಲ್ಲಿ ಅನ್ವೇಷಣೆಯ ದೃಷ್ಟಿಕೋನದಲ್ಲಿ ಅವಲೋಕಿಸಿದ್ದಾರೆ. ತಾಮ್ರದ ನಿಕ್ಷೇಪದ ಅನ್ವೇಷಣೆ ಅದರ ಗುಣ ವೈಶಿಷ್ಟತೆ, ಅದಿರುಗಳ ಸ್ವರೂಪ ಮತ್ತು ಸಂಸ್ಕರಣಾ ವಿಧಾನಗಳನ್ನು ವಿವರಿಸಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ತಾಮ್ರ ನಿಕ್ಷೇಪ ದೊರೆಯುವ ಜಿಲ್ಲೆ ಮತ್ತು ತಾಮ್ರ ನಿಕ್ಷೇಪ ದೊರೆಯುವ ಪ್ರಮಾಣವನ್ನು ತಿಳಿಸಿದ್ದಾರೆ. ಕರ್ನಾಟಕದಲ್ಲಿ ತಾಮ್ರ ಕೈಗಾರಿಕೋದ್ಯಮದ ಪಾತ್ರ ನಿಕ್ಷೇಪ ಶೋಧನೆಯಲ್ಲಿ ಜನ

ಸಾಮಾನ್ಯರ ಪಾತ್ರದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಹಾಗೆಯೇ ಭೂಮಿಯಲ್ಲಿ ಅಡಗಿರುವ ನಿಕ್ಷೇಪಗಳ ಉಪಯೋಗ, ದುರುಪಯೋಗ, ತಾಮ್ರ ನಿಕ್ಷೇಪ ಶೋಧನೆಯಿಂದ ವ್ಯವಸಾಯದಲ್ಲಿ ನಿರಂತರವಾಗಿ ತೊಡಗಿರುವ ಜನ ಸಾಮಾನ್ಯರ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ.

**ಸುರೇಶ.ಬಿ (೧೯೯೪) ಅವರು ಖನಿಜ ಶೋಧನಾ ಮತ್ತು ಗಣಿ ಉದ್ಯಮ** ಎಂಬ ಕಿರು ಹೊತ್ತಿಗೆಯಲ್ಲಿ ಏನನ್ನು ಹುಡಕಬೇಕು, ಎಲ್ಲಿ ಹುಡಕಬೇಕು? ಹೇಗೆ ಹುಡಕಬೇಕು ಎಂಬುದರ ಕುರಿತು ತಿಳುವಳಿಕೆ ನೀಡುವುದೇ ಖನಿಜ ಶೋಧನ ಶಾಸ್ತ್ರವಾಗಿದೆ. ಪ್ರಾಚೀನ ಖನಿಜ ಶೋಧಕರು ಕೇವಲ ಬೆಳ್ಳಿ-ಬಂಗಾರಗಳ ಶೋಧನೆಯಲ್ಲಿಯೇ ನಿರತರಾಗುತ್ತಿದ್ದರಂತೆ. ಅವುಗಳನ್ನು ಹೊರತುಪಡಿಸಿ ಉಳಿದೆಲ್ಲಾ ಖನಿಜಗಳು ಅವರ ಪಾಲಿಗೆ ಗೌಣವಾಗಿದ್ದವು. ಇನ್ನು ಕೆಲವರು ೧೯೫೦ರ ಹೊತ್ತಿಗೆ ಕೇವಲ ಯುರೆನಿಯಂ ಮತ್ತು ಥೋರಿಯಂ ಶೋಧಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರು. ಭಾರತದಲ್ಲಿ ಹಲವಾರು ಪುರಾತನ ಗಣಿಗಳು ಸುಮಾರು ೨೦೦೦ ವರ್ಷಗಳ ಹಿಂದೆಯೇ ಕಬ್ಬಿಣದ ಅದಿರಿನ ಉತ್ಪಾದನೆ ೭೯ ದಶಲಕ್ಷ ಟನ್‌ಗಳಾಗಿತ್ತು. ಇದರಲ್ಲಿ ೨೭ ದಶಲಕ್ಷ ಟನ್ ಅದಿರನ್ನು ಮಾತ್ರ ಉಕ್ಕಿನ ತಯಾರಿಕೆಗಾಗಿ ಬಳಸುತ್ತಿದ್ದರು ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ. ಈ ಹೊತ್ತಿಗೆಯಲ್ಲಿ ಖನಿಜ ಶೋಧನೆಯ ಉದ್ದೇಶ, ಆಕಾರ, ಬಣ್ಣ, ಗುಣಲಕ್ಷಣಗಳನ್ನು ಗುರುತಿಸಿದ್ದಾರೆ. ಖನಿಜ ಶೋಧನೆಯ ಸಂಕ್ಷಿಪ್ತ ಚರಿತ್ರೆ, ಭಾರತದ ಸಂಪನ್ಮೂಲ ರಾಶಿಯಲ್ಲಿ ಅಡಗಿರುವ ಖನಿಜ ಶೋಧನೆ, ಖನಿಜ ವಿಧಾನವಾದ ಭೂ, ಜಲ, ವಾಯು ಮಾರ್ಗಗಳ ಶೋಧನೆಯ ಕುರಿತು ವಿವರಣೆಯನ್ನು ನೀಡಿದ್ದಾರೆ. ಭಾರತದಲ್ಲಿ ದೊರೆಯುವ ಖನಿಜ ನಿಕ್ಷೇಪ ಗಣಿಗಾರಿಕೆಯ ಕಾರ್ಯವಿಧಾನ, ಅದಿರು ಪತ್ತೆ ಮಾಡುವಿಕೆ, ಗಣಿಯಿಂದ ಸಂಭವಿಸುವ ಅಘಾತಗಳು, ಗಣಿ ಸುರಕ್ಷಿತ ಕಾನೂನುಗಳ ಕುರಿತು ವಿವರಣೆಗಳನ್ನು ಉಲ್ಲೇಖಿಸಿದ್ದಾರೆ.

**ಮುಕಲ್ (೧೯೯೫)** ಅವರ **ಯುನೈಟೆಡ್ ಕಿಂಗಡಮ್: ಡಿಸ್ಟ್ರೇಕ್ಷನ್ ಆಫ್ ಮೈನಿಂಗ್ ಅಂಡ್ ಮೈನ್ಸ್** ಎಂಬ ಲೇಖನದಲ್ಲಿ ಬ್ರಿಟನ್ಸ್ ಗಣಿಗಾರಿಕೆಯಿಂದ ಬಡತನ, ನಿರುದ್ಯೋಗ, ವಸತಿ ಸೌಕರ್ಯಗಳ ಕೊರತೆ, ಸಾಮಾಜಿಕ ಪರಿಣಾಮಗಳ ಮೇಲಾಗುವ ಆತಂಕವನ್ನು ಎಸಗುತ್ತಿದೆ. ಹಾದರ್ಯಾಮ್‌ನ ವೆಕ್‌ಫಿಲ್ಡ್ ಮತ್ತು ಬೆರ್‍ನ್ಸ್ಲೆ ಜಿಲ್ಲೆಯಲ್ಲಿ ಕಲ್ಲಿನ ಗಣಿಗಾರಿಕೆಯು ನಿರುದ್ಯೋಗದ ಸಮಸ್ಯೆಯನ್ನು ಸೃಷ್ಟಿಸುತ್ತಿದೆ. ಹಾದರ್ಯಾಮ್‌ನ ಕಲ್ಲಿದ್ದಲು ಗಣಿಗಾರಿಕೆ ಕೆಲಸದಲ್ಲಿ ತೊಡಗಿದವರ ಬಗೆಗೆ ವೆಕ್‌ಫಿಲ್ಡ್ ಮಹಾನಗರ ಜಿಲ್ಲೆಯ ಪೌರನೀತಿಯ ಆರ್ಥಿಕ ನಡವಳಿ ಪ್ಯಾಕ್ಟ್ ಶೀಟಿನ ಬಗೆಗೆ ಮತ್ತು ಆ ಪ್ಯಾಕ್ಟ್ ಶೀಟಿನಲ್ಲಿ ಗಣಿಗಾರಿಕೆಯು ಇತರ ಕೈಗಾರಿಕೆ, ಉತ್ಪಾದನೆಯ ನಿರ್ವಹಣೆ, ರಸ್ತೆ, ರೈಲ್ವೆ ಸಾರಿಗೆಯ ಮೇಲೆ ಬಿರುವ ಋಣಾತ್ಮಕ ಪರಿಣಾಮಗಳು ವರದಿಯಾಗಿದೆ. ಗಣಿ ಸ್ಥಳೀಯ ಪ್ರದೇಶದಲ್ಲಿ ಉದ್ಯೋಗದ ಪ್ರಮಾಣ ಸ್ಥಳೀಯರಿಗೆ ಮೊಟಕುಗೊಳ್ಳುತ್ತಿವೆ. ವೇಕ್‌ಫಿಲ್ಡ್ ಜಿಲ್ಲೆಯಲ್ಲಿ ನಿರುದ್ಯೋಗ ಸಮಸ್ಯೆ ೧೯೮೪ ರಿಂದ ಇಲ್ಲಿಯವರೆಗೆ ಚರ್ಚಿಸಿರುವ ಸೂಕ್ತ ಅಂಕಿ-ಅಂಶಗಳನ್ನು ಸ್ಪಷ್ಟಪಡಿಸಿದ್ದಾರೆ. ಈ ಲೇಖನದಲ್ಲಿ ಶೆಟಿಲ್ಡ್ ಹಲ್ಲಾಮ್ ವಿಶ್ವವಿದ್ಯಾಲಯದ ಪೊದ್ರಗ್ರಿಸ್ ಮತ್ತು ಕ್ರಿಸ್ಟನ್ ಅವರು ಜಿಲ್ಲಾವಾರು ನಿರುದ್ಯೋಗ ಪ್ರಮಾಣವು ಪ್ರದೇಶಿಕವಾರು ಪ್ರಮಾಣಕ್ಕಿಂತಲೂ ಹೆಚ್ಚಾಗಿದೆ. ಹಾಗಾಗಿ ಈ ಪ್ರದೇಶಗಳಲ್ಲಿ ನಿರುದ್ಯೋಗದ ಸಮಸ್ಯೆ ವ್ಯಾಪಕವಾಗಿದೆ ಎಂದು ಉಲ್ಲೇಖಿಸಿದ್ದಾರೆ.

**ವಿದ್ಯಾದಾಸ್ (೧೯೯೫)** ಅವರ **ಡೆವೆಲಪ್‌ಮೆಂಟ್ ಆ್ಯಂಡ್ ಸೆಕ್ಷನ್ ನ್ಯೂ ಮೈನಿಂಗ್ ಪ್ರಾಜೆಕ್ಟ್ ಇನ್ ಒರಿಸ್ಸಾ** ಎಂಬ ಲೇಖನದಲ್ಲಿ ಒರಿಸ್ಸಾ ರಾಜ್ಯದ ರಾಯಘಡ ಜಿಲ್ಲೆಯ ಕಾಶಿಪುರ ಬ್ಲಾಕ್ ಮತ್ತು ಕಲ್ಯಾಣ ಸಿಂಗ್‌ಪುರದ ಬಾಕ್ಸೈಟ್ ಮತ್ತು ಅಲ್ಯೂಮಿನಿಯಂ ಗಣಿಗಾರಿಕೆಯ ಪರಿಣಾಮಗಳಿಂದ ಬುಡಕಟ್ಟು ಪ್ರದೇಶದಲ್ಲಿ ವಾಸಿಸುವ ಸ್ಥಳೀಯ ಜನರಿಗೆ ಅಪಾಯ ಆಗುತ್ತಿದ್ದು, ಅವರ ರಕ್ಷಣೆಯನ್ನು ಒದಗಿಸುವ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ರೈಲ್ವೆ, ಹಡಗು, ರಸ್ತೆ ಸಾರಿಗೆಯ ಮೂಲಕ ಬಾಕ್ಸೈಟ್ ಅದಿರನ್ನು ವಿಶಾಖಪಟ್ಟಣಂ ಬಂದರಿಗೆ ಸಾಗಿಸುವ, ಭೂಮಿ ಮತ್ತು ಕಾರ್ಮಿಕರ ಕನಿಷ್ಠ ಮಧ್ಯದ ಮೌಲ್ಯ, ಬಾಕ್ಸೈಟ್ ಸಾಗಾಣಿಕೆ ಕುರಿತ ಸ್ಪಷ್ಟವಾದ ಅಂಕಿ-ಅಂಶಗಳನ್ನು ಒದಗಿಸುತ್ತದೆ. ಒರಿಸ್ಸಾದ ಕೊಬೈಪಡರ್ ಹಳ್ಳಿಯಲ್ಲಿ ರಸ್ತೆಯ ದುರಸ್ಥಿ ಮತ್ತು ಟ್ರಾಫಿಕ್ ತೊಂದರೆಯಿಂದ ಜನರು ಪಡುತ್ತಿರುವ ದುಸ್ಥಿತಿಯನ್ನು ವಿವರಿಸಲಾಗಿದೆ. ಒರಿಸ್ಸಾದ ರಾಯಘಡ, ಕಲಹಂದಿ, ಕೊರಪುತ್ ಜಿಲ್ಲೆಯಲ್ಲಿ ನಡೆದಿರುವ ಗಣಿಗಾರಿಕೆಯಿಂದ ಆರ್ಥಿಕತೆ ಮತ್ತು ಪರಿಸರದ ಮೇಲಾಗಿರುವ ಹಾನಿಯನ್ನು ಉಲ್ಲೇಖಿಸಲಾಗಿದೆ. ಈ ಜಿಲ್ಲೆಯಲ್ಲಿ ಕೈಗಾರಿಕೆಯ ಚಟುವಟಿಕೆಯು ಬುಡಕಟ್ಟು ಜನಾಂಗದ ಆರ್ಥಿಕ

ನೀತಿ ಮತ್ತು ಪರಿಸರ ಸಂರಕ್ಷಣೆಯನ್ನು ಮಾಡುವ ಆಶಯ ಈ ಲೇಖನ ಹೊಂದಿದೆ. ತೆರೆದ ಬಾಕ್ಸೈಟ್ ಗಣಿಗಾರಿಕೆಯು ಅಲ್ಲಿನ ಬುಡಕಟ್ಟು ಪ್ರದೇಶದಲ್ಲಿ ವಾಸಿಸುವ ಜನರ ಮೇಲೆ, ಭೂಮಿಯ ಮೇಲೆ, ನೈಸರ್ಗಿಕ ಸಂಪನ್ಮೂಲಗಳ ಮೇಲಾಗುವ ಮಾಲಿನ್ಯ ಕುರಿತು ವಿಶ್ಲೇಷಣೆ ಮಾಡುತ್ತದೆ. ಒರಿಸ್ಸಾದ ಕೊರಪುತ್ ಜಿಲ್ಲೆಯ ಇಂದಾಲ್ ಗಣಿಗಾರಿಕೆಗೆ ಸಂಬಂಧಿಸಿದಂತೆ ಸುಮಾರು ೬೫ ಹಳ್ಳಿಗಳ ಮೇಲಾಗುವ ಕುಂದು ಕೊರತೆ, ಗಣಿ ಸ್ಫೋಟದಿಂದಾಗಿ ಜನಸಮುದಾಯದ ಮೇಲಾಗಿರುವ ಪರಿಣಾಮಗಳನ್ನು ಸ್ಪಷ್ಟಪಡಿಸಿದೆ. ಒಟ್ಟಾರೆ ಈ ಲೇಖನವು ತೆರೆದ ಗಣಿಗಾರಿಕೆಯಿಂದಾಗಿ ಪರಿಸರದ ಮೇಲಾಗಿರುವ ಹಾನಿ, ಜನಸಮುದಾಯದ ಮೇಲಾಗಿರುವ ಸಾಮಾಜಿಕ-ಆರ್ಥಿಕತೆಯ ಪರಿಣಾಮಗಳು, ಮತ್ತು ನೈಸರ್ಗಿಕ ಸಂಪನ್ಮೂಲಗಳ ಮೇಲಾಗಿರುವ ಪರಿಣಾಮಗಳನ್ನು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ.

**ನಾಡಗೌಡ ಬಿ.ವಿ (೧೯೯೬)** ಅವರು **ಬಂಗಾರ ನಿಕ್ಷೇಪಗಳು** ಎಂಬ ಕಿರು ಹೊತ್ತಿಗೆಯಲ್ಲಿ ಬಂಗಾರದ ನಿಕ್ಷೇಪಗಳು ಬೆಳೆದು ಬಂದ ಬಗೆಗಳು, ಅವುಗಳ ಆಕಾರ ಮತ್ತು ಗುಣಲಕ್ಷಣಗಳ ಕುರಿತ ಮಾಹಿತಿಯನ್ನು ಒದಗಿಸುತ್ತದೆ. ಭಾರತ ಮತ್ತು ಕರ್ನಾಟಕದ ಬಂಗಾರದ ನಿಕ್ಷೇಪಗಳು ದೊರೆಯುವ ಸ್ಥಳ, ಪ್ರಮಾಣವನ್ನು ವಿವರಿಸಿ, ಈ ನಿಕ್ಷೇಪಗಳ ಗಣಿಗಾರಿಕೆಯಿಂದ ಭೂಮಿಯ ನಾಶ, ಕೃಷಿ ಮೇಲಿನ ಪರಿಣಾಮ, ಗಾಳಿ, ನೀರು, ನೆಲ, ಖನಿಜ, ಸಸ್ಯ ಮತ್ತು ಪ್ರಾಣಿ ಸಂಕುಲಗಳ ಮೇಲಾಗುವ ಪರಿಣಾಮಗಳನ್ನು ವಿಶ್ಲೇಷಿಸಿದ್ದಾರೆ.

**ಸಿನ್ಹ ಆರ್.ಕೆ ಅಂಡ್ ಎನ್.ಎಲ್. ಶರ್ಮ (೧೯೯೮)** ಅವರು **ಮಿನರಲ್ ಎಕನಾಮಿಕ್ಸ್** ಎಂಬ ಗ್ರಂಥದಲ್ಲಿ ಖನಿಜ ಸಂಪನ್ಮೂಲವು ಆರ್ಥಿಕತೆಯ ಒಂದು ಭಾಗವಾಗಿದೆ. ಈ ಖನಿಜವನ್ನು ಹೊರ ತೆಗೆಯುವ ಸಂದರ್ಭದಲ್ಲಿ ಭೂಮಿಯ ಬಳಕೆ, ಖನಿಜಗಳ ಉತ್ಪಾದನೆಯ ಪೂರೈಕೆ, ಉತ್ಪನ್ನಗಳ ಮೇಲೆ ವಿಧಿಸುವ ತೆರಿಗೆ ಮತ್ತು ಕಾನೂನುಗಳಲ್ಲಿ ಉಂಟಾಗಿರುವ ವ್ಯತ್ಯಾಸಗಳನ್ನು ವಿವರಿಸುವ ಉದ್ದೇಶವನ್ನು ಹೊಂದಿದೆ. ಗಣಿಗಾರಿಕೆಯಲ್ಲಿ ಖನಿಜ ಉತ್ಪನ್ನ ಹೆಚ್ಚಳವಾದಾಗ ಮಾರುಕಟ್ಟೆಯ ಮೇಲೆ ಬೀರುವ ಪರಿಣಾಮಗಳ ಬಗ್ಗೆ ಚರ್ಚಿಸಿದ್ದಾರೆ. ಗಣಿಗಾರಿಕೆಯಲ್ಲಿ ಬಳಸುವ ಖನಿಜಾಂಶಗಳನ್ನು ಅಂದಾಜಿಸಲು ಸ್ಯಾಂಪ್ಲಿಂಗ್ ವಿಧಾನವನ್ನು ಬಳಸಿಕೊಂಡಿದ್ದಾರೆ. ಇದರಲ್ಲಿ ಸ್ಯಾಂಪ್ಲಿಂಗ್‌ನಲ್ಲಿ ಔಟ್ ಕ್ರಾಪ್, ಪೀಟ್ ಟ್ರೆಂಚ್ ಮತ್ತು ಮಿಕ್ ಎಂಬ ೪ ಸಾಧನಗಳನ್ನು ಬಳಸಿಕೊಂಡು ಅವು ಯಾವ ಗ್ರೇಡ್ ಖನಿಜಗಳಾಗಿವೆ ಎಂದು ಗುರುತಿಸಿದ್ದಾರೆ. ಸರ್ಕಾರ ರಾಷ್ಟ್ರೀಯ ಖನಿಜ ನೀತಿಯನ್ನು ಜಾರಿಗೊಳಿಸುವುದರ ಮೂಲಕ ಅಭಿವೃದ್ಧಿ ಮತ್ತು ಅನಾಭಿವೃದ್ಧಿ ರಾಷ್ಟ್ರಗಳು ಬಳಸುವ ಖನಿಜ ಸಂಪನ್ಮೂಲಗಳನ್ನು ಎಷ್ಟರ ಮಟ್ಟಿಗೆ ದಕ್ಷವಾಗಿ ಸದ್ಬಳಕೆ ಮಾಡಬೇಕು ಮತ್ತು ಖನಿಜಗಳ ವಿಪರೀತ ಬಳಕೆಯು ಸಂಪೂರ್ಣವಾಗಿ ಸಂಪನ್ಮೂಲಗಳ ಬರಿದಾಗುವಿಕೆಗೆ ಕಾರಣವಾಗಿದೆ. ಹೀಗೆ ಅದರ ಬಾದ್ಯತೆಗಾಗಿ ಈ ರಾಷ್ಟ್ರೀಯ ಖನಿಜ ನೀತಿಯನ್ನು ಜಾರಿಗೊಳಿಸಲಾಗಿದೆ. ಇದರನ್ವಯ ೧೯೩೫ರ ಆರ್ಟಿಕಲ್ ೨೬೫ ಅಡಿಯಲ್ಲಿ ಗಣಿಗಾರಿಕೆಯ ಖನಿಜ ಹಕ್ಕು ಕಾಯ್ದೆಯನ್ನು ಜಾರಿಗೊಳಿಸಲಾಯಿತು. ನಂತರ ೧೯೫೭ರ ರೇಗ್ಯೂಲೇಷನ್ ಅಂಡ್ ಡೆವಲಪೆಂಟ್ ಮೈನ್ಸ್ ಅಂಡ್ ಮಿನರಲ್ಸ್ ನೀತಿಯನ್ನು ಜಾರಿಗೊಳಿಸಿರುವ ವಿಷಯಗಳ ಕುರಿತು ವಿವರಿಸಿದ್ದಾರೆ. ಕೌಟಿಲ್ಯನ ಪ್ರಕಾರ ಗಣಿ ಕೈಗಾರಿಕೆ ಮತ್ತು ಆರ್ಥಿಕ ಅಭಿವೃದ್ಧಿ ಕುರಿತಂತೆ ಭಾರತದ ಗಣಿಗಾರಿಕೆಯು ೩೦೦ ವರ್ಷಗಳ ಹಿಂದಿನಿಂದಲೂ ಇರುವ ಇತಿಹಾಸವಿದೆ. ಈ ಖನಿಜ ಸಂಪನ್ಮೂಲಗಳು ದೇಶದ ಖಜಾನೆಯ ಸಂಪನ್ಮೂಲಗಳಾಗಿದೆ ಎಂದು ವ್ಯಕ್ತಪಡಿಸಿದ್ದಾರೆ. ೧೯೯೦ರ ದಶಕದಲ್ಲಿ ೭ ವಿವಿಧ ರೀತಿಯ ಖನಿಜಗಳಿದ್ದವು, ಮುಖ್ಯವಾಗಿ ಕೋಲ್, ಗೋಲ್ಡ್, ಮ್ಯಾಗ್ನೇಟ್ ಒರ್, ಮೈಕಾ ಸಾಲ್ಟ್, ಪಟ್ನೆ ಮತ್ತು ಪೆಟ್ರೋಲಿಯಂಗಳಾಗಿವೆ. ಇವುಗಳಿಗೆ ಸಂಬಂಧಿಸಿದಂತೆ ಖನಿಜಗಳ ವಿಷಯವಾರು ಬಳಕೆಯಾಗಿರುವ ಅಂಕಿ-ಅಂಶಗಳ ಮೂಲಕ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.

**ಶೇಷಾದ್ರಿ ಬಿ (೧೯೯೮)** ಅವರು **ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣ ಮತ್ತು ಜನಾಂದೋಲನಾ** ಎಂಬ ಕಿರು ಹೊತ್ತಿಗೆಯಲ್ಲಿ ಬಳ್ಳಾರಿ ಜಿಲ್ಲೆಯ ಕಬ್ಬಿಣ, ಮ್ಯಾಂಗನೀಸ್ ಅದಿರು, ಲೋಹ, ಲೋಹೇತರ ಖನಿಜಗಳು ದೊರೆಯುತ್ತಿರುವ ಸಂಪೂರ್ಣವಾದ ಮಾಹಿತಿಯನ್ನು ಒದಗಿಸಿದ್ದಾರೆ. ಬಳ್ಳಾರಿ ಜಿಲ್ಲೆಯ ಕೃಷಿ ಕಾರ್ಮಿಕರ ಶ್ರಮ ಶಕ್ತಿಯ ಪ್ರಮಾಣ, ಸಾಕ್ಷರತೆಯ ಪ್ರಮಾಣ, ಆರೋಗ್ಯ, ಪರಿಸರ ಮಾಲಿನ್ಯ,

ಸಂಪನ್ಮೂಲ ಇತ್ಯಾದಿ ಅಂಶಗಳ ಕುರಿತು ಚರ್ಚಿಸಿದ್ದಾರೆ. ಔದ್ಯಮಿಕರಣವು ಹುಟ್ಟು ಹಾಕಿರುವ ಅನಿಷ್ಟ ಹಾಗೂ ವಿಷಮತೆಗಳನ್ನು ಸಮಾಜ ಹೇಗೆ ಎದುರಿಸುತ್ತಿದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯಲ್ಲಿ ಸದ್ಯದ ಜನಾಂದೋಲನದ ಅಗತ್ಯತೆಯನ್ನು ಜನರಲ್ಲಿ ಮೂಡಿಸುವ ಆಶಯವನ್ನು ಈ ಅಧ್ಯಯನ ಹೊಂದಿದೆ. ಪೊಲಿಟಿಕಲ್ ಎಕನಾಮಿಕ್ ವಿಧಾನವನ್ನು ಬಳಸಿಕೊಂಡು ಅಧ್ಯಯನದ ಮಾಹಿತಿ ಸಂಗ್ರಹಣೆಗಾಗಿ ಪ್ರಾಥಮಿಕ ಮತ್ತು ಅನುಷಾಂಗಿಕ ಮಾಹಿತಿಯ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಒಟ್ಟಾರೆ ಔದ್ಯಮಿಕ ಮತ್ತು ಪರಿಸರ ಮಾಲಿನ್ಯಗಳ ನಡುವೆ ಅರ್ಥಶಾಸ್ತ್ರಜ್ಞರ ಸಿದ್ಧಾಂತಗಳು ಹೇಗೆ ಬಳ್ಳಾರಿ ಜಿಲ್ಲೆಯಲ್ಲಿ ಸಂಧರ್ಬಿಕವಾಗಿ, ಸಮನಾತ್ಮಕವಾಗಿ ಸಂಬಂಧವನ್ನು ಕಲ್ಪಿಸಲಾಗಿದೆ ಎಂಬುದನ್ನು ತಿಳಿಸಿದ್ದಾರೆ. ಆರ್ಥಿಕತೆಯಲ್ಲಿ ಶ್ರಮಶಕ್ತಿ ಮತ್ತು ಸಾಕ್ಷರತೆಯ ಪ್ರಮಾಣವು ಒಂದು ಪ್ರದೇಶದ ಧರಣ ಶಕ್ತಿಯಾಗಿದ್ದು, ಈ ಧರಣ ಶಕ್ತಿಯ ಫಲವಾಗಿ ಔದ್ಯಮಿಕರಣವು ಒಂದು ಪ್ರದೇಶದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಒತ್ತಡಗಳು, ವಿಷಮತೆಗಳನ್ನು ನೀರಾವರಿ, ನೀರಿನ ಬೇಡಿಕೆ, ಮೂಲ ಸೌಕರ್ಯ, ಆರೋಗ್ಯ, ಸಂಪನ್ಮೂಲಗಳ ಮೇಲೆ ಪರಿಣಾಮಗಳಾಗುತ್ತದೆ ಎಂದು ವ್ಯಕ್ತಪಡಿಸಿದ್ದಾರೆ.

**ರಾಮ್ಲೆ** ಪಿ.ಬಿ. (೧೯೯೮) ಅವರು **ಲ್ಯಾಂಡ್ ರಿಫಾಮ್ಸ್ ಲೇಜಿಶ್ಲೇಶನ್ ಇನ್ ಕರ್ನಾಟಕ : ಮೈತ್ ಆಫ್ ಸಕ್ಸಸ್** ಎಂಬ ಲೇಖನದಲ್ಲಿ ೧೯೬೧ರ ಗಣಿ ಕಾಯಿದೆಯು ಮೊದಲು ಗೇಣಿದಾರರ ಗಾತ್ರದ ಆಧಾರ ಮೇಲೆ, ಕೃಷಿ ಸಾಮಾಜಿಕ ರಚನೆಯಲ್ಲಿ ಗೇಣಿದಾರರು ಒಂದು ವರ್ಗಕ್ಕೆ ಸೇರಿದವರಾಗಿರುತ್ತಾರೆ ಎಂಬ ಸಂಗತಿಯನ್ನು ಕಡೆಗಣಿಸಿದ್ದಾರೆ. ಇದು ಕರ್ನಾಟಕ ಗಣಿ ಕಾಯಿದೆಯ ಪರಿಣಾಮವನ್ನು ನಿರ್ಣಯಿಸುವಲ್ಲಿ ಪ್ರಮುಖ ಲೋಪವಾಗಿದೆ. ಪ್ರಸ್ತುತ ಈ ಲೇಖನ ೧೯೫೬ರಲ್ಲಿ ರಾಜ್ಯದ ಪುನರ್ ರಚನೆಯ ಸಂದರ್ಭದಲ್ಲಿ ಕರ್ನಾಟಕದ ಗಣಿ ಸಮಸ್ಯೆ ತೀವ್ರತೆಯನ್ನು ಗುರುತಿಸಲು ಪ್ರಯತ್ನಿಸುತ್ತದೆ. ಈ ವಿಶ್ಲೇಷಣೆಯನ್ನು ಕೃಷಿ ಸಂಬಂಧಿ ರಚನೆ ಬದಲಾವಣೆ ಆಗುತ್ತಿರುವಲ್ಲಿ ಗೇಣಿ ಕಾನೂನಿನ ಪ್ರಭಾವಗಳನ್ನು ಗುರುತಿಸಲು ಸಹಾಯಕವಾಗಿದೆ ಎಂಬ ಸಂಗತಿಗಳನ್ನು ಸ್ಪಷ್ಟಪಡಿಸಿದ್ದಾರೆ.

**ಗೋವಿಂದ ಕುಮಾರ್.ಪಿ.ಡಿ ಮತ್ತಿತರರು** (೧೯೯೮) ಅವರ **ಕೋಲಾರ ಗೋಲ್ಡ್ ಮೈನ್ ಆನ್ ಆನ್‌ಫಿನೀಶಡ್ ಬಯೋಗ್ರಾಫೀ ಆಫ್ ಕೊಲೊನಿಲಿಸಮ್** ಎಂಬ ಲೇಖನದಲ್ಲಿ ಕೋಲಾರ ಚಿನ್ನದ ಗಣಿಯಲ್ಲಿ ಅಂದಿನ ಮೈಸೂರು ಸಂಸ್ಥಾನದ ಆಳ್ವಿಕೆಯು ವಿಶ್ವದಲ್ಲಿಯೇ ಉಚ್ಚಾಯ ಸ್ಥಿತಿಯಲ್ಲಿದ್ದ ಉದ್ಯಮವಾಗಿತ್ತು. ಇದನ್ನು ೧೯೫೦ರಲ್ಲಿ ರಾಜ್ಯ ಸರ್ಕಾರವು ವಶಪಡಿಸಿಕೊಂಡು ನಂತರ ೧೯೬೦ರಲ್ಲಿ ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಿತ್ತು. ೧೯೯೦ರಲ್ಲಿ ಜಾಗತೀಕರಣ ಪ್ರಭಾವಕ್ಕೆ ಒಳಗಾಗಿ ಮತ್ತೆ ವಸಾಹತು ಸ್ಥಿತಿಯ ಹಾದಿಯಲ್ಲಿ ಸಾಗುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನ ಲಾಭ ಗಳಿಸುವ ಉದ್ದೇಶ ಹೊಂದಿರುವ ಉದ್ಯಮವಾಗಿರುವ ಹಾಗೂ ಸಂಘಟಿತ ಕಾರ್ಮಿಕ ಸಂಘದ ಪ್ರದೇಶವಾಗಿರುವ ಕೋಲಾರ ಚಿನ್ನದ ಗಣಿಗಾರಿಕೆಯ ಅವನತಿಯನ್ನು ಗುರುತಿಸಲು ಪ್ರಯತ್ನಿಸುತ್ತದೆ. ಕರ್ನಾಟಕ ಸರ್ಕಾರದ ಉದಾಸೀನತೆ ಹಾಗೂ ಪ್ರಾದೇಶಿಕ ಸ್ವರೂಪದ ರಾಜಕೀಯತೆಯು ಇದಕ್ಕೆ ಕಾರಣವಾಗಿದೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

**ಎಕಾಲಾಜೀಕಲ್ ಯೂನಿಟ್, ಇಸ್ಟಿಟ್ಯೆಷನ್ ಫಾರ್ ಸೋಷಿಯಲ್ ಆ್ಯಂಡ್ ಎಕನಾಮಿಕಲ್ ಚೆಂಜ್** (೧೯೯೯) **ಎನ್ವಾರನ್ಮೆಂಟಲ್ ಇನ್ ಕರ್ನಾಟಕ: ಎ ಸ್ಟ್ಯಾಚ್ಯೂ ರಿಪೋರ್ಟ್** ಎಂಬ ಲೇಖನದಲ್ಲಿ ಕರ್ನಾಟಕದ ನೈಸರ್ಗಿಕ ಸಂಪತ್ತಿನ ಪರಿಸರದ ಬಗ್ಗೆ ಒಂದು ಸ್ಥೂಲವಾದ ಸಮೀಕ್ಷೆಯಿದೆ. ಇದರಲ್ಲಿ ಅರಣ್ಯ ಮತ್ತು ಗೋಮಾಳದ ವ್ಯಾಪ್ತಿ, ಭೂಮಿಯ ಬಳಕೆ, ಮಣ್ಣಿನ ಸವೇತ, ಜಲಾಯನ ಪ್ರದೇಶದ ಅಭಿವೃದ್ಧಿ, ಜಾನುವಾರುಗಳು, ಮೀನುಗಾರಿಕೆ, ಖನಿಜ ಅದಿರುಗಳು ಮತ್ತು ಅದರ ಬಳಕೆ, ಕೈಗಾರಿಕಾ ಮಾಲಿನ್ಯ, ನಗರ ಪರಿಸರ ಇವುಗಳ ಕುರಿತ ಸಂಗತಿಗಳನ್ನು ಚರ್ಚಿಸಿದ್ದಾರೆ. ಇಂತಹ ಪರಿಸರದ ಸಮಸ್ಯೆಗಳಿಗೆ ಸರ್ಕಾರವು ಉದಾಸೀನತೆ ತೋರಿದ್ದರಿಂದ ನೈಸರ್ಗಿಕ ಸಂಪತ್ತುಗಳ ಬಳಕೆಗೆ ಜನರಿಗೆ ಇರುವ ಅವಕಾಶ ಹಾಗೂ ಆರೋಗ್ಯ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಚಳುವಳಿಗಳೂ ಪ್ರಾರಂಭವಾಗಿವೆ. ಇದರ ಬದಲು ಈ ಸಮಸ್ಯೆಗಳಿಗೆ ಸಾಂಸ್ಥಿಕ ಮಾರ್ಗದ ಅವಶ್ಯಕತೆಯಿದೆ ಎಂಬ ಮಾಹಿತಿಯನ್ನು ಈ ಲೇಖನದಲ್ಲಿ ಸ್ಪಷ್ಟಪಡಿಸಲಾಗಿದೆ.

**ವಸಂತ ಮಾಲವಿ (೧೯೯೯)** ಅವರ **ಗಣಿಧಣಿಗಳ ರಣರಂಗ ಸಂಡೂರು** ಎಂಬ ಲೇಖನದಲ್ಲಿ ಬಯಲು ಸೀಮೆ ಮಲೆನಾಡೆಂದು ಖ್ಯಾತಿಯನ್ನು ಪಡೆದಿರುವ ಸಂಡೂರಿನ ಹಸಿರು ಗುಡ್ಡಗಳು, ಕಬ್ಬಿಣ ಅದಿರುಗಳನ್ನು ಹೊಂದಿರುವ ಪ್ರದೇಶಗಳ ಬಗ್ಗೆ ವಿವರಿಸಿದ್ದಾರೆ. ಗಣಿಗಾರಿಕೆಯಿಂದಾಗಿ ಅರಣ್ಯ ನಾಶ, ವನ್ಯಮೃಗಗಳ ನಾಶ, ಸ್ಫೋಟದಿಂದಾಗಿ ದೇವಾಲಯಗಳ ನಾಶ, ಅರಣ್ಯ ನಾಶ ಆಗುತ್ತಿರುವುದು ಮುಂದಿನ ತಲೆಮಾರುಗಳಿಗೆ ಸಂಪನ್ಮೂಲಗಳು ಬರಿ ಮರುಭೂಮಿ ಆಗಿಯೇ ಉಳಿಯುವ ಸಾದ್ಯತೆಗಳಿವೆ ಎಂಬ ಸಂಗತಿಗಳನ್ನು ಸಾದರಪಡಿಸಿದ್ದಾರೆ.

**ಸಾಮ್ಯುವೆಲ್ ಪೌಲ್ (೨೦೦೦)** ಅವರ **ಟು ಸ್ಟೇಟ್ಸ್ ಹ್ಯಾವ್ ಆ್ಯನ್ ಎನ್ಲಿಬಿಂಗ್ ಎನ್ವಾರನ್ಮೆಂಟ್ ಫಾರ್ ಇಂಡಸ್ಟ್ರಿಯಲ್ ಗ್ರೌತ್? ಸಮ್ ಎವಿಡೆನ್ಸ್ ಫಾರ್ಮ್ ಕರ್ನಾಟಕ** ಎಂಬ ಲೇಖನದಲ್ಲಿ ಆರ್ಥಿಕ ನೀತಿಗಳು ಯಶಸ್ವಿಯಾಗಬೇಕಾದರೆ ಯೋಜನೆಗಳನ್ನು ಆಕರ್ಷಿಸುವುದರೊಂದಿಗೆ, ರಾಜ್ಯಗಳು ಅವುಗಳ ಅನುಷ್ಠಾನದ ಮೇಲ್ವಿಚಾರಣೆ ಸಹ ಮಾಡಬೇಕಾಗಿದೆ. ಆದರೆ ಯೋಜನೆಗಳ ಅನುಷ್ಠಾನದ ಗತಿಯನ್ನು ಬೆಳೆಸುವ ಯಾವುದೇ ಮಾಹಿತಿ ಲಭ್ಯವಾಗಿಲ್ಲ. ಪ್ರಸ್ತುತ ಲೇಖನವು ಕರ್ನಾಟಕದ ಹೂಡಿಕೆಯ ಪ್ರಸ್ತಾಪಗಳ ಅನುಷ್ಠಾನದ ಪ್ರಗತಿಯನ್ನು ದಾಖಲಿಸುವುದಲ್ಲದೇ ಕೈಗಾರಿಕಾ ಅಭಿವೃದ್ಧಿಗೆ ಸೂಕ್ತವಾದ ಪರಿಸರವನ್ನು ನಿರ್ಮಿಸಲು ವಿಭಾಗಗಳನ್ನು ಸೂಚಿಸುತ್ತದೆ ಎಂಬ ಸಂಗತಿಗಳನ್ನು ಚರ್ಚೆಗೆ ಒಳಪಡಿಸಿದ್ದಾರೆ.

**ಪ್ರತಾಪ್ ಸಿಂಹ (೨೦೦೦)** ಅವರ **ಮೈನಿಂಗ್ ಮಾಫಿಯಾ** ಎಂಬ ಕೃತಿಯಲ್ಲಿ ಸುಮಾರು ೧೩ ಅಂಶಗಳಿಗಿಂತಲೂ ಹೆಚ್ಚು ವಿಷಯದ ಬಗ್ಗೆ ವಿವರಣೆ ನೀಡಿದ್ದಾರೆ. ಅದರಲ್ಲಿ ಪ್ರಮುಖವಾದವನ್ನು ಇಲ್ಲಿ ತಿಳಿಸಲಾಗಿದೆ. ಕರ್ನಾಟಕದಲ್ಲಿ ನಡೆಯುತ್ತಿರುವ ಅವ್ಯವಹಾರ, ಗಣಿಗಾರಿಕೆಯಲ್ಲಿ ಗಡಿಗಲಾಟೆ, ದೇವಾಲಯಗಳು ಸಂಪೂರ್ಣ ನಾಶ ಹೊಂದಿರುವ ವಿಚಾರದ ಬಗ್ಗೆ ತಿಳಿಸಿದ್ದಾರೆ. ಗಣಿಗಾರಿಕೆಗಾಗಿ ರಾಜಕೀಯ ಕ್ಷೇತ್ರದಲ್ಲಿ ಹೇಗೆ ಹಿಡಿತವನ್ನು ಸಾಧಿಸಿ, ಹೇಗೆ ಅಧಿಕಾರ ಚಲಾಯಿಸಿ ಜಿಲ್ಲೆಯಲ್ಲಿ ಮೆರೆದ ಶಾಸಕರ ಕುರಿತ ಮಾಹಿತಿಯನ್ನು ಚರ್ಚಿಸಿದ್ದಾರೆ.

**Darpan (2001) Mining and sustainable development insights from international law** In the article in contrast to countries that have development and implemented good international mining practices and deposite significant progress in mine closure planning, various mining nations are still to develop sufficiently sophisticated corporate Governance, regulatory frame works or financial insurance provision to address mine closurers planning and mine rehabililation in particular it is apparent that few mining nations have developed and implemented specific mine closure and mine rehabilition regulations and legislative controls.

**ರೆಡ್ರಿಕ್ಸ್ ಜಿ. ಎಗರ್** (೨೦೦೧) ಅವರ **ಮೈನಿಂಗ್ ಅಂಡ್ ಎಕನಾಮಿಕ್ ಸಸ್ಟೈನೇಬೆಲಿಟಿ ನ್ಯಾಷನಲ್ ಎಕನಾಮಿಕ್ ಅಂಡ್ ಲೋಕಲ್ ಕಮ್ಯೂನಿಟಿಸ್** ಎಂಬ ಕೃತಿಯಲ್ಲಿ ಗಣಿಗಾರಿಕೆ ಮತ್ತು ಖನಿಜ ಸಂಸ್ಕರಣೆಯ ಪ್ರಕ್ರೀಯೆಯು ಆರ್ಥಿಕಾಭಿವೃದ್ಧಿಯಲ್ಲಿ ಆದಾಯವನ್ನು ಗಳಿಸುವ ಮೂಲ ಸಾಧನವಾಗಿದೆ. ಆದರೆ ಈ ಸಮ್ಮತೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನಿರಂತರವಾಗಿರುವುದಿಲ್ಲ. ಆರ್ಥಿಕತೆಯನ್ನು ಅವಲಂಬಿಸಿರುವ ಕೆಲವು ರಾಷ್ಟ್ರಗಳ ಪ್ರದರ್ಶನವು ಸಹ ಶೋಚನಿಯವಾಗಿದೆ. ಹಾಗಾಗಿ ಗಣಿಗಾರಿಕೆಯಲ್ಲಿ ಸುಸ್ಥಿರ ಅಭಿವೃದ್ಧಿಯು ನಿರಂತರವಾಗಿ ಸಾಧಿಸಲು ಸಾಧ್ಯವಿಲ್ಲ. ರೆಡ್ರಿಕ್ಸ್ ಅವರು ಈ ಅಧ್ಯಯನದಲ್ಲಿ ಪ್ರಮುಖವಾದ ಎರಡು ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನ ಮಾಡಿದ್ದಾರೆ. ರೆಡ್ರಿಕ್ಸ್ ಎತ್ತಿರುವ ಪ್ರಮುಖ ಪ್ರಶ್ನೆಯೆಂದರೆ ಒಂದು, ಗಣಿಗಾರಿಕೆಯಲ್ಲಿ ಖನಿಜ ಸಂಸ್ಕರಣೆ ಮಾಡುವಾಗ ಆಗುವ ಆರ್ಥಿಕ ತೊಂದರೆಗಳಾವುವು? ಎರಡು, ಗಣಿಯಲ್ಲಿ ಖನಿಜ ಸಂಪತ್ತನ್ನು ಅಲ್ಪಾಧಿಯಲ್ಲಿ ವರ್ಧಿತವಾಗಿ ಮತ್ತು ದೀರ್ಘಾವಧಿಯಲ್ಲಿ ನಿರಂತರವಾಗಿ ನಿರ್ವಹಿಸುವಾಗ ಆರ್ಥಿಕ ಪ್ರಯೋಜನಗಳು ಇಳಿಕೆಯಾಗುತ್ತದೆ ಯಾಕೆ? ಎಂಬ ಪ್ರಶ್ನೆಯನ್ನು ರಾಷ್ಟ್ರದ ಆರ್ಥಿಕತೆ ಮತ್ತು ಸಮುದಾಯ ಈ ಎರಡು ಪರಿಕಲ್ಪನೆಯ ದೃಷ್ಟಿಕೋನವನ್ನು

ಇಟ್ಟುಕೊಂಡು ವಿಶ್ಲೇಷಿಸಿದ್ದಾರೆ. ಗಣಿಗಾರಿಕೆಯಲ್ಲಿ ಆರ್ಥಿಕ ಪರಿಣಾಮಗಳನ್ನು ಅಧ್ಯಯನ ಮಾಡುವುದು ತುಂಬಾ ಸಂಕಿರಣ. ಹಾಗಾದರೆ ಖನಿಜ ಸಂಪತ್ತು ಒಂದು ಶಾಪವಾಗಿದೆಯಾ? ಅಥವಾ ಸ್ಥಳೀಯ ಸಮುದಾಯದ ಮೇಲೆ ನಕರಾತ್ಮಕವಾದ ಆರ್ಥಿಕ, ಸಾಮಾಜಿಕ, ಪರಿಸರ ಅಯಾಮಗಳ ಮೇಲಾಗುವ ಪರಿಣಾಮಗಳನ್ನು ಪರ್ಯಾಯವಾಗಿ ತಪ್ಪಿಸುವುದು ಹೇಗೆ? ಇದಕ್ಕಾಗಿಯೇ ರಾಷ್ಟ್ರದ ಅಭಿವೃದ್ಧಿಯನ್ನು ವೃದ್ಧಿಸಲು ಖನಿಜ ಪ್ರದೇಶಗಳ ಕಾಯ್ದುಕೊಳ್ಳುವ ಅಥವಾ ರಕ್ಷಣೆ ಮಾಡುವ ಅನಿವಾರ್ಯತೆ ಇದೆ. ಗಣಿಗಾರಿಕೆ ಒಂದು ಸಮುದಾಯ, ಪ್ರದೇಶ, ಅಥವಾ ಸಮಾಜಕ್ಕೆ ನಿರ್ಧಿಷ್ಟವಾಗಿರುತ್ತದೆ. ಈ ನಿರ್ಧಿಷ್ಟ ಪ್ರದೇಶ ಸಮುದಾಯಗಳ ಮೇಲೆ ತಗಲುವ ಸಮಾಜಿಕ ವೆಚ್ಚ ಅಧಿಕವಾಗಿರುತ್ತದೆ. ಇದರಿಂದ ಸ್ಥಳೀಯರು ದೊರಕುವ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿವೆ. ಈ ಸಮುದಾಯಗಳ ಮೇಲಾಗುವ ಸಾಮಾಜಿಕ ವೆಚ್ಚವನ್ನು ಹೇಗೆ ಭರಿಸಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಸರ್ಕಾರವಾಗಲೀ, ಗಣಿ ಕಂಪನಿಗಳಾಗಲೀ, ನಾಗರೀಕ ಸಮಾಜದ ಮೇಲಾಗುವ ವೆಚ್ಚವನ್ನು ಇಳಿಕೆ ಮಾಡುವುದು ಹೇಗೆ ಎಂಬುವುದು ವಿಮರ್ಶಾತ್ಮಕವಾಗಿ ಯೋಚನೆ ಮಾಡಬೇಕಾಗಿದೆ. ಖನಿಜ ಸಂಪತ್ತನ್ನು ಪರಿಣಾಮಕಾರಿಯಾಗಿ ಪರಿಸರ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮೌಲ್ಯಗಳನ್ನು ಅಧ್ಯಯನ ಮಾಡುವುದು, ಸಾಮಾಜಿಕ ಆಧ್ಯತೆಗಳನ್ನು ಸ್ಥಿರವಾಗಿ ರೂಪಿಸುವುದು, ಸರ್ಕಾರ ಸರಿಯಾದ ನಿಟ್ಟಿನಲ್ಲಿ ಖನಿಜ ಪರಿಶೋಧನೆ ಮಾಡುವುದು, ಗಣಿ ಪ್ರದೇಶದ ಅಭಿವೃದ್ಧಿಗೆ ಕಾನೂನಿನ ಚೌಕಟ್ಟಿನೊಳಗೆ ನೀತಿಯನ್ನು ರೂಪಿಸುವ ಅಗತ್ಯವಿದೆ ಎಂಬ ಮುಖ್ಯವಾದ ನಾಲ್ಕು ಅಂಶಗಳನ್ನು ರೆಡ್ರಿಕ್ಸ್‌ರವರು ಸಾದರಪಡಿಸಿದ್ದಾರೆ.

**ವಿದ್ಯಾದಾಸ್** (೨೦೦೧) ಅವರ **ಒರಿಸ್ಸಾ ಮೈನಿಂಗ್ ಬಾಕ್ಸೈಟ್ ಮೈನಿಂಗ್ ಪೀಪಲ್** ಎಂಬ ಲೇಖನದಲ್ಲಿ ಒರಿಸ್ಸಾದ ಗಣಿಗಾರಿಕೆಯಿಂದಾಗಿ ಬುಡಕಟ್ಟು ಜನ ಸಮುದಾಯಗಳ ಬದುಕು ಮತ್ತು ಪರಿಸರದ ಮೇಲಾಗುವ ಹಾನಿಯ ಬಗ್ಗೆ ವಿವರಿಸಿದ್ದಾರೆ. ಈ ಲೇಖನದಲ್ಲಿ ಬಾಕ್ಸೈಟ್ ಮತ್ತು ಅಲ್ಯೂಮಿನಿಯಂ ಅದಿರುಗಳನ್ನು ಒಳಗೊಂಡ ೧೨ ಹಳ್ಳಿಗಳ ಭೂಮಿಯನ್ನು ಗಣಿಗಾರಿಕೆಗೆ ಬಳಕೆ ಮಾಡುತ್ತಿದ್ದು, ಇದರಿಂದ ಪರಿಸರದ ಮೇಲಾಗುವ ಪರಿಣಾಮಗಳು ಹಾಗೂ ಗಣಿಕೈಗಾರಿಕೆಯ ತಾಜ್ಯವಸ್ತು ನೀರಿನಲ್ಲಿ ವಿಲೀನವಾಗಿ ಜಲಮಾಲಿನ್ಯ ಪರಿಣಾಮ ಬೀರಿದೆ. ಒರಿಸ್ಸಾದ ಕೊರಪುತ್ ಜಿಲ್ಲೆಯ ೧೧ ಹಳ್ಳಿಗಳ ಜನರ ಆರೋಗ್ಯದ ಮೇಲೆ ಪರಿಣಾಮ ಬೀರಿರುವುದು ರಾಷ್ಟ್ರೀಯ ಭೂಗೋಳ ಸಂಶೋಧನಾ ಸಂಸ್ಥೆ ನಡೆಸಿರುವ ಸಂಶೋಧನೆಯಲ್ಲಿ ಗಣಿಗಾರಿಕೆಯಿಂದಾಗಿ ಸಾಮಾಜೋ–ಆರ್ಥಿಕತೆಯ ಮೇಲೆ ಪರಿಣಾಮಗಳು ಬೀರುತ್ತದೆಂದು ಸಾದರಪಡಿಸಿದೆ. ಹಾಗೂ ಒರಿಸ್ಸಾದ ಗಣಿಗಾರಿಕೆ ದೇವಂಕರಲ್, ರಾಮಿಬೇದ ಮತ್ತು ಕಂಡಕ್ಟುಂಟಿ ಎಂಬ ಮೂರು ಗ್ರಾಮದ ಜನರನ್ನು ಸ್ಥಳಾಂತರಿಸುವ ಸಮಸ್ಯೆಯ ಕುರಿತು ವಿವರಣೆ ನೀಡಿದ್ದಾರೆ. ಈ ಗ್ರಾಮದ ಜನರ ಬದುಕಿನ ಮೇಲೆ ಪರಿಣಾಮ ಬೀರುವ ಜಲಮಾಲಿನ್ಯ, ವಾಯುಮಾಲಿನ್ಯ, ಕೃಷಿ ನಶಿಸುವಿಕೆ ಅರಣ್ಯ ಭೂಮಿ ಒತ್ತುವರಿ, ಕೃಷಿ ಭೂಮಿಯ ಕಬಳಿಕೆ, ಬುಡಕಟ್ಟು ಜನ ಸಮುದಾಯಗಳ ನೆಲೆಯನ್ನು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.

**ರೆಮಿ ಫ್ಲೆಕ್ಸಿ ಮತ್ತು ಗ್ಯಾರಿ** (೨೦೦೨) ಅವರ **ಲಾರ್ಜ್ ಮೈನ್ಸ್ ಅಂಡ್ ಲೋಕಲ್ ಕಮ್ಯೂನಿಟೀಸ್, ಫಾರಿನ್ ಪಾರ್ಟನರ್‌ಶಿಫ್ಟ್, ಬಿಲ್ಡಿಂಗ್ ಸಸ್ಟೈನೇಬಿಲಿಟಿ, ಮೈನಿಂಗ್ ಅಂಡ್ ಡೆವಲಪ್ಮೆಂಟ್** ಎಂಬ ಗ್ರಂಥವನ್ನು ಗ್ರಹಿಸಿದಾಗ ಇತ್ತೀಚಿನ ಗಣಿ ಯೋಜನೆಗಳು ಮತ್ತು ಪುನರ್ವಸತಿಯ ಮೂಲಭೂತ ಸೌಕರ್ಯಗಳನ್ನು ನಿರ್ಲಕ್ಷ್ಯ ಮಾಡುತ್ತಿರುವುದು ಗಣಿ ಸ್ಥಗಿತತೆಗೆ ಅಥವಾ ಮುಚ್ಚುವಿಕೆಗೆ ಪ್ರಬಲವಾದ ಕಾರಣವಾಗಿದೆ. ಗಣಿಯಲ್ಲಿ ಪುನರ್ವಸತಿಯನ್ನು ಕಲ್ಪಿಸಿಕೊಡಲು ರೂಪಿಸಿರುವ ಶಾಸನಬದ್ಧ ಯೋಜನೆಗಳು ವಿಫಲಗೊಂಡಿವೆ. ಇದಕ್ಕೆ ಸರ್ಕಾರ ರೂಪಿಸಿರುವ ಅಲ್ಪಾವಧಿಯ ಯೋಜನೆಯೇ ಕಾರಣವಾಗಿದೆ. ಹಾಗಾಗಿ ಸರ್ಕಾರವು ಗಣಿಗಾರಿಕೆಯಲ್ಲಿ ದೀರ್ಘಾವಧಿಯ ಯೋಜನೆಗಳನ್ನು ರೂಪಿಸಿ ಭೂಮಿ ಮತ್ತು ಪರಿಸರದ ಮೇಲಾಗುವ ಅಪಾಯಗಳನ್ನು ತಡೆಗಟ್ಟುವ ಅಗತ್ಯಗಳಿವೆ ಎಂದು ವಾದಿಸಿದ್ದಾರೆ.

**ಚಕ್ರ ಬೋರಟಿ** (೨೦೦೨) ಅವರ **ಡಿಟರ್‌ಮಿನೇಷನ್ ಆಫ್ ದಿ ಎಮೀಷನ್ ರೇಟ್ ಫ್ರಮ್ ವೈರ್ ಓಪನ್‌ಕಾಸ್ಟ್ ಮೈನಿಂಗ್ ಅಪರೇಷನ್** In the article The rapid growth of population

along with increased capacity of Extracting natural Resources around the globe has contributed in endangering the Environment. As a matter of fact, due to growing mining activities, attention to the Environmental problems and controlling pollution becomes unavoidable. Environmental protection therefore, is one of the most important issues in the sustainable development of a country. in currently, there are no limitations to the capacity of mine production but it is however, necessary to maintain a suitable condition for miners as well as the general publics.

**ಮುಜಾಫರ್ ಅಸಾದಿ** (೨೦೦೨) ಅವರ **ಕುದುರೆ ಮುಖ : ಆಫ್ ಮೈನಿಂಗ್ ಅಂಡ್ ಎನ್ವಾರನ್ಮೆಂಟಲ್** ಎಂಬ ಲೇಖನದಲ್ಲಿ ಕುದುರೆ ಮುಖದಲ್ಲಿ ಕಬ್ಬಿಣ ಅದಿರು ಕಂಪನಿಯನ್ನು ಸುಪ್ರಿಂಕೋರ್ಟ್ ಮುಚ್ಚಲು ಆದೇಶ ನೀಡಿದರಿಂದ ಪರಿಸರದಲ್ಲಿ ಸುಧಾರಣೆಯನ್ನು ಕಂಡುಕೊಂಡಿರುವ ಮಾಹಿತಿಯನ್ನು ವಿವರಿಸಿದ್ದಾರೆ. ಕುದುರೆಮುಖ ಗಣಿಗಾರಿಕೆ ಮತ್ತು ಪರಿಸರ ಸಂಗತಿಗೆ ಸಂಬಂಧಿಸಿದಂತೆ KIOLL ಕುದುರೆಮುಖ ಕಂಪನಿಯ ಬಳಕೆಗಾಗಿ ೧೯೭೬ರಲ್ಲಿ ೪,೬೦೫,೦೨ ಹೆಕ್ಟರ್‌ನಷ್ಟು ಜಮೀನನ್ನು NMDC ಕಂಪನಿಯವರಿಗೆ ವರ್ಗಾಯಿಸಿದ್ದರು. ಈ ಜಮೀನು ಕೃಷಿ ರೈತರಿಂದ ಭೂಸ್ವಾಧೀನಕ್ಕೆ ಒಳಪಡಿಸಲಾಗಿತ್ತು. ಗಣಿಗಾರಿಕೆಗಾಗಿ ಅರಣ್ಯ ಪ್ರದೇಶದಲ್ಲಿ ೩,೨೦೩,೫೫ ಹೆಕ್ಟರ್ ಕೃಷಿ ಭೂಮಿಯನ್ನು ಬಳಸಿಕೊಂಡಿದ್ದಾರೆ. ಈ ಕುದುರೆಮುಖ ಪ್ರದೇಶದಲ್ಲಿ ೨ ಲಕ್ಷ ಕೃಷಿಗಾಗಿ ಕೃಷಿಕರು ಬಳಸುವ ನೀರು ಕಲುಷಿತವಾಗಿದೆ. ಇದರಿಂದ ಕೃಷಿ ಕುಂಠಿತವಾಗಿ ಉತ್ಪನ್ನದ ಪ್ರಮಾಣ ಕಡಿಮೆಯಾಗಲು ಕಾರಣವಾಗಿದೆ. ಈ ಗಣಿಗಾರಿಕಾ ಪ್ರಕ್ರಿಯೆಯು ಪರಿಸರ ಮಾಲಿನ್ಯ, ಅರಣ್ಯನಾಶ, ಜನ ಸಮುದಾಯದ ಆರೋಗ್ಯದ ಮೇಲೆ ಪರಿಣಾಮಗಳಾಗಿವೆ ಎಂದು ಪ್ರಬಲವಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಸೋಮಶೇಖರ್** (೨೦೦೨) ಅವರ **ಗಣಿಗಾರಿಕೆಯಿಂದ ಕೃಷಿ ಸಮುದಾಯದ ಮೇಲಾಗುವ ಪರಿಣಾಮ** ಎಂಬ ಸಂಪ್ರಬಂಧದಲ್ಲಿ ಬಳ್ಳಾರಿ ಜಿಲ್ಲೆಯ ಹೋಸಪೇಟೆ ತಾಲ್ಲೂಕಿನ ಹಿನ್ನಲೆಯ ಪರಿಚಯ, ಗಣಿಗಾರಿಕೆಯಿಂದಾಗಿ ಕೃಷಿ ಸಮುದಾಯ, ಪರಿಸರದ ಮತ್ತು ಜಾನುವಾರು ಮೇಲಾಗುವ ಪರಿಣಾಮಗಳ ಕುರಿತು ಕೂಲಂಕುಷವಾಗಿ ಚರ್ಚಿಸಿದ್ದಾರೆ.

**ರಾಧಕೃಷ್ಣ.ಬಿ.ಪಿ.** (೨೦೦೩) ಅವರ **ಕರ್ನಾಟಕದ ಖನಿಜ ಸಂಪತ್ತು** ಎಂಬ ಕೃತಿಯಲ್ಲಿ ಅದಿರಿನ ಬಗೆಗೆ ಭೌಗೋಳಿಕ ವಿಶ್ಲೇಷಣೆ, ಗಣಿಗಾರಿಕೆಯ ಅರ್ಥ, ವಿಧಗಳು ಭಾರತದಲ್ಲಿ ಕಬ್ಬಿಣ ಅದಿರಿನ ಸಂಗ್ರಹದ ಬಗೆಗೆ, ಆಂಧ್ರ-ಕರ್ನಾಟಕದ ಕಬ್ಬಿಣ ಅದಿರಿನ ಗಣಿಗಾರಿಕೆಯ ಬಗ್ಗೆ ವಿವರಿಸಿದ್ದಾರೆ. ಕರ್ನಾಟಕದ ಕಬ್ಬಿಣ ಅದಿರಿನ ಸಂಗ್ರಹಣೆಯಲ್ಲಿ ತೊಡಗಿರುವ ಜಿಲ್ಲೆಯ ಸ್ವವಿವರಣೆಯನ್ನು ಅಂಕಿ ಅಂಶಗಳ ಸಹಿತ ಬಳಸಿದ್ದಾರೆ. ವಿಶ್ವದ ಕಬ್ಬಿಣ ಅದಿರಿನ ಗಣಿಗಾರಿಕೆ ಮತ್ತು ಮಾರುಕಟ್ಟೆಯ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ.

**ಗವರ್ನ್‌ಮೆಂಟ್ ಆಫ್ ಇಂಡಿಯಾ ಮಿನಿಸ್ಟರಿ ಲೇಬರ್ ಸ್ಟಾಟಿಕಲ್** (೨೦೦೩) ವರದಿವೊಂದರಲ್ಲಿ ಕೌಟಿಲ್ಯನ ಪ್ರಕಾರ ಗಣಿಗಾರಿಕೆಯಲ್ಲಿ ಕೇಂದ್ರಿಕೃತವಾಗಿರುವ ನಾಗರೀಕ ಸಮಾಜವು ವಂಚಿತವಾಗಿರುವ ಸಮಾಜವಾಗಿದೆ. ಈ ಸಮಾಜದ ಸುತ್ತಲು ಜಟೀಲವಾದ ಸಮಸ್ಯೆಗಳು ನಿರಂತರವಾಗಿ ಸೃಷ್ಟಿಗೊಳ್ಳುತ್ತಲೆ ಇದೆ. ಪ್ರತಿ ಸಮಾಜದಲ್ಲೂ ತನ್ನದೇ ಆದ ಪರಿಕರದ ಮಹತ್ವವನ್ನು ಪಡೆದುಕೊಂಡಿರುತ್ತವೆ. ಆದರೆ ಗಣಿಗಾರಿಕೆ ಚಟುವಟಿಕೆಯಲ್ಲಿ ನಿಯಮಗಳು ಕಾನೂನು ಬಾಹಿರವಾಗಿರುವುದು ಪರಿಸರ ಹಾನಿ ಮಾಡಲು ಸಹಾಯಕವಾಗಿದೆ. ದೇಶಿಯ ನೆಲೆಯಲ್ಲಿ ಗಣಿಗಾರಿಕೆಯಿಂದಾಗುವ ಹಾನಿಯನ್ನು ತಡೆಯಲು ಸೂಕ್ತ ವಿಧಾನಗಳನ್ನು ಬಳಸುವ ಅಗತ್ಯವಿದೆ. ಭಾರತದ ಜಾರ್ಖಾಂಡ್‌ನಲ್ಲಿ ನಡೆಯುತ್ತಿರುವ ಕಲ್ಲಿದ್ದಲಿನ ಗಣಿಗಾರಿಕೆ ಒಂದು ನಿರ್ದೇಶನವಾಗಿದೆ. ಈ ಗಣಿಯಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕ ವರ್ಗದವರು ಎದುರಿಸುತ್ತಿರುವ ಸಮಸ್ಯೆ ಮತ್ತು ಜನ ಸಮುದಾಯದ ಮೇಲಾಗುವ ಆರೋಗ್ಯದ ಸಮಸ್ಯೆಗಳಾಗಿರುವುದು ಒಂದು ಉತ್ತಮ ನಿರ್ದಶನವಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ.

**ಕಿತುಲಾ ಎ.ಜಿ.ಎನ್ (೨೦೦೩) ಅವರ ದಿ ಎನ್ವಾರನ್ಮೆಂಟಲ್ ಅಂಡ್ ಸೋಷಿಯೋ ಎಕನಾಮಿಕ್ಸ್ ಆಫ್ ಮೈನಿಂಗ್ ಆನ್ ಲೋಕಲ್ ಲೈವ್ಲಿವುಡ್ ಇನ್ ಟಾಂಜನೀಯಾ ಎ ಕೇಸ್ ಸ್ಟಡಿ ಆಫ್ ಗಯಾಟ ಡಿಸ್ಟ್ರಿಕ್** ಎಂಬ ಲೇಖನದಲ್ಲಿ ಟಾಂಜನೀಯಾ ಗಯಾಟ ಜಿಲ್ಲೆಯಲ್ಲಿ ನಡೆಯುತ್ತಿರುವ ಗಣಿಗಾರಿಕೆಯು ಸ್ಥಳೀಯ ಜನ ಸಮುದಾಯದ ಮೇಲಾಗುವ ಸಾಮಾಜಿಕ, ಆರ್ಥಿಕ ಮತ್ತು ಪರಿಸರದ ಪರಿಣಾಮಗಳ ಚರ್ಚೆ ಮಾಡಿದ್ದಾರೆ. ಗಣಿಗಾರಿಕೆ ಚಟುವಟಿಕೆಯ ನೈಸರ್ಗಿಕ ಪರಿಸರದ ಮೇಲೆ ಬೀರುವ ಪರಿಣಾಮ ಋಣಾತ್ಮಕವಾಗಿ ಕಂಡುಬಂದಿದೆ. ಗಣಿಗಾರಿಕೆಯಲ್ಲಿ ಖನಿಜ ಸಂಪನ್ಮೂಲಗಳ ದುರ್ಬಳಕೆಯು ವಾತಾವರಣದಲ್ಲಿ ಧೂಳನ್ನು ಹೆಚ್ಚಿಸಿ ವಾಯು ಮಾಲಿನ್ಯವಾಗಲು ಕಾರಣವಾಗಿದೆ. ಗಣಿಗಾರಿಕೆ ನಡೆಯುವ ಸುತ್ತ ಮುತ್ತಲ್ಲಿರುವ ಪ್ರದೇಶದ ಕೃಷಿಯನ್ನು ಕುಂಠಿತಗೊಳಿಸಿದೆ ಮತ್ತು ಕೃಷಿ ಭೂಮಿಯನ್ನು ಗಣಿಗಾಗಿ ಬಳಕೆ ಮಾಡುವ ದೃಷ್ಟಿಯಿಂದ ರೈತರಿಂದ ಕೃಷಿ ಭೂಮಿಯನ್ನು ಸ್ವಾಧೀನ ಪಡೆಸಿಕೊಂಡಿದ್ದಾರೆ. ಇದರಿಂದಾಗಿ ಅರಣ್ಯನಾಶ ಜಾನುವಾರುಗಳಿಗೆ ಮೇವಿನ ಕೊರತೆ, ಭೂ ಸವೇತ, ಕೃಷಿ ಉತ್ಪನ್ನ ನಾಶ, ಪರಿಸರ ವಿನಾಶ, ವಾಯ್ಯು, ಜಲ ಮಾಲಿನ್ಯ ಇತ್ಯಾದಿ ಅಂಶಗಳ ಮೇಲೆ ಪರಿಣಾಮ ಬೀರಿದೆ ಎಂದು ಖಚಿತ ಪಡಿಸಿಕೊಂಡು ಟಾಂಜನೀಯಾದ ಗೆಯಾಟ ಜಿಲ್ಲೆಯನ್ನು ತಮ್ಮ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದಾರೆ.

ಗಣಿಗಾರಿಕೆಯು ಜನ ಸಮುದಾಯದ ಸಾಮಾಜಿಕ, ಆರ್ಥಿಕ ಪರಿಣಾಮವನ್ನು ವಿಶ್ಲೇಷಿಸಲು ಸಂದರ್ಶನ ಮತ್ತು ವ್ಯಕ್ತಿ ಅಧ್ಯಯನ ಮಾಡಿ, ಅಲ್ಲಿನ ಸ್ಥಳೀಯ ಜನರನ್ನು ಬಳಸಿಕೊಂಡು ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಕಿತುಲಾ ಅವರು ಬಹುಮುಖ್ಯವಾಗಿ ಗಣಿಗಾರಿಕೆಯ ಕೆಲಸದಲ್ಲಿ ತೊಡಗಿರುವ ಗಂಡು ಮತ್ತು ಹೆಣ್ಣು ಪ್ರಮಾಣವನ್ನು ಲಿಂಗ ಆಧಾರದ ಮೇಲೆ ವಿಂಗಡಿಸಿದ್ದಾರೆ. ಅದರಲ್ಲಿ ಗಣಿ ಕೆಲಸದಲ್ಲಿ ತೊಡಗಿಸಿಕೊಂಡ ಮಹಿಳೆಯರು ಶೇ.೨೫ರಷ್ಟಿದೆ. ಗಯಾಟ ಜಿಲ್ಲೆಯಲ್ಲಿ ಮುಖ್ಯವಾಗಿ ಬುಡಕಟ್ಟು ಸಮುದಾಯದಾಯದವರು ವಾಸವಾಗಿದ್ದು ಶೇ.೩೭.೩ರಷ್ಟು ಜನರು ಕೃಷಿಯನ್ನೇ ಅವಲಂಬಿಸಿಕೊಂಡು ಜೀವನ ಮಾಡುತ್ತಿದ್ದಾರೆ. ಇನ್ನುಳಿದ ಶೇ.೬೭ರಷ್ಟು ಜನರು ಗಣಿ ಕೆಲಸವನ್ನೇ ಅವಲಂಬಿತರಾಗಿರುವುದು ಕಂಡುಬಂದಿದೆ. ಈ ಗಣಿಯಲ್ಲಿ ನಾಯಕೋಳದ ೨೦೦೦ ಹಳ್ಳಿಯಲ್ಲಿ ಗಣಿಸ್ಫೋಟದಿಂದ ಜನರು ವಸತಿ ಕುಸಿತಗೊಂಡ ೫೨ ಪ್ರಕರಣಗಳು ವರದಿಯಲ್ಲಿ ದಾಖಲಾಗಿವೆ.

**ಬೆಂಜಮಾನ್ ಸ್ಮಿತ್ (೨೦೦೪) ಸಸ್ಟೇನೇಬಲ್ ಮೈನ್ ಪ್ರಾಕ್ಟೀಸ್, ಶಿಬ್ಲಿಷನ್ ಅಂಡ್ ಇಂಟಿಗ್ರೇಟೆಡ್ ಮೈನ್ ಕ್ಲೋಸರ್ ಪ್ಲಾನಿಂಗ್** ಮಹಾಪ್ರಬಂಧದಲ್ಲಿ ಪ್ರಮುಖರಾದ ಪೀಕ್, ರೇಮಿ, ಇತ್ಯಾದಿ ವಿದ್ವಾಂಸರ ಹೇಳಿಕೆಯನ್ನು ದೃಢಪಡಿಸಿಕೊಂಡು ಈ ಮಹಾಪ್ರಬಂಧವನ್ನು ಕಟ್ಟಲಾಗಿದೆ. ಗಣಿಗಾರಿಕೆಯ ಆರ್ಥಿಕ ಚಟುವಟಿಕೆಗಳು ಅಲ್ಪಾವಧಿಯಲ್ಲಿ ಸೀಮಿತವಾಗಿರುತ್ತದೆ. ಆದರೆ ಸಾಮಾಜಿಕ, ಪರಿಸರ ಸಂಬಂಧ ವಿಷಯಗಳು ದೀರ್ಘಾವಧಿಗೆ ಸೀಮಿತವಾಗಿದೆ. ಈ ಪ್ರಕ್ರಿಯೆಯು ಗಣಿಯ ಸಾಮಾಜಿಕ, ಪರಿಸರ, ಆರ್ಥಿಕ ಪರಿಣಾಮಗಳು ಬರಲು ಪ್ರಮುಖವಾದ ಕಾರಣವಾಗಿದೆ ಎಂಬ ಹೇಳಿಕೆಯನ್ನು ಸ್ಪಷ್ಟಪಡಿಸಿದ್ದಾರೆ(ಪೀಕ್, ೨೦೧೧). ಇತ್ತೀಚಿನ ಗಣಿ ಯೋಜನೆಗಳು ಗಣಿ ಆಚರಣೆಗೆ ಮತ್ತು ಪುನರ್‌ವಸತಿಯ ಮೂಲಭೂತವಾದ ಪರಿಕಲ್ಪನೆಯನ್ನು ನಿರ್ಲಕ್ಷ್ಯ ಮಾಡುತ್ತಿರುವುದು ಗಣಿ ಮುಚ್ಚುವಿಕೆಗೆ ಕಾರಣವಾಗಿದೆ. ಗಣಿಯಲ್ಲಿ ಪುನರ್ ವಸತಿಯನ್ನು ಕಲ್ಪಿಸಿಕೊಡಲು ರೂಪಿತ ಯೋಜನೆಗಳು ವಿಫುಲವಾಗಿದೆ. ಇದಕ್ಕೆ ಕಾರಣ ಸರ್ಕಾರ ಗಣಿಯಲ್ಲಿ ಅಲ್ಪಾವಧಿ ಯೋಜನೆಯನ್ನು ರೂಪಿಸುವುದಾಗಿ, ಹಾಗಾಗಿ ಸರ್ಕಾರ ದೀರ್ಘಾವಧಿಯ ಯೋಜನೆಯನ್ನು ರೂಪಿಸಿ ಭೂಮಿಯ ಮೇಲಾಗುವ ಅಪಾಯ ಮತ್ತು ಪರಿಸರಾತ್ಮಕ ಪರಿಣಾಮಗಳನ್ನು ತಡೆಗಟ್ಟಬೇಕೆಂದು ವಾದಿಸಿದ್ದಾರೆ(ರೆಮಿ, ೨೦೦೨). ಸ್ಮಿತ್ ಅವರು ಪೀಕ್ ಮತ್ತು ರೇಮಿರವರ ವಾದಗಳನ್ನು ಇಟ್ಟುಕೊಂಡು ಆಸ್ಟ್ರೇಲಿಯಾದ ಮುಚ್ಚಿದ ಗಣಿಗಾರಿಕೆಯ ಆಚರಣೆ ಮತ್ತು ಪುನರ್‌ವಸತಿಯ ಸ್ಥಿತಿಗಳನ್ನು ಯಾವ ಸೈದ್ಧಾಂತಿಕ ಚೌಕಟ್ಟಿನಲ್ಲಿ ಬಳಸಿದ್ದಾರೆ. ಗಣಿಗಾರಿಕೆಯ ಪರಿಸರ ಮತ್ತು ಸಾಮಾಜಿಕ ಸ್ಥಿತಿಗತಿಗಳು ಹೇಗೆ ಸುಸ್ಥಿರ ಅಭಿವೃದ್ಧಿಗೆ ಸಹಕಾರಿಯಾಗಿದೆ ಎಂದು ತಿಳಿಸಿದ್ದಾರೆ.

ಬೆಂಜಮಿನ್ ಸ್ಮಿತ್ ಅವರು ೧) ಗಣಿ ಪುನರ್ ವಸತಿ ಮತ್ತು ಆಚರಣೆಗಳನ್ನು ನಿರ್ಣಯಿಸಲು ತತ್ವಗಳ ಮೌಲ್ಯಮಾಪನ ಮಾಡುವುದು ೨) ಪ್ರಸ್ತುತ ಗಣಿಗಾರಿಕೆ ಮುಚ್ಚುವಿಕೆಗೆ ಯೋಜನೆಯನ್ನು ರೂಪಿಸುವಲ್ಲಿ ಶಾಸಕಾಂಗದ ಚೌಕಟ್ಟಿನ್ನೊಳಗೆ ನೀತಿಗಳ ನಿಯಂತ್ರಣ ಮತ್ತು ಮೌಲ್ಯಮಾಪನ

ಮಾಡುವುದು, ೩) ಗಣಿಗಾರಿಕೆಯಲ್ಲಿ ಸುಸ್ಥಿರ ಅಭಿವೃದ್ಧಿಯನ್ನು ಸಾಧಿಸಲು ಶಾಸನಾತ್ಮಕ ಪರಿಕಲ್ಪನೆಯನ್ನು ಅಧ್ಯಯನ ಮಾಡುವುದು ೪) ಆಸ್ಟ್ರೇಲಿಯಾದ ಗಣಿ ಮುಚ್ಚುವಿಕೆಗೆ ರೂಪಿತವಾದ ಯೋಜನೆಗಳನ್ನು ಗಣಿಕೈಗಾರಿಕೆಗಳು ಒಪ್ಪಿಕೊಂಡಿದೆಯೇ? ಎಂಬ ನಾಲ್ಕು ಉದ್ದೇಶವನ್ನು ಮಾಡಿಕೊಂಡಿದ್ದಾರೆ. ಈ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯವನ್ನು ಒಳಗೊಂಡಿದೆ. ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ ಅಧ್ಯಯನ ಸಮೀಕ್ಷೆ ಉದ್ದೇಶ, ವಿಧಾನ ಮತ್ತು ಗಣಿ ನೀತಿಗಳ ವಿಶ್ಲೇಷಣೆ ಮಾಡಿರುವುದನ್ನು ವಿವರಿಸಿದ್ದಾರೆ. ಅಧ್ಯಾಯ ೨ರಲ್ಲಿ ಸುಸ್ಥಿರ ಅಭಿವೃದ್ಧಿ ಮತ್ತು ಗಣಿ ಮುಚ್ಚುವಿಕೆಯಲ್ಲಿ ಪುನರ್ ವಸತಿ ನೀತಿಗಳು, ಗಣಿ ಆಚರಣೆಗಳು, ಗಣಿ ಅನಾವಶ್ಯಕ ಯೋಜನೆಗಳನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ. ಅಧ್ಯಾಯ ೩ರಲ್ಲಿ ಗಣಿ ಆಚರಣೆಗೆ ಸಂಬಂಧಿಸಿದ ಶಾಸನಗಳನ್ನು ಆಸ್ಟ್ರೇಲಿಯಾದ ಗಣಿ ಕೈಗಾರಿಕೆಗಳು ಹೇಗೆ ಅನ್ಯಾಯ ಮಾಡಿದೆ. ಈ ನಿಯಮಗಳನ್ನು ಗಣಿ ಪುನರ್ ವಸತಿ ಮತ್ತು ಮುಚ್ಚುವಿಕೆಯಲ್ಲಿ ವಿವಿಧ ರಾಜ್ಯಗಳ ನಿಯಮಗಳಿಗೆ ಹೋಲಿಕೆ ಮಾಡಿರುವುದನ್ನು ವಿವರಿಸಿದ್ದಾರೆ. ಅಧ್ಯಾಯ ೪ರಲ್ಲಿ ಗಣಿ ನಿಯಮಗಳ ಅನ್ವೇಷಣೆಗೆ ಸಂಬಂಧಿತ ವಿಚಾರಗಳು, ಆಸ್ಟ್ರೇಲಿಯಾದ ಗಣಿ ಮುಚ್ಚುವಿಕೆ ಮತ್ತು ಪುನರ್ ವಸತಿ ಆಚರಣೆಗಳ ವಿಮರ್ಶೆ ಗಣಿ ಭೂಮಿಯ ಬಳಕೆ, ಅಭಿವೃದ್ಧಿ ಕುರಿತು ಚರ್ಚಿಸಿದ್ದಾರೆ. ಅಭಿವೃದ್ಧಿ ನೀತಿಯು ಗಣಿ ತತ್ವ ಮತ್ತು ಯೋಜನೆಗಳ ವಿಶ್ಲೇಷಣೆ, ಸಂದರ್ಶನದ ಸಂಕ್ಷಿಪ್ತ ವಿವರ ಮುಚ್ಚಿದ ಗಣಿಯಲ್ಲಿ ಗುಣಮಟ್ಟ ಮತ್ತು ಅವಶ್ಯಕತೆಗಳ ಪ್ರಸ್ತುತ ಗಣಿ ಶಾಸನಗಳನ್ನು ಹೇಗೆ ನಿಯಂತ್ರಣ ಮಾಡಿದೆ ಎಂಬ ಅಂಶಗಳ ಮಾಹಿತಿಯನ್ನು ಒದಗಿಸಿದ್ದಾರೆ. ಅಧ್ಯಾಯ ೫ರಲ್ಲಿ ಮಾಡಿರುವ ಸಂದರ್ಶನ, ಕೇಸ್ ಸ್ಟಡಿಗೆ ಸಂಬಂಧಿಸಿದ ವಿವರ, ಮುಚ್ಚಿದ ಗಣಿಗಾರಿಕೆ ಮತ್ತು ಅಭಿವೃದ್ಧಿ ಕುರಿತ ಮಾರ್ಗದರ್ಶನ, ಅದರ ಗುಣಮಟ್ಟವನ್ನು ಮೌಲ್ಯಮಾಪನ ಮಾಡಿರುವ ಮಾಹಿತಿಯ ವಿಶ್ಲೇಷಣೆಯನ್ನು ಒಳಗೊಂಡಿದೆ. ಅಧ್ಯಾಯ ೬ರಲ್ಲಿ ಗಣಿ ಮುಚ್ಚುವಿಕೆಯಲ್ಲಿ ಗಣಿ ನೀತಿಯ ಮಾಹಿತಿ, ಶಿಫಾರಸ್ಸುಗಳು ಗಣಿ ಭವಿಷ್ಯತ್ ಸುಧಾರಣೆಗಾಗಿ ಕೈಗೊಂಡ ಮಾರ್ಗದರ್ಶಿ, ಮುಚ್ಚಿದ ಗಣಿ ಪದ್ಧತಿ ಮತ್ತು ಗಣಿ ಪುನರ್ ವಸತಿಯ ನೆಲೆಯನ್ನು ಅಭಿವೃದ್ಧಿಯ ದೃಷ್ಟಿಕೋನದಲ್ಲಿಟ್ಟುಕೊಂಡು ವಿವರಿಸಿರುವ ಮಾಹಿತಿಯನ್ನು ಒಳಗೊಂಡಿದೆ.

**ಚಂದ್ರಭೂಷಣ (೨೦೦೫)** ಅವರ **ರಿಚ್ ಲ್ಯಾಂಡ್ ಪೂರ್ ಪೀಪಲ್ ದಿ ಸೋಷಿಯಲ್ ಎನ್ವಾರನ್ಮೆಂಟಲ್ ಚಾಲೆಂಜಸ್ ಆಫ್ ಮೈನಿಂಗ್ ಇನ್ ಇಂಡಿಯಾ** ಎಂಬ ಲೇಖನದಲ್ಲಿ ಭಾರತದ ಖನಿಜ ನಿಕ್ಷೇಪಗಳಾದ ಕಲ್ಲಿದ್ದಲು, ಕಬ್ಬಿಣದ ಅದಿರು, ಕ್ರೋಮೈಟ್‌ನಂತಹ ಉತ್ಪಾದನೆಯ ಸಾಮರ್ಥ್ಯವು ವಿಶಾಲವಾಗಿದೆ. ಆದರೆ ಭಾರತದಲ್ಲಿರುವ ಎಲ್ಲಾ ಖನಿಜ ಸಂಪನ್ಮೂಲಗಳು ಅರಣ್ಯ ಪ್ರದೇಶಗಳಿಂದ ಆವರಿಸಿಕೊಂಡಿದೆ. ಇಂತಹ ಖನಿಜಗಳು ಹೊಂದಿರುವ ಭೂಮಿಯನ್ನು ಹೆಚ್ಚಾಗಿ ಬಡವರು ಮತ್ತು ಸಮಾಜದ ಅತ್ಯಂತ ಕೆಳಸ್ಥರದ ಅಂಚಿನಲ್ಲಿ ವಾಸವಾಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಅವಲಂಬಿಸಿದ್ದಾರೆ. ಈ ಪ್ರದೇಶದ ಜನ ಸಮುದಾಯದವರು ತಮ್ಮ ಕೃಷಿ ಭೂಮಿಯಲ್ಲಿರುವ ಖನಿಜವನ್ನು ಹೊರ ತೆಗೆಯಲು ಡಿಗ್ಗಿಂಗ್ ಮಾಡಿರುವುದು ಮತ್ತು ಅದಿರು ಮಾರಾಟದ ಪ್ರಭಾವಗಳು ಸಾಮಾಜಿಕ, ಆರ್ಥಿಕತೆ ಮತ್ತು ಪರಿಸರದ ಸವಾಲುಗಳಾಗಿರುವ ಪ್ರಶ್ನೆಯಾಗಿಯೇ ಉಳಿದಿದೆ. ಹಾಗಾಗಿ ಅಲ್ಲಿರುವ ಕಾಡು–ನೀರು–ಪರಿಸರದ ಗುಣಮಟ್ಟ, ಜನರ ಜೀವನೋಪಾಯ ಬುಡಕಟ್ಟು ಸಮುದಾಯದ ಮೇಲೆ ಗಂಭೀರವಾದ ಪರಿಣಾಮವನ್ನು ಉಂಟು ಮಾಡಿದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಚಂದ್ರಭೂಷಣ ಅವರು ಭಾರತದ ಛತ್ತಿಸ್‌ಗಡ್, ಜಾರ್ಖಂಡ್, ಒರಿಸ್ಸಾ ಮಧ್ಯಪ್ರದೇಶದ ಅರಣ್ಯ ಪ್ರದೇಶದಲ್ಲಿರುವ ಖನಿಜಗಳನ್ನು ಗಣಿಗಾಗಿ ಎಷ್ಟರ ಮಟ್ಟಿಗೆ ಬಳಸಿದ್ದಾರೆ ಎಂಬುವುದರ ವಿವರವನ್ನು ಸಂಕ್ಷೇಪ್ತವಾಗಿ ವ್ಯಕ್ತಪಡಿಸಿದ್ದಾರೆ. ಜಾರ್ಖಂಡ್ ಮತ್ತು ಛತ್ತಿಸ್‌ಗಡನ ಅರಣ್ಯ ಪ್ರದೇಶದಲ್ಲಿ ಖನಿಜ ಸಂಪತ್ತು ಶೇ.೪೫ರಷ್ಟಿದೆ. ಒರಿಸ್ಸಾ ಮತ್ತು ಮಧ್ಯಪ್ರದೇಶದಲ್ಲಿ ಕ್ರಮವಾಗಿ ಶೇ.೨೭ ಮತ್ತು ಶೇ.೨೬ರಷ್ಟು ಖನಿಜ ಸಂಪತ್ತು ಅರಣ್ಯ ಪ್ರದೇಶದಲ್ಲಿ ಹರಡಿದೆ. ೧೯೯೮–೨೦೦೫ರಲ್ಲಿ ಅರಣ್ಯ ಪ್ರದೇಶದಲ್ಲಿರುವ ಖನಿಜಗಳನ್ನು ಸುಮಾರು ೯೫.೦೦೩ ಹೆಕ್ಟರ್‌ನಷ್ಟು ಬಳಸಿಕೊಂಡಿದ್ದಾರೆ. ಈ ಹಿಂದೆ ೧೯೮೦–೧೯೯೭ರಲ್ಲಿ ೩೧೭ ಗಣಿಗಳು ಪರವಾನಿಗೆ ಪಡೆದುಕೊಂಡಿದ್ದು, ಅದರಲ್ಲಿ ಖನಿಜಗಳನ್ನು ಹೊರ ತೆಗೆಯಲು ೩೪.೫೨೭ ಹೆಕ್ಟರ್ ಅರಣ್ಯ ಭೂಮಿಯನ್ನು ಒತ್ತುವರಿ ಮಾಡಿಕೊಂಡಿದ್ದಾರೆ. ಈ ಒತ್ತುವರಿಯಿಂದ ಗಣಿಗಾರಿಕೆಗೂ ಮತ್ತು

ಗ್ರಾಮೀಣ ಜನರ ಬಡತನದ ನಡುವೆ ಇರುವ ಸಂಬಂಧವೇನು? ಎಂಬ ಪ್ರಶ್ನೆಯನ್ನು ಎತ್ತಿದ್ದಾರೆ. ಗಣಿಯಲ್ಲಿ ಅತಿಯಾಗಿ ತೊಡಗಿರುವ ಜನರ ಮರಣದರ, ಪೌಷ್ಟಿಕತೆಯ ಕೊರತೆ, ರೋಗ ಹರಡುವಿಕೆಯ ಅಂಶಗಳು ಹೆಚ್ಚಾಗಿ ಕಂಡುಬಂದಿದೆ ಎಂದು ಉಲ್ಲೇಖಿಸಿದ್ದಾರೆ.

**ಭೈರಪ್ಪ.ಕೆ (೨೦೦೫)** ಅವರ **ಪರಿಸರ ಅಧ್ಯಯನ** ಎಂಬ ಕೃತಿಯಲ್ಲಿ ಗಣಿಗಾರಿಕೆಯಿಂದಾಗಿ ಅಣೆಕಟ್ಟುಗಳು, ಅರಣ್ಯ ಮತ್ತು ಬುಡಕಟ್ಟು ಜನ ಸಮುದಾಯದ ಮೇಲಾಗುವ ಪರಿಣಾಮಗಳು ಬೀರಿದೆ. ತೆರೆದ ಗಣಿಗಾರಿಕೆಯಿಂದಾಗಿ ನದಿ, ಕರೆಗಳಲ್ಲಿ ಹೂಳು ತುಂಬುವಿಕೆಯ ಸಮಸ್ಯೆ, ಬುಡಕಟ್ಟು ಜನರ ನೆಲೆಯ ಸ್ಥಳಾಂತರದ ಸಮಸ್ಯೆ, ಕಾಡು ಕಡಿತದ ಸಮಸ್ಯೆ ಇತ್ಯಾದಿ ಉಂಟಾಗಿ ಭೂಗೋಳದ ಮೇಲೆ ದುಷ್ಪರಿಣಾಮಗಳಾಗಿವೆ ಎಂದು ಉಲ್ಲೇಖಿಸಿದ್ದಾರೆ.

**ರಂಗನಾಥ ಮತ್ತಿತರರು (೨೦೦೫) ಪರಿಸರ ಅಧ್ಯಯನ** ಎಂಬ ಕೃತಿಯಲ್ಲಿ ಗಣಿಗಾರಿಕೆಯಿಂದ ಖನಿಜ ಸಂಪನ್ಮೂಲಗಳ ದುರ್ಬಳಕೆಯಾಗುತ್ತಿವೆ. ಇದರಿಂದ ಪರಿಸರದ ಮೇಲೆ ಹಲವಾರು ಪರಿಣಾಮಗಳು ಬೀರಿವೆ. ಖನಿಜ ಸಂಪನ್ಮೂಲಗಳು ಮಾನವನ ಆಧುನೀಕತೆ ಅವಶ್ಯಕತೆಯ ಬಗ್ಗೆ, ಖನಿಜಗಳನ್ನು ಮತ್ತೆ ಪುನರ್ ಉತ್ಪಾದಿಸಲಾಗುವುದಿಲ್ಲ, ಗಣಿಗಾರಿಕೆಯಿಂದ ಕೃಷಿಯ ಮೇಲಾಗುವ ಪರಿಣಾಮ, ನೈಸರ್ಗಿಕ, ಅರಣ್ಯನಾಶ, ಭೂ ಕುಸಿತ, ಜನರ ಅನಾರೋಗ್ಯ ಮತ್ತು ಸಸ್ಯ-ಪ್ರಾಣಿ ವರ್ಗಗಳ ಮೇಲಾಗುವ ಪರಿಣಾಮಗಳನ್ನು ಸಾದರಪಡಿಸಿದ್ದಾರೆ.

**ಹುಚ್ಚುಸಾಬ್.ಪಿ (೨೦೦೫)** ಅವರ **ಬಳ್ಳಾರಿ ಜಿಲ್ಲೆಯ ಗಣಿ ಕಾರ್ಮಿಕರ ಸಾಮಾಜಿಕ ಆರ್ಥಿಕ ಅಧ್ಯಯನ** ಎಂಬ ಮಹಾಪ್ರಬಂಧದಲ್ಲಿ ಗಣಿಗಾರಿಕೆ ನಡೆದಾಗ ಜಾಗತೀಕರಣದಲ್ಲಿ ಉತ್ಪಾದನಾಂಗಗಳ ಸ್ವಾತಂತ್ರ್ಯ ಗಣಿ ಕಾರ್ಮಿಕರಿಗೆ ನೀಡಿರುವ ಸೌಲಭ್ಯ, ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ಕಂಡು ಬರುವ ಕೂಲಿ, ಲಿಂಗ, ಸಾಮಾಜಿಕ ಆರ್ಥಿಕ ಸ್ಥಾನಮಾನಗಳು, ಉದ್ಯೋಗ, ವರಮಾನ, ಕಾರ್ಮಿಕರ ಮೇಲಾಗುವ ಶೋಷಣೆ, ಕಾರ್ಮಿಕ ಸಂಘಟನೆ, ಗಣಿಗಾರಿಕೆಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳ ಅರಿವು ಮತ್ತು ಅದರ ಮಹತ್ವವನ್ನು ಕುರಿತು ಅಧ್ಯಯನವನ್ನು ಮಾಡಿರುವ ಆಶಯವನ್ನು ಹೊಂದಿದೆ. ಈ ಅಧ್ಯಯನದಲ್ಲಿ ಅನ್ವೇಷಣೆ, ಪ್ರಯೋಗಾತ್ಮಕ ಶಾಬ್ದಿಕವಾಗಿ ವರ್ಣಿಸಿ, ವಿಶ್ಲೇಷಣಾತ್ಮಕ ವಿಧಾನವನ್ನು ಬಳಸಿ ಸಾಮಾನ್ಯ ಸರ್ವೆಕ್ಷಣೆ, ಅಂಕಿ-ಅಂಶಗಳ ಸಂಗ್ರಹ, ವಿಷಯ ವಸ್ತುವಿನ ವಿಶ್ಲೇಷಣೆಯನ್ನು ಹೊಂದಿದೆ. ಅಧ್ಯಯನ ಕ್ಷೇತ್ರಕ್ಕಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡಿದ್ದು ಬುಡಕಟ್ಟು ಸಮುದಾಯದ ಮೇಲಾಗುವ ಸಾಮಾಜೋ-ಆರ್ಥಿಕ ಸ್ಥಿತಿಗತಿಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಸಾಮಾಜಿಕ ಪರಿಸ್ಥಿತಿಗೆ ಸಂಬಂಧಿಸಿದಂತೆ ಗಣಿಯಲ್ಲಿ ಬುಡಕಟ್ಟು ಸಮುದಾಯದ ಕಾರ್ಮಿಕರ ಪರಿಸ್ಥಿತಿ, ಉತ್ಪಾದನ ವಲಯ, ಕೃಷಿಯಲ್ಲಾಗುವ ವ್ಯತ್ಯಾಸ, ಕೃಷಿ ಕಾರ್ಮಿಕರ ಪರಿಸ್ಥಿತಿ, ಗಣಿ ಕಾರ್ಮಿಕರ ವೈವಾಹಿಕ ಸ್ಥಿತಿ, ಬುಡಕಟ್ಟು ಕಾರ್ಮಿಕರ ವಯೋಮಾನ, ಕಾರ್ಮಿಕರ ಶಿಕ್ಷಣ ಸ್ವರೂಪ, ಆರೋಗ್ಯ ಕುರಿತಂತೆ ಮಾಹಿತಿಯನ್ನು ಒಳಗೊಂಡಿದೆ. ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಯಲ್ಲಿ ಉದ್ಯೋಗ ಕೂಲಿ, ಆದಾಯ-ವೆಚ್ಚದ ಪ್ರಮಾಣ, ಸಾಲ ಸೌಕರ್ಯಗಳು, ರಾಜಕೀಯ ಪ್ರಜ್ಞೆ ಮತ್ತು ಪಾಲ್ಗೊಳ್ಳುವಿಕೆ ಕುರಿತು ಚರ್ಚಿಸಿದ್ದಾರೆ. ಜಿಲ್ಲೆಯ ಗಣಿಗಾರಿಕೆಯಲ್ಲಿ ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆ, ಪರಿಸರ ಹಾನಿ, ಧೂಳಿನ ಸಮಸ್ಯೆಗಳಿಂದ ಬುಡಕಟ್ಟು ಸಮುದಾಯಗಳು ಒಳಗಾಗಿವೆಯೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಹುಚ್ಚುಸಾಬ್ ಅವರ ಅಧ್ಯಯನವು ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ವ್ಯಾಪ್ತಿಗೆ ಬರುವ ಗಣಿಕೇಂದ್ರಿತ ಆರು ಗಣಿ ಕೈಗಾರಿಕಾ ಸಂಸ್ಥೆಯನ್ನು ಆಯ್ಕೆ ಮಾಡಿಕೊಂಡು, ಗಣಿ ಕೈಗಾರಿಕಾ ಸಂಸ್ಥೆಯಲ್ಲಿ ಕಾರ್ಯನಿವಹಿಸುತ್ತಿರುವ ಗಣಿ ಕಾರ್ಮಿಕರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಗಣಿಗಾರಿಕೆ ನಡೆದಾಗ ಅಧ್ಯಯನ ಮಾಡಿದ್ದಾರೆ. ಆದರೆ ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಗಣಿ ವಲಯ ಹೋಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದ ಜನರ ಬದುಕಿನ ಮೇಲಾಗಿರುವ ಸಾಮಾಜಿಕ, ಆರ್ಥಿಕ, ಪರಿಸರದ ಪರಿಣಾಮಗಳನ್ನು ಗಣಿ ಸ್ಥಗಿತತೆಯ ನಂತರ ಆದ ಬದಲಾವಣೆಯನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಹುಚ್ಚುಸಾಬ್ ಅವರ ಅಧ್ಯಯನವು ಬಳ್ಳಾರಿ ಜಿಲ್ಲೆಯ ೧೦ ಗಣಿ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿರುವ ಸಂಡೂರು ತಾಲ್ಲೂಕಿನ ಆರು ಗಣಿ ಕೈಗಾರಿಕಾ ಸಂಸ್ಥೆಗಳಾದ ಎನ್.ಎಂ.ಡಿ.ಸಿ (ದೋಣಿಮಲೈ), ಎಂ.ಎಂ.ಎಲ್ (ಹರಿಶಂಕರ), ಸ್ಮಯೋರ್ (ದೇವಗಿರಿ), ವಿ.ಎಸ್.ಲಾಡ್ ಅಂಡ್ ಸನ್ಸ್(ಎಸ್.ಜೆ ಹರದ್ರಿ), ತುಂಗಾಭದ್ರ (ಉಬಳ್‌ಗಂಡಿ), ಕೆ.ಎಸ್.ವ್ಹಿ ಅಂಡ್

ಸನ್ಸ್ (ಧರ್ಮಪುರ), ಹೊಸಪೇಟೆಯ ಕಾರಿಗ್‌ನೂರು ಮಿನರಲ್ ಮೈನಿಂಗ್ ಇಂಡಸ್ಟ್ರಿಸ್ (ಕಾರಿಗ್‌ನೂರು), ಎಂ.ಎಸ್.ಪಿ.ಎಲ್, ಆರ್.ಪಿ ಮೈನ್ಸ್ (ಟಿ.ಎನ್ ಹಳ್ಳಿ), ವ್ಹಿ.ಜಿ.ಎಮ್ ಬೆಳಗಲ್ ಪ್ರೈಲಿ ಗಣಿ ಕೈಗಾರಿಕಾ ಸಂಸ್ಥೆಯ ಕಾರ್ಮಿಕರು ಮತ್ತು ವಲಸೆ ಬಂದ ಬುಡಕಟ್ಟು ಕಾರ್ಮಿಕರಿಗೆ ಮಾತ್ರ ಸಿಮಿತವಾಗಿದೆ. ಆದರೆ ಪ್ರಸ್ತುತ ಅಧ್ಯಯನವು ಬಳ್ಳಾರಿ ಗಣಿ ವಲಯ ಹೊಸಪೇಟೆ, ಬಳ್ಳಾರಿ, ಸಂಡೂರು ಸ್ಥಳೀಯ ಗಣಿ ಗ್ರಾಮೀಣ ಪ್ರದೇಶದ ೯ ಗ್ರಾಮಗಳ ಪರಿಶಿಷ್ಟ ಜಾತಿಯ ಹರಿಜನರು, ಲಂಬಾಣಿ, ವಡ್ರು ಜನಾಂಗದ ೨೭೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಸಲಾಗಿದೆ. (ಬಳ್ಳಾರಿ ತಾಲ್ಲೂಕಿನ ಜಾನಕುಂಟೆ, ಬೆಳಗಲ್, ಹನ್ನೊಳಿ, ಸಂಡೂರು ತಾಲ್ಲೂಕಿನ ತುಮಟಿ ಬಾವುಳ್ಳಿ, ಜೈಸಿಂಗ್‌ಪುರ ಹಾಗೂ ಹೊಸಪೇಟೆ ತಾಲ್ಲೂಕಿನ ಪಿ.ಕೆ.ಹಳ್ಳಿ, ಕಲ್ಲಳ್ಳಿ, ರಾಜಾಪುರ) ಈ ಗ್ರಾಮೀಣ ಪ್ರದೇಶದ ಆಯ್ಕೆಯಲ್ಲಿ ಹುಚ್ಚುಸಾಬ್ ಅವರ ಅಧ್ಯಯನಕ್ಕಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಹುಚ್ಚುಸಾಬ್ ಅವರ ಅಧ್ಯಯನವು ಗಣಿಗಾರಿಕೆ ನಡೆದಾಗ ಸಂಡೂರು ಗಣಿ ಕೈಗಾರಿಕಾ ಸಂಸ್ಥೆಯಲ್ಲಿ ತೊಡಗಿರುವ ಗ್ರಾಮಗಳ ಗಣಿ ಕಾರ್ಮಿಕರಿಗೆ ಮಾತ್ರ ಒಳಪಟ್ಟಿದೆ. ಆದರೆ ಈ ಪ್ರಸ್ತುತ ಅಧ್ಯಯನವು ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೃಷಿ ಕೂಲಿ ದುಡಿಮೆಗಾರರು, ಗಣಿ ಕೂಲಿ ದುಡಿಮೆಗಾರರು, ಗಣಿ ಉದ್ಯಮದ ಕೂಲಿ ದುಡಿಮೆಗಾರರಿಗೆ ಮಾತ್ರ ಒಳಪಡಿಸಲಾಗಿದೆ. ಗಣಿ ನಡೆದಾಗ ಕೂಲಿ ದುಡಿಮೆಗಾರರು ನಿರಂತರವಾಗಿ ಗಣಿ ಚಟುವಟಿಯಲ್ಲಿ ತೊಡಗಿದ್ದರು, ಆದರೆ ಗಣಿ ಸ್ಥಗಿತತೆಯ ನಂತರ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಕೂಲಿ ದುಡಿಮೆಗಾರರು ಕೃಷಿಯಲ್ಲಿ, ಗಣಿಯಲ್ಲಿ, ಗಣಿ ಉದ್ಯಮದಲ್ಲಿ ತೊಡಗಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಾಣಬಹುದಾದ ಭಿನ್ನತೆಯಾಗಿದೆ. ಅದು ಗಣಿ ಸ್ಥಗಿತತೆಯ ನಂತರ ಗ್ರಾಮೀಣ ಪ್ರದೇಶದ ಸಾಮಾಜಿಕ, ಆರ್ಥಿಕ ಮತ್ತು ಪರಿಸರದ ಪರಿಣಾಮಗಳ ಬದಲಾವಣೆ ಯಾವ ರೀತಿಯಾಗಿದೆ ಎಂಬುವುದು ಪ್ರಸ್ತುತ ಅಧ್ಯಯನದಲ್ಲಿ ಗ್ರಹಿಸುವ ಅಂಶವಾಗಿದೆ. ಹುಚ್ಚುಸಾಬ್ ಅವರ ಅಧ್ಯಯನದಲ್ಲಿ ಗಣಿಗಾರಿಕೆ ನಡೆದಾಗ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗೆ ಹೆಚ್ಚಿನ ಪ್ರಾಧ್ಯಾನತೆ ನೀಡಿದರೆ, ಪ್ರಸ್ತುತ ಅಧ್ಯಯನವು ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಮೇಲಾಗಿರುವ ಸಾಮಾಜಿಕ, ಆರ್ಥಿಕ ಮತ್ತು ಪರಿಸರದ ಪರಿಣಾಮಗಳು ಗಣಿಗಾರಿಕೆ ನಡೆದಾಗ ಹಾಗೂ ಗಣಿ ಸ್ಥಗಿತತೆಯ ನಂತರ ಬೀರಿರುವ ಪರಿಣಾಮಗಳನ್ನು ಅಧ್ಯಯನ ಮಾಡಿರುವುದು ಹುಚ್ಚುಸಾಬ್ ಅವರ ಅಧ್ಯಯನಕ್ಕಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ.

**ಪೀಲಿಫ್ಸ್ ಪಿಕ್ (೨೦೦೫) ಅವರ ಮೈನಿಂಗ್ ಫಾರ್ ಕ್ಲೋಸರ್; ಪಾಲಿಸ್ಸಿ ಅಂಡ್ ಗೈಡ್‌ಲೈನ್ಸ್ ಫಾರ್ ಸಸ್ಟೈನೇಬಲ್ ಮೈನಿಂಗ್ ಪ್ರಾಕ್ಟಿಸ್ ಅಂಡ್ ಕ್ಲೋಸರ್ ಆಫ್ ಮೈನ್ಸ್** In the book Existing mine closure policies and practices fail to recognise the importance of mine closure planning and planning for closure. An integrated approach to mine closure, which takes into account the environmental, social and economic considerations at an early stage of mine operations and occurs throughout the mine process, is elementary in the development of long term sustainable development and effective mine closure and completion practices. In the past, the mining industry and relevant government organizations failed to establish best practice closure standards and specific mine closure legislation which encompasses the objectives of sustainable mining practices. Mine closure and mine rehabilitation refers to the period of time when the operational stage and economic viability of a mine has ceased or ended, and the final decommissioning, mine rehabilitation and mine closure has commenced. Mine closure in some instances may only be temporary, or may lead into a program of care and maintenance. Mine completion is the overall objective of mine closure and rehabilitation. Mine rehabilitation is the process used to repair the impacts

of mining on the environment. The long term objectives of mine rehabilitation include the conversion of a mine site and disturbed mine land to an environmentally safe and sustainable landform, and the restoration of the pre-mining conditions as closely as possible to support future sustainability of the site.

**ಈರಣ್ಣ ಚ ಮುಳಗುಂದ (೨೦೦೬)** ಅವರು **ಪರಿಸರ ಅಧ್ಯಯನ** ಎಂಬ ಗ್ರಂಥದಲ್ಲಿ ತೆರೆದ ಗಣಿಗಾರಿಕೆಯು ಅರಣ್ಯನಾಶ, ಕೃಷಿ ಭೂಮಿಯ ಅಭಾವ, ಫಲವತ್ತತೆಯ ನಾಶ, ಸ್ಫೋಟದಿಂದಾಗುವ ಪರಿಣಾಮಗಳು, ಪರಿಸರಕ್ಕೆ ಆಗುವ ಹಾನಿ, ಗಣಿಗಾರಿಕೆಯಲ್ಲಿ ಅಧಿಕ ಪ್ರಮಾಣದ ಧೂಳು, ನೀರಿನ ಮಲೀನತೆ ಶಬ್ದ ಮಾಲಿನ್ಯ ಉಂಟಾಗಿ ಜನರ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ವಿಶ್ವ ಆರೋಗ್ಯ ವರದಿಯ ಪ್ರಕಾರ ಗಣಿಗಾರಿಕೆ ನಡೆಯುತ್ತಿರುವ ಸುತ್ತಮುತ್ತಲಿನ ಪ್ರದೇಶದಲ್ಲಿ ಜನರು ಅತಿಸಾರ ಕಾಮಾಲೆ ಹುಳುಗಳ ಬಾದೆ, ಜಲಬಾದೆ ಇತ್ಯಾದಿ ರೋಗಗಳಿಂದ ನರುಳುತ್ತಿದ್ದಾರೆ ಎಂದು ಹೇಳಿದ್ದಾರೆ.

**ಜುಲಿಯೋ ಹೆನೂ ಅಂಡ್ ಅದರ್ಸ್** (೨೦೦೬) ಅವರ **ಅಗ್ರಿಕಲ್ಚರ್ ಪ್ರೋಡಕ್ಷನ್ ಅಂಡ್ ಸ್ಟಾಲ್ ನ್ಯೂಟ್ರೇಟ್ ಮೈನಿಂಗ್ ಇನ್ ಆಫ್ರಿಕಾ: ಇಂಪ್ಲಿಕೇಷನ್ ಫಾರ್ ರಿಸೋರ್ಸ್ ಕಂರ್ಜವೇಷನ್ ಅಂಡ್ ಪಾಲಿಸಿ ಡೆವೆಲಪ್‌ಮೆಂಟ್** ಎಂಬ ಲೇಖನದಲ್ಲಿ ೧೯೭೦ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ ನಡೆಯುತ್ತಿದ್ದ ಗಣಿಗಾರಿಕೆಯು ೮೮ ಮಿಲಿಯನ್ ಜನರು ಅಪೌಷ್ಟಿಕತೆಯ ಕೊರತೆಯಿಂದಾಗಿ ಬಳಲುತ್ತಿದ್ದರೆ, ೧೯೯೯–೨೦೧೧ರಲ್ಲಿ ೨೦೦ ಮಿಲಿಯನ್ ಜನರು ಅಪೌಷ್ಟಿಕತೆಯ ಕೊರತೆಯಿಂದ ಬಳಲುತ್ತಿದ್ದಾರೆ. ಅಂದರೆ ಪ್ರತಿ ವರ್ಷ ಶೇ.೩ರಷ್ಟು ಜನರು ಅಪೌಷ್ಟಿಕತೆಗೆ ತುತ್ತಾಗಿದ್ದಾರೆ. ಇದಕ್ಕೆಲ್ಲಾ ಮೂಲ ಕಾರಣ ಗಣಿಗಾರಿಕೆಯಿಂದಾಗಿ ಉಂಟಾಗುವ ಮಣ್ಣಿನ ಸವೆತ, ಪರಿಸರ ಮಾಲಿನ್ಯ, ಫಲವತ್ತತೆಯನ್ನು ಕಳೆದುಕೊಂಡ ಕೃಷಿ ಭೂಮಿ ಇತ್ಯಾದಿ ಅಂಶಗಳಾಗಿವೆ. ಈ ಕಾರಣದಿಂದಲೇ ಕೃಷಿ ಭೂಮಿಯಲ್ಲಿ ಉತ್ಪಾದನೆಯು ಕುಂಠಿತವಾಗುತ್ತಿದೆ. ಇದರಿಂದ ಆಹಾರ ಭದ್ರತೆಯ ಕೊರತೆ, ವಲಸೆ, ಬಡತನ, ಅಪೌಷ್ಟಿಕತೆಯ ಅಂಶಗಳು ಸಾಮಾಜಿಕ, ರಾಜಕೀಯ, ಮತ್ತು ಆರ್ಥಿಕತೆಯಲ್ಲಿ ಅಸ್ಥಿರತೆಯನ್ನು ಉಂಟು ಮಾಡಿವೆ. ಹಾಗಾಗಿ ದಕ್ಷಿಣ ಆಫ್ರಿಕಾದಲ್ಲಿ ಗಣಿಗಾರಿಕೆಯು ತೀವ್ರ ಪರಿಣಾಮಗಳನ್ನು ನಿರ್ಬಂಧಿಸಲು ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣಾ ಕಾರ್ಯಕ್ರಮಗಳು ಜಾರಿಗೊಳ್ಳಬೇಕು ಎಂಬ ಸಲಹೆಯನ್ನು ಸೂಚಿಸಿದ್ದಾರೆ.

**ಪ್ರಜ್ಞಾ ಪರಿಮಿತ ಮಿಶ್ರ ಮತ್ತು ಎಂ.ಗೋಪಿನಾಥ್ ರೆಡ್ಡಿ (೨೦೦೬)** ಅವರ **ಥ್ರೇಟ್ ಆಫ್ ಫಾರೆಸ್ಟ್ ಕಾಮನ್ಸ್: ಮ್ಯಾಪಿಂಗ್ ದಿ ಲೈವ್ಲಿವುಡ್ ಆಫ್ ಮೈನಿಂಗ್ ಇನ್‌ಡ್ಯೂಸಡ್ ಕಮ್ಯುನಿಟಿಸ್ ಇನ್ ದಿ ವೆರ್ಸ್ಟನ್ ಘಟ್ಸ್ ಆಫ್ ಆಂದ್ರಪ್ರದೇಶ್** ಎಂಬ ಲೇಖನದಲ್ಲಿ ಆಂಧ್ರ ಪ್ರದೇಶದ ಬಾಕ್ಸೈಟ್ ಮತ್ತು ಅಲ್ಯೂಮಿನಿಯಂ ಅದಿರಿನ ಪ್ರಭಾವವು ಸ್ಥಳೀಯವಾಗಿ ವಾಸವಾಗಿರುವ ಜನ ಸಮುದಾಯದ ಅರಣ್ಯ ಪ್ರದೇಶಗಳ ನಾಶವಾಗಿರುವುದು ಮತ್ತು ವನ್ಯಜೀವಿಗಳ ಸಂರಕ್ಷಣಾ ಮಾಡುವ ಉದ್ದೇಶವನ್ನು ಇಟ್ಟುಕೊಂಡಿದೆ. ಆಂಧ್ರ ಪ್ರದೇಶದ ವಿಜಯನಗರ, ವಿಶಾಖಪಟ್ಟಣಂ ಜಿಲ್ಲೆಯಲ್ಲಿ ಒಟ್ಟು ೩೩೫ ಕುಟುಂಬಗಳು ಗಣಿ ಪೀಡಿತ ಪ್ರದೇಶಗಳೆಂದು ಗುರುತಿಸಿದ್ದಾರೆ. ಈ ಪ್ರದೇಶದ ರೈತರು ಕೃಷಿ ಭೂಮಿಯನ್ನು ಕಳೆದುಕೊಂಡು ಕೃಷಿಯಿಂದ ದೂರ ಉಳಿದಿದ್ದಾರೆ. ಫುಡ್ ಅಂಡ್ ಅಗ್ರಿಕಲ್ಚರಲ್ ಆಗ್ರೈನೈಜೆಷನ್ ವರ್ಲ್ಡ್ ರಿಸೊರ್ಸ್ ಆಫ್ ಇನ್‌ಸ್ಟ್ಯೂಷನ್, ಸೆಂಟರ್ ಆಫ್ ಸೈನ್ಸ್ ಅಂಡ್ ಎನ್ವಾರನ್ಮೆಂಟ್ ಸಂಸ್ಥೆಗಳ ವರದಿಯು ೨೦೦೫ರಲ್ಲಿ ಭಾರತದ ಕಾಡುಗಳು ಅಚ್ಚ ಹಸಿರಾದ ಮತ್ತು ವಿಫಲವಾದ ನದಿ ವ್ಯವಸ್ಥೆಯನ್ನು ಹೊಂದಿರುವ ಭೂ ಪ್ರದೇಶವಾಗಿತ್ತು. ಆದರೆ ಈ ಕಾಡುಗಳಲ್ಲಿ ಕಡುಬಡತನದಿಂದ ಬಂದಿರುವ ಪರಿಶಿಷ್ಟ ಜಾತಿಯ ವರ್ಗಕ್ಕೆ ಸೇರಿದ ಕುಟುಂಬಗಳಿದ್ದವು. ಈ ಕುಟುಂಬಗಳು ಕಾಡುಗಳನ್ನು ಅವಲಂಬಿಸಿ ಜೀವನವನ್ನು ಸಾಗಿಸುತ್ತಿದ್ದರು. ಹೀಗೆ ಅರಣ್ಯ ಪ್ರದೇಶವನ್ನು ಅವಲಂಬಿಸಿ ಬದುಕುತ್ತಿದ್ದ ಜನರ ಮೇಲೆ ಗಣಿಗಾರಿಕೆಯ ಪ್ರಭಾವವು ಬೀರತೊಡಗಿತು. ಇದರಿಂದ ಅರಣ್ಯನಾಶ, ಸ್ಥಳಾಂತರದ ಸಮಸ್ಯೆಗಳಾದವು. ಉದಾಹರಣೆಗೆ ಜಿಂದಾಲ್ ಗಣಿಗಾರಿಕೆ ಪ್ರದೇಶವನ್ನು ಇಟ್ಟುಕೊಂಡರೆ, ಜಿಂದಾಲ್ ಗಣಿ ಪ್ರದೇಶಕ್ಕೆ ಸಂಬಂಧಿತ ಭೂಮಿಗಳೆಲ್ಲಾ ಅಲ್ಲಿರುವ ರೈತರದ್ದು. ಜಿಂದಾಲ್ ಗಣಿಗಾರಿಕೆಗಾಗಿ ಕೃಷಿ ಭೂಮಿಯನ್ನು ಸ್ವಾಧೀನ ಮಾಡಿದ್ದರ ಪರಿಣಾಮ ಕೃಷಿ

ಮರೆಯಾಗುತ್ತಿದೆ. ಹೀಗೆ ಭೂಮಿಯನ್ನು ಕಳೆದುಕೊಂಡ ರೈತ ಕುಟುಂಬಗಳಿಗೆ ಕೆಳದರ್ಜೆಯ ಉದ್ಯೋಗವನ್ನು ಒದಗಿಸಿದ್ದಾರೆ ಎಂಬ ನಿಲುವುಗಳನ್ನು ಸ್ಪಷ್ಟಪಡಿಸಿದ್ದಾರೆ. ಅಧ್ಯಯನಕ್ಕೆ ಆಂಧ್ರಪ್ರದೇಶದ ವಿಜಯನಗರ ಮತ್ತು ವಿಶಾಖಪಟ್ಟಣಂ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಈ ಜಿಲ್ಲೆಯ ಸಮೀಕ್ಷೆಗಾಗಿ ಪ್ರಶ್ನಾವಳಿ ವಿಧಾನವನ್ನು ಬಳಸಿಕೊಂಡು ಪ್ರಾಥಮಿಕ ಮತ್ತು ದ್ವಿತೀಯಾ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಜಿಂದಾಲ್ ಗಣಿಗಾರಿಕೆಯನ್ನು ಆಧಾರವಾಗಿಟ್ಟುಕೊಂಡು ಆ ಪ್ರದೇಶದ ಹಳ್ಳಿಗಳು, ಜನಸಂಖ್ಯೆ, ಕೃಷಿ ಕಾರ್ಮಿಕರು, ಕೂಲಿ ಕಾರ್ಮಿಕರು, ಉದ್ಯೋಗಸ್ಥರು, ಶಿಕ್ಷಣ, ಆರೋಗ್ಯ, ಭೂ ಹಿಡುವಳಿಗಳು ಇತ್ಯಾದಿ ಅಂಶಗಳ ಆಧಾರದ ಮೇಲೆ ಸಾಮಾಜಿಕ ಮತ್ತು ಆರ್ಥಿಕತೆಯ ಸ್ಥಿತಿಗತಿಗಳ ಮಾಹಿತಿಯನ್ನು ಕೋಷ್ಟಕಗಳ ಮೂಲಕ ಸ್ಪಷ್ಟವಾಗಿ ದೃಢೀಕರಿಸಿದ್ದಾರೆ.

**ರಾಮಚಂದ್ರ ಗುಹಾ (೨೦೦೬)** ಅವರ **ಅಕ್ರಮ ಗಣಿಗಾರಿಕೆಯಿಂದ ಸವೆದ ಪ್ರಜಾಪ್ರಭುತ್ವ** ಎಂಬ ಲೇಖನದಲ್ಲಿ ಉದ್ಯಮಿ ಮತ್ತು ಗಣಿಗಳಿಂದ ಯಾವ ರೀತಿಯಾಗಿ ಪ್ರಜಾಪ್ರಭುತ್ವ ಸವೆದಿದೆ ಎಂಬ ಆಶಯವನ್ನು ಹೊಂದಿದೆ. ಉದ್ಯಮಿಗಳು ಜ್ಞಾನ ಭಂಡಾರದ ಮೂಲಕ ಪ್ರಜಾಪ್ರಭುತ್ವದ ರಕ್ಷಸರಾದರೇ ಈ ಗಣಿ ಧಣಿಗಳು ಅಕ್ರಮ ಗಣಿಗಾರಿಕೆಯ ಮೂಲಕ ರಾಜ್ಯಕ್ಕೆ ಧಕ್ಕೆಯನ್ನುಂಟು ಮಾಡುತ್ತಿರುವ ಕೆಲ ಸಂಗತಿಗಳನ್ನು ಸ್ಪಷ್ಟವಾಗಿ ವಾದಿಸಿದ್ದಾರೆ. ಅಂದಿನ ವಿಪ್ರೊ, ಇನ್‌ಫೋಸಿಸ್ ಉದ್ಯಮಿಗಳು ಜಾಗತೀಕ ಮಟ್ಟದಲ್ಲಿ ಆರ್ಥಿಕ ಬೆಳವಣಿಗೆಗಾಗಿ ಒಳ್ಳೆಯ ಮಾರ್ಗದಲ್ಲಿ ದುಡಿದವರಾದರೇ ಭಾರತದ ಕರ್ನಾಟಕ, ಮಹಾರಾಷ್ಟ್ರ, ಗೋವಾ, ಛತ್ತಿಸ್‌ಗಢ್‌ನಲ್ಲಿ ನಡೆಯುತ್ತಿರುವ ಗಣಿಗಾರಿಕೆಯು ಭ್ರಷ್ಟಾಚಾರ, ಹಿಂಸೆ, ಕಾನೂನು ಉಲ್ಲಂಘನೆ ಇತ್ಯಾದಿ ಸಂಗತಿಗಳನ್ನು ಬಂಡವಾಳಶಾಹಿಗಳು ಹೇಗೆ ತನ್ನ ಅಸ್ತಿತ್ವದಲ್ಲಿ ಇರಿಸಿದೆ ಎಂದು ವ್ಯಕ್ತಪಡಿಸಿದ್ದಾರೆ. ಭಾರತದಲ್ಲಿ ನಡೆದಿರುವ ಅಕ್ರಮ ಗಣಿಗಾರಿಕೆಯ ಪ್ರಮುಖವಾಗಿರುವ ಆರು ಪರಿಣಾಮಗಳನ್ನು ಈ ಕೆಳಗಿನಂತೆ ಗುರುತಿಸಿದ್ದಾರೆ. ಗುತ್ತಿಗೆಯ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರ ತಾಂತ್ರಿಕ ಅರ್ಹತೆ ಹೊಂದಿದವರಿಗೆ ಗುತ್ತಿಗೆಯನ್ನು ನೀಡದೆ, ರಾಜಕಾರಣಿಗಳಿಗೆ ಗುತ್ತಿಗೆ ನೀಡಿರುವುದು ರಾಜ್ಯದಲ್ಲಿ ಅಕ್ರಮವಾಗಿ ಹಣ ಸಂಪಾದಿಸಲು ದಾರಿ ಮಾಡಿಕೊಟ್ಟಿದೆ. ಈ ಗಣಿ ಕಂಪನಿಯ ಮಾಲೀಕರು ರಾಜಕೀಯವಾಗಿ ಘೋಷಿತವಾಗಿದ್ದರಿಂದ ರಾಜ್ಯದ ಸ್ಥಳೀಯ ಕಾರ್ಮಿಕರ ಮತ್ತು ಪರಿಸರದ ಬಗ್ಗೆ ಇರುವ ಕಾಳಜಿಯನ್ನು ನಿರ್ಲಕ್ಷಿಸಿದ್ದಾರೆ. ಗಣಿ ಕೇಂದ್ರಿತ ಪ್ರದೇಶದಲ್ಲಿರುವ ಖನಿಜ ಸಂಪನ್ಮೂಲವನ್ನು ವ್ಯಾಪಕವಾಗಿ ತೆಗೆದು ದೇಶದ ಸಂಪತ್ತನ್ನು ಲೂಟಿ ಮಾಡಿದ್ದಾರೆ.

- ❖ ಕನಿಷ್ಟ ಸಮಯದಲ್ಲಿ ಅತಿ ವೇಗವಾಗಿ ಅತ್ಯಾಧಿಕ ಅದಿರನ್ನು ಅಗೆದು ಅಧಿಕ ಲಾಭ ಪಡೆಯಲು ಅಲ್ಲಿನ ಮಾಲೀಕರು ಮತ್ತು ರಾಜಕಾರಣಿಗಳ ಹಸ್ತಾಕ್ಷೇಪವೇ ಆಗಿದೆ.
- ❖ ಭಾರತದಲ್ಲಿ ನಡೆಯುತ್ತಿರುವ ಗಣಿಗಾರಿಕೆಯು ಅಪಾರ ಪ್ರಮಾಣದ ಪರಿಸರ ನಾಶವಾಗಿದೆ. ಇದರಿಂದಾಗಿ ಅರಣ್ಯನಾಶ, ನದಿ, ಒರತೆಗಳನ್ನು ಮಲೀನಗೊಳಿಸಿದೆ. ಕೃಷಿ ಭೂಮಿಯನ್ನು ಬರಡಾಗಿಸಿ ಉತ್ಪನ್ನವನ್ನು ಕಡಿಮೆ ಮಾಡಿ ಆಹಾರ ಅಭದ್ರತೆಗೆ ಕಾರಣವಾಗಿದೆ. ಅರಣ್ಯ ಪ್ರದೇಶದಲ್ಲಿ ವಾಸವಾಗಿರುವ ಜನ ಸಮುದಾಯಕ್ಕೆ ಅಗತ್ಯವಾಗಿರುವ ಔಷಧಿಯ ಸಸ್ಯಗಳನ್ನು ನಾಶಪಡಿಸಿದೆ. ಹೀಗೆ ಗ್ರಾಮೀಣ ಪ್ರದೇಶದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಧ್ವಂಸ ಮಾಡಿರುವುದು ಜನ ಸಮುದಾಯದ ಆರ್ಥಿಕ, ಸಾಮಾಜಿಕ ಬದುಕಿನ ಮೇಲೆ ಬೀರುವ ಪರಿಣಾಮಗಳಾಗಿವೆ. ಇದರಿಂದ ದೇಶದಲ್ಲಿ ಅಪರಾಧ, ಅರಾಜಕತೆ, ಸೃಷ್ಟಿಸಿ ಪ್ರಜಾಪ್ರಭುತ್ವದ ನೀತಿಯನ್ನು ಸವೆದಿದೆ ಎಂಬ ವಿಚಾರಧಾರೆಯನ್ನು ಉಲ್ಲೇಖಿಸಿದ್ದಾರೆ.

**ಸಿಸ್ಟರ್.ಎಂ.ಸಿಲ್ಕೆಟ್ (೨೦೦೭)** ಅವರು **ಖನಿಜ ಸಂಪನ್ಮೂಲ** ಎಂಬ ಕೈಪಿಡಿಯಲ್ಲಿ ಗಣಿಗಾರಿಕೆಗೆ ಸಂಬಂಧಿಸಿದ ಐತಿಹಾಸಿಕ ಹಿನ್ನೆಲೆ, ಗಣಿಗಾರಿಕೆಯ ಅರ್ಥ, ಅವುಗಳ ವರ್ಗೀಕರಣ ಮಾಡಿರುವುದು ತಿಳಿಸಿದ್ದಾರೆ. ಖನಿಜ ಸಂಪನ್ಮೂಲಗಳ ಬಗ್ಗೆ, ಖನಿಜ ಸಂಪನ್ಮೂಲಗಳು ಕಬ್ಬಿಣ ಅದಿರಿನ ಪ್ರಮಾಣ ದೊರೆಯುವ ಸ್ಥಳಗಳನ್ನು ಗುರುತಿಸಿ, ಅದರ ಪ್ರಮಾಣವನ್ನು ದತ್ತಾಂಶಗಳ ಮೂಲಕ ವಿವರಿಸಿದ್ದಾರೆ. ಗಣಿಗಾರಿಕೆಯು ತಾಮ್ರ ಶಿಲಾಯುಗದ ಪ್ರಾರಂಭದಿಂದಲೂ ಮಾನವನ ಆರ್ಥಿಕ ಚಟುವಟಿಕೆಯಾಗಿ ರೂಢಿಗೆ ಬಂದಿದೆ ಎಂದು ವ್ಯಕ್ತಪಡಿಸಿದ್ದಾರೆ.

**ಸಂಗೀತ.ಪಿ (೨೦೦೭) ಅವರ ಗಣಿಗಾರಿಕೆ ಮತ್ತು ಪರಿಸರ** ಎಂಬ ಗ್ರಂಥದಲ್ಲಿ ಗಣಿಗಾರಿಕೆಯಿಂದಾಗುವ ಅರಣ್ಯನಾಶ, ಕೃಷಿ ಭೂಮಿ ಅವನತಿ, ಪರಿಸರದ ಮೇಲಾಗಿರುವ ಪರಿಣಾಮ ಕುರಿತ ಮಾಹಿತಿಯನ್ನು ಸಾದರ ಪಡೆಸಿದ್ದಾರೆ. ಈ ಹಿನ್ನಲೆಯಲ್ಲಿ ಗಣಿಗಾರಿಕೆಯು ಒಂದು ಕಡೆ ಉದ್ಯೋಗನಾಶ, ಮತ್ತೊಂದೆಡೆ ಪರಿಸರದ ಮಾಲಿನ್ಯವಾಗುತ್ತಿದೆ. ಜನಸಂಖ್ಯೆ, ದವಸಧಾನ್ಯ, ಔದ್ಯಮೀಕರಣದ ಖನಿಜ ಸಂಪನ್ಮೂಲಗಳು, ಪರಿಸರ ಮಾಲಿನ್ಯಗಳ ನಡುವೆ ಇರುವ ಸಂಬಂಧವನ್ನು ವಿವರಿಸಿದ್ದಾರೆ.

**ಪಟ್ಟಾಭಿರಾಮಯ್ಯ ಎನ್.ಆರ್ (೨೦೦೭) ಅವರು ಗಣಿಗಾರಿಕೆ** ಎಂಬ ಲೇಖನದಲ್ಲಿ ಗಣಿಗಾರಿಕೆಯ ಅರ್ಥ, ವಿಧಗಳು, ಅದರ ಸ್ವರೂಪ ಮತ್ತು ಮಹತ್ವಗಳ ಕುರಿತ ಮಾಹಿತಿಯನ್ನು ವಿವರಿಸಿದ್ದಾರೆ. ಕರ್ನಾಟಕದಲ್ಲಿ ಲಭ್ಯವಿರುವ ಖನಿಜಗಳ ವಿವರಣೆಯನ್ನು ರಾಜ್ಯವಾರು ವಿವರಿಸಿ ಅದರ ಪ್ರಮಾಣವನ್ನು ಅಂಕಿ–ಅಂಶಗಳ ಮೂಲಕ ದೃಢಪಡಿಸಿದ್ದಾರೆ. ರಾಜ್ಯಕ್ಕೆ ಸಂಬಂಧಿಸಿದಂತೆ ಜಿಲ್ಲಾವಾರು ಖನಿಜಗಳ ಅದಿರಿನ ಪ್ರಮಾಣ ಮತ್ತು ದೊರಕುವ ಸ್ಥಳವನ್ನು ಜಿಲ್ಲೆಯಲ್ಲಿರುವ ಶ್ರೇಷ್ಠ ದರ್ಜೆಯ ಕಬ್ಬಿಣದ ಅದಿರು ನಿಕ್ಷೇಪಗಳು, ಬೆಳಗಲ್ ಶ್ರೇಣಿ, ಎತ್ತಿನ ಹಟ್ಟಿ ಶ್ರೇಣಿ, ತಿಮ್ಮಪ್ಪನ ಭಾಗದಲ್ಲಿ ಇದೆ ಎಂದು ತಿಳಿಸಿದ್ದಾರೆ.

**ಮೇಧಾ ವೆಂಕಟಯ್ಯ ಅವರು ಬೆಂಗಳೂರಿನಲ್ಲಿ ಆಯೋಜಿಸಿದ ರಾಷ್ಟ್ರೀಯ ಸಮ್ಮೇಳನದಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಗಣಿಗಾರಿಕೆಯಲ್ಲಿ ಯಾಂತ್ರಿಕ ಪ್ರಯೋಗ** ಎಂಬ ಪ್ರಬಂಧ ಮಂಡನೆಯಲ್ಲಿ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯ ಕಬ್ಬಿಣದ ಉತ್ಪಾದನೆಯಲ್ಲಿ ಅಭಿವೃದ್ಧಿ ರಾಷ್ಟ್ರಗಳಲ್ಲಿರುವ ತಂತ್ರಜ್ಞಾನವನ್ನು ಅಳವಡಿಸಿಕೊಂಡರೆ ೨೦೦೨ರ ವೇಳೆಗೆ ಗಣಿಗಾರಿಕೆಯು ಬಂಡವಾಳ ಸಂಬಂಧಿ ಉತ್ಪಾದನೆಯಾಗಲಿದೆ. ಇಂತಹ ಕ್ರಮವು ಜಿಲ್ಲೆಯಲ್ಲಿ ನಿರುದ್ಯೋಗದ ಪ್ರಮಾಣವನ್ನು ಹೆಚ್ಚಿಸುತ್ತದೆ ಎಂಬ ಸೂಚನೆ ನೀಡುತ್ತಾ ಜಿಲ್ಲೆಯ ಗಣಿಗಾರಿಕೆಯ ಉತ್ಪಾದನಾ ಕ್ರಮವು ಬದಲಾಗಬೇಕಾಗಿದೆ ಎಂಬ ಆಶಯ ವ್ಯಕ್ತಪಡಿಸಿದ್ದಾರೆ.

**ಭಾಗ್ಯಲಕ್ಷ್ಮಿ.ಎಂ (೨೦೦೭) ಅವರ ಗಣಿಗಾರಿಕೆ ಮತ್ತು ಅಭಿವೃದ್ಧಿ** ಎಂಬ ಸಂಪಾದನ ಗ್ರಂಥದಲ್ಲಿ ಗಣಿಗಾರಿಕೆಗೆ ಸಂಬಂಧಿಸಿದಂತೆ ಒಟ್ಟು ೧೩ ಲೇಖನಗಳಿವೆ. ಈ ಎಲ್ಲಾ ಲೇಖನಗಳು ಒಟ್ಟಾರೆಯಾಗಿ ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯಿಂದ ಆಗುವ ಪರಿಸರ, ಅಭಿವೃದ್ಧಿ, ನೈಸರ್ಗಿಕ ಸಂಪನ್ಮೂಲ, ಕೃಷಿ, ಜಾಗತೀಕರಣ, ಅನಾರೋಗ್ಯ ಮತ್ತು ರಾಜಕೀಯ ಸ್ಥಿತಿಗತಿಗಳ ಬದಲಾವಣೆಯನ್ನು ಹಾಗೂ ಗಣಿ ಕೆಲಸದಲ್ಲಿ ತೊಡಗಿರುವ ಮಹಿಳೆಯರು, ಕೂಲಿ ಕಾರ್ಮಿಕರು ಮತ್ತು ಬಾಲಕಾರ್ಮಿಕರ ಸಮಸ್ಯೆಯನ್ನು ವಿವಿಧ ನೆಲೆಯಲ್ಲಿ ಚರ್ಚಿಸಿದ್ದಾರೆ.

**ಚಂದ್ರಪೂಜಾರಿ ಎಂ (೨೦೦೮) ಅವರು ದೇಶೀಯತೆಯ ನೆರಳಲ್ಲಿ ವಿಕೇಂದ್ರಿಕರಣ** ಎಂಬ ಗ್ರಂಥದಲ್ಲಿ ಪಿ.ಕೆ.ಹಳ್ಳಿಯಲ್ಲಿ ನಡೆಯುತ್ತಿರುವ ಗಣಿಗಾರಿಕೆಯಿಂದ ಜನರು ದಿನವಿಡೀ ಅದಿರು ಮತ್ತು ಧೂಳಿನಿಂದ ಬಹುತೇಕ ಮಂದಿ ಶ್ವಾಸಕೋಶದ ರೋಗದಿಂದ ಬಳಲುತ್ತಿದ್ದಾರೆ. ಶ್ವಾಸಕೋಶದ ರೋಗ ಜನರಲ್ಲಿ ವಿಪರೀತವಾಗಿ ಕಂಡು ಬಂದರೂ ದುಡಿಯಲು ಅಸಾಧ್ಯವೆಂದಾಗ ಅವರು ವೈದ್ಯರ ಬಳಿ ಹೋಗುತ್ತಾರೆ. ಮದ್ದಿನ ಜೊತೆಗೆ ವಿಶ್ರಾಂತಿಯ ಅಗತ್ಯ ಆ ರೋಗಕ್ಕೆ ಇದ್ದರೂ, ಮನೆಯಲ್ಲಿ ಮಲಗಿದರೇ ಮಕ್ಕಳಿಗೆ, ಕುಟುಂಬದ ಸದಸ್ಯರಿಗೆ ಊಟ ಹಾಕುವವರ್ಯಾರು? ಹೀಗಾಗಿ ಅನಾರೋಗ್ಯದಿಂದ್ದರೂ ದುಡಿಯುವುದು ಅಲ್ಲಿಯ ಜನರಿಗೆ ಅನಿವಾರ್ಯವಾಗಿತ್ತು. ಇಡೀ ಹಳ್ಳಿಯೇನು ಗಣಿಗಾರಿಕೆಯನ್ನು ಅವಲಂಬನೆಗೊಂಡಿರಲಿಲ್ಲ. ಅಲ್ಲಿ ಕೃಷಿ ಮತ್ತೊಂದು ಮುಖ್ಯ ಕಸಬಾಗಿತ್ತು. ೧೯೭೫ರ ಎಮಾರ್ಜೆನ್ಸಿ ಸಂದರ್ಭದಲ್ಲಿ ಜೀತಪದ್ಧತಿ ಮುಕ್ತಿಗೊಂಡು ಗಣಿಗಾರಿಕೆಯಲ್ಲಿ ವ್ಯಾಗನ್ ಲೋಡಿಂಗ್‌ಗೆ ಹೋಗಲು ಆರಂಭಿಸಿದಾಗ ಜನಗಣತಿಯ ವ್ಯಾಪ್ತಿಗೆ ಬಂದಿರಬೇಕು. ಗಣಿಯಲ್ಲಿ ಕಾರ್ಮಿಕರು ೨ ರೀತಿಯಲ್ಲಿ ದುಡಿಯುತ್ತಿದ್ದರು. ಒಂದು ಗಣಿಯಲ್ಲಿ ದುಡಿಯುವುದು ಮತ್ತೊಂದು ವ್ಯಾಗನ್ ಲೋಡಿಂಗ್ ಮಾಡುವುದು ಕೂಲಿ ವೈಕರಿಯಾಗಿದೆ. ಗಣಿಯಲ್ಲಿ ದುಡಿಯುವವರು ಖಾಯಂ ನೌಕರರಿಗೆ ದಿನವಿಡಿ ಗಣಿಯಲ್ಲಿ ದುಡಿತವಿರುತ್ತಿತ್ತು. ಆದರೆ ವ್ಯಾಗನ್ ಲೋಡಿಂಗ್ ಒಂದು ವಿಧದ ಅರೆಗೇಣಿಗೆ ಕಾರ್ಮಿಕತ್ವವಾಗಿತ್ತು. ವಾರದಲ್ಲಿ ೨ ಬಾರಿ ಅದು ಕೇವಲ ಒಂದು ಗಂಟೆಯ ಕೆಲಸವಾಗಿರುತ್ತದೆ. ಗಣಿಯಲ್ಲಿ ವ್ಯಾಗನ್ ಲೋಂಡಿಂಗ್ ಇಲ್ಲದಿರುವಾಗ ಕೃಷಿ

ಕಾರ್ಮಿಕರಾಗಿ ದುಡಿಯುತ್ತಾರೆ. ವಾರಗಟ್ಟಲೇ ವ್ಯಾಗನ್ ಲೋಡಿಂಗ್‌ಗೆ ಬರದೆ ಇದ್ದರೇ ಅವರು ಬೇರೊಂದು ಪ್ರದೇಶಕ್ಕೆ ವಲಸೆ ಹೋಗಿ ಬೇರೆ ಕೆಲಸವನ್ನು ಮಾಡುತ್ತಾರೆ. ಬೇರೆಡೆಗೆ ಕೆಲಸ ವರಸಿ ಹೋಗುವಾಗ ಮಕ್ಕಳನ್ನು ಕರೆದುಕೊಂಡು ಹೊಕ್ತಾರೆ. ಬಹುಶಃ ಶಾಲೆಯಲ್ಲಿ ಮಕ್ಕಳ ಹಾಜರಾತಿ ಸಂಖ್ಯೆ ಕಡಿಮೆಯಾಗಲು ಗಣಿಗಾರಿಕೆಯೇ ಕಾರಣವಾಗಿದೆ ಎಂದು ಅಭಿವೃದ್ಧಿ ಚಿಂತಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ವೀರಸಂಗಯ್ಯ.ಜಿ.ಎಂ. (೨೦೦೮) ಗಣಿ ಸ್ಫೋಟ: ಒಂದು ಚಿಂತನೆ** ಎಂಬ ಕಿರು ಹೊತ್ತಿಗೆಯಲ್ಲಿ ಒಟ್ಟು ೯ ಲೇಖನಗಳಿವೆ. ಈ ಲೇಖನಗಳು ಪರಿಸರ ಪ್ರೇಮಿ ಮತ್ತು ಸಾಮಾಜಿಕ ಚಿಂತಕರು ಪರಿಸರದ ಪ್ರಜ್ಞೆ ಮತ್ತು ಸಾಮಾಜಿಕ ಕಾಳಜಿಯ ಆಶಯದಡಿ ಲೇಖನವನ್ನು ರಚಿಸಿದ್ದಾರೆ. ಒಟ್ಟಾರೆ ಈ ಎಲ್ಲಾ ಲೇಖನಗಳು ಕ್ರಮವಾಗಿ ಅಧ್ಯಯನ ಮಾಡುವಾಗ ಈ ಮುಂದಿನ ಅಂಶಗಳಿವೆ. ಕರ್ನಾಟಕದಲ್ಲಿ ದೊರೆಯುವ ಕಬ್ಬಿಣದ ಅದಿರಿನ ಪ್ರಮಾಣವನ್ನು ಅಂಕಿ-ಅಂಶಗಳ ಸಹಿತ ವಿವರಿಸಿದ್ದಾರೆ. ಗಣಿಗಾರಿಕೆಯಿಂದಾಗಿ ಕೃಷಿ ಮತ್ತು ಪರಿಸರದ ಮೇಲಾಗುವ ದುಷ್ಪರಿಣಾಮ, ಬರಿದಾಗುತ್ತಿರುವ ನೈಸರ್ಗಿಕ ಸಂಪತ್ತು, ಕೃಷಿ ರೈತರ ಸ್ಥಿತಿಗತಿ, ಜನರ ಮೇಲಾಗುವ ಅನಾರೋಗ್ಯ, ಕೃಷಿ ಭೂಮಿ, ಉತ್ಪನ್ನ ಅರಣ್ಯ ಪ್ರದೇಶಗಳ ನಾಶಿಸುವಿಕೆ ಕುರಿತು ಚರ್ಚಿಸಿದ್ದಾರೆ.

**ಸಮತ ಸಂಘಟನೆ (೨೦೦೮)** ಏರ್ಪಡಿಸಿರುವ **ಕನ್‌ಸ್ಯೂಲೆಷನ್ ದಿ ಇಂಪ್ಯಾಕ್ಟ್ ಆಫ್ ಮೈನಿಂಗ್ ಆನ್ ಚಿಲ್ಡ್ರನ್ ಇನ್ ಇಂಡಿಯಾ** ಎನ್ನುವ ಕಾರ್ಯಗಾರವನ್ನು ಸೆಂಟರ್ ಫಾರ್ ಚೈಲ್ಡ್ ರೈಟ್ಸ್, ಮೈನ್ಸ್ ಮಿನರಲ್ಸ್, ಪೀಪಲ್ ಅಂಡ್ ಇಂಟರ್ ನ್ಯಾಷನಲ್ ವ್ಯೂಮನ್ ಅಂಡ್ ಮೈನಿಂಗ್ ನೆಟ್ವರ್ಕ್ ಸಹಯೋಗದಲ್ಲಿ ದಿನಾಂಕ: ೧೫-೧೬-೨೦೦೮ರಲ್ಲಿ ಜರ್ಮನ್‌ನಲ್ಲಿ ಏರ್ಪಡಿಸಿರುವ ಸಂಗ್ರಹ ಲೇಖನವು ಭಾರತದಲ್ಲಿ ನಡೆಯುತ್ತಿರುವ ಗಣಿಗಾರಿಕೆಯು ಮಕ್ಕಳ ಮೇಲಾಗುವ ಪರಿಣಾಮ ಮತ್ತು ಅವರ ಆರೋಗ್ಯದ ಮೇಲೆ ಬೀರುವ ಪರಿಣಾಮಗಳನ್ನು ವಿವರಿಸುವ ಆಶಯವನ್ನು ಹೊಂದಿದೆ. ಈ ಕಾರ್ಯಗಾರದಲ್ಲಿ ಕರ್ನಾಟಕದ ಕೆಲವು ಪ್ರದೇಶಗಳಾದ ಬಳ್ಳಾರಿ ಜಿಲ್ಲೆಯ ಸಂಡೂರು ಮತ್ತು ಹೊಸಪೇಟೆ ಗಣಿ ವಲಯದಲ್ಲಿ ಪ್ರಸ್ತುತ ಗಣಿಗಾರಿಕೆಯಿಂದ ಮಕ್ಕಳು ಎದುರಿಸುತ್ತಿರುವ ರಾಷ್ಟ್ರೀಯ ಅಧ್ಯಯನಗಳ ಅವಶ್ಯವಿದೆ. ಗಣಿಗಾರಿಕೆ ನಡೆದ ಪ್ರದೇಶಗಳಲ್ಲಿ ಮಕ್ಕಳು ಬಾಲ ಕಾರ್ಮಿಕರಾಗಿ ದುಡಿಯುತ್ತಿರುವ ಸಮಸ್ಯೆ, ಮಕ್ಕಳು ಶಿಕ್ಷಣದಿಂದ ವಂಚಿತರಾಗಿರುವ ಸಮಸ್ಯೆ, ಅನಾರೋಗ್ಯದ ಸಮಸ್ಯೆ ಮತ್ತು ಸ್ಥಳಾಂತರ ಮಾಡುವ ಸಂದರ್ಭದಲ್ಲಿ ಸೌಲಭ್ಯ ವಂಚಿತರಾಗಿರುವ ಪರಿಸ್ಥಿತಿಯನ್ನು ವಿವರಿಸುವ ಸಲುವಾಗಿ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಪ್ರಮುಖವಾಗಿ ಗುರುತಿಸಿರುವುದು ಈ ಕಾರ್ಯಗಾರದ ಉದ್ದೇಶವಾಗಿದೆ. ಈ ರೀತಿಯ ಪ್ರಚಾರ ಪ್ರಸ್ತುತ ಗಣಿ ಪ್ರದೇಶಗಳಲ್ಲಿ ಬೀರುವ ಪರಿಣಾಮಗಳ ನಿಯಂತ್ರಣಕ್ಕೆ ಸುಧಾರಣ ತಂತ್ರಗಳನ್ನು ಕಾನೂನಿನ ಚೌಕಟ್ಟಿನೊಳಗೆ ಬಿಗಿಗೊಳಿಸಬೇಕು ಮತ್ತು ಈ ಕುರಿತು ಸಂಶೋಧನೆಯನ್ನು ಮಾಡುವುದು ಅಗತ್ಯವಿದೆ. ಗಣಿಗಾರಿಕೆಯಲ್ಲಿ ಬಾಲ ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳ ಅರಿವಿಕೆಗಾಗಿ ಸಮೀಕ್ಷೆಯನ್ನು ಕೈಗೊಂಡು ಅದರಲ್ಲಿ ಮೂರು ಗುಂಪುಗಳಾಗಿ ವಿಂಗಡಿಸಿದ್ದಾರೆ. ೧) ನಿಶ್ಚಿತ ಪ್ರದೇಶ, ೨) ಗಣಿ ಪ್ರದೇಶದಲ್ಲಿ ಮಕ್ಕಳ ಸಮಸ್ಯೆ ಮತ್ತು ಅಗತ್ಯತೆಗಳನ್ನು ಪರಿಚಯಿಸುವ ಕೆಲಸ ಮಾಡುವುದು, ೩) ಗಣಿಯಲ್ಲಿ ದುಡಿಯುವ ಬಾಲ ಕಾರ್ಮಿಕರ ಸಮಸ್ಯೆಯನ್ನು ನಿವಾರಿಸಲು ಸುಧಾರಣಾ ಕಾರ್ಯ ಕ್ರಮಗಳನ್ನು ಬಳಸುವುದು. ಹೀಗೆ ವಿವಿಧ ಪ್ರದೇಶಗಳಲ್ಲಿ ಕಂಡು ಬರುವ ಸಮಸ್ಯೆಗಳನ್ನು ಗುರುತಿಸಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರ ಮಾಡುವ ಅಗತ್ಯವಿದೆ ಎಂದು ತಿಳಿಸಿದ್ದಾರೆ. ಗಣಿಗಾರಿಕೆ ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ ಗಣಿಯಲ್ಲಿ ದುಡಿಯುವ ಮಕ್ಕಳ ಶಿಕ್ಷಣ, ಆರೋಗ್ಯದ ಮೇಲಾಗುವ ಪರಿಣಾಮಗಳನ್ನು ವಿವರಿಸುತ್ತವೆ. ಉದಾಹರಣೆಯಾಗಿ ಆಂಧ್ರ ಪ್ರದೇಶದ ಕಡಪ ಮತ್ತು ಚಿತ್ತೂರಿನ ಜಿಲ್ಲೆಗಳಲ್ಲಿ ಗ್ರಾನೈಟ್ ಗಣಿಯ ಕೆಲಸದಲ್ಲಿ ತೊಡಗಿರುವ ಬಾಲ ಕಾರ್ಮಿಕರ ಸಂಖ್ಯೆ ಮಿತಿಮೀರಿದೆ. ಮಧ್ಯ ಪ್ರದೇಶದ ಪನ್ನಾ ಎಂಬ ಪ್ರದೇಶದಲ್ಲಿ ೧೮೨ ಶಾಲೆ ಕುಸಿದಿವೆ. ಇದರಿಂದ ಆ ಪ್ರದೇಶದ ಬಾಲ ಕಾರ್ಮಿಕರು ಶಿಕ್ಷಣ ಮತ್ತು ಆರೋಗ್ಯದ ಮಟ್ಟ ಕುಸಿದಿದೆ. ಉತ್ತರ ಪ್ರದೇಶದ ಗಜಿಯಾಬಾದ್ ಕಲ್ಲಿದ್ದಲು ಗಣಿಯಲ್ಲಿ ಟ್ರಕ್ ಲೋಡ್ ಕೆಲಸ ಮಾಡುವ ೧೪ ವರ್ಷದ ಹುಡುಗಿಯ ಮೇಲೆ ಲೈಂಗಿಕ ದೌರ್ಜನ್ಯವಾಗಿದೆ. ಈ ವರದಿಯಲ್ಲಿ ಬಾಲ ಕಾರ್ಮಿಕರ ಶಿಕ್ಷಣ ಮರೆಯಾಗಿದೆ, ಮಕ್ಕಳ ಆರೋಗ್ಯದ ಮೇಲೆ ಗಂಭೀರವಾದ ಪರಿಣಾಮಗಳಾಗಿವೆ ಎಂದು ಉಲ್ಲೇಖಿಸಿದ್ದಾರೆ.

**ವೀರ ಸಂಗಯ್ಯ (೨೦೦೮)** ಅವರ **ನಾಡಿನ ಸಂಪತ್ತು ನಾಡಿಗೆ ಬಳಕೆಯಾಗಲಿ** ಎಂಬ ಲೇಖನದಲ್ಲಿ ಕರ್ನಾಟಕ ರಾಜ್ಯದ ತುಮಕೂರು, ಚಿತ್ರದುರ್ಗ, ಬಳ್ಳಾರಿ ಮೂರು ಜಿಲ್ಲೆಗಳಲ್ಲಿ ನಡೆಯುವ ಗಣಿಗಾರಿಕೆಯು ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಸಂಪನ್ಮೂಲವನ್ನು ಲೂಟಿ ಮಾಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯ ಅರಣ್ಯ ಪ್ರದೇಶದ ೩,೭೦೦ ಎಕರೆ ಪ್ರದೇಶವನ್ನು ಆಕ್ರಮಿಸಿ ಖನಿಜ ಸಂಪನ್ಮೂಲವನ್ನು ಹಗಲು ಲೂಟಿ ನಡೆಸಿದ್ದಾರೆ. ಈಗಾಗಲೇ ಲೋಕಯುಕ್ತರು ಆಕ್ರಮಿಸಿದ ಪ್ರದೇಶದಲ್ಲಿ ೪೦೭ಎಕರೆ ಆಕ್ರಮಣಕ್ಕೆ ಒಳಪಟ್ಟವರಿಗೆ ಭೂಮಿ ನೀಡಿರುವುದು ಸ್ಮರಿಸುವ ಸಂಗತಿಯಾಗಿದೆ. ಕಳೆದ ೫ ವರ್ಷಗಳಲ್ಲಿ ಗಣಿಗಾರಿಕೆಯಿಂದ ಹೊರತೆಗೆದ ಅದಿರಿನ ಪ್ರಮಾಣವೆಂದರೆ ಕಬ್ಬಿಣದ ಅದಿರು ೮೯,೮೯,೯೯೦ ಮೆಟ್ರಿಕ್ ಟನ್‌ಗಳು, ರೆಡ್ ಆಕ್ಸೈಡ್ ೭೮.೯೨ ಮಿಲಿಯನ್ ಟನ್‌ಗಳಾಗಿವೆ. ಸುಮಾರು ೮೯,೮೯,೯೯೦ ಮಿಲಿಯನ್ ಟನ್ ಕಬ್ಬಿಣದ ಅದಿರಿನ ಸಾಗಾಣಿಕೆಯನ್ನು ರಾಜ್ಯದಿಂದ ವಿದೇಶಕ್ಕೆ ಮಾರಾಟ ಮಾಡಿದ್ದಾರೆ. ಇದನ್ನೆಲ್ಲಾ ವಿದೇಶಕ್ಕೆ ರವಾನಿಸಲು ಕೇಂದ್ರ ಸರ್ಕಾರದ ಮೋಹರುಬೇಕು, ರಾಜ್ಯದ ಲೂಟಿಯಲ್ಲಿ ರಾಜಕೀಯ ಪಕ್ಷ ಬೇಧವಿಲ್ಲದೆ ನಡೆಸಿರುವ ಕೃತ್ಯವೆಂಬ ಸಂಗತಿಗಳು ಸತ್ಯವಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ದಿನಾ ಡೊಗ್ರೂ ಆಂಡ್ ಅದರ್ಸ್ (೨೦೦೯)** ಅವರ **ಪ್ರಸ್ಪೆಕ್ಷನ್ ಆಫ್ ವಾಟರ್ ಕ್ವಾಲಿಟಿ ಇನ್ ಎ ಮೈನಿಂಗ್ ಎಫೆಕ್ಟೆಡ್ ಏರಿಯಾ: ಎ ಕೇಸ್ ಸ್ಟಡಿ ಫಾರ್ ಸರ್ಟಜ್ ಕ್ಯಾಚ್‌ಮೆಂಟ್ ಇನ್ ದಿ ಅಪ್ಪೊನಿ ಮೌಂಟೆನ್ಸ್ ಇನ್ ರೊಮೆನೀಯಾ** ಎಂಬ ಲೇಖನದಲ್ಲಿ ಗಣಿಗಾರಿಕೆಯಿಂದ ಆಗಿರುವ ಕಲುಷಿತ ಪರಿಣಾಮಗಳು ಅಲ್ಲಿನ ಸಮುದಾಯ ಅಪಾಯದ ಅಂಚಿನಲ್ಲಿ ಇರುವುದನ್ನು ಸೂಚಿಸುವ ಕೆಲವು ಕಾರ್ಯ ನೀತಿಯನ್ನು ವಿಶ್ಲೇಷಿಸಿದ್ದಾರೆ. ಗಣಿ ಪೀಡಿತ ಪ್ರದೇಶದಲ್ಲಿ ಪರಿಸರ ಮತ್ತು ಸಾಮಾಜಿಕ ಅಪಾಯಗಳನ್ನು ಮೌಲ್ಯಮಾಪನ ಮಾಡುವುದರ ಮೂಲಕ ಕುಡಿಯುವ ನೀರಿನ ಗುಣಮಟ್ಟ ಮಾಪನ ಮಾಡುವ ಮುಖ್ಯ ಆಶಯವನ್ನು ಹೊಂದಿದೆ. ಈ ಲೇಖನದ ಅಧ್ಯಯನಕ್ಕಾಗಿ ಪಶ್ಚಿಮ ರೋಮೆನಿಯ ಮತ್ತು ಆಪ್ಸೋನಿ ಪರ್ವತವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಈ ಪರ್ವತದ ೧೦೩ ಕುಟುಂಬಗಳನ್ನು ಸಮೀಕ್ಷೆಗಾಗಿ ಬಳಸಿಕೊಂಡಿದ್ದಾರೆ. ಗಣಿಗಾರಿಕೆಯ ಪ್ರದೇಶದಲ್ಲಿ ವಾಸಿಸುವ ಜನರು ಹಲವು ಪರಿಸರ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇಲ್ಲಿ ವಾಸವಾಗಿರುವ ಕುಟುಂಬಗಳಿಗೆ ಕುಡಿಯುವ ನೀರಿನ ಸಂಪರ್ಕ ಬಹಳ ಕಡಿಮೆಯಿದೆ. ನೀರಿನ ಪ್ರಮಾಣ ಕಡಿಮೆ ಇರುವುದರಿಂದ ಅಂತರ್ಜಲದ ಸಮಸ್ಯೆ ಉಂಟಾಗಿದೆ. ಇದು ಜನರ ಆರೋಗ್ಯದ ಮೇಲೆ ಬೀರಿರುವ ಪರಿಣಾಮಗಳಾಗಿವೆ ಹಾಗೂ ಜನರು ಕುಡಿಯುವ ನೀರನ ಪ್ರಮಾಣ ಸಂಗ್ರಹಿಸಿ ಮಾಪನ ಮಾಡಿ ಅದರಿಂದ ಬಂದಿರುವ ಫಲಿತಾಂಶದ ಅಪಾಯಗಳನ್ನು ಮಾಲಿನ್ಯಕಾರಕ ಸಂಗತಿಯನ್ನು ಚರ್ಚಿಸಿದ್ದಾರೆ.

**ಜೈಕುಮಾರ್ (೨೦೦೯)** ಅವರ **ಪರಿಸರ ಸ್ನೇಹಿ ಕೃಷಿ ಕ್ಯೂಬಾ ಮಾದರಿ** ಎಂಬ ಕೃತಿಯಲ್ಲಿ ಬೇಸಾಯವನ್ನು ಮಾಡುವ ಅಸಂಖ್ಯಾತ ರೈತರ ಸಮಸ್ಯೆಗಳು, ಪ್ರಸ್ತುತ ಸಂದರ್ಭದಲ್ಲಿ ಜಾಗತೀಕ ಕೃಷಿ ಬಿಕ್ಕಟ್ಟು, ಕ್ಯೂಬಾದ ಕೃಷಿ ಪರಿಸರ ಸ್ನೇಹಿ ಪದ್ಧತಿ ಬೆಳೆದು ಬಂದ ಹಾದಿ ಮತ್ತು ಪರ್ಯಾಯ ಕೃಷಿ ಪದ್ಧತಿಯಿಂದ ಪರಿಸರವನ್ನು ಹೇಗೆ ಸಂರಕ್ಷಣೆ ಮಾಡಬೇಕು ಎಂಬ ಸಂಗತಿಗಳ ಬಗ್ಗೆ ಚರ್ಚಿಸಿದ್ದಾರೆ. ಪರಿಸರ ಸ್ನೇಹಿ ಕೃಷಿ ಪದ್ಧತಿಗಳಾದ ಸಾವಯುವ ಕೃಷಿ, ನೈಸರ್ಗಿಕ ಕೃಷಿ, ಜೈವಿಕ ತಂತ್ರಜ್ಞಾನ ಆಧಾರಿತ ಕೃಷಿ ಪದ್ಧತಿಗಳನ್ನು ರೈತರು ಯಶಸ್ವಿಯಾಗಿ ಅಳವಡಿಸಿಕೊಳ್ಳಬೇಕಾದ ಷರತ್ತುಗಳೇನು? ಅಂತಹ ಪರಿಸರವನ್ನು ಹುಟ್ಟು ಹಾಕಲು ಯಾವ ಪರಿಸ್ಥಿತಿಯನ್ನು ಜಾರಿಗೊಳಿಸಬೇಕು? ಎನ್ನುವ ಅಂಶವನ್ನು ಅರಿತಾಗ ಮಾತ್ರ ಮಣ್ಣಿನ ಫಲವತ್ತೆಯ ಕೊರತೆಯನ್ನು ನೀಗಿಸಲು ರಾಸಾಯನಿಕ ಪದ್ಧತಿಯ ಅಳವಡಿಕೆಯಿಂದ ಮಾತ್ರ ಸಾಧ್ಯ ಎಂದು ವಾದಿಸಿದ್ದಾರೆ.

**ರವಿಬೆಳಗೆರೆ (೨೦೧೦)** ಅವರ **ಕಾಂಗ್ರೆಸ್ ಮೈನಿಂಗ್ ಮಾಫಿಯಾ** ಎಂಬ ಹೊತ್ತಿಗೆಯು ಗಣಿಗಾರಿಕೆಗೆ ಸಂಬಂಧಪಟ್ಟ ನಲವತ್ತು ಕಳ್ಳರು ಅಕ್ರಮವಾಗಿ ನಡೆಸಿದ ಗಣಿಗಾರಿಕೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ನಡೆದಿರುವ ಗಣಿಗಾರಿಕೆಯ ಪ್ರಸಂಗಗಳನ್ನು ಒಟ್ಟಾರೆಯಾಗಿ ಗಣಿಗಾರಿಕೆಯು ಶುರುವಾಗಲು ಮುಂಚೆ ಮತ್ತು ಹಿಂದಿನ ಬಳ್ಳಾರಿಯ ಹಿನ್ನಲೆಯನ್ನು ವಿವರಿಸಿದ್ದಾರೆ.

**ಜಾರ್ಜ್.ಎಂ.ಒಸಿಂಗ್ ಅಂಡ್ ಅದರ್ಸ್** (೨೦೧೦) ಅವರ **ಇಂಪ್ಯಾಂಕ್ಟ್ ಆಫ್ ಮೈನಿಂಗ್ ಆನ್ ವಾಟರ್ ರಿಸೋರ್ಸ್ ಇನ್ ಸೌತ್ ಆಫ್ರಿಕಾ: ರಿವ್ಯೂವ್** In the article Acid mine drainage is recognized as one of the more serious environment problems in the mining industry Acid mine drainage is a major problem on Coal and Gold mines throughout the world and in South Africa. The main focus of this study, is no ereception, various studies that have been undertaken in South Africa have shown that water decanting from the mine companies is highly acidic and as such cannot be released into the Natural Water Course (Steams and rivers). Some form of water treatment and prevention to nerlity or neutrialise the acid level of the mine water is necessary the water quality of the Blesbookspruit, Klip and wonderfontein in the test are was below standard due to the presence of acid mine drainage the union of this review is to raise awareness of the environment.

**ಜಾನ್ ಹ್ಯಾರಿಸ್ ಅಂಡ್ ಅದರ್ಸ್** (೨೦೧೦) ಅವರ **ಲ್ಯಾಂಡ್ ಲೇಬರ್ ಅಂಡ್ ಕಾಸ್ಟ್ ಪಾಲಿಟಿಕ್ಸ್ ಇನ್ ತಮಿಳುನಾಡು ಇನ್ ೨೦ನೇ ಸೆಂಚೂರಿ: ಇರುವಲ್ಪಟ್ (೧೯೧೬–೨೦೦೮)** ಎಂಬ ಲೇಖನದಲ್ಲಿ ಮದ್ರಾಸ್ ವಿಶ್ವವಿದ್ಯಾಲಯದ ಗಿಲ್ಬರ್ಟ್ ಸ್ಲೇಟರ್ ಮತ್ತು ಅವರ ವಿದ್ಯಾರ್ಥಿಗಳು ೧೯೧೬ರಲ್ಲಿ ತಮಿಳ್‌ನಾಡಿನ ಇರುವೆಲ್ಪಟ್ ಎಂಬ ಹಳ್ಳಿಯ ಭೂಮಿ, ಕಾರ್ಮಿಕರು, ಜಾತಿ, ರಾಜಕೀಯ ಪರಿಸ್ಥಿತಿ ಬಗ್ಗೆ ಅಧ್ಯಯನ ಮಾಡಿ ವರದಿ ತಯಾರಿಸಿದ್ದರು. ಆದರೆ ಸ್ಲೇಟರ್ ೧೯೩೦, ೧೯೬೦, ೧೯೮೦ರಲ್ಲಿ ಮರು ಸಮೀಕ್ಷೆಯನ್ನು ಮಾಡಿ ೨೦೦೮ರ ಸಮೀಕ್ಷೆಯಲ್ಲಿ ಆ ಹಳ್ಳಿಯ ಸ್ಥಿತಿಯ ಬಗ್ಗೆ ಚರ್ಚಿಸಿದ್ದಾರೆ. ೨೦೦೮ರ ಸಮೀಕ್ಷೆಯ ಪ್ರಕಾರ ಆರ್ಥಿಕತೆಯ ಹಸಿರು ಕ್ರಾಂತಿ ಯಶಸ್ವಿಯ ನಂತರ ಕೃಷಿ ಆ ಹಳ್ಳಿಯ ಜನರ ಮೂಲ ಉದ್ಯೋಗವಾಗಿದ್ದು, ಕೃಷಿ ಆಧಾರಿತ ಕುಟುಂಬಗಳಾಗಿದ್ದವು. ೧೯೭೦ರಲ್ಲಿ ಕಾರ್ಮಿಕರ ಮಾರುಕಟ್ಟೆ ದಲಿತ ರಾಜಕೀಯ ಸಂಘಟನೆ, ಕೃಷಿ ವೇತನ ದರ ವ್ಯತ್ಯಾಸಗಳನ್ನು ತೆರೆದಿಡುವ ಪ್ರಯತ್ನ ಮಾಡಿತ್ತು. ಮತ್ತೊಂದೆಡೆ ತಮಿಳುನಾಡಿನ ವಿಲ್ಲುಪುರಂ ಜಿಲ್ಲೆಯು ಆರ್ಥಿಕವಾಗಿ ಬೆಳವಣಿಗೆ ಹೊಂದಿದ್ದರೂ ಆ ಭಾಗದಲ್ಲಿ ಹಿಂಧೂ ಮತ್ತು ದಲಿತರ ನಡುವಿನ ಸಂಘಟನೆಗಳ ಕುರಿತಂತೆ ಸ್ಲೇಟರ್ ೧೯೩೭ರ ಜಾತಿ ಸಂಯೋಜನೆಯ ವರದಿಯಲ್ಲಿ ಉಲ್ಲೇಖಿಸಿದ್ದಾರೆ.

ತಮಿಳ್‌ನಾಡಿನ ಇರುವಲ್ಪಟ್ ಗ್ರಾಮದಲ್ಲಿ ಶಿಕ್ಷಣ ಪ್ರಮಾಣದ ಕೊರತೆ, ವಲಸೆಗೆ ಕಾರಣ ಮತ್ತು ನಿರುದ್ಯೋಗ ಸಮಸ್ಯೆಯನ್ನು ಗುರುತಿಸಿ, ಗ್ರಾಮದಲ್ಲಿ ಹಿಂಧೂ–ಹರಿಜನರ ನಡುವಿನ ಸಾಕ್ಷರತೆ ಪ್ರಮಾಣವನ್ನು ವಿಶ್ಲೇಷಿಸಿದ್ದಾರೆ. ವಿಲ್ಲುಪುರಂ ಜಿಲ್ಲೆಯ ಇರುವಲ್ಪಟ್ ಗ್ರಾಮದಲ್ಲಿ ೧೯೮೧ರ ಅಂಕೆ ಸಂಖ್ಯೆಯ ಪ್ರಕಾರ ಸಾಕ್ಷರತೆ ಪ್ರಮಾಣ ಶೇ.೩೨.೫ ರಷ್ಟಿದೆ. ಅದರಲ್ಲಿ ದಲಿತ ಮಹಿಳೆಯರ ಸಾಕ್ಷರತೆ ಶೇ.೬.೭ರಷ್ಟು, ಪುರುಷರು ಶೇ.೧೭.೭ರಷ್ಟು ಸಾಕ್ಷರತೆ ಪ್ರಮಾಣವಿದೆ. ಹೀಗೆ ಹಿಂಧೂ–ದಲಿತರ ನಡುವೆ ಸಾಕ್ಷರತೆಯಲ್ಲಿ ವ್ಯತ್ಯಾಸ ಇರುವುದು ಗುರುತಿಸಿದ್ದಾರೆ.

**ಎಸ್.ಪಾಂಡ ಮತ್ತು ಅನಿಲ್ ಬೇರಿಕ್** (೨೦೧೦) ಅವರ **ಇಂಪ್ಯಾಕ್ಟ್ ಆಫ್ ಐರನ್ ಒರ್ ಮೈನ್ಸ್ ಜೆನೆರೆಟೇಡ್ ಪೊಲ್ಯೂಟೆಂಡ್ ಆನ್ ಪೇರಿಪೈರಲ್ ಎನ್ವಾರನ್ಮೆಂಟ್ ಎ ಕೇಸ್ ಸ್ಟಡಿ ಆಫ್ ಕೊಯಿರಾ ರಿಜಿಯನ್ ಒಡಿಶಾ** ಎಂಬ ಲೇಖನದಲ್ಲಿ ಭಾರತದ ಗಣಿಗಾರಿಕೆಯು ಕಬ್ಬಿಣ ಅದಿರಿನ ಉತ್ಪಾದನಾ ಕೇಂದ್ರಗಳಾದ ಒಡಿಶಾದ ಕೊಯಿರಾ, ಕರ್ನಾಟಕದ ಬಳ್ಳಾರಿ ಹೊಸಪೇಟೆ, ಗೋವಾದ ಪ್ರದೇಶಗಳಾಗಿವೆ. ಈ ಪ್ರದೇಶಗಳಲ್ಲಿ ೨೦೦೦–೦೧ರಲ್ಲಿ ಕಬ್ಬಿಣದ ಅದಿರಿನ ಬೇಡಿಕೆ ಹೆಚ್ಚಾದಾಗ ಆ ಪ್ರದೇಶದಲ್ಲಿ ವಾಸವಾಗಿರುವ ಜನ ಸಮುದಾಯಗಳ ಆರೋಗ್ಯ, ಪರಿಸರ ಸಾರಿಗೆ ಸಂಪರ್ಕ, ಕೃಷಿ ಇಳುವರಿ ಮೇಲೆ ಋಣಾತ್ಮಕ ಪರಿಣಾಮ ಬೀರಿದೆ. ಗಣಿಯಲ್ಲಿ ಅದಿರು ಸಾಗಾಟ ಮಾಡುವ ವಾಹನಗಳ ಒಡಾಟದಿಂದ ರಸ್ತೆಯ ಬದಿ ಧೂಳಿನ ಪ್ರಮಾಣ ಹೆಚ್ಚಾಗಿ ವಾತಾವರಣ ಕಲುಷಿತಗೊಂಡು ಮಾಲಿನ್ಯಕಾರಕ ಸಮಸ್ಯೆಗಳು ಉಂಟಾಗುತ್ತಿದೆ. ಈ ಲೇಖನವು ಮುಖ್ಯವಾಗಿ ಒಡಿಶಾ ಪ್ರದೇಶದಲ್ಲಿ ಗಣಿಗಾರಿಕೆಯ ಪರಿಣಾಮದಿಂದಾಗಿ ಪರಿಸರದ ಮೇಲಾಗುತ್ತಿರುವ

ಮಾಲಿನ್ಯಕಾರಕ ಸಂಗತಿಗಳ ಕುರಿತು ಚರ್ಚಿಸುವ ಆಶಯವನ್ನು ಹೊಂದಿದೆ. ಈ ಅಧ್ಯಯನಕ್ಕಾಗಿ ಒಡಿಶಾದ ಕೊಯಿರಾ ಪ್ರದೇಶವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಗಣಿಗಾರಿಕೆಯ ಚಟುವಟಿಕೆಯಿಂದಾಗುವ ಕೆಲವು ನಿಲವು ಮತ್ತು ಖನಿಜವನ್ನು ಅಧಿಕವಾಗಿ ಬಳಸಿರುವುದು ಸ್ಥಳೀಯ ಪರಿಸರದ ಅವನತಿಗೆ ಕಾರಣವಾಗಿದೆ. ಈ ಮಾಲಿನ್ಯವನ್ನು ನಿಯಂತ್ರಿಸಲು ೩ ಕಟ್ಟುನಿಟ್ಟಾದ ಕ್ರಮಗಳನ್ನು ಅನುಸರಿಸುವ ಅಗತ್ಯತೆ ಇದೆ. ೦೧) ಗಣಿಗಾರಿಕೆ ಪರಿಸರ ಮತ್ತು ಅರಣ್ಯವನ್ನು ಅನ್ವೇಷಿಸುವುದು, ೦೨) ಗಣಿಗಾರಿಕೆಯಲ್ಲಿ ಖನಿಜ ಸಾಗಾಟದಿಂದಾಗಿ ಧೂಳು, ಶಬ್ದ ಮತ್ತು ಜಲಮಾಲಿನ್ಯ ಉಂಟಾಗಿವೆ. ಇದನ್ನು ನಿಯಂತ್ರಿಸಲು ಸರ್ಕಾರ ಸೂಕ್ತ ಕ್ರಮವನ್ನು ಕೈಗೊಳ್ಳುವುದು, ೦೩) ಮುಚ್ಚಿದ ಗಣಿ ಅನುಮೋದನೆ ಪಡೆದು ಸೂಕ್ತ ಗಣಿ ಯೋಜನೆಯನ್ನು ರೂಪಿಸುವುದು. ಹೀಗೆ ರೂಪಿಸಿರುವ ಯೋಜನೆಯ ಅನುಸರಣೆಯಿಂದ ಪರಿಸರ ಮಾಲಿನ್ಯವನ್ನು ತಡೆಗಟ್ಟುವ ಅಗತ್ಯವಿದೆ ಎಂಬ ಅಂಶಗಳನ್ನು ಮನದಟ್ಟು ಮಾಡಿದ್ದಾರೆ. ಕೋಯಿರಾ ಪ್ರದೇಶದ ಮೇಲಾದ ಪರಿಸರ ಮಾಲಿನ್ಯ, ಅರಣ್ಯನಾಶ, ಹವಾಮಾನಗಳ ಬದಲಾವಣೆ, ಭೂಸವೆತ, ವಾಯು, ಜಲಮಾಲಿನ್ಯ ಅತಿಯಾದ ತಾಜ್ಯ ಇತ್ಯಾದಿ ಮಲೀನತೆಗೆ ಕಾರಣವಾಗಿರುವ ಅಂಶಗಳಾಗಿವೆ. ಭೂಮಿಯ ಅಧಿಕ ಬಳಕೆ ಮತ್ತು ಜಮೀನಿನ ಅಡಚಣೆಯಲ್ಲಿ ಬದಲಾವಣೆಯನ್ನು ಉಂಟು ಮಾಡಿದೆ. ಗಣಿಗಾರಿಕೆಯ ಅಧಿಕ ಧೂಳಿನಿಂದ ವಾಯು ಮಾಲಿನ್ಯ ಉಂಟಾಗಿ ಆರೋಗ್ಯದ ಮೇಲೆ ಪರಿಣಾಮ ಬೀರಿದೆ. ಕೃಷಿ ಭೂಮಿಯ ಒತ್ತುವರಿಯಿಂದ ಕೃಷಿ ಕುಂಠಿತಗೊಂಡಿದೆ. ಮತ್ತೊಂದೆಡೆ ಗಣಿ ಸ್ಫೋಟವು ಭೂಮಿ ಕಂಪನಕ್ಕೆ ಕಾರಣವಾಗಿದೆ. ಈ ಎಲ್ಲಾ ಪರಿಣಾಮಗಳು ಗ್ರಾಮೀಣ ಪ್ರದೇಶದ ಸುತ್ತಮುತ್ತಲಿನ ಪರಿಸರ ಮತ್ತು ಜನರ ಜೀವನದ ಅವಶ್ಯಕತೆಯ ಮೇಲೆ ಬೀರಲು ಕಾರಣವಾಗಿದೆ ಎಂದು ತಮ್ಮ ನಿಲುವುಗಳನ್ನು ಹೇಳಿದ್ದಾರೆ.

**ಪಿಚ್ಚ ಮುತ್ತು (೨೦೧೧) ಭಾರತದ ಖನಿಜ ನೀತಿಯ ವಿಕಾಸ ಮತ್ತು ಮಿನರಲ್ ಇಂಡಸ್ಟ್ರೀಯ ಮೇಲೆ ಅದರ ಪ್ರಭಾವಗಳು** ಎಂಬ ಲೇಖನದಲ್ಲಿ ಭಾರತದ ಗಣಿಗಾರಿಕೆಯು ಖನಿಜ ನೀತಿ ಮತ್ತು ಮಿನರಲ್ ಇಂಡಸ್ಟ್ರೀಯ ಮೇಲೆ ಬೀರುವ ಪ್ರಭಾವವನ್ನು ವಿವರಿಸುವ ಉದ್ದೇಶವನ್ನು ಹೊಂದಿದೆ. ಐ.ಪಿ.ಎಲ್. (ಇಂಡಸ್ಟ್ರೀ ಪಾಲಿಸಿ ರೇಸಲ್ಯೂಷನ್ ೧೯೫೬ರ ಕಾಯ್ದೆಯ ಪ್ರಕಾರ ಭಾರತದಲ್ಲಿ ಕಲ್ಲಿದ್ದಲು, ತೈಲ ಕಬ್ಬಿಣದ ಅದಿರು, ಪರಮಾಣು ಇತ್ಯಾದಿ ಪ್ರಮುಖ ಖನಿಜಗಳು ಸಾರ್ವಜನಿಕ ವಲಯಗಳಿಗೆ ಮೀಸಲಾಗಿತ್ತು. ನಂತರ ಸಣ್ಣ ಸಣ್ಣ ಖನಿಜಗಳನ್ನು ಖಾಸಗಿ ವಲಯಗಳಿಗೆ ಭಾಗವಹಿಸಲು ಸರ್ಕಾರ ಅನುಮತಿ ನೀಡಿತ್ತು. ಇದನ್ನು ೧೯೫೭ರಲ್ಲಿ ಎಂ.ಎಂ..ಡಿ.ಆರ್. ಕಾಯದೆ ಅಡಿಯಲ್ಲಿ ಖನಿಜ ತೈಲವನ್ನು ಹೊರತುಪಡಿಸಿ, ಉಳಿದ ಖನಿಜಗಳ ಗಣಿಗಾರಿಕೆ ಸಂರಕ್ಷಣೆ ಮತ್ತು ಅಭಿವೃದ್ಧಿ ನಿಯಮಗಳ ಅಡಿಯಲ್ಲಿ ರೂಪುಗೊಳ್ಳುವಂತೆ ಮಾಡಿತ್ತು ಎಂದು ತಿಳಿಸಿದ್ದಾರೆ. ಡಾ.ಮನಮೋಹನ್ ಸಿಂಗ್ ಅವರ ಪ್ರಕಾರ ೧೯೯೧ರ ಆರ್ಥಿಕ ಉದಾರೀಕರಣ ನೀತಿಯನ್ನು ಜಾರಿಗೊಳಿಸಿದರು. ತದನಂತರ ಮಾರ್ಚ್ ೧೯೯೩ರಲ್ಲಿ ರಾಷ್ಟ್ರೀಯ ನೀತಿಯನ್ನು ಘೋಷಣೆ ಮಾಡಿದರು. ಈ ನೀತಿಯ ಮುಖ್ಯ ಉದ್ದೇಶ; ಗಣಿಗಾರಿಕೆಯ ಶೋಧನೆ ಮತ್ತು ಖಾಸಗಿ ಹೂಡಿಕೆಗೆ ಪ್ರೋತ್ಸಾಹ ನೀಡುವುದು ಇದರ ಜೊತೆಗೆ ಖಾಸಗಿ ಮತ್ತು ಸಾರ್ವಜನಿಕ ವಲಯಗಳು ಜಂಟಿಯಾಗಿ ಕಾರ್ಯನಿರ್ವಹಿಸಲು ಅನುಮತಿಯನ್ನು ನೀಡಿತ್ತು. ಹೀಗೆ ಗಣಿಗಾರಿಕೆ ಸಂಬಂಧಿಸಿದ ಕಾಯ್ದೆಗಳ ಬಗ್ಗೆ ಇರುವ ಅಭಿವೃದ್ಧಿಯನ್ನು ವ್ಯಕ್ತಪಡಿಸಿದ್ದಾರೆ.

**ಕರಣ.ಎ. ವುಡ್‌ಸನ್ ಎಡ್ವರ್ಡ್ ಅಂಡ್ ಅದರ್ಸ್** (೨೦೧೧) ಅವರ **ಮೈನ್ಸ್ ವೇಸ್ಟ್: ಪಾಸ್ಟ್ ಪ್ರಸೆಂಟ್ ಫ್ಯೂಚರ್** In the article Mine Wastes are unwanted Currently uneconomic, solid and liquid materials found at or near mine sites. Volunterically they are one of the world's largest wastes steams and they often contain high concentration of elements and compounds that can have severer effects on ecosystem humans. Mutidisciplinasry research on mine waters focuses on under standing their character, stabrility, impact, remediation and reuse, this research must continue if we are to understand and sustainably

manage the immense quantities of listonic, contemprorary and future mine wastes given the trend to exploit larger desists of Lower-grade ores.

**ಎಂ.ಪಿ.ಪ್ರಕಾಶ** (೨೦೧೧) ಅವರು **ಗಣಿಗಾರಿಕೆ ಕಲಿಯಬೇಕಾದ ಪಾಠ** ಎಂಬ ಲೇಖನದಲ್ಲಿ ಗಣಿಗಾರಿಕೆಯಿಂದ ಬಳ್ಳಾರಿ, ಚಿತ್ರದುರ್ಗ ಜಿಲ್ಲೆಯ ಜನರು ಆರ್ಥಿಕ ಬಿಕ್ಕಟ್ಟನ್ನು ಅನುಭವಿಸುತ್ತಿದ್ದಾರೆ. ಗಣಿಗಾರಿಕೆಯಲ್ಲಿ ಕಬ್ಬಿಣದ ಅದಿರಿಗೆ ಚೀನಾ, ಕೋರಿಯಾ, ಜಪಾನ್ ಮೊದಲಾದ ದೇಶಗಳಿಂದ ವಿಪರೀತ ಬೇಡಿಕೆಯಿಂದ ಸ್ಥಳೀಯವಾಗಿ ಸಮಾಜ ಘಾತುಕ ಶಕ್ತಿಗಳು, ಸಮಾಜ ವಿರೋಧಿ ಚಟುವಟಿಕೆಗಳಿಂದಾಗಿ ಕೃಷಿ ಉತ್ಪನ್ನ ಹಾಳಾಗುವಿಕೆ, ಪರಿಸರ ನಾಶ, ಜನರು ಅನಾರೋಗ್ಯದ ಸ್ಥಿತಿಯಿಂದ ಬಳಲುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಗೂಗಲ್ ವಿಕೀಪಿಡಿಯಾ** (೨೦೧೧) **ಬಳ್ಳಾರಿಯ ಕೃಷಿಯನ್ನು ನುಂಗು ಹಾಕಿದ ಗಣಿಗಾರಿಕೆ** ಎಂಬ ಲೇಖನದಲ್ಲಿ ಜಿಲ್ಲೆಯ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲೂಕಿನಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ಪ್ರಭಾವದಿಂದಾಗಿ ಕೃಷಿಯ ಮೇಲಾಗುವ ಪರಿಣಾಮ ಮತ್ತು ಕೃಷಿ ಕಾರ್ಮಿಕರಿಗೆ ಕೂಲಿ ಸಿಗದೆ ಇರುವ ಪರಿಸ್ಥಿತಿಯನ್ನು ವಿವರಿಸಿರುವ ಮಾಹಿತಿಯಿದೆ.

**ನ್ಯಾಯಾಧೀಶ ಸಂತೋಷ್ ಹೆಗ್ಡೆ** (೨೦೧೧) ಅವರ **ಮೈನಿಂಗ್ ಇನ್ ಬಳ್ಳಾರಿ–ಎ ಪಾಲಿಸಿ ಅನಲೀಸಸ್** ಎಂಬ ಲೋಕಾಯುಕ್ತ ದ್ವಿತೀಯಾ ವರದಿಯಲ್ಲಿ ಕರ್ನಾಟಕದ ಬಳ್ಳಾರಿ ಪ್ರದೇಶದಲ್ಲಿ ಕಬ್ಬಿಣ ಅದಿರು ಗಣಿಗಾರಿಕೆಯ ಉದ್ಯಮದ ಇತಿಹಾಸವನ್ನು ಪರಿಶೋಧಿಸಿದ್ದಾರೆ. ರಾಜ್ಯದಲ್ಲಿ ನಡೆಯುತ್ತಿರುವ ಕಳೆದ ಎರಡು ದಶಕಗಳಿಂದ ಕಳಪೆ ನೀತಿಗಳು ಮತ್ತು ರಾಜಕೀಯ ಒತ್ತಡಗಳ ಬಗ್ಗೆ ತೆರೆದ ಸತ್ಯವನ್ನು ವಿಶ್ಲೇಷಿಸುತ್ತಾ ರಾಜ್ಯದಲ್ಲಿ ಇಂದು, ಮುಂದೆ ಗಣಿಗಾರಿಕೆಯ ನೀತಿ ನಿರ್ಧಾರಗಳನ್ನು ಪರಿಶೀಲಿಸುವುದರ ಜೊತೆಗೆ ದೊಡ್ಡ ಪ್ರಮಾಣದ ಕಬ್ಬಿಣ ಅದಿರಿನ ಕಳ್ಳತನದ ಅವಕಾಶ ನೀತಿಯ ಅಂತರ ಭವಿಷ್ಯದಲ್ಲಿ ಹೇಗೆ ತಪ್ಪಿಸಬೇಕು ಎಂಬ ಸಲಹೆಯನ್ನು ಸೂಚಿಸಿದ್ದಾರೆ. ಭಾರತೀಯ ಗಣಿಗಾರಿಕೆ ೨೦೦೫ರ ಪ್ರಕಾರ ಕರ್ನಾಟಕದಲ್ಲಿ ೨೬೬ ಕಬ್ಬಿಣದ ಅದಿರಿನ ಗಣಿಗಳಿವೆ. ಅದರಲ್ಲಿ ೧೩೪ ಗಣಿಗಳು ಅರಣ್ಯ ಪ್ರದೇಶಗಳಲ್ಲಿ ನೆಲೆಗೊಂಡಿವೆ. ಬಳ್ಳಾರಿಯಲ್ಲಿ ೧೪೮ ಗಣಿಗಳಿದ್ದು, ಅದರಲ್ಲಿ ೯೮ ಗಣಿಗಳು ಅರಣ್ಯ ಪ್ರದೇಶದಲ್ಲಿ ನೆಲೆಗೊಂಡಿದೆ ಎಂದು ಅಂದಾಜಿಸಿದ್ದಾರೆ. ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಪ್ರಕಾರ ಗಣಿಯಿಂದ ಅಕ್ರಮ ಭೂಮಿ, ಅರಣ್ಯ ಪ್ರದೇಶಗಳ ಅತಿ ಆಕ್ರಮಣ, ಬೇನಾಮಿ ವ್ಯವಹಾರ ಮೇಲೆ ತಾತ್ಕಾಲಿಕ ಸಾರಿಗೆ ಪರವಾನಿಗೆ ಮುಂತಾದ ಅಂಶಗಳ ಮೇಲೆ ವಿಫುಲವಾದ ಹಾನಿಯನ್ನು ಒಡ್ಡಿದೆ. ಇದರಿಂದ ಪರಿಸರ ಮತ್ತು ಮಾನವ ಸಮುದಾಯಗಳ ಮೇಲೆ ಪರಿಣಾಮ ಬೀರಿದೆ ಎಂದು ವರದಿಯ ಮೂಲಕ ವ್ಯಕ್ತಪಡಿಸಿದ್ದಾರೆ.

**ಆದ್ಯ ವೆಂಕಟೇಶ** (೨೦೧೧) ಅವರು **ಅಕ್ರಮ ಗಣಿಗಾರಿಕೆಯ ಬಗ್ಗೆ ಲೋಕಯುಕ್ತ ತನಿಖಾ ವರದಿ** ಎಂಬ ಕೃತಿಯಲ್ಲಿ ಇತ್ತಿಚೇಗಿನ ಮೂರು–ನಾಲ್ಕು ವರ್ಷಗಳಲ್ಲಿ ಕಬ್ಬಿಣದ ಅದಿರಿನ ಅಂತರಾಷ್ಟ್ರೀಯ ಬೆಲೆಯು ಗಗನಕ್ಕೇರಿದರಿಂದ ಕರ್ನಾಟಕದ ಬಳ್ಳಾರಿ, ಚಿತ್ರದುರ್ಗದಲ್ಲಿ ಕಬ್ಬಿಣದ ಅದಿರಿನ ಉತ್ಪಾದನೆಯಲ್ಲಿ ಏರುಪೇರಾಗಿದೆ. ೨೦೦೦–೦೨ ರಿಂದ ೨೦೧೦ವರೆಗೆ ಕರ್ನಾಟಕದಲ್ಲಿ ನಡೆದ ಅಕ್ರಮ ಗಣಿಗಾರಿಕೆ ಕುರಿತು, ಕಬ್ಬಿಣ ಅದಿರಿನ ಅವ್ಯವಹಾರ ರಫ್ತು, ಸಂಡೂರು ತಾಲ್ಲೂಕಿನ ರಾಮಘಡದ ಅರಣ್ಯ ಪ್ರದೇಶದಲ್ಲಿ ನಡೆಸಿದ ಅಕ್ರಮ ಗಣಿಗಾರಿಕೆ ಕುರಿತು ವಿವರಿಸಿದ್ದಾರೆ.

**ಗ್ಲೋಬಲ್ ಎನ್ವಾರನ್ಮೆಂಟಲ್ ರಿಸರ್ಚ್ ಲ್ಯಾಬ್** (೨೦೦೯)ರಲ್ಲಿ **ಪ್ರಸ್ತಾಪಿತ ಕಬ್ಬಿಣದ ಅದಿರಿನ ಹೆಚ್ಚುವರಿ ಉತ್ಪಾದನೆಯಿಂದ ಪರಿಸರದ ಮೇಲಾಗುವ ಪರಿಣಾಮ** ಎಂಬ ಅಧ್ಯಯನದ ವರದಿಯಲ್ಲಿ ಗಣಿಗಾರಿಕೆಯ ಸಂಡೂರು ತಾಲ್ಲೂಕಿನ ದೇವಗಿರಿ ಸುಬ್ಬರಾಯನಹಳ್ಳಿ, ರಾಮಘಡ ಮತ್ತು ಕಮ್ಮತೂರು ಗ್ರಾಮಗಳ ಜನರ ಬದುಕಿನ ಮೇಲೆ ಬೀರಿರುವ ಪರಿಸರದ ಅಸಮತೋಲನವನ್ನು ವಿವರಿಸುತ್ತದೆ. ಪರಿಸರದ ಪರಿಣಾಮ ಜನರ ಬದುಕನ್ನು ನರಕ ಸದೃಶ್ಯವನ್ನಾಗಿಸಿ ಕೃಷಿಯನ್ನು ಕುಂಠಿತಗೊಳಿಸಿದ್ದು, ಅರಣ್ಯ ಪ್ರದೇಶವನ್ನು ಸಂಪೂರ್ಣವಾಗಿ ನಾಶಮಾಡಿದೆ. ಜಲ, ವಾಯು ಮತ್ತು ಶಬ್ದ ಮಾಲಿನ್ಯವು ಜನರ ಆರೋಗ್ಯವನ್ನು ಹದಗೆಡಿಸಿದೆ ಎಂದು ಪ್ರಸ್ತಾಪ ಮಾಡಿದೆ.

**ಸ್ಟಿವನ್.ಸಿ.ಡೇಲರ್ ಅಂಡ್ ಆಂಡ್ರೋ ಸ್ಟಬೇರ್** (೨೦೧೨) ಅವರ **ಪ್ಯಾಕ್ ಸೌಂಡ್ ಮೈನಿಂಗ್ ಅಂಡ್ ಕಮ್ಯೂನಿಟಿ ಎಕನಾಮಿಕ್ ಡೆವೆಲಪ್‌ಮೆಂಟ್** ಎಂಬ ಲೇಖನದಲ್ಲಿ ಗಣಿಗಾರಿಕೆಗೆ ಸಂಬಂಧಿಸಿದಂತೆ ಆರ್ಥಿಕ ಪರಿಣಾಮ ಗಣಿ ಕಂಪನಿಗಳ ಮಾಲಿಕತ್ವದ ರಚನೆ, ಸಂಪನ್ಮೂಲಗಳ ದುರ್ಬಳಕೆ,

ಗಣಿಗಾರಿಕೆಯಲ್ಲಿ ಮೇಲಾಗುವ ಧನಾತ್ಮಕ–ಚಲನಾತ್ಮಕ ಪರಿಣಾಮಗಳು ಸಮುದಾಯದ ಮೇಲಾಗುವ ಉದ್ಯೋಗ, ಆದಾಯ, ಉತ್ಪನ್ನ, ಪರಿಸರ ಇತ್ಯಾದಿ ಅಂಶಗಳ ಕುರಿತು ಚರ್ಚಿಸಿದ್ದಾರೆ. ಈ ಮೇಲಿನ ಎಲ್ಲ ಅಂಶಗಳನ್ನು ಪರಿಗಣಿಸಿ ಕೆಲವೊಂದು ಪ್ರಮುಖ ಸಮಸ್ಯೆಗಳನ್ನು ಗುರುತಿಸಿದ್ದಾರೆ. ಗಣಿಗಾರಿಕೆ ಪ್ರದೇಶದಲ್ಲಿ ತೊಡಗಿರುವ ಕಾರ್ಮಿಕರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸಾಧ್ಯವಾಗಿದೆಯೇ? ಮುಚ್ಚಿದ ಗಣಿಗಾರಿಕೆಯ ಪ್ರದೇಶದ ಸಮುದಾಯಗಳಿಗೆ ಹೊಂದಿಕೊಳ್ಳುವ ಕಾರ್ಯ ತಂತ್ರಗಳನ್ನು ಅನುಷ್ಠಾನ ತರಲಾಗುತ್ತಿದೆಯೇ? ಎನ್ನುವ ಸಮಸ್ಯೆಗಳನ್ನು ಗುರುತಿಸಿ ಕಳೆದ ವರ್ಷದ ಆರ್ಥಿಕ ಹಿಂಜರಿತದಿಂದ ಆರ್ಥಿಕ ಬಿಕ್ಕಟ್ಟು ಸಂಭವಿಸಲು ಗಣಿಗಾರಿಕೆಯ ಸಕ್ರೀಯವಾದ ಚಟುವಟಿಕೆಯೆ ಕಾರಣವಾಗಿದೆ. ಗಣಿಗಾರಿಕೆ ಚಟುವಟಿಕೆಯು ಆರ್ಥಿಕ ಬೆಳವಣಿಗೆ ಮತ್ತು ಸ್ಥಿರತೆಯ ಮೇಲಾಗುವ ಪಾತ್ರವನ್ನು ಪರಿಶೀಲಿಸುವುದರ ಮೂಲಕ ಗಣಿ ಜನಸಮುದಾಯದ ವಿವಿಧ ಆರ್ಥಿಕ ಆಯಾಮಗಳ ಕುರಿತು ಚರ್ಚಿಸಿದ್ದಾರೆ. ಈ ಲೇಖನದಲ್ಲಿ ಸಮಾಜಶಾಸ್ತ್ರಜ್ಞರು, ಗಣಿಗಾರಿಕೆ ನಡೆಯುವ ಸುತ್ತಮುತ್ತಲಿರುವ ಸಮುದಾಯಗಳ ಅಸ್ಥಿರತೆ ಮತ್ತು ಸರಕು, ಬೆಲೆಗಳ ಚಂಚಲತೆಯ ನಡುವೆ ಇರುವ ಅಂತರ್ಗತವನ್ನು ಹೈಲೇಟ್ ಮಾಡಿದ್ದಾರೆ. ಪ್ರೆಡನ್ ಬರ್ಗ್ ಅವರು ೧೯೯೨ರಲ್ಲಿ ವಿಶ್ವದ ಸ್ಥಳೀಯ ಅರ್ಥಿಕ ಬೆಳವಣಿಗೆ ಮತ್ತು ಸರಕು ಸೇವೆಗಳ ಬೆಲೆಯಲ್ಲಿನ ಪ್ರವೃತ್ತಿಯ ಇಳಿಕೆಯಾಗಿರುವ ಸಂಗತಿಗಳ ಬಗ್ಗೆ ವಿವರಿಸಿದ್ದಾರೆ. ಒಟ್ಟಾರೆ ಈ ಲೇಖನದಲ್ಲಿ ಕಂಡು ಬಂದಿರುವ ತೀರ್ಮಾನವೆಂದರೆ ಗಣಿಗಾರಿಕೆ ಚಟುವಟಿಕೆಯು ಸ್ಥಳೀಯ ಸಮುದಾಯದ ಯೋಗಕ್ಷೇಮಗಳ ಮೇಲೆ ಬೆಳಕು ಹರಿಸಲು ಪ್ರಯತ್ನಿಸಿದ್ದಾರೆ. ವಿವರಣಾತ್ಮಕ ವಿಶ್ಲೇಷಣೆ ಮತ್ತು ಸಂಖ್ಯಾಶಾಸ್ತ್ರ ವಿಧಾನವನ್ನು ಬಳಸಿಕೊಂಡಿದ್ದಾರೆ. ಗಣಿಗಾರಿಕೆಯಲ್ಲಿ ಆರ್ಥಿಕತೆ ಅವಲಂಬನೆಯನ್ನು ಹೇಗೆ ಅಳೆಯುವುದು ಎಂಬ ಪ್ರಮುಖ ನಿರ್ಣಯಗಳಿಗೆ ಸಾಕಷ್ಟು ಸ್ಥಿರತೆಯನ್ನು ಒದಗಿಸಿರುವ ಮಾಹಿತಿಯನ್ನು ಸ್ಪಷ್ಟಪಡಿಸಿದ್ದಾರೆ.

**ಇಯಾನ್ ರುಂಗೊ (೨೦೧೨) ಮೈನಿಂಗ್ ಅರ್ಥಶಾಸ್ತ್ರ** ಎಂಬ ಲೇಖನದಲ್ಲಿ ಗಣಿಗಾರಿಕೆ ಅರ್ಥಶಾಸ್ತ್ರ ಮತ್ತು ಇದರ ಪರಿಣಾಮಗಳೇನು? ಎಂಬುವುದರ ಕುರಿತು ಅಧ್ಯಯನ ಮಾಡುವ ಆಶಯವನ್ನು ಹೊಂದಿದೆ. ಗಣಿಗಾರಿಕೆಯ ಬಗ್ಗೆ ಬೇರೆ ಏನು? ಗಣಿಗಾರಿಕೆಯ ಪರಿಸರದಲ್ಲಿ ಹೊಸ ಆರ್ಥಿಕತೆಯನ್ನು ಹೇಗೆ ವಿಭಿನ್ನವಾಗಿಸಬೇಕು ಎಂಬ ಎರಡು ಪ್ರಶ್ನೆಯನ್ನು ಎತ್ತುವುದರ ಮೂಲಕ ಚರ್ಚೆಗೆ ಒಳಪಡಿಸಿದ್ದಾರೆ. ಅರ್ಥಶಾಸ್ತ್ರದಲ್ಲಿ ಗಣಿಗಾರಿಕೆಯು ಒಂದು ರೂಪ ನಿಷ್ಪತ್ತಿಯಾಗಿದೆ. ಗಣಿಗಾರಿಕೆಯ ಉತ್ಪಾದನೆಯಲ್ಲಿ ಸರಕುಗಳ ಬೆಲೆಯ ಬೇಡಿಕೆ ಮತ್ತು ಪೂರೈಕೆ ಕಳೆದುಕೊಂಡಾಗ ಅಭಿವೃದ್ಧಿ ಹೇಗೆ ಸಾಧ್ಯವಾಗುತ್ತೆ? ಎನ್ನುವ ಸಂಗತಿಯನ್ನು ಪ್ರತಿಬಿಂಬಿಸಿದ್ದಾರೆ. ಆಡಂಸ್ಮಿತ್‌ರ ಪ್ರಕಾರ ೨೩೦ ವರ್ಷಗಳ ಹಿಂದೆಯೇ ಗಣಿಗಾರಿಕೆಯಲ್ಲಿ ಆರ್ಥಿಕ ಕಳಪೆಯ ಲಕ್ಷಣವನ್ನು ದಿ ವೇಲ್ಫ್ ಆಫ್ ನೇಷನ್ಸ್ ಎಂಬ ಕೃತಿಯನ್ನು ತಿಳಿಸಿದ್ದಾರೆ. ಗಣಿಗಾರಿಕೆ ಹೂಡಿಕೆಯ ಬಗ್ಗೆ ಮತ್ತಷ್ಟು ವಿಸ್ತರಿಸಲು ಉತ್ಪಾದನಾ ಕಾರ್ಯಗಳನ್ನು ಯಾವ ರೀತಿಯಾಗಿ ಭಿನ್ನವಾಗಿಸಬೇಕು. ಪ್ರತಿ ಉದ್ಯಮ ಮೊದಲು ಬಂಡವಾಳ ನಿರ್ಧಾರಗಳ ಅನಿಶ್ಚತತೆಯನ್ನು ಎದುರಿಸುವಲ್ಲಿ ಗಣಿಗಾರಿಕೆಯ ಸ್ವರೂಪದ ವೈಪರಿತ್ಯಗಳ ಕುರಿತು ಚರ್ಚಿಸಿ ಒಟ್ಟಾರೆಯಾಗಿ ಆರ್ಥಿಕ ದೃಷ್ಟಿಕೋನವನ್ನಿಟ್ಟುಕೊಂಡು ಈ ಲೇಖನವನ್ನು ರಚಿಸಿದ್ದಾರೆ. ಗಣಿಗಾರಿಕೆಯಲ್ಲಾಗುವ ಉತ್ಪಾದನೆ ಹೂಡಿಕೆಯ ಕಾರ್ಯ, ಗಣಿ ಯೋಜನೆಯ ಆದ್ಯತೆ ಪರಿಸರದಲ್ಲಾಗುವ ಅಸಮತೋಲನ ಕುರಿತಾಗಿರುವ ಸವಾಲುಗಳನ್ನು ವ್ಯಕ್ತಪಡಿಸಿದ್ದಾರೆ.

**ಸಂಬವನ ಸಂಸ್ಥೆ (೨೦೧೨)** ಏರ್ಪಡಿಸಿರುವ **ಒವರ್ ರಿವ್ಯೂವ್ ಆಫ್ ಮೈನಿಂಗ್ ಇನ್ ಇಂಡಿಯಾ** ಎಂಬ ಡಿಸೆಂಬರ್ ೧೪, ೧೬ ೨೦೧೪ ರಂದು ಎರಡು ದಿನದ ಗಣಿಗಾರಿಕೆಯ ಕಾರ್ಯಗಾರವನ್ನು ಗೋವಾದ ಪೌಂಡೇಷನ್ ಪ್ರತಿನಿಧಿಸಿರುವ ವರದಿಯೊಂದರಲ್ಲಿ ಪ್ರಸ್ತಾಪಿಸಲಾಗಿದೆ. ಈ ಕಾರ್ಯಗಾರವು ಗೋವಾದ ಗಣಿಗಾರಿಕೆಯ ದೃಷ್ಟಿಕೋನವನ್ನು ಇಟ್ಟುಕೊಂಡು ಗಣಿಗೆ ಸಂಬಂಧಿಸಿದ ವಿಚಾರಗಳನ್ನು ಪರಿಚಯಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಗೋವಾದಲ್ಲಿ ೨೦ ವರ್ಷಗಳವರೆಗೂ ನಡೆದಿರುವ ಗಣಿಗಾರಿಕೆಯ ಸಮಸ್ಯೆಗಳ ವಾದ ವಿವಾದಗಳನ್ನು ಚರ್ಚಿಸಿದ್ದಾರೆ. ಕರ್ನಾಟಕ, ಗೋವಾ ಮತ್ತು ಒರಿಸ್ಸಾದಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ಸಮಸ್ಯೆಯನ್ನು ಗುರುತಿಸಿ ಅದರ ಬಗ್ಗೆ ಈ ಕಾರ್ಯಗಾರದಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ. ಖನಿಜ ಸಂಪನ್ಮೂಲಗಳ ಅಪರಿಮಿತ ಬಳಕೆ ಮತ್ತು ಶೋಷಣೆ, ಅರಣ್ಯನಾಶ, ಪರಿಸರ ಮಾಲಿನ್ಯತೆಯಿಂದ ಗ್ರಾಮೀಣ ಬುಡಕಟ್ಟು ಸಮುದಾಯಗಳ

ವಿನಾಶ, ಸಂಪನ್ಮೂಗಳನ್ನು ದೊಡ್ಡ ಪ್ರಮಾಣದಲ್ಲಿ ಸ್ಥಳಾಂತರಿಸುವಾ ಆಗುವ ಸಮಸ್ಯೆ, ಗರಿಷ್ಠ ಲಾಭ ಇತ್ಯಾದಿ ಅಂಶಗಳ ಕುರಿತು ಚರ್ಚಸುವುದು ಸ್ಪಷ್ಟಪಡಿಸಿದ್ದಾರೆ.

**ಶಾಂತ.ಎ.ತಿಮ್ಮಯ್ಯ ಮತ್ತಿತರು (೨೦೧೨)** ಅವರ **ಆನ್ ಎಕನಾಮಿಕ್ಸ್ ಅನಾಲಿಸಿಸ್ ಆಫ್ ಎನ್ವಾರನ್ಮೆಂಟ್ ಪೊಲ್ಯೂಷನ್ ಅಂಡ್ ಹೆಲ್ಥ್, ಎ.ಕೇಸ್ ಸ್ಟಡಿ ಆಫ್ ಬಳ್ಳಾರಿ ಹೊಸಪೇಟೆ ಸೆಕ್ಟರ್** ಎಂಬ ಲೇಖನದಲ್ಲಿ ಆರ್ಥಿಕ ಮತ್ತು ಪರಿಸರದ ಅಂಶಕ್ಕೆ ಸಂಬಂಧಿಸಿದಂತೆ ಅನೇಕ ಸಂಕಿರಣ ವಿಷಯಗಳ ಕುರಿತು ಚರ್ಚಿಸಿದ್ದಾರೆ. ಈ ಅಧ್ಯಯನವು ಗಣಿಗಾರಿಕೆ ಚಟುವಟಿಕೆಯು ಸಾಮಾಜಿಕ, ಆರ್ಥಿಕ ಪ್ರಭಾವವನ್ನು ಮೌಲ್ಯಮಾಪನ ಮಾಡುವ ಮೂಲಕ ಗುರುತಿಸುವ ಆಶಯ ಹೊಂದಿದೆ. ಗಣಿ ಚಟುವಟಿಕೆಯು ಸಾಮಾಜಿಕ, ಆರ್ಥಿಕತೆಯ ಮೇಲೆ ಬೀರಿರುವ ಪರಿಣಾಮಗಳ ವಿಶ್ಲೇಷಣೆ ಮಾಡಿ, ಪ್ರಮುಖವಾಗಿ ಕಂಡು ಬರುವ ಸಮಸ್ಯೆಯನ್ನು ಗುರುತಿಸಿದ್ದಾರೆ. ೧) ಗಣಿ ಪ್ರದೇಶದಲ್ಲಿರುವ ಜನರಿಗೆ ಆರ್ಥಿಕವಾಗಿ ತೊಂದರೆಗಳಾಗಿರುವುದು ಹೊರೆಯಾಗಿದೆ. ೨) ಗಣಿಯಲ್ಲಿ ತೊಡಗಿರುವ ಕೆಲಸಗಾರರು ಧೂಳು, ಅಲರ್ಜಿ, ಚರ್ಮ ಅಲರ್ಜಿಯಿಂದ ಬಳಲುತ್ತಿದ್ದಾರೆ. ಇದರಿಂದ ಅನಾರೋಗ್ಯ ಅಧಿಕವಾಗಿದೆ ಎಂದು ವ್ಯಕ್ತಪಡಿಸಿದ್ದಾರೆ. ಈ ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಆಯ್ಕೆ ಮಾಡಿಕೊಂಡ ಹೊಸಪೇಟೆ ಮತ್ತು ಸಂಡೂರು ತಾಲ್ಲೂಕುಗಳು ಉತ್ತರ ಆಕ್ಷಾಂಶ ೧೪೦೫೫-೧೫೦೨೦ ಮತ್ತು ಪೂರ್ವ ರೇಖಾಂಶ ೭೬೦೨೦-೭೬೦೫೫ರ ಮಧ್ಯೆ ಕಂಡು ಬರುತ್ತದೆ ಎಂದು ತಿಳಿಸಿದ್ದಾರೆ. ಪ್ರಾಥಮಿಕ ಮಾಹಿತಿಯನ್ನು ಪ್ರಶ್ನಾವಳಿಯ ಮೂಲಕ ದ್ವಿತೀಯ ಮಾಹಿತಿಯನ್ನು ಆರೋಗ್ಯ ದಶಮಾಂಶ ಆಸ್ಪತ್ರೆಯಲ್ಲಿ ಸಂಗ್ರಹಿಸಿದ್ದಾರೆ. ಗಣಿಗಾರಿಕೆಯಲ್ಲಿ ಕಬ್ಬಿಣ ಅದಿರು ಒಂದು ಲೋಹಧಾತುವಾಗಿದ್ದು, ಇದರ ಕಾರ್ಯಾಚರಣೆ ಪ್ರಾದೇಶಿಕ ಮೇಲ್ಮೈ ನೀರಿನ ವಾತಾವರಣ, ಮಣ್ಣಿನ ಮೇಲೆ ಬೀರುವ ಪರಿಣಾಮಗಳು ಮಾಲಿನ್ಯಕ್ಕೆ ಕಾರಣವಾಗಿದೆ. ಈ ರೀತಿಯ ಮಾಲಿನ್ಯವು ಅಸ್ತಮಾ, ಉಸಿರಾಟ ತೊಂದರೆ, ಸೊಂಕು ಮುಂತಾದ ರೋಗ ಹರಡಿ ಆರೋಗ್ಯದ ಮೇಲೆ ಅಪಾಯಕಾರಿ ಪರಿಣಾಮವಾಗಿದೆ ಎಂಬ ಫಲಿತಗಳನ್ನು ವ್ಯಕ್ತಪಡಿಸಿದ್ದಾರೆ. ವಾಯು ಮಾಲಿನ್ಯದಿಂದಾಗಿ ಅನಾರೋಗ್ಯದ ಸ್ಥಿತಿಗಳ ಶೇಕಡವಾರು ಜೈಸಿಂಗ್‌ಪುರ, ಪಿ.ಕೆ.ಹಳ್ಳಿ, ಜೋಗ, ಸಿದ್ಧಪುರ ಹಳ್ಳಿಗಳಲ್ಲಿ ಅಸ್ತಮಾ, ಡಸ್ಟ್ ಅಲರ್ಜಿ, ಉಸಿರಾಟ ತೊಂದರೆ, ಸ್ಕಿನ್ ಅಲರ್ಜಿಯ ರೋಗಗಳು ಹರಡಿದೆ. ಜೈಸಿಂಗ್‌ಪುರದಲ್ಲಿ ಅಸ್ತಮಾ ಶೇ.೧೦ರಷ್ಟು, ಡಸ್ಟ್ ಅಲರ್ಜಿ ಶೇ.೩೩ರಷ್ಟು, ಉಸಿರಾಟದ ತೊಂದರೆ ಶೇ.೦೩ರಷ್ಟು, ಸ್ಕಿನ್ ಅಲರ್ಜಿ ಶೇ.೨೭ರಷ್ಟಿದೆ, ಪಿ.ಕೆ.ಹಳ್ಳಿಯಲ್ಲಿ ಅಸ್ತಮಾ ಶೇ.೧೩ರಷ್ಟು, ಡಸ್ಟ್ ಅಲರ್ಜಿ ಶೇ.೪೩ರಷ್ಟು ಉಸಿರಾಟದ ತೊಂದರೆ ೦ರಷ್ಟು, ಸ್ಕಿನ್ ಅಲರ್ಜಿ ಶೇ.೧೭ ರಷ್ಟಿದೆ. ಜೋಗದಲ್ಲಿ ಗ್ರಾಮದಲ್ಲಿ ಅಸ್ತಮಾ ಶೇ.೨೭, ಡಸ್ಟ್ ಅಲರ್ಜಿ ಶೇ.೨೭ರಷ್ಟು, ಉಸಿರಾಟದ ತೊಂದರೆ ಶೇ.೨೦ರಷ್ಟು, ಸ್ಕಿನ್ ಅಲರ್ಜಿ ಶೇ.೨೩ರಷ್ಟಿದೆ. ಸಿದ್ದಪುರದಲ್ಲಿ ಅಸ್ತಮಾ ಶೇ.೦೭ ರಷ್ಟು, ಉಸಿರಾಟದ ತೊಂದರೆ ಶೇ.೧೭ರಷ್ಟು, ಡಸ್ಟ್ ಅಲರ್ಜಿ ಶೇ.೦೭ರಷ್ಟು, ಸ್ಕಿನ್ ಅಲರ್ಜಿ ಶೇ.೧೩ರಷ್ಟಿದೆ ಎಂದು ತಿಳಿಸಿದ್ದಾರೆ. ಜಲ ಮಾಲಿನ್ಯದಿಂದಾಗಿ ಅನಾರೋಗ್ಯ ಸ್ಥಿತಿಯು ಮೇಲಿನ ನಾಲ್ಕು ಹಳ್ಳಿಗಳಲ್ಲಿ ಮಲೇರಿಯಾ, ಕಾಮಾಲೆ, ಜಠರ ಕರಳಿನ, ನಿರ್ಜಲಿಕರಣ ರೋಗಗಳು ಹರಡಿದೆಂದು ಸಾದರಪಡಿಸಿದ್ದಾರೆ.

**ಮರಿನಾ ವೆಟ್ಟಲ್ ಮೇಯರ್ (೨೦೧೨)** ಅವರು **ಕಲ್ಚರ್ ಇಂಫ್ಯಾಕ್ಟ್ ಆಫ್ ಮೈನಿಂಗ್ ಇನ್ ಇಂಡಿಜಿನಸ್ ಪೀಪಲ್ಸ್ ಆನ್‌ಸ್ಟ್ರೇಲ್ ಡೊಮೆನ್ಸ್ ಇನ್ ದಿ ಫಿಲಿಫೈನ್ಸ್** ಎಂಬ ಲೇಖದನಲ್ಲಿ ಫಿಲೇಕ್ಸ್ ಮೈನಿಂಗ್ ಪ್ರಕಾರ ಬೃಹತ್ ಪ್ರಮಾಣದ ಗಣಿಗಾರಿಕೆಯಲ್ಲಿ ದುಡಿಯುತ್ತಿರುವ ಸ್ಥಳೀಯರು ಸಮಾಜದ ಅಂಚಿನಲ್ಲಿ ಬದುಕುವ ದುರ್ಬಲ ವಲಯಕ್ಕೆ ಸೇರಿದವರಾಗಿದ್ದಾರೆ. ಸಮಾಜದ ಬುಡಕಟ್ಟು ಜನರ ಜಮೀನುಗಳ ಮತ್ತು ಅವರ ಜೀವನಾಂಶಕ್ಕೆ ಹಾನಿಯನ್ನು ಗಣಿಗಾರಿಕೆ ಒಡ್ಡುತ್ತಿದ್ದೆ ಎಂದು ಹೇಳಿದ್ದಾರೆ. ಫಿಲಿಫೈನ್ಸ್‌ನ ಗಣಿಗಾರಿಕೆಯು ಡೊಮೈನ್ಸ್ ಮನೆತನದವರು ಶೇ ೬೦ರಷ್ಟು ಪ್ರಮಾಣದ ಗಣಿಗಾರಿಕೆಯನ್ನು ನಡೆಸಿದ್ದಾರೆ. ಇದರ ಪರಿಣಾಮವಾಗಿ ಸಮುದಾಯಗಳ ಸ್ಥಳಾಂತರಗೊಳಿಸುವಾಗ ನಿರಂಕುಶ ಬಂಧನ, ಶೋಷಣೆ ಇತ್ಯಾದಿ ಕೃತ್ಯಗಳು ನಡೆದಿವೆ ಎಂದು ಉಲ್ಲೇಖಿಸಿದ್ದಾರೆ. ಸ್ಥಳೀಯ ಸಮುದಾಯದ ಮೇಲೆ ಗಣಿಗಾರಿಕೆಯ ಪ್ರಭಾವವನ್ನು ಅರಿಯಲು ಉತ್ತರ ಲುಜಾನ್ ಮತ್ತು ಮಿಂಡನೋವ ಎನ್ನುವ ೨ ಪ್ರದೇಶಗಳನ್ನು ಪ್ರಾಜೆಕ್ಟ್ ಪ್ರಾಂತ್ಯವಾಗಿ ಆಯ್ಕೆ ಮಾಡಿಕೊಂಡಿದ್ದಾರೆ.

ಮುಖ್ಯವಾಗಿ ಫಿಲಿಫೈನ್ಸ್ ಗಣಿಗಾರಿಕೆ ಮತ್ತು ಮಾನವ ಹಕ್ಕುಗಳ ಸಂಬಂಧದ ವಿವಿಧ ಸವಾಲುಗಳನ್ನು ಅರಿತುಕೊಳ್ಳುವುದು ಇದರ ಮುಖ್ಯ ಉದ್ದೇಶವಾಗಿದೆ. ಪ್ರಾಥಮಿಕ ಮಾಹಿತಿಯನ್ನು ಸ್ಥಳೀಯ ಸಂಘಟನೆ ಮತ್ತು ಸರ್ಕಾರಿ ಅಧಿಕಾರಿಗಳ ಮೂಲಕ ಸಂಗ್ರಹಿಸಿದ್ದಾರೆ. ದ್ವಿತೀಯ ಮಾಹಿತಿಯನ್ನು ಪತ್ರಿಕಾ ಲೇಖನದ ಮೂಲಕ ಸಂಗ್ರಹಿಸಿ ವಿವರಿಸಿದ್ದಾರೆ. ಫಿಲಿಫೈನ್ಸ್ ಗಣಿಗಾರಿಕೆಯಲ್ಲಿ ಯಾಂತ್ರೀಕೃತ ಯೋಜನೆ ಮತ್ತು ವಾಣಿಜ್ಯ ವಹಿವಾಟುಗಳಿಂದ ೮ ಹಳ್ಳಿಗಳ ಮೇಲೆ ನಿಯಂತ್ರಣವನ್ನು ಹೊಂದಿದೆ. ಐಟಿಂಟಿಂಚಿಟಿ ಬೃಹತ್ ಗಣಿಗಾರಿಕೆಯನ್ನು ತೀವ್ರವಾಗಿ ವಿರೋಧಿಸಿ ಸಣ್ಣ ಪ್ರಮಾಣದ ಗಣಿಗಾರಿಕೆ ಚಾಲ್ತಿಗೆ ಬಂದಾಗ, ಸಮುದಾಯಗಳ ಸಾಮಾಜಿಕ–ಆರ್ಥಿಕ ಆಯಾಮಗಳಾದ ಮನೆ, ಜಮೀನು, ಸಾಂಸ್ಕೃತಿಕ ಅನನ್ಯತೆಯ ಕಷ್ಟಗಳು ಇತ್ಯಾದಿ ಸಮಸ್ಯೆಗಳು ಗ್ರಾಮೀಣ ಪ್ರದೇಶದಲ್ಲಿ ಎದುರಾದವು. ಇದರಿಂದ ಕೃಷಿ ಕುಂಠಿತಗೊಂಡು ಇಳುವರಿ ಪ್ರಮಾಣ ಕಡಿಮೆಯಾಗಲು ಗಣಿಗಾರಿಕೆ ಪ್ರಕ್ರಿಯೆಯೇ ಕಾರಣವಾಗಿದೆ ಎಂದು ತಿಳಿಸಿದ್ದಾರೆ.

**ಚಂದ್ರಶೇಖರ್ ಟಿ.ಆರ್.** (೨೦೧೩) ಅವರ **ಕರ್ನಾಟಕದ ಹೊಸ ಸರ್ಕಾರದ ಮುಂದಿರುವ ಸವಾಲುಗಳು** ಎಂಬ ಕಿರು ಹೊತ್ತಿಗೆಯಲ್ಲಿ ಇತ್ತೀಚೇಗೆ ಕರ್ನಾಟಕದಲ್ಲಿ ರಾಜಕೀಯ ಅಧಿಕಾರ ಪಡೆದಿರುವ ಪಕ್ಷಗಳು ಪ್ರಮುಖವಾಗಿ ಅಭಿವೃದ್ಧಿಗೆ ಪೂರಕವಾಗಿರುವ ಸವಾಲುಗಳನ್ನು ಗುರುತಿಸಿ ಜನರು ಆ ಸವಾಲುಗಳನ್ನು ಹೇಗೆ ನಿರ್ವಹಿಸಬೇಕು ಎನ್ನುವ ಅಂಶಗಳ ಕುರಿತು ಚರ್ಚಿಸಿರುವ ಮತ್ತು ಈ ರಾಜ್ಯದಲ್ಲಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆ, ಕೃಷಿ ಬಿಕ್ಕಟ್ಟು, ನೈಸರ್ಗಿಕ ಸಂಪನ್ಮೂಲಗಳು ದರೋಡೆಯಾಗುತ್ತಿರುವ ಸಮಸ್ಯೆಯನ್ನು ಎತ್ತಿ ತೋರಿಸುವ ಉದ್ದೇಶವನ್ನು ಹೊಂದಿದೆ. ಸಂಪನ್ಮೂಲಗಳ ದರೋಡೆಗೆ ಸಂಬಂಧಿಸಿದಂತೆ ನ್ಯಾಯಧೀಶರಾದ ಸಂತೋಷ್ ಹೆಗ್ಡೆ ಅವರ ಪ್ರಕಾರ ಅಕ್ರಮ ಗಣಿಯಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಸುಮಾರು ೧,೬೦೦ ಕೋಟಿ ರೂಪಾಯಿ ಅಪಾರ ನಷ್ಟವಾಗಿದೆ. ರಾಜ್ಯದಲ್ಲಿ ೨೦೦೦–೨೦೧೨ರ ಅವಧಿಯಲ್ಲಿ ಖನಿಜ ಸಂಪನ್ಮೂಲದ ಅರಣ್ಯ ಸಂಪತ್ತು ಲೂಟಿಯಾಗಿದೆ. ಇಂತಹ ಸಮಸ್ಯೆಯನ್ನು ಗುರುತಿಸಿ ಅಕ್ರಮ ಗಣಿಗಾರಿಕೆಯನ್ನು ನಿಷೇದಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಹಾಗೆಯೇ ಸಮಾಜ ಪರಿವರ್ತನಾ ಸಮುದಾಯ ರಿಟ್ ಪಿಟೀಷನ್ ಸಂಖ್ಯೆ: ೫೬೨ (೨೦೦೬)ರಲ್ಲಿ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯ ನೈಸರ್ಗಿಕ ಸಂಪನ್ಮೂಲಗಳು ಮುಂದಿನ ತಲೆಮಾರುಗಳಿಗೆ ಸಮಾನವಾಗಿ ಹಂಚಿಕೆಯಾಗಬೇಕು. ಅವರ ಅಗತ್ಯಗಳನ್ನು ಪೂರೈಸಿಕೊಂಡು ಮುಂದಿನ ಪೀಳಿಗೆಯವರೆಗೆ ಧಕ್ಕೆ ಬರದಂತೆ ಅಭಿವೃದ್ಧಿಯನ್ನು ಸಾಧಿಸಬೇಕು. ಆಗ ಮಾತ್ರ ಸುಸ್ಥಿರ ಅಭಿವೃದ್ಧಿ ಸಾಧ್ಯವಾಗುತ್ತದೆ ಎನ್ನುವ ತೀರ್ಪು ನೀಡಿರುವುದು ಸ್ಪಷ್ಟಪಡಿಸುತ್ತದೆ. ಅದೇ ರೀತಿಯಲ್ಲೇ ಲೇಖಕರು ರಾಜ್ಯದಲ್ಲಿ ನೈಸರ್ಗಿಕ ಸಂಪನ್ಮೂಲಗಳ ದರೋಡೆಯು ಭೂಮಿ, ಅರಣ್ಯ, ನದಿ, ಪ್ರಾಣಿ, ಜಲಚರ ಮತ್ತು ವಾಯುಮಂಡಲ ಒಂದಲ್ಲ ಒಂದು ರೀತಿಯಲ್ಲಿ ಹಾನಿಗೆ ಒಳಗಾಗುತ್ತಿದೆ. ಈ ಸಂಗತಿಗಳನ್ನು ತಡೆಗಟ್ಟಲು ಸರ್ಕಾರವು ಕೆಲವೊಂದು ಸಲಹೆಯನ್ನು ಅನುಸರಿಸುವ ಅಗತ್ಯವಿದೆ ಎಂದು ಪರಿಗಣಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಖನಿಜ ಸಂಪನ್ಮೂಲಗಳ ರಫ್ತನ್ನು ನಿಷೇಧಿಸಬೇಕು. ಗಣಿಗಾರಿಕೆಯನ್ನು ಖಾಸಗಿ ವಲಯಕ್ಕೆ ಅವಕಾಶ ನೀಡಬಾರದು. ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಿಷೇಧಿಸಬೇಕು ಎನ್ನುವ ಸಲಹೆಗಳನ್ನು ಸರ್ಕಾರ ಪರಿಗಣಿಸಬೇಕು ಎಂದು ಈ ಕೃತಿಯು ಶಿಫಾರಸ್ಸು ಮಾಡಿರುವುದು ಸ್ಪಷ್ಟಪಡಿಸಿದ್ದಾರೆ.

**ಮೋತಿಲಾಲ್ ಟಾಯ್ಡೆ ಮತ್ತು ಪ್ರತಿಭ ಕರಂಡ್ಕರ್** (೨೦೧೩) ಅವರ **ರೋಲ್ ಆಫ್ ಡಾಟ ಮೈನಿಂಗ್ ಟೆಕ್ನಿಕ್ಯೂಸ್ ಇನ್ ಹೇಲ್ಥ್‌ಕೇರ್ ಸೆಕ್ಟರ್ ಇನ್ ಇಂಡಿಯಾ** ಎಂಬ ಲೇಖನದಲ್ಲಿ ಭಾರತದ ಗಣಿಗಾರಿಕೆಯಲ್ಲಿ ದತ್ತಾಂಶ ಸಂಗ್ರಹಣೆ ಮಾದರಿಯ ಯೋಜನೆಗಳ್ಳು ಅಳವಡಿಸಿ ಗಣಿಯಲ್ಲಿ ಲಭ್ಯವಿರುವ ದತ್ತಾಂಶಗಳ ಆಧಾರವಾಗಿ ಮಾಡಿಕೊಂಡು ಶಿಕ್ಷಣ ಮತ್ತು ವೈಧ್ಯಕೀಯ ಅಭಿವೃದ್ಧಿ ಪ್ರಕ್ರಿಯೆಯ ನಿರ್ವಹಣೆಯಲ್ಲಿ ಪರಿಣಾಮಕಾರಿಯಾಗಿದೆ. ಗಣಿಯಲ್ಲಿ ದತ್ತಾಂಶ ಸಾಧನಗಳು ಒಳಗೊಳ್ಳದ ಪ್ರಕ್ರಿಯೆಯು ಅಸಾಧ್ಯವಾಗಿದೆ. ಆದ್ದರಿಂದ ದತ್ತಾಂಶದಲ್ಲಿ ಸಾಮಾನ್ಯ ಸಾಧನಗಳು, ಬರವಣಿಗೆ ಸಾಧನ, ಸೃಷ್ಟಿಸುವ ಉಪಕರಣದ ಬಳಕೆಯ ಅಂಶಗಳು ಅಡಕವಾಗಿರುತ್ತದೆ ಎಂದು ಹೇಳಿದ್ದಾರೆ.

ಗಣಿಗಾರಿಕೆ ದತ್ತಾಂಶಗಳ ಮಾಹಿತಿಯನ್ನು ಸಂಘ-ಸಂಸ್ಥೆ ಮತ್ತು ಸಂದರ್ಶನ ಪದ್ಧತಿಯ ಮೂಲಕ ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ವರ್ಗಾವಣೆಯ ಮೂಲಕ ಸಮುದಾಯಿಕ ಮಾಹಿತಿ ಮೂಲಕ ಕ್ರಮಾನುಗತಿ ಮಾದರಿ ಮತ್ತು ಪೂರ್ವಸಿದ್ಧತೆಯ ನಿರ್ಣಯಗಳ ಆಧಾರದ ಮೇಲೆ ದತ್ತಾಂಶಗಳನ್ನು ವಿಶ್ಲೇಷಿಸಿದ್ದಾರೆ. ಈ ದತ್ತಾಂಶವು ಗಣಿಗಾರಿಕೆಯ ಮಾರುಕಟ್ಟೆಯ ಮೂಲಕ ಸಂಗ್ರಹಿಸಿದ ಮಾಹಿತಿ ಲಭ್ಯತೆಯಾದಾಗ ದತ್ತಾಂಶ ಸಾಧನಗಳ ಬಳಕೆ ಸಮರ್ಪಕವಾಗಿರುತ್ತದೆ. ಮೋತಿಲಾಲ್ ಅವರ ಪ್ರಕಾರ ಗಣಿಯಲ್ಲಿ ದತ್ತಾಂಶ ಸಾಧನಗಳನ್ನು ಬಳಸಿ ಅಭಿವೃದ್ಧಿ ಪಡಿಸಲು ೨ ಪದ್ಧತಿಗಳನ್ನು ಬಳಸಿದ್ದಾರೆ. ರೋಗ ನಿಧಾನ ಪರೀಕ್ಷೆ ಮತ್ತು ರೋಗ ತಡೆ ಹಿಡಿಯುವ ಕ್ರಮ ಈ ಪದ್ಧತಿಗಳನ್ನು ಗಣಿಗಾರಿಕೆಯಲ್ಲಿ ತೊಡಗಿದ ದುಡಿಮೆಗಾರರ ವರ್ಗವನ್ನು ಬಳಸಿಕೊಂಡ ಮಾಹಿತಿಯನ್ನು ಪಡೆಯಲಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಟೆರೆನ್ಸ್ ಜಾರ್ಜ್ ಮತ್ತಿತರರು (೨೦೧೩) ಅವರ ಸರ್ವೆ ಆಫ್ ಎನ್ವಾರನ್ಮೆಂಟಲ್ ಆಂಡ್ ಸೋಷಿಯೋ ಎಕನಾಮಿಕ್ ಇಂಪ್ಯಾಕ್ಟ್ ಆಫ್ ಇಷ್ಟರ್ಮ್ ಜ್ಯಾನ್ ಆನ್ ಮೈನಿಂಗ್ ಇನ್ ಗೋವಾ** ಎಂಬ ಲೇಖನದಲ್ಲಿ ೨೦೧೨ರಲ್ಲಿ ಗೋವಾದ ಗಣಿಗಾರಿಕೆಯನ್ನು ಮಧ್ಯಂತರ ನಿಷೇಧ ಮಾಡಿದಾಗ ಗಣಿ ಚಟುವಟಿಕೆಯಿಂದ ಪರಿಸರ, ಸಾಮಾಜಿಕ, ಆರ್ಥಿಕತೆಯ ಮೇಲಾದ ಪರಿಣಾಮಗಳ ಬಗ್ಗೆ ಒಂದು ಸಮೀಕ್ಷೆಯನ್ನು ಕೈಗೊಂಡ ವರದಿಯಲ್ಲಿ ಚರ್ಚಿಸಿದ್ದಾರೆ. ಈ ಸಮೀಕ್ಷೆಯ ವರದಿಯು ಗೋವಾದ ಗಣಿಗಾರಿಕೆಯ ಇತಿಹಾಸ, ಪರಿಸರ, ಆರ್ಥಿಕ, ಸಾಮಾಜಿಕ ಆಯಾಮಗಳ ಮೇಲಾಗುವ ಪ್ರಭಾವಗಳನ್ನು ವಿವರಿಸಿದ್ದಾರೆ. ಮೊದಲನೆಯ ಪರಿಕಲ್ಪನೆಯಲ್ಲಿ ಗೋವಾ ಗಣಿಗಾರಿಕೆಯ ಇತಿಹಾಸವನ್ನು ವಿವರಿಸುವಾಗ ಗೋವಾದ ಗಣಿಗಾರಿಕೆಯನ್ನು ಅಮಾನತ್ತುಗೊಳಿಸುವಲ್ಲಿ ಸರ್ಕಾರವು ೧೦.೯.೨೦೧೨ ರಂದು ಒಂದು ಪ್ರಾಥಮಿಕ ಸಮೀಕ್ಷೆಯನ್ನು ನಡೆಸುವುದರ ಸಲುವಾಗಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸಿದ್ದಾರೆ. ಗಣಿಗಾರಿಕೆಯು ಸಾಮಾಜಿಕ ಸನ್ನಿವೇಶದಲ್ಲಾಗುವ ಬದಲಾವಣೆಯನ್ನು ವಿವರಿಸಿದ್ದಾರೆ. ಪುನಾರಾಂಭದಲ್ಲಿ ಗಣಿಗಾರಿಕೆಯ ಬೇಡಿಕೆಯನ್ನು ಟ್ರಕ್ ಮಾಲೀಕರು ಹೆಚ್ಚಾಗಿ ಪ್ರತಿಭಟಿಸಿದ್ದರು. ಆಗ ಸಮಾಜದಲ್ಲಿ ಗಣಿಗಾರಿಕೆಯ ಹಾವಳಿಯಿಂದ ಗ್ರಾಮೀಣ ಪ್ರದೇಶದ ಸಂಸ್ಕೃತಿ ಮತ್ತು ಸಂಪ್ರದಾಯಗಳು ನಶಿಸಿದವು. ಸಮಾಜದ ವಿವಿಧ ಸಮುದಾಯದ ಶಾಲೆ, ಮಕ್ಕಳ ಆರೋಗ್ಯ, ಅಶಾಂತಿ, ಭ್ರಷ್ಟಾಚಾರ ಇತ್ಯಾದಿ ಅಂಶಗಳ ಮೇಲೆ ಪರಿಣಾಮಗಳಾಗಿವೆ ಎಂದು ಎರಡನೆಯ ಪರಿಕಲ್ಪನೆಯಲ್ಲಿ ಸಾದರಪಡಿಸಿದ್ದಾರೆ. ಮೂರನೆಯ ಪರಿಕಲ್ಪನೆಯಲ್ಲಿ ಆರ್ಥಿಕ ಪರಿಣಾಮಗಳ ಬಗ್ಗೆ ಚರ್ಚಿಸಿದ್ದಾರೆ. ಗಣಿಗಾರಿಕೆಯು ಸ್ಥಗಿತತೆಯ ನಂತರ ಕೃಷಿ ಇಳುವರಿಯು ಧನಾತ್ಮಕವಾಗಿತ್ತು ಆರ್ಥಿಕ ಬಿಕ್ಕಟ್ಟಿನ ವ್ಯಾಪ್ತಿಯನ್ನು ಖಚಿತಪಡಿಸುವ ಕೃಷಿ, ತೋಟಗಾರಿಕೆ, ಹೈನುಗಾರಿಕೆ ಪ್ರವಾಸೋದ್ಯಮಕ್ಕೆ ಸಂಬಂಧಿಸಿದ ಸುಧಾರಣೆಗಾಗಿ ಸೇವಾವಲಯ, ಟ್ರೇಡಿಂಗ್, ಸೆಕ್ಟರ್, ಲೀಸ್ ಮಾಲಿಕರು, ಟ್ರಕ್ ಮಾಲೀಕರು ಇತ್ಯಾದಿ ನಿಯಂತ್ರಾಂಕಗಳನ್ನು ಬಳಸಿಕೊಂಡಿದ್ದಾರೆ. ಪರಿಕಲ್ಪನೆ ನಾಲ್ಕರಲ್ಲಿ ಗಣಿಗಾರಿಕೆಯಿಂದಾಗಿ ಪರಿಸರದ ಮೇಲಾದ ಪರಿಣಾಮಗಳ ಕುರಿತು ಚರ್ಚಿಸಿದ್ದಾರೆ. ಗಣಿಗಾರಿಕೆಯ ನಿರಂತರ ಪ್ರಕ್ರಿಯೆಯು ಪರಿಸರದ ನಿಯತಾಂಶಗಳಾದ ವಾಯು, ಜಲ, ಶಬ್ದಮಾಲಿನ್ಯದಿಂದ ನದಿಗಳು, ಕೃಷಿ, ಭೂಮಿ, ಸಸ್ಯವರ್ಗ, ತೋಟಗಳ ಮೇಲೆ ಆಗಾಧವಾದ ಹಾನಿಯನ್ನುಂಟು ಮಾಡಿದೆ. ಆದರೆ ಗಣಿಗಾರಿಕೆಯ ಮಧ್ಯಂತರ ನಿಷೇಧದಿಂದ ಕಂಡು ಬಂದಿರುವ ಫಲಿತವೆಂದರೆ ಗಣಿಗಾರಿಕೆ ಗ್ರಾಮೀಣ ಪ್ರದೇಶದಲ್ಲಿ ವಾಯುಮಾಲಿನ್ಯದ ಪ್ರಮಾಣ ಕಡಿಮೆಯಾಗಿದೆ ಎಂದು ಹೇಳಿದ್ದಾರೆ. ಅದಿರು ಸಾಗಾಟ ಮಾಡುವ ವಾಹನಗಳು ಕಡಿಮೆಯಾಗಿ ಶಬ್ದ ಮಾಲಿನ್ಯ ಕಡಿಮೆಯಾಗಿದೆ. ಇದರಿಂದಾಗಿ ಕೃಷಿ ಕಾರ್ಮಿಕರು ತಮ್ಮ ಹೊಲಗದ್ದೆಗಳಲ್ಲಿ ಮೆಣಸಿನಕಾಯಿ, ಕಾಳುಗಳನ್ನು ಉಳುಮೆ ಮಾಡಿ ಬೆಳೆಯುತ್ತಿದ್ದಾರೆಂದು ಸ್ಪಷ್ಟಪಡಿಸಿದ್ದಾರೆ. ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಗಣಿಗಾರಿಕೆಯ ಪರಿಸರ ಸ್ವೇಚ್ಛಚಾರದ ವಿನಾಶಕ್ಕೆ ಕಾರಣವಾಗಿತ್ತು. ಪರಿಸರ ಪುನರುಜ್ಜೀವನಗೊಳಿಸುವ ಮಟ್ಟಿಗೆ ಗಣಿಗಾರಿಕೆ ನಿಷೇಧಕ್ಕೆ ಅನುಮತಿ ನೀಡಲಾಗಿದೆ. ಗಣಿ ನಿಷೇಧದ ಪ್ರಭಾವವನ್ನು ಪರಿಶೀಲಿಸಲು ಕ್ಷಿಪ್ರ ಸಮೀಕ್ಷೆ, ಪ್ರಾಥಮಿಕ ಸಮೀಕ್ಷೆಯಿಂದ ಗಾಳಿ, ನೀರು, ಸ್ಥಳೀಯ ಜನರ ಆಹಾರ ಉತ್ಪನ್ನಗಳ ಮೇಲೆ ಋಣಾತ್ಮಕ ಪರಿಣಾಮಗಳು ಬೀರಿದೆ ಎಂಬ ತಿರ್ಮಾನಗಳನ್ನು ವ್ಯಕ್ತಪಡಿಸಿದ್ದಾರೆ.

**ಯೂಸಫ್.ಎ.ಜಡ್ ಮತ್ತಿತರರು (೨೦೧೪) ಅವರು ಎಕ್ಸ್‌ರೇ ಫ್ಲೋರೆಸೆನ್ಸ್: ಆನ್ ಆಕ್ಸಿಸೇಬಲ್ ಅಂಡ್ ಎಫೆಕ್ಟಿವ್ ಟೆಕ್ನಿಕ್ಯೂಸ್ ಫಾರ್ ಇವ್ಯಾಲೇಷನ್ ಆಫ್ ಹಾರ್ಜಡ್ಸ್ ಅಂಡ್ ಎಕನಾಮಿಕ್ ಪೊಟೆಂಟಿಯಲ್ ಅಸೋಷಿಯೇಟೆಡ್ ವಿತ್ ಇಂಪಾರ್ಟೆಂಟ್ ಮಿನರಲ್ ಡಿಪ್ಲೆಸಿಟ್ ಇನ್ ನೈಜೀರಿಯಾ** ಎಂಬ ಲೇಖನದಲ್ಲಿ ಎಕ್ಸ್ ಕಿರಣದ ಪ್ರತಿದೀಪ್ತಿಯು ಗಣಿಗಾರಿಕೆ ಮತ್ತು ಅದಿರು ಪ್ರಕ್ರೀಯೆಗೆ ಸಂಬಂಧವಿಲ್ಲವಾದರೂ ಪರಿಸರದಲ್ಲಾಗುವ ಅಪಾಯಗಳನ್ನು ಮತ್ತು ಸ್ವಾಭಾವಿಕ ಖನಿಜಾಂಶದ ಆರ್ಥಿಕ ಸಾಮರ್ಥ್ಯವನ್ನು ಪರಿಮಾಣಾತ್ಮಕವಾಗಿ ಮೌಲ್ಯಮಾಪನ ಮಾಡುವಲ್ಲಿ ಸಹಾಯಕವಾಗಿದೆ. ನೈಜೆರಿಯಾದಲ್ಲಿ ನಡೆಯುತ್ತಿರುವ ಗಣಿಗಾರಿಕೆಯು ಭೂ ವೈಜ್ಞಾನಿಕ ಮಾದರಿಗಳನ್ನು ಬಳಸಿ ಎಕ್ಸ್-ರೆ ಶಕ್ತಿಯನ್ನು ಚದರಿಸಲು ಉಪಯೋಗಿಸಲಾಗಿತ್ತು. ನೈಜೆರಿಯಾದ ಗಣಿಗಾರಿಕೆಯಲ್ಲಿರುವ ಅಸುರಕ್ಷತೆ ಮತ್ತು ಅದಿರು ಉತ್ಪನ್ನಗಳ ನಿರಂತರ ಪ್ರಕ್ರೀಯೆಯಿಂದ ಪರಿಸರ ಮಾಲಿನ್ಯ ಉಂಟಾಗಿ ಅಲ್ಲಿಯ ಜನರ ಆರೋಗ್ಯದ ಮೇಲೆ ಗಂಭೀರವಾದ ಅಪಾಯಗಳಾಗಿವೆ. ೨೦೧೦ರಲ್ಲಿ ನೈಜೆರಿಯಾದ ಜಾಮ್ ಫಾರ್ಮ್‌ನಲ್ಲಿ ಸೀಸದ ಅದಿರನ್ನು ಹೊರ ತೆಗೆಯುವಾಗ ಅದರಲ್ಲಿ ಅಡಕವಾಗಿರುವ ವಿಷ ಪರಿಸರದಲ್ಲಿ ವಿಲೀನವಾಗಿ ೪೦೦ಕ್ಕೂ ಹೆಚ್ಚು ಮಕ್ಕಳು ಸಾವನ್ನಪ್ಪಿದ್ದಾರೆ. ಕನಿಷ್ಟ ೧೮೦ ಹಳ್ಳಿಯ ಜನರಿಗೆ ಸಂಕ್ರಾಮಿಕ ರೋಗಗಳು ಹರಡಿದೆ. ಈ ರೀತಿಯ ಪರಿಣಾಮ ಕಂಡು ಬಂದಾಗ ಎಕ್ಸ್-ರೇಯನ್ನು ಬಳಸಿ ಅಪಾಯಗಳ ತಪಾಸಣೆ, ಮೇಲ್ವಿಚಾರಣೆ ಮಾಡುವುದರ ಮೂಲಕ ಆರ್ಥಿಕ ಕ್ಷೇತ್ರದಲ್ಲಿ ಸುಧಾರಣೆ ತರಲು ಪರಿಣಾಮಕಾರಿಯಾದ ತಂತ್ರವಾಗಿದೆ. ನೈಜೆರಿಯಾದ ಗಣಿಗಾರಿಕೆಯ ಪ್ರದೇಶವನ್ನು ಭೂ ವೈಜ್ಞಾನಿಕ ಮಾದರಿಗಳ ಮೂಲಕ ವಿಶ್ಲೇಷಿಸಿ ಖನಿಜಗಳ ರಚನೆಯನ್ನು ನಿರ್ಧರಿಸುವ ಸಲುವಾಗಿ ಎಕ್ಸ್-ರೇ ಉಪಯುಕ್ತತೆಯನ್ನು ಪ್ರದರ್ಶಿಸುವುದು ಇದರ ಉದ್ದೇಶವಾಗಿದೆ. ಭೂ ವೈಜ್ಞಾನಿಕವಾಗಿ ಡಸ್ಸನ್ವಾರಿ, ಬಿರನ್ನಿಂಗ್ವಾರಿ, ಡನ್ಸಡ್ಯು, ಐಲಾಟೆರ್‌ಗಳು ಎಂಬ ನಾಲ್ಕು ಮಾದರಿಗಳನ್ನು ಬಳಸಿದ್ದಾರೆ. ಹಾಗೂ ಪ್ರಯೋಗಾತ್ಮಕ, ಸಂಖ್ಯಾಶಾಸ್ತ್ರ ವಿಧಾನವನ್ನು ಅಳವಡಿಸಿ ಭೂ ಗರ್ಭದಲ್ಲಿ ಅಡಗಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಹೊರ ತೆಯುವಾಗ ಶೇ.೬೧.೯೩ರಷ್ಟು ಕಲ್ಮಶವಿದೆ. ಭೂಮಿಯಿಂದ ಸಿಲಿಕಾ ಅದಿರನ್ನು ಹೊರ ತೆಗೆಯುವಾಗ ಶೇ.೫೨.೦೨ರಷ್ಟು ಕಲ್ಮಶವಿರುವುದು ಉಲ್ಲೇಖಿಸಿದ್ದಾರೆ.

ಹೀಗೆ ನೈಜೆರಿಯಾದ ಗಣಿಗಾರಿಕೆಯ ಅದಿರನ್ನು ಹೊರ ತೆಗೆಯಲು ಭೂ ವೈಜ್ಞಾನಿಕ ಮಾದರಿಗಳನ್ನು ಬಳಸಿದ್ದರ ಪರಿಣಾಮ ಜನ ಸಮುದಾಯದ ಪರಿಸರ ಮತ್ತು ಆರೋಗ್ಯದ ಮೇಲೆ ಬೀರುವ ಹಾನಿಯನ್ನು ಗುರುತಿಸಲು ಸಹಾಯಕಾರಿಯಾಗಿದೆ. ಭೂ ಗರ್ಭದಲ್ಲಿ ಅಡಗಿರುವ ಖನಿಜಗಳನ್ನು ಹೊರ ತೆಗೆಯುವ ಸಂದರ್ಭದಲ್ಲಿ ಗಣಿ ದುಡಿಮೆಗೆ ತೊಡಗಿರುವ ಸುತ್ತಮುತ್ತಲಿನ ಕೂಲಿ ಕಾರ್ಮಿಕರು, ಜನ ಸಾಮಾನ್ಯರು ವಾಯುಗಾಮಿ, ಶ್ವಾಸಕೋಶ, ಕ್ಯಾನ್ಸರ್ ಮುಂತಾದ ರೋಗಗಳಿಗೆ ತುತ್ತಾಗಿದ್ದಾರೆ. ಇದಕ್ಕೆ ಮೂಲ ಕಾರಣ ಅಭಿವೃದ್ಧಿ ಶೀಲ ದೇಶಗಳಲ್ಲಿ ಗಣಿಯ ಅದಿರನ್ನು ಕರಗಿಸುವ ವಿಧಾನ ಕಾರ್ಯಾಚರಣೆಯಲ್ಲಿ ಇಲ್ಲದಿರುವುದು, ಹಾಗೆಯೇ ತುಲನಾತ್ಮಕವಾದ ಗಣಿಗಾರಿಕೆಯ ಅಗಾಧ ಪ್ರಮಾಣದ ತ್ಯಾಜ್ಯಗಳು ಗಾಳಿ, ನೀರಿನಲ್ಲಿ ವಿಲೀನಗೊಂಡು ಹತ್ತಿರದ ಸಮುದಾಯಗಳ ಮೇಲೆ ಪರಿಸರ ಮಾಲಿನ್ಯ ಉಂಟಾಗಲು ಕಾರಣವಾಗಿದೆ. ವಿಶ್ವದಾದ್ಯಂತ ಗಣಿಗಾರಿಕೆಯಲ್ಲಿ ಅಸುರಕ್ಷತೆ ಕ್ರಮ ಮತ್ತು ವಿಧಾನಗಳು ಮಾನವರಿಗೆ ಅರಿವಾಗದಿರುವುದು ದೊಡ್ಡ ದುರಂತವೇ ಆಗಿದೆ. ಇದರಿಂದ ಸಾಮಾಜಿಕ ಸ್ಥಿರತೆ ಮತ್ತು ಆರ್ಥಿಕ ಅಭಿವೃದ್ಧಿ ಸಂರಕ್ಷಣೆಯನ್ನು ಹಾಳು ಮಾಡಿ, ಪರಿಸರ ಮತ್ತು ಆರೋಗ್ಯದ ವಿಪತ್ತುಗಳಿಗೆ ಪ್ರಮುಖ ಕಾರಣವಾಗಿದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಟ್ಯಂಗರ್ ಫಾರೊಜ್ ಅಹಮ್ಮದ್ ಮತ್ತಿತರರು** (೨೦೧೪) ಅವರ **Impact of mining activities on various Environmental Attributes with specific reference to health impacts in shalabaj pasam, Gwalior** In the article Mining And Metallergical activities cause greater perturbation and devastation of both terrestrial and aquatic environments which has large scale ramifications, this price of work report the findings of a study undertaken to assess the environmental impacts of the onininy activities in the shalabdi puram

mining area in Gwalior city of Madypradesh, India. In addition to assess the environmental impact of the mining activities, community perceptions about the mining activities, were also assessed to know the health effects caused by these activities. Makred environmental impacts were observed through the study in the form of air pollution, water pollution, noise pollution and their consequential effect on the health of the persons who get exposed to these pollutants. The concentration of some of the pollutants both in the air and water has reached alarminy proportions which are presently a health hazard exacerbatiny various disorders among the people. A comprehensive statargy and appropriate regulation are indispendisble to allesiate the negative impacts of the mining activities on the environment to make this practice a sustainable one extraction and processing of (make this practice a sustainable) mineral resurces plaze a pivotat role in the National economy of many developed and developing countries of the world. However varopis environmental problems caused by mineral ereploitaiton such as abandoned mines, biodiversity damage, use of hazardous chemicals with potential health risk to mine workers and neighborhood communities deserved timely attention and intervention the present study conducted at the mining industry of shatabdiperam reveled that the various mining operations have a drastic and a strong negative effects on the local environmental quality.

The concefration of various pollutants present in water and air is above the prescribed standards. Noise level created by various operations is also above the prescribed standards which has made the mining industry noisly the combined effects above environmental problems have resulted into health problems which high prevalence related with noise pollution in the local area. The need of the hour is to implemental effects caused by the mining activities in the area, adoption of sustainable technology and environmental friendly procedures can sustabantially alleviate the impacts of mining are many, not inrevitable, but rather possible to mitigate with appropriate regulation and enforcement, imposing accountability for local environmental and health quality, so that this robber industry can turn out to be a sustainable one.

**ಜಿ.ರಾಜಶೇಖರ್** (೨೦೧೪) ಅವರ **ಪರಿಸರ ರಕ್ಷಣೆ ಮತ್ತು ಸಮಾಜವಾದ** ಎಂಬ ಕೃತಿಯಲ್ಲಿ ಪರಿಸರ ಸಂರಕ್ಷಣೆ ಮತ್ತು ಸಮಾಜವಾದ ಈ ಎರಡು ಪರಿಕಲ್ಪನೆಗಳ ಹೊಂದಾಣಿಕೆಯ ನಡುವೆ ಇರುವ ಸಾಮ್ಯತೆಯ ಬಗ್ಗೆ ಚರ್ಚಿಸಿರುವ ಆಶಯ ಹೊಂದಿದೆ. ದೇಶದಲ್ಲಿ ಗಣಿ ಕೈಗಾರಿಕೆಗಳು ಭಾರಿ ಪ್ರಮಾಣದಲ್ಲಿ ತಲೆ ಎತ್ತುತ್ತಿವೆ. ಇದರ ಪರಿಣಾಮವಾಗಿ ಮನುಷ್ಯರು ನೆಲೆಸಿರುವ ವಸತಿಯ ಸಮಸ್ಯೆಗಳು ಹಾಗೂ ಪರಿಸರ ಮಾಲಿನ್ಯದಂತಹ ಸಮಸ್ಯೆಗಳನ್ನು ಉಂಟುಮಾಡಿದೆ. ಈ ಗಣಿ ಕೈಗಾರಿಕೆಗಳಿಗೆ ಖನಿಜಗಳು ಎಲ್ಲೆಲ್ಲಿ ಲಭ್ಯವಾಗಿದೆಯೋ ಅಲ್ಲೆಲ್ಲಾ ಭೂ ಪ್ರದೇಶದ ಸ್ವರೂಪವನ್ನೇ ಬದಲಾಯಿಸುವಷ್ಟರ ಮಟ್ಟಿಗೆ ಬೆಳೆದಿದೆ. ಇದರ ಪರಿಣಾಮವಾಗಿಯೇ ಗ್ರಾಮೀಣ ಪ್ರದೇಶ ಆರ್ಥಿಕ, ಸಾಮಾಜಿಕ ಆಯಾಮಗಳಿಂದ ವಂಚಿತವಾಗಿವೆ ಎಂಬ ಸಂಗತಿಗಳನ್ನು ಉಲ್ಲೇಖಿಸಿದ್ದಾರೆ.

**ಸಲ್ಮಾ ಜಾಹನ್** (೨೦೧೪) ಅವರ **ಸಿಎಸ್ಆರ್ ಅಂಡ್ ಎನ್ವಾನ್ಮೆಂಟಲ್ ಸಸ್ಟೈನೇಬಲಿಟಿ ಇನ್ ಆ್ಯಕ್ಷಿವ್: ಎ ಕೇಸ್ ಸ್ಟಡೀ ಆಫ್ ಎನ್.ಎಮ್.ಡಿ.ಸಿ. ಲಿಮಿಟೇಡ್,** ಎಂಬ ಲೇಖನದಲ್ಲಿ ಸಿ.ಎಸ್.ಆರ್.ಸರ್ವೆಯ ಪ್ರಕಾರ ಸಾಮಾಜಿಕ ಜವಾಬ್ದಾರಿಯು ಗ್ರಾಹಕರು, ನೌಕರರು ಷೇರುದಾರರ ಮೂಲಕ ಸಮುದಾಯ ಮತ್ತು ಪರಿಸರ ಕ್ರಿಯೆಯಲ್ಲಾಗುವ ಬದಲಾವಣೆಗಳಾಗಿವೆ. ಈ ಬದಲಾವಣೆ ಸಾಮಾಜಿಕ ವಿಘಟನೆ ಉಂಟಾಗಿ ಕೆಳವರ್ಗದ ಜನರಲ್ಲಿ ಸಮಾಜೋ-ಆರ್ಥಿಕ ಅಗತ್ಯತೆಗಳ ನಿರ್ಲಕ್ಷಿಸಿರುವ ವಿಚಾರ ಕುರಿತು ಚರ್ಚಿಸಿದ್ದಾರೆ. ದೇಶದ ಅಭಿವೃದ್ಧಿ ಕೊಡುಗೆಯಲ್ಲಿ ಎನ್.ಎಂ.ಡಿ.ಸಿ.ಯ ಪಾತ್ರವೇನು? ಕಂಪನಿಗಳು ಗಣಿ ಚಟುವಟಿಕೆಯನ್ನು ವಿಸ್ತಾರಗೊಳಿಸಲು ನೀಡಿರುವ ಸಲಹೆಗಳೇನು? ಈ ಭಾಗದ ಗ್ರಾಮೀಣ ಪ್ರದೇಶದಲ್ಲಿ ತೆರೆದ ಗಣಿಗಾರಿಕೆಯಿಂದಾಗಿ ಉಂಟಾಗಿರುವ ಸಮಸ್ಯೆಯನ್ನು ವಿಶ್ಲೇಷಿಸುವ ಆಶಯವನ್ನು ಹೊಂದಿದ್ದಾರೆ. ಸಿ.ಎಸ್.ಆರ್. ಕನ್ಸೆಪ್ಟ್, ಸಿ.ಎಸ್.ಆರ್. ಮತ್ತು ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ೨೦೧೩ರ ಕಾಯ್ದೆ, ಈ ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಸಮೀಕ್ಷೆಯ ವರದಿಯನ್ನು ಸಂಕ್ಷಿಪ್ತವಾಗಿ ದಾಖಲಿಸಿದ್ದಾರೆ. ಈ ಲೇಖನದ ಅಧ್ಯಯನಕ್ಕೆ ದ್ವಿತೀಯ ಮೂಲದ ಮಾಹಿತಿಯನ್ನು ಪುಸ್ತಕಗಳು, ಸಂಶೋಧನಾ ಪ್ರಬಂಧಗಳು, ನಿಯತಕಾಲಿಕೆ ಮತ್ತು ವೆಬ್‌ಸೈಟ್‌ಗಳಿಂದ ಸಂಗ್ರಹಿಸಿದ್ದಾರೆ. ಇದರಲ್ಲಿ ಮುಖ್ಯವಾದ ಸಾಹಿತ್ಯ ಸಮೀಕ್ಷೆಯನ್ನು ಈ ಕೆಳಗಿನಂತೆ ವಿವರಿಸಿದ್ದಾರೆ. ಬಹುತೇಕ ಗಣಿ ಕಂಪನಿಗಳ ಪ್ರದೇಶದಲ್ಲಿ ಆಹಾರ, ಶಿಕ್ಷಣ, ಆರೋಗ್ಯ ಇತ್ಯಾದಿಗಳ ಮೇಲೆ ಹೂಡಿಕೆ ಮಾಡಿರುವ ವರದಿಯನ್ನು ನಮೂದಿಸಿದ್ದಾರೆ. ಎನ್.ಎಂ.ಡಿ.ಸಿ.ಕಂಪನಿಗಳು ಗಣಿ ಪ್ರದೇಶದ ಮೇಲೆ ಬಹಳಷ್ಟು ಹೂಡಿಕೆ ಮಾಡಿದೆ. ಈ ಹೂಡಿಕೆ ಲಾಭವನ್ನು ಮಾತ್ರ ಪರಿಗಣಿಸುತ್ತದೆ. ಇದರಿಂದ ಬಡವರಿಗೆ ಅಗತ್ಯವಾಗಿ ಬೇಕಾಗಿರುವ ನೀರು, ಉದ್ಯೋಗ, ಶಿಕ್ಷಣ ಕಾರ್ಮಿಕರಿಗೆ ಒದಗಿಸುವ ಸೌಲಭ್ಯಗಳು ಮತ್ತು ಸಂಪನ್ಮೂಲಗಳ ಅಸಮರ್ಪಕತೆ ಬಳಕೆಯು ಶಾಸನಗಳ ಬಾದ್ಯತೆಗಳನ್ನು ಮೀರಿ ಬಳಸಲಾಗಿದೆ(ಬಾಬುಪ್ರಸಾದ್, ೨೦೧೨). ಸಿ.ಎನ್.ಆರ್. ಲೋಕೋಪಕರಣದಲ್ಲಿ ಸುಸ್ಥಿರ ಹೊಂದಬೇಕಾದರೆ ಕೊಡುವ ತೆಗೆದುಕೊಳ್ಳುವ ಪ್ರಕ್ರಿಯೆ ಇರಬಾರದು. ಸಮುದಾಯದಲ್ಲಿ ನೆಲೆಸಿರುವ ಜನರು ಸುಸ್ಥಿರ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳಬೇಕು ಎನ್ನುವ ಪ್ರಕ್ರೀಯೆಯನ್ನು ಹೈಲೇಟ್ ಮಾಡಿದ್ದಾರೆ. ಹಾಗಾಗಿ ಜನರಲ್ಲಿ ನಾಯಕತ್ವ ಮತ್ತು ಸಂಘಟನೆ ಕಾಣೆಯಾಗಿರುವ ಕಾರಣ ಅವರಿಗೆ ದೊರೆಕಬೇಕಾದ ಅನುಕೂಲತೆಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಸಿ.ಎನ್.ಆರ್. ಸಂಸ್ಥೆಯು ಸುಸ್ಥಿರ ಅಭಿವೃದ್ಧಿಯನ್ನು ಸಾಧಿಸಲು ಜನರಲ್ಲಿ ನಾಯಕತ್ವವನ್ನು ಬೆಳೆಸುವ ಪ್ರಾಯೋಗಿಕ ಜ್ಞಾನ ಮತ್ತು ತರಬೇತಿಯನ್ನು ಒದಗಿಸುವುದು ಅಗತ್ಯವಾಗಿದೆ(ವೇಣು, ಶ್ರೀನಿವಾಸನ್ ೨೦೦೯). ಒಟ್ಟಾರೆ ಈ ಲೇಖನದಲ್ಲಿ ಬಡತನ ನಿರ್ಮೂಲನೆ ಮಾಡುವುದು ಪ್ರಧಾನ ಕಾರ್ಯವಾಗಿದೆ. ಈ ನಿರ್ಮೂಲನೆಗಾಗಿ ಕುಟುಂಬ ಯೋಜನೆ, ಶಾಲಾ ಮಕ್ಕಳ ಸ್ಕಾಲರ್ ಶಿಫ್, ಮಹಿಳೆಯರ ಸಬಲೀಕರಣಕ್ಕಾಗಿ ಪ್ರಚಾರ ಮಾಡುವುದು, ವಿಪತ್ತು ಪರಿಹಾರ ಒದಗಿಸುವುದು, ಲಿಂಗ ಸಮಾನತೆಯನ್ನು ಒದಗಿಸುವುದು, ವೃದ್ಯಾಪ ವೇತನವನ್ನು ಒದಗಿಸಿಕೊಡಬೇಕೆಂದು ಸಲಹೆಯನ್ನು ಮಂಡಿಸಿದ್ದಾರೆ.

**ಪ್ರಶಾಂತ್ ಎಚ್.ಡಿ** (೨೦೧೫) ಅವರು **ಸಾಮಾಜಿಕ ಆಕಾರ ರೇಖೆ** ಎಂಬ ಅನುವಾದ ಗ್ರಂಥದಲ್ಲಿ ಭಾಗ-೧ ಕೃಷಿ ಮತ್ತು ಸಂಸ್ಕೃತಿಯಲ್ಲಿ ಎಚ್.ಡಿ.ಪ್ರಶಾಂತ್ ಅವರ **ಆತ್ಮಹತ್ಯೆಗಳು ಮತ್ತು ಭಾರತದ ಕೃಷಿ ಸಂಕಷ್ಟ** ಎಂಬ ಲೇಖನದಲ್ಲಿ ಭಾರತದಲ್ಲಿ ನಡೆಯುತ್ತಿರುವ ರೈತರ ಆತ್ಮಹತ್ಯೆಗಳು ಇಂಥ ಸಾಂಕ್ರಾಮಿಕ ರೋಗವಾಗಿ ಹರಡಿಕೊಂಡಿದೆ. ರೈತರ ಆತ್ಮಹತ್ಯೆಗಳು ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ಪರಿಭ್ರಮಿಸಿದ್ದು, ರೈತರನ್ನು ಸಂಕಷ್ಟ ಸ್ಥಿತಿಗೆ ತಲುಪುವಂತೆ ಮಾಡಿದೆ. ಇದರಿಂದ ಗ್ರಾಮೀಣ ಭಾಗದಲ್ಲಿರುವ ಜನರು ಹೆಚ್ಚಾಗಿ ಭಾದಿತರಾಗಿದ್ದಾರೆ. ಇಂತಹ ವಿಚಾರಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಬೇಕಾಗಿದೆ. ಕೃಷಿಯಲ್ಲಿ ಹೆಚ್ಚು ಸಂತ್ರಸ್ತರು ಅಂದರೆ ಅತಿ ಸಣ್ಣ ರೈತರು, ಅರೆ ಮಾದ್ಯಮದ ಕೃಷಿಕರಾಗಿದ್ದಾರೆ. ಆದರೆ ಬಹಳ ದೊಡ್ಡ ಪ್ರಮಾಣದ ಸಂತ್ರಸ್ತರು ಹಿಂದುಳಿದ ಜಾತಿಯ ಗುಂಪುಗಳಿಗೆ ಸೇರಿದವರಾಗಿದ್ದಾರೆ ಎಂಬ ಮಾಹಿತಿ ಎಲ್ಲಾ ರಾಜ್ಯಗಳ ವರದಿಯಲ್ಲಿ ಉಲ್ಲೇಖವಾಗಿರುವದನ್ನು ಸಾಬೀತುಪಡಿಸಿದ್ದಾರೆ. ಕೃಷಿ ಸಂಕಷ್ಟಕ್ಕೆ ಸಿಲುಕಿ ಆತ್ಮಹತ್ಯೆಯನ್ನು ಮಾಡಿಕೊಂಡವರು ಹಿಂದುಳಿದ ಜಾತಿಯವರು(ಒಬಿಸಿ) ಶೇ.೨೭ರಷ್ಟಿದ್ದು, ಪರಿಶಿಷ್ಟೇತರ ಜಾತಿಯವರು ಶೇ.೩೭ರಷ್ಟಾಗಿದ್ದಾರೆ ಎಂದು ಸ್ಪಷ್ಟಪಡಿಸಿದ್ದಾರೆ. ರೈತರಲ್ಲಿ ಕೃಷಿ ಜ್ಞಾನದಲ್ಲಿ ಇರುವ

ಗೊಂದಲ, ಗ್ರಾಮೀಣ ಪ್ರದೇಶದಲ್ಲಿ ಕೃಷಿ ಬಿಕ್ಕಟ್ಟು, ಕೃಷಿಕರ ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಗಳು, ಕಮಿಷನ್, ಲಂಚ ಇತ್ಯಾದಿ ಅಂಶಗಳ ಕುರಿತು ಸವಿವರವಾಗಿ ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ.

**ದಿಲೀಪ್ ಕಾಮತ್ ಮತ್ತು ಪಿ. ವೀರಭದ್ರನಾಯ್ಕ (೨೦೧೫) ಅವರ ಸಂಪತ್ತು ಮತ್ತು ಸಂಪತ್ತಿನ ಅಸಮಾನ ಹಂಚಿಕೆ** ಎಂಬ ಲೇಖನದಲ್ಲಿ ಸಮಾಜದ ಸಂಪತ್ತು ಕೇವಲ ಉಳ್ಳವರ ಕೈಯಲ್ಲಿ ಮಾತ್ರ ಕೇಂದ್ರಿಕೃತವಾಗಿದೆ. ಸಂಪತ್ತಿನ ಹಂಚಿಕೆಯಲ್ಲಿ ಬಡವರ ಪಾಲು ಎಲ್ಲಿದೆ? ಮತ್ತು ಬಡವರನ್ನು ಸಂಪತ್ತಿನ ಹಂಚಿಕೆಯಲ್ಲಿ ಅಭಿವೃದ್ಧಿಯ ಪಥದಿಂದಾಚೆಗೆ ಏಕೆ ಇಡಲಾಗಿದೆ? ಎಂಬ ವಾದವನ್ನು ಚರ್ಚಿಸಲಾಗಿದೆ. ಈ ನೈಸರ್ಗಿಕ ಸಂಪತ್ತು ಮತ್ತು ಮಾನವ ಸಂಪತ್ತು ಅಭಿವೃದ್ಧಿಯಲ್ಲಿ ಪೂರಕ ಸಂಬಂಧವನ್ನು ಹೊಂದಿದೆ. ಇವರೆಡರ ಮಧ್ಯೆ ಪರಸ್ಪರ ಸಂಬಂಧವಿಲ್ಲದೇ ಅಭಿವೃದ್ಧಿಯನ್ನು ಊಹಿಸಲು ಸಾಧ್ಯವೇ? ಇಲ್ಲ. ಸಂಪತ್ತಿನ ಹಂಚಿಕೆಯು ಪರಿಸರ ಜೀವಿಗಳು, ಪರಿಸರ ಪರದೇಶಿಗಳು, ಮಾಧ್ಯಮ ವರ್ಗದವರು ಮತ್ತು ಸರ್ವ ಭಕ್ಷಕರಲ್ಲಿ ಅಸಮಾನ ಹಂಚಿಕೆಯಾಗಿವೆ. ಪರಿಸರ ಜೀವಿಗಳು ಪರಿಸರ ಸಂಪತ್ತನ್ನೇ ಅವಲಂಬಿಸಿ ಜೀವನ ಮಾಡುತ್ತಿದ್ದಾರೆ. ಇವರು ಪರಿಸರದ ಸಂಪತ್ತಿನ ಮೇಲೆ ಶೇ.೬೫ರಷ್ಟು ಜನರು ಅವಲಂಬಿತರಾಗಿದ್ದಾರೆ. ಪರಿಸರ ಸಂಪತ್ತನ್ನು ಉಳ್ಳವರು ಲೂಟಿ ಮಾಡುತ್ತಾ ಹೊದಂತೆ ಜನರಲ್ಲಿ ಕೃಷಿ ಮರೆಯಾಗುತ್ತಿರುವುದರಿಂದ ಜನರು ನಿರುದ್ಯೋಗದ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಪರಿಸರ ಪರದೇಶಿಗಳು ಪರಿಸರದ ಸಂಪತ್ತಿನ ಮೇಲೆ ಶೇ.೧೫ರಷ್ಟು ಅವಲಂಬಿತರಾಗಿದ್ದು, ಅರಣ್ಯ ಪ್ರದೇಶದಲ್ಲಿರುವ ಕೃಷಿಕರು ತಮ್ಮ ಭೂಮಿಯನ್ನು ಕಳೆದುಕೊಂಡು ನಿರ್ಗತಿಕರಾಗಿ, ನಗರ ಪ್ರದೇಶಗಳಿಗೆ ವಲಸೆ ಹೋಗಿ ಕೂಲಿ ಕೆಲಸಗಳಲ್ಲಿ ತೊಡಗುತ್ತಾರೆ. ಕೂಲಿಯಿಂದ ಬರುವ ಅಲ್ಪಾದಾಯವು ಆರೋಗ್ಯ ಮತ್ತು ಶಿಕ್ಷಣದ ಮೇಲೆ ವೆಚ್ಚ ಮಾಡಲು ಸಾಕಾಗುವುದಿಲ್ಲ. ಹಾಗಾಗಿ ಇವರನ್ನು ಪರದೇಶಿ ಎಂದು ಕರೆಯುತ್ತಾರೆ. ಮಾಧ್ಯಮ ವರ್ಗದವರು ಶೇ.೧೫ರಷ್ಟು ನೈಸರ್ಗಿಕ ಸಂಪತ್ತಿನ ಮೇಲೆ ಅವಲಂಬಿತರಾಗಿರುತ್ತಾರೆ. ಈ ವರ್ಗದಲ್ಲಿ ಅಪಹರಣ, ಕೊಲೆ, ಸುಲಿಗೆ, ಅಕ್ರಮ ಸಂಪತ್ತಿನ ಅವಕಾಶ, ಸುಳ್ಳು ದಾಖಲೆಯ ಸೃಷ್ಟಿಯನ್ನು ಮಾಡಿದೆ. ಇದಕ್ಕಾಗಿಯೇ ದೇಶದಲ್ಲಿ ಅಕ್ರಮ ಗಣಿಗಾರಿಕೆಗಳು ನಡೆಯುತ್ತಿದೆ. ಮಾಧ್ಯಮ ವರ್ಗದವರಲ್ಲಿ ಸರ್ವಭಕ್ಷರ ಪರವಾಗಿ ಕೆಲಸ ಮಾಡದೇ ಸಮಾಜಮುಖಿ ಕೆಲಸವನ್ನು ಮಾಡುವವರು ವಿರಳ ಸಂಖ್ಯೆಯಲ್ಲಿ ಇದ್ದಾರೆ. ಇವರಲ್ಲಿ ಶ್ರಮಿಕ ವರ್ಗಗಳ ಬಗ್ಗೆ ಕಾಳಜಿಯೂ ಇದೆ. ಆದರೆ ಇಂತಹ ಸಮಾಜಮುಖಿ ಕೆಲಸ ಮಾಡುವವರನ್ನು ಪ್ರಬಲವಾಗಿ ಗುರುತಿಸಿರುವುದು ಇದುವರೆಗೂ ಕಂಡುಬಂದಿಲ್ಲ. ಸರ್ವಭಕ್ಷಕರು ಹೇಗೆ ನೈಸರ್ಗಿಕ ಸಂಪತ್ತನ್ನು ಕೇಂದ್ರಿಕರಿಸಿದ್ದಾರೆ. ಇವರು ನೈಸರ್ಗಿಕ ಸಂಪತ್ತಿನ ಮೇಲೆ ಶೇ.೫ರಷ್ಟು ಅವಲಂಬಿತರಾಗಿದ್ದಾರೆ. ಆದರೆ ಇವರಲ್ಲಿಯೇ ಎಲ್ಲಾ ಸಂಪತ್ತು ಕೇಂದ್ರಿಕೃತಗೊಂಡಿವೆ. ಈ ಸರ್ವಭಕ್ಷಕರು ಬಡವರ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವುದು, ಮಹಿಳೆಯರ ಮೇಲೆ ಶೋಷಣೆ ಮಾಡುವುದು, ಮಕ್ಕಳನ್ನು ಶಿಕ್ಷಣದಿಂದ ದೂರ ಉಳಿಯುವ ಹಾಗೆ ಮಾಡಿ ಸಂಪತ್ತನ್ನು ಕೇಂದ್ರಿಕರಿಸಿಕೊಂಡಿದ್ದಾರೆ. ಹೀಗೆ ಸಂಪತ್ತನ್ನು ಕೆಲವರು ತಮ್ಮಲ್ಲಿಯೇ ಕೇಂದ್ರಿಕರಿಸುವ ಸಲುವಾಗಿ ಕೊಲೆ, ಅತ್ಯಾಚಾರ, ನಿರುದ್ಯೋಗ, ವಲಸೆ ಮತ್ತಿತರ ಸಮಸ್ಯೆಗಳು ಸೃಷ್ಟಿಯಾಗಿದೆ. ಉಳ್ಳವರು ನೈಸರ್ಗಿಕ ಸಂಪತ್ತಿನ ಮೇಲೆ ದಾಳಿ ಮಾಡಿ ಸಮಾಜದ ಕೆಳವರ್ಗದವರಿಗೆ ನೈಸರ್ಗಿಕ ಸಂಪತ್ತು ದಕ್ಕದಂತೆ ಮಾಡುವ ಹುನ್ನಾರ ನಡೆಯುತ್ತಿದೆ. ಸಂಪತ್ತು ಕೆಲವರಲ್ಲಿ ಕೇಂದ್ರಿಕೃತಗೊಂಡಾಗ ಪರಿಸರದ ಮೇಲೆ ಹಾನಿಯಾಗಿ, ವಾತಾವರಣದಲ್ಲಿ ಪ್ರತಿಕೂಲ ಪರಿಣಾಮಗಳು ಉಂಟಾಗಿವೆ. ಇದರಿಂದ ಅಲ್ಲಿರುವ ಸ್ಥಳೀಯ ಜನ ಸಮುದಾಯಗಳ ಬದುಕು ಅತಂತ್ರ ಸ್ಥಿತಿಗೆ ತಲುಪಿದೆ ಎಂಬ ತಮ್ಮ ಅಭಿಪ್ರಾಯಗಳನ್ನು ಸಾದರಪಡಿಸುತ್ತಾರೆ.

**ಪಾಟೀಲ್** ಬಿ.ವಿ. ಅವರ **(೨೦೧೬) ದೇಶಕ್ಕೆ ಹಿತ ಸಣ್ಣ ಹಿಡುವಳಿದಾರರಿಗೆ ಕಷ್ಟ** ಎಂಬ ಲೇಖನದಲ್ಲಿ ಜಾಗತೀಕರಣದಿಂದಾಗಿ ಸಣ್ಣ ಹಿಡುವಳಿದಾರರಿಗೆ ಆಗುತ್ತಿರುವ ಕಷ್ಟ-ನಷ್ಟಗಳ ಕುರಿತು ಚರ್ಚಿಸಿದ್ದಾರೆ. ಈ ಜಾಗತೀಕರಣದಿಂದ ದೇಶಕ್ಕೆ ಹಿತವಾಗಿದೆಂದರೆ ಅತ್ಯಾಧಿಕ ಲಾಭವನ್ನು ಪಡೆಯುತ್ತಿರುವ ಉದ್ದಿಮೆಗಳು ಈ ಜಾಗತಿಕ ಮಾರುಕಟ್ಟೆಯು ಕೃಷಿ ಬೆಲೆ-ಉತ್ಪನ್ನ-ಉದ್ಯೋಗದ ಮೇಲಾಗುವ ವ್ಯೆಪರಿತ್ಯಗಳು ಕಂಡು ಬಂದಿವೆ. ಇದರಿಂದ ಆಹಾರದ ಕೊರತೆ ಸಂಭವಿಸಿ ಮುಂದಿನ ಭವಿಷ್ಯತ್ತಿನಲ್ಲಿ ಆಹಾರದ ಅಭದ್ರತೆ ಎದುರಾಗುವ ಆತಂಕಗಳಿವೆ ಎಂದು ವಾದಿಸಿದ್ದಾರೆ.

**ಪ್ರಶಾಂತ್.ಎಚ್.ಡಿ (೨೦೧೬) ಅವರ ಮಹಿಳೆಯನ್ನು ಒಳಗೊಳ್ಳದಿರುವುದೇ ಅಭಿವೃದ್ಧಿ ಮಂತ್ರ** ಎಂಬ ಲೇಖನದಲ್ಲಿ ಅಭಿವೃದ್ಧಿಯು ಮಹಿಳೆಯರನ್ನು ಯಾವ ನೆಲೆಗಳಲ್ಲಿ ವಿಶ್ಲೇಷಿಸಲಾಗಿದೆ ಎಂಬ ಆಶಯವನ್ನು ಹೊಂದಿದೆ. ಅಭಿವೃದ್ಧಿಯ ಪರಿಕಲ್ಪನೆಯನ್ನು ವಿವಿಧ ಸ್ತರಗಳಲ್ಲಿ ಹೇಗೆ ವಿಶ್ಲೇಷಿಸಿದ್ದಾರೆಂದು ಚರ್ಚಿಸಿದ್ದಾರೆ. ಅಭಿವೃದ್ಧಿಯ ಪರಿಕಲ್ಪನೆಯು ಬಡವರ ಹಸಿವು, ಶೋಷಣೆಯಿಂದ ಮುಕ್ತಗೊಳಿಸುವ ಜ್ಞಾನ ಶಿಸ್ತನ್ನು ಬೆಳೆಸಿ ಅನೇಕ ಬದಲಾವಣೆಗಳನ್ನು ತರಬೇಕು. ಆದರೆ ಇಂದು ಅಭಿವೃದ್ಧಿಯ ಕಲ್ಪನೆಯು ಬಹುಜನರಲ್ಲಿ ನಿರಾಸೆ, ತಾರತಮ್ಯ, ದೌರ್ಜನ್ಯಗಳಿಂದ ಬಿಂಬಿತವಾಗಿದೆ. ಈ ಅಭಿವೃದ್ಧಿ ಪ್ರಕ್ರಿಯೆಯು ಯಾರ ಪರವಾಗಿದೆ? ಅದರ ರಾಜಕೀಯ, ಆರ್ಥಿಕ ಸ್ಥಾನಮಾನ ಯಾವುದು? ಎನ್ನುವ ಪ್ರಶ್ನೆಗಳನ್ನು ಮೆಲುಕು ಹಾಕುವ ಪ್ರಯತ್ನ ಮಾಡಿದ್ದಾರೆ. ವಿದ್ವಾಂಸರು ಹೇಳುವ ಹಾಗೆ ಕರ್ನಾಟಕದಲ್ಲಿ ಕಳೆದ ಹತ್ತು ವರ್ಷಗಳಿಂದ ಕೈಗಾರಿಕಾ ವಲಯ, ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ರಸ್ತೆಗಳ ಅಭಿವೃದ್ಧಿಗಾಗಿ ೯೨೮ ಗ್ರಾಮಗಳ ವ್ಯಾಪ್ತಿಯಲ್ಲಿ ೧೧ ಲಕ್ಷ ಎಕರೆಗೂ ಹೆಚ್ಚು ಭೂಮಿಯನ್ನು ಖಾಸಗಿ ಮತ್ತು ಕಾರ್ಪೊರೇಟ್ ಕಂಪನಿಗಳು ಅತ್ಯಂತ ಕಡಿಮೆ ಬೆಲೆಗೆ ಪಡೆದು ಕೃಷಿ ಭೂಮಿಯನ್ನು ಕೃಷಿಯೇತರ ಚಟುವಟಿಕೆಗೆ ರೂಪಾಂತರಿಸಿ, ಕೃಷಿ ಬಿಕ್ಕಟ್ಟನ್ನು ಸೃಷ್ಟಿಸಿದೆ. ಈ ಬಗೆಯ ಕೃಷಿ ಭೂಮಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ೨೦ ವರ್ಷಗಳಿಂದ ನಡೆಯುತ್ತಿರುವ ಗಣಿಗಾರಿಕೆಯ ಒಂದು ನಿರ್ದೇಶನವನ್ನು ವ್ಯಕ್ತಪಡಿಸಿದ್ದಾರೆ. ಬಳ್ಳಾರಿ ಗಣಿಗಾರಿಕೆ ೨೦ ವರ್ಷಗಳಲ್ಲಿ ಸುಮಾರು ೨೦ ಸಾವಿರ ಎಕರೆಗೂ ಹೆಚ್ಚು ಕೃಷಿ ಭೂಮಿಯನ್ನು ಆಡಳಿತವರ್ಗ, ಆಳುವವರ್ಗ, ಕೊಳ್ಳುವವರ ನಡುವೆ ನಡೆಯುವ ಸಂದರ್ಭದಲ್ಲಿ ಅಲ್ಲಿನ ಹಿರಿಯರು, ಮಹಿಳೆಯರು, ಸ್ಥಳೀಯ ಯುವಕರು ಈ ಭೂಮಿ ನಮ್ಮ ಪೂರ್ವಿಕರದ್ದು. ಹಾಗಾಗಿ ನಾವು ಮಾರಲು ಸಾಧ್ಯವಿಲ್ಲ. ಈ ಗಣಿಗಾರಿಕೆಯಿಂದ ನಮ್ಮ ಗ್ರಾಮದಲ್ಲಿರುವ ಯುವಕರು ದುಷ್ಚಟಗಳಿಗೆ ಬಲಿಯಾಗಿದ್ದಾರೆ. ಇಲ್ಲಿನ ಮಹಿಳೆಯರು ಅಪೌಷ್ಟಿಕ ಪರಿಣಾಮಗಳಿಂದ ತುತ್ತಾಗಿದ್ದಾರೆ. ಅದರಿಂದ ನಾವು ಕೃಷಿ ಭೂಮಿಯನ್ನು ಕೊಡುವುದಿಲ್ಲ ಎಂದು ಸಂಘಟಿತರಾಗಿ ಮಾಡಿರುವ ಚಳುವಳಿಯ ಬಗ್ಗೆ ವಿಶ್ಲೇಷಿಸಿದ್ದಾರೆ. ಒಟ್ಟಾರೆ ಈ ಅಭಿವೃದ್ಧಿಯ ಪರಿಕಲ್ಪನೆಗೆ ಸಂಬಂಧಿಸಿದಂತೆ ಸರ್ಕಾರವು ರೂಪಿಸಿರುವ ಯೋಜನೆಗಳು ದುಡಿಯುವ ವರ್ಗಗಳ ಪರವಾಗಿರದೆ, ಬಂಡವಾಳಶಾಹಿ ಮತ್ತು ಆಳುವ ವರ್ಗದ ಪರವಾಗಿರುವುದು ಯೋಜನೆಯ ವಿಫಲತೆಗೆ ಪ್ರಮುಖ ಕಾರಣವಾಗಿದೆ. ಹಾಗಾಗಿ ಇಂದು ರೂಪಿತವಾದ ಯೋಜನೆಗಳ ದುಡಿಯುವ ವರ್ಗದ ಪರವಾಗಿ ನೋಡದೆ ಇರುವುದು ಅಭಿವೃದ್ಧಿ ಪರಿಕಲ್ಪನೆಯಲ್ಲಿ ಒಂದು ಮಂತ್ರ, ತಂತ್ರವಾಗಿಯೇ ಉಳಿದಿದೆ ಎಂದು ಪ್ರಬಲವಾಗಿ ವಾದಿಸಿದ್ದಾರೆ. ಹೀಗೆ ಮೇಲಿನ ಎಲ್ಲಾ ಲೇಖನಗಳು ಮತ್ತು ಗ್ರಂಥಗಳ ಪರಾಮರ್ಶನೆಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿವೆ.

ಮೇಲಿನ ಎಲ್ಲಾ ಅಧ್ಯಯನಗಳನ್ನು ಗಮನಿಸಿದ ನಂತರ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಅನೇಕ ಪ್ರಶ್ನೆಗಳು ಮೂಡ ತೊಡಗಿದ್ದವು. ಗಣಿ ಗ್ರಾಮೀಣ ಪ್ರದೇಶದ ಸಾಮಾಜಿಕ ಆಯಾಮಗಳಾದ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯ, ವಸತಿಗಳ ಮೇಲೆ ಯಾವ ಪರಿಣಾಮಗಳು ಬೀರಿದೆ? ಗಣಿ ಗ್ರಾಮೀಣ ಪ್ರದೇಶದ ಆರ್ಥಿಕ ಆಯಾಮಗಳಾದ ಕೃಷಿ, ಉದ್ಯೋಗ, ಆದಾಯದ ಮೇಲೆ ಯಾವ ಪರಿಣಾಮಗಳು ಬೀರಿದೆ? ಹಾಗೂ ಗಣಿ ಗ್ರಾಮೀಣ ಪ್ರದೇಶದ ಪರಿಸರದ ಆಯಾಮಗಳಾದ ಭೂಮಿ, ಜಲದ ಮೇಲೆ ಯಾವ ಪರಿಣಾಮಗಳು ಬೀರಿದೆ? ಎಂಬ ಅಂಶಗಳ ಹಿನ್ನಲೆಯಲ್ಲಿ ಗಣಿಗಾರಿಕೆಯ ಗ್ರಾಮೀಣ ಕುಟುಂಬಗಳ ಮೇಲಾದ ಪರಿಣಾಮ ಯಾವುದು? ಶಾಲಾ ಮಕ್ಕಳ ಶಿಕ್ಷಣದ ಮೇಲೆ ಉಂಟು ಮಾಡಿದ ಪರಿಣಾಮ ಯಾವುದು? ಗ್ರಾಮೀಣ ಮಹಿಳೆಯರ ಪೌಷ್ಟಕತೆಯ ಮೇಲೆ ಉಂಟು ಮಾಡಿದ ಪರಿಣಾಮ ಯಾವುದು? ಗ್ರಾಮೀಣ ಗರ್ಭಿಣಿ ಮಹಿಳೆಯರ ಮೇಲೆ ಬೀರಿರುವ ಪರಿಣಾಮ ಯಾವುದು? ಪರಿಸರದ ಮೇಲೆ ಉಂಟುಮಾಡಿದ ಪರಿಣಾಮಗಳಾವುವು? ಗಾಮೀಣ ಪ್ರದೇಶದ ಕೃಷಿ ಭೂಮಿಯ ಮೇಲೆ ಯಾವ ಪರಿಣಾಮ ಬೀರಿದೆ? ದುಡಿಮೆಯ ಸ್ವರೂಪದ ಮೇಲೆ ಯಾವ ಪರಿಣಾಮ ಬೀರಿದೆ ಇತ್ಯಾದಿ ಅಂಶಗಳ ಆಧಾರದ ಮೇಲೆ ಅಧ್ಯಯನದ ಪ್ರಶ್ನೆಗಳು ಹುಟ್ಟುಕೊಂಡಿವೆ. ಅವುಗಳೆಂದರೆ,

೧. ಗಣಿ ಗ್ರಾಮೀಣ ಪ್ರದೇಶದ ಕೃಷಿ ಚಟುವಟಿಕೆಯ ಮೇಲೆ ಯಾವ ಪರಿಣಾಮಗಳಾಗಿವೆ?

೨. ಕೃಷಿಕರ ಆದಾಯ ಮಟ್ಟ ಇಳಿಕೆಯಾಗಲು ಗಣಿಗಾರಿಕೆ ಕಾರಣವಾಗಿದೆಯೇ?

೩. ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಇಳುವರಿ ಕಡಿಮೆಯಾಗಿದೆಯೇ?
೪. ಗಣಿಗಾರಿಕೆ ಪರಿಣಾಮಗಳಿಂದ ಕೃಷಿ ಭೂಮಿಯಲ್ಲಿ ಭೂಸವಕಳಿ, ಭೂಸವೇತ ಉಂಟು ಮಾಡಿವೆಯೇ?
೫. ಗಣಿ ಮತ್ತು ಗಣಿಕೈಗಾರಿಕೆಯ ದುಡಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರ ಸಮಸ್ಯೆಗಳೇನು?
೬. ಕೃಷಿ ದುಡಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರ ಸಮಸ್ಯೆಗಳೇನು?
೭. ಗಣಿ ಗ್ರಾಮೀಣ ಪ್ರದೇಶದ ಮಹಿಳೆ, ಮಕ್ಕಳು, ಪುರುಷರ ಅಪೌಷ್ಟಿಕತೆಯ ಕೊರತೆ ಇದೆಯೇ?
೮. ಗಣಿ ಗ್ರಾಮೀಣ ಪ್ರದೇಶದ ಮಹಿಳೆ, ಮಕ್ಕಳು, ಪುರುಷರ ಅಪೌಷ್ಟಿಕತೆಯ ಕೊರತೆಯಿಂದ ಮರಣಸಿದ್ದಾರಾ? ಹಾಗಾದರೆ ಅದಕ್ಕೆ ಕಾರಣಗಳೇನು?
೯. ಗಣಿ ಪ್ರದೇಶದ ಗರ್ಭಿಣಿ ಮಹಿಳೆಯರು ಮರಣಿಸಲು ಕಾರಣವೇನು?
೧೦. ಗಣಿ ಗ್ರಾಮೀಣ ಪ್ರದೇಶದ ಮಕ್ಕಳು ಮದ್ಯದಲೇ ಶಾಲೆ ಬಿಡಲು ಕಾರಣವೇನು?
೧೧. ಗಣಿ ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರು ಯೋಗ್ಯವಾಗಿದೆಯೇ?
೧೨. ಗಣಿ ಗ್ರಾಮೀಣ ವಲಯದ ಪ್ರದೇಶಗಳಲ್ಲಿ ಅಂತರ್ಜಲದ ಕೊರತೆ ಇದೆಯೇ?
೧೩. ಗಣಿ ಗ್ರಾಮೀಣ ಮಕ್ಕಳ ಕಲಿಕಾ ಮಟ್ಟ ಕುಸಿತವಾಗಿದೆಯೇ? ಹಾಗಾದರೆ ಅದಕ್ಕೆ ಕಾರಣವೇನು?
೧೪. ಗಣಿ ಗ್ರಾಮೀಣ ಪ್ರದೇಶದ ಜನ ಸಮುದಾಯದ ಜಾನುವಾರುಗಳ ಮೇಲೆ ಯಾವ ಪರಿಣಾಮ ಬೀರಿದೆ?
೧೫. ಗಣಿ ಪ್ರದೇಶದಲ್ಲಿ ಜಾನುವಾರುಗಳ ಸಂಖ್ಯೆ ಕಡಿಮೆ ಆಗಿದೆಯೇ? ಹಾಗಾದರೆ ಅದಕ್ಕೆ ಕಾರಣ ಏನು?
೧೬. ಗಣಿ ಸ್ಥಗಿತತೆಯ ನಂತರ ಜನರ ಆದಾಯ ಕಡಿಮೆ ಆಗಿದೆಯೇ?
೧೭. ಗಣಿ ಗ್ರಾಮೀಣ ಪ್ರದೇಶದ ಜನರು ವಸತಿ ವಂಚಿತರಾಗಿದ್ದಾರೆಯೇ?
೧೮. ಗಣಿ ಗ್ರಾಮೀಣ ಭಾಗಗಳಲ್ಲಿ ಸಾರಿಗೆ ಸಂಪರ್ಕ ಮತ್ತು ರಸ್ತೆ ದುರಸ್ಥಿಯ ಕೊರತೆ ಇದೆಯೇ?
೧೯. ಗಣಿ ಕೂಲಿ ಕಾರ್ಮಿಕರಿಗೆ ನೀಡುವ ವೇತನದಲ್ಲಿ ತಾರತಮ್ಯ ಏನಾದರೂ ಕಂಡು ಬಂದಿದೆಯೇ?
೨೦. ಗಣಿ ಸ್ಪೋಟದಿಂದ ಜನ ಸಮುದಾಯದ ನೆಲ ಮತ್ತು ಜಲದ ಮೇಲಾಗಿರುವ ಪರಿಣಾಮಗಳೇನು?
೨೧. ಗಣಿ ಗ್ರಾಮೀಣ ಪ್ರದೇಶದ ಕರ, ಬಾವಿ ಅಣೆಕಟ್ಟುಗಳಲ್ಲಿ ಹೂಳು ತುಂಬಿದೆಯಾ? ಅದಕ್ಕೆ ಕಾರಣವೇನು? ಅದರಿಂದಾಗುವ ಪರಿಣಾಮಗಳೇನು?
೨೨. ಗಣಿ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರದಲ್ಲಿ ಗ್ರಾಮೀಣ ಜನರ ಬದುಕಿನ ಶೈಲಿಯಲ್ಲಿ ಏನಾದರೂ ಬದಲಾವಣೆಗಳಾಗಿವೆಯಾ? ಇತ್ಯಾದಿ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಆರ್ಥಿಕ, ಸಾಮಾಜಿಕ ಮತ್ತು ಪರಿಸರದ ಆಯಾಮಗಳ ಕುರಿತಂತಹ ಪ್ರಶ್ನೆಗಳು ಮುಖ್ಯವಾಗಿವೆ. ಗಣಿಗಾರಿಕೆ ನಡೆದಾಗ ಮತ್ತು ಗಣಿಗಾರಿಕೆಯ ಸ್ಥಗಿತತೆಯ ನಂತರ ಗ್ರಾಮೀಣ ಪ್ರದೇಶದ ಜನರ ಬದುಕಿನ ಮೇಲಾಗಿರುವ ಪರಿಣಾಮಗಳಿಗೆ ಸಂಬಂಧಿಸಿರುವ ಸಂಶೋಧನಾ ಪ್ರಶ್ನೆಗಳು ಈ ಕೆಳಗಿನಂತಿವೆ.

೧. ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಸಾಮಾಜಿಕ ಪರಿಣಾಮಗಳೇನು?
೨. ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಆರ್ಥಿಕತೆಯ ಪರಿಣಾಮಗಳೇನು?
೩. ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶಗಳ ಮೇಲಾಗಿರುವ ಪರಿಸರಾತ್ಮಕ ಪರಿಣಾಮಗಳೇನು? ಎಂಬ ಪ್ರಶ್ನೆಗಳನ್ನು ಚರ್ಚೆಗೆ ಒಳಪಡಿಸಿ ವಿಶ್ಲೇಷಿಸಲಾಗಿದೆ.

### ೧.೩. ಅಧ್ಯಯನದ ಉದ್ದೇಶಗಳು

ಈಗಾಗಲೇ ನಡೆದಿರುವ ಅಧ್ಯಯನಗಳ ಸಮೀಕ್ಷೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಸಂಶೋಧನಾ ಪ್ರಶ್ನೆಗಳಿಗೆ ಅನುಗುಣವಾಗಿ ಅಧ್ಯಯನದ ಉದ್ದೇಶಗಳನ್ನು ನಿರ್ದಿಷ್ಟವಾಗಿ ರೂಪಿಸಿಕೊಳ್ಳಲಾಗಿದೆ.

೧. ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಸಾಮಾಜಿಕ ಪರಿಣಾಮಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

೨. ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಆರ್ಥಿಕತೆಯ ಪರಿಣಾಮಗಳನ್ನು ಅಧ್ಯಯನ ಮಾಡಿದ್ದೇನೆ.

೩. ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶಗಳ ಮೇಲಾಗಿರುವ ಪರಿಸರದ ಪರಿಣಾಮಗಳನ್ನು ವಿವೇಚನೆ ಮಾಡಲಾಗಿದೆ.

೪. ಈ ಮೇಲಿನ ಎಲ್ಲಾ ಪರಿಣಾಮಗಳಿಗೆ ಸೂಕ್ತ ಸಲಹೆ ಸೂಚನೆಯನ್ನು ಸೂಚಿಸುವುದು ಅಧ್ಯಯನದ ಮಹತ್ವದ ಉದ್ದೇಶಗಳಾಗಿವೆ. ಅಧ್ಯಯನ ಉದ್ದೇಶಗಳಿಗೆ ಫಲಿತವನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಈ ಕೆಳಗಿನಂತೆ ಅಧ್ಯಯನದ ವಿಧಾನವನ್ನು ರೂಪಿಸಲಾಗಿದೆ.

### ೧.೪ ಅಧ್ಯಯನದ ವಿಧಾನ

ಪ್ರಸ್ತುತ ಸಂಶೋಧನಾ ಅಧ್ಯಯನವು ಎಂಪೇರಿಕಲ್ ಮಾದರಿಯ ಅಧ್ಯಯನವಾಗಿದೆ. ಅಧ್ಯಯನಕ್ಕಾಗಿ ಕರ್ನಾಟಕ ರಾಜ್ಯದ ಒಂದು ಜಿಲ್ಲೆಯಾದ ಬಳ್ಳಾರಿ ಜಿಲ್ಲೆಯನ್ನು ಕ್ಷೇತ್ರ ಕಾರ್ಯಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಈ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಏಳು ತಾಲ್ಲೂಕುಗಳಿವೆ. ಈ ಏಳು ತಾಲ್ಲೂಕುಗಳ ಪೈಕಿ ೪ ತಾಲ್ಲೂಕು ಕೃಷಿಗೆ ಪ್ರಧಾನ್ಯತೆ ನೀಡಿದರೆ, ಇನ್ನುಳಿದ ಮೂರು ತಾಲ್ಲೂಕುಗಳಲ್ಲಿ ಗಣಿಗಾರಿಕೆಯು ವ್ಯಾಪಕವಾಗಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ಬಳ್ಳಾರಿ ಮತ್ತು ಸಂಡೂರು ತಾಲ್ಲೂಕುಗಳು ಗಣಿ ವಲಯವೆಂದೇ ಗುರುತಿಸಲ್ಪಟ್ಟಿವೆ. ಆದ್ದರಿಂದ ಮೇಲಿನ ಮೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿ ಪ್ರತಿಯೊಂದು ತಾಲ್ಲೂಕಿನಲ್ಲೂ ಮೂರು ಗ್ರಾಮಗಳನ್ನು ಆಯ್ಕೆ ಮಾಡಿ ಕ್ಷೇತ್ರಕಾರ್ಯ ಮಾಡಿದ್ದೇನೆ. ಅದರಲ್ಲಿ ಬಳ್ಳಾರಿ ತಾಲ್ಲೂಕಿನ ಬೆಳಗಲ್, ಜಾನೆಕುಂಟೆ, ಹನ್ನೊಳಿ, ಹೊಸಪೇಟೆ ತಾಲ್ಲೂಕಿನ ಪಿ.ಕೆ.ಹಳ್ಳಿ, ಕಲ್ಲಹಳ್ಳಿ, ರಾಜಾಪುರ, ಹಾಗೂ ಸಂಡೂರು ತಾಲ್ಲೂಕಿನ ಜೈಸಿಂಗಪುರ, ಸುಶೀಲನಗರ, ತುಮಟಿ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಹಾಗಾಗಿ ಕ್ಷೇತ್ರಕಾರ್ಯಕ್ಕೆ ಆಯ್ದುಕೊಂಡ ತಾಲ್ಲೂಕುಗಳ ಪ್ರತಿಯೊಂದು ಗ್ರಾಮಗಳಲ್ಲಿ ೩೦ ಕುಟುಂಬಗಳಂತೆ, ಪ್ರತಿಯೊಂದು ತಾಲ್ಲೂಕಿಗೆ ೯೦ ಕುಟುಂಬಗಳನ್ನು ಆಯ್ಕೆ ಮಾಡಿದ್ದೇನೆ. ಒಟ್ಟಾರೆಯಾಗಿ ಜಿಲ್ಲೆಯ ಮೂರು ತಾಲ್ಲೂಕುಗಳ ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ.

ಈ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳಿಂದ ಪಡೆಯಲಾಗಿದೆ. ಬಳ್ಳಾರಿ ಜಿಲ್ಲೆಯು ಒಟ್ಟು ೭ ತಾಲ್ಲೂಕುಗಳನ್ನು ಒಳಗೊಂಡಿದ್ದು, ಕ್ಷೇತ್ರಕಾರ್ಯಕ್ಕಾಗಿ ಮೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಪ್ರತಿ ತಾಲ್ಲೂಕಿನಲ್ಲಿ ಮೂರು ಮೂರು ಗ್ರಾಮಗಳನ್ನು ಆಯ್ದುಕೊಳ್ಳಲಾಗಿದೆ. ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯಲು ಗಣಿ ವಲಯ ಬಳ್ಳಾರಿ–ಹೊಸಪೇಟೆ–ಸಂಡೂರು ಗ್ರಾಮೀಣ ಪ್ರದೇಶದ ಗ್ರಾಮಗಳನ್ನು ಆಯ್ದುಕೊಂಡು, ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಂದ ಮಾಹಿತಿಯನ್ನು ಪಡೆಯಲು ಸೂಕ್ತವಾದ ರಚಿತ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಗ್ರಾಮಗಳ ಕುಟುಂಬಗಳನ್ನು ಪ್ರಶ್ನಾವಳಿ ಮೂಲಕ ಆಯ್ಕೆ ಮಾಡುವಲ್ಲಿ ರ್‍ಯಾಂಡಮ್ ಪದ್ಧತಿಯನ್ನು ಅನುಸರಿಸಲಾಗಿದೆ. ಸಂದರ್ಶನ, ಚರ್ಚೆಗಳ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಅದೇ ರೀತಿ ಆರೋಗ್ಯ ಕೇಂದ್ರದ ಕುರಿತಂತೆ ಸಾರ್ವಜನಿಕರಿಂದಲೂ ವಿಷಯ ಸಂಗ್ರಹಿಸಲಾಗಿದೆ.

ಪ್ರಕಟಿತ ಮತ್ತು ಅಪ್ರಕಟಿತ ಮೂಲಗಳಿಂದ ಅನುಷಂಗಿಕವಾದ ಮಾಹಿತಿಯನ್ನು ಸಂಗ್ರಹ ಮಾಡಲಾಗಿದೆ. ಜನಗಣತಿ ವರದಿಗಳು, ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಆರೋಗ್ಯ ಕುಟುಂಬ ಕಲ್ಯಾಣ ನಿರ್ದೇಶನಾಲಯ, ಮಹಿಳಾ ಮತ್ತು ಮಕ್ಕಳ

ಅಭಿವೃದ್ಧಿ ನಿರ್ದೇಶನಾಲಯ, ಸರ್ಕಾರದ ವರದಿಗಳು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಲೋಕಯುಕ್ತರ ವರದಿಗಳು, ಪ್ರಾಥಮಿಕ ಶಿಕ್ಷಣ ನಿರ್ದೇಶನಾಲಯ ಪ್ರಕಟಣೆಗಳಿಂದ ಹಾಗೂ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಾರ್ಯಾಲಯದಿಂದ ಜಿಲ್ಲೆ ಮತ್ತು ತಾಲ್ಲೂಕುಗಳ ಮಾಹಿತಿಯನ್ನು ಪಡೆಯಲಾಗಿದೆ. ಹೀಗೆ ವಿವಿಧ ಮೂಲಗಳಿಂದ ಅನುಷಂಗಿಕ ಮಾಹಿತಿಯನ್ನು ಆಯ್ದುಕೊಳ್ಳಲಾಗಿದೆ.

**ಸ್ಯಾಂಪ್ಲಿಂಗ್ ಆಯ್ಕೆ ವಿಧಾನ**

ಬಳ್ಳಾರಿ ಜಿಲ್ಲೆಯ ಮೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ ಹೊಸಪೇಟೆ, ಸಂಡೂರು ಮತ್ತು ಬಳ್ಳಾರಿ. ಇವುಗಳಲ್ಲಿ ಕ್ರಮವಾಗಿ ಮೂರು ಮೂರು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿದ್ದು, ಸಾಮಾಜಿಕ, ಆರ್ಥಿಕತೆ ಮತ್ತು ಪರಿಸರದ ಆಯಾಮಗಳ ಆಧಾರದ ಮೇಲೆ ಈ ಗ್ರಾಮಗಳನ್ನು ಆಯ್ಕೆ ಮಾಡಲಾಗಿದೆ. ಕ್ರಮವಾಗಿ ಬಳ್ಳಾರಿ ತಾಲ್ಲೂಕಿನ ಜಾನಕುಂಟೆ, ಬೆಳಗಲ್, ಹನ್ನೊಳಿ, ಸಂಡೂರು ತಾಲ್ಲೂಕಿನ ತುಮಟಿ ಬಾವುಳ್ಳಿ, ಜೈಸಿಂಗ್‌ಪುರ ಹಾಗೂ ಹೊಸಪೇಟೆ ತಾಲ್ಲೂಕಿನ ಪಿ.ಕೆ.ಹಳ್ಳಿ, ಕಲ್ಲಳ್ಳಿ, ರಾಜಾಪುರ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಪ್ರತಿ ಗ್ರಾಮದಿಂದ ೩೦ ಕುಟುಂಬಗಳನ್ನು ರ್‍ಯಾಂಡಮ್ ಪದ್ಧತಿಯಲ್ಲಿ ತೆಗೆದುಕೊಂಡಿದ್ದೇನೆ. ಒಂದು ತಾಲ್ಲೂಕಿಗೆ ೯೦ ಕುಟುಂಬಗಳಂತೆ ಒಟ್ಟು ಮೂರು ತಾಲ್ಲೂಕಿಗೆ ೨೭೦ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ೨೭೦ ಕುಟುಂಬಗಳಿಗೆ ರಚಿತ ಪ್ರಶ್ನಾವಳಿಯ ಮೂಲಕ ಸಾಮಾಜಿಕ, ಆರ್ಥಿಕ ಮತ್ತು ಪರಿಸರ ಸೂಚಕಗಳಿಗೆ ಸಂಬಂಧಿಸಿದಂತೆ ಶಿಕ್ಷಣ, ಆರೋಗ್ಯ, ಆದಾಯ, ಉದ್ಯೋಗ, ಕೂಲಿ, ಬೇಸಾಯ, ಧೂಳು, ನೈರ್ಮಲ್ಯೀಕರಣ ಇತ್ಯಾದಿ ಅಂಶಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಂಪೂರ್ಣ ಮಾಹಿತಿಯನ್ನು ಈ ಕೆಳಗಿನ ವಿಧಾನದ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

**ಮಾಹಿತಿ ವಿಶ್ಲೇಷಣೆಯ ವಿಧಾನ**

ಗಣತಿಯ ಹಾಗೂ ಸಂಖ್ಯಾಶಾಸ್ತ್ರೀಯ ವಿಧಾನವನ್ನು ಬಳಸಿಕೊಂಡು ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಣೆ ಮಾಡಲಾಗಿದೆ. ಅದರಲ್ಲಿ ಶೇಕಡವಾರು, ಕೋಷ್ಟಕಗಳಂತಹ ಉಪಕರಣಗಳನ್ನು ಬಳಸಿ ವೈಜ್ಞಾನಿಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಈ ಅಧ್ಯಯನವು ಮುಖ್ಯವಾಗಿ ಅಂಕಿ-ಅಂಶಗಳು ಮತ್ತು ಕ್ಷೇತ್ರಕಾರ್ಯದ ದತ್ತಾಂಶಗಳನ್ನು ಆಧರಿಸಿದೆ. ಅಂಕಿ-ಅಂಶಗಳ ಆಧಾರವೇ ಹೆಚ್ಚಿರುವುದರಿಂದ ಅಂಕಿ-ಅಂಶಗಳ ಕುರಿತಾದ ಅಧ್ಯಯನಕ್ಕೆ ಯಾವ ಮಿತಿ ಇರುತ್ತದೆಯೋ ಈ ಅಧ್ಯಯನಕ್ಕೆ ಅದೇ ಮಿತಿ ಇರುತ್ತದೆ.

**೧.೫ ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಬಳ್ಳಾರಿ-ಹೊಸಪೇಟೆ-ಸಂಡೂರು ಈ ಮೂರು ತಾಲ್ಲೂಕುಗಳನ್ನು ಒಳಗೊಂಡ ಅಧ್ಯಯನವಾಗಿದೆ. ಅದರಲ್ಲಿ ಮೂರು ತಾಲ್ಲೂಕುಗಳಲ್ಲಿ ೯ ಗ್ರಾಮಗಳ ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕಿನ ಮೇಲಾಗುವ ಸಾಮಾಜಿಕ, ಆರ್ಥಿಕ, ಪರಿಸರದ ಪರಿಣಾಮಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಈ ಅಧ್ಯಯನವು ಗಣಿಗಾರಿಕೆಯು ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರದ ಗ್ರಾಮೀಣ ಜನರ ಬದುಕಲ್ಲಾಗಿರುವ ಪರಿಣಾಮಗಳ ಚಿತ್ರಣವನ್ನು ನೀಡುತ್ತದೆ.

**೧.೬ ಅಧ್ಯಯನದ ಮಿತಿ ಮತ್ತು ಮಹತ್ವ**

೧. ಈ ಅಧ್ಯಯನವು ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯಗಳಿಗೆ ಮಾತ್ರ ಸೀಮಿತವಾಗಿದೆ.
೨. ಗ್ರಾಮೀಣ ಪ್ರದೇಶದ ಮೇಲಾಗಿರುವ ಗಣಿಗಾರಿಕೆಯ ಪರಿಣಾಮಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ.
೩. ಗಣಿಗಾರಿಕೆ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರ ಗ್ರಾಮೀಣ ಜನರ ಬದುಕಿನ ಮೇಲೆ ಬೀರಬಹುದಾದ ಪರಿಣಾಮಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ಮಹತ್ವ**

ಈ ಮಹಾಪ್ರಬಂಧವು ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗುವ ಸಾಮಾಜಿಕ, ಆರ್ಥಿಕ, ಪರಿಸರದ ಪರಿಣಾಮಗಳ ಸ್ಥಿತ್ಯಂತರವನ್ನು ಅಧ್ಯಯನ ಮಾಡಲಾಗಿದೆ. ಗಣಿಗಾರಿಕೆಯಿಂದಾಗಿ ಪರಿಸರ, ಕೃಷಿ, ಆರೋಗ್ಯ ಇಳುವರಿ, ಉದ್ಯೋಗ, ಆದಾಯ, ಶಿಕ್ಷಣ, ನೈರ್ಮಲ್ಯ, ಇತ್ಯಾದಿ ಸ್ಥಿತಿಗತಿಗಳನ್ನು ಸುಧಾರಿಸಲು ಸರ್ಕಾರ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕೇ? ಇಲ್ಲವಾದರೆ ಅಭಿವೃದ್ಧಿಯಲ್ಲಿ ವೈರುಧ್ಯಗಳು ಕಾಣಸಿಗುತ್ತವೆಯೇ? ಎಂದು ಗಣಿ ಗ್ರಾಮೀಣ ಪ್ರದೇಶದ ಜನಸಮುದಾಯಗಳ ಮೇಲೆ ಬೀರುವ ಪರಿಣಾಮಗಳಿಗೆ ಸೂಕ್ತ ನಿಯಂತ್ರಣ ಕ್ರಮಗಳನ್ನು ಹೆಚ್ಚಾಗಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೊಸ ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಿ ಕೊಡುವುದರಿಂದ ಮಹತ್ವದಾಗಿದೆ. ಅಭಿವೃದ್ಧಿಯಲ್ಲಿ ಗಣಿಗಾರಿಕೆಯ ಪ್ರಯೋಜನಕ್ಕಿಂತಲೂ ನಕರಾತ್ಮಕ ಪರಿಣಾಮಗಳೇ ಗ್ರಾಸವಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಪ್ರಬಂಧವು ಅಭಿವೃದ್ಧಿಯನ್ನು ತಿಳಿದುಕೊಳ್ಳುವವರಿಗೆ ಮತ್ತು ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯ ಯೋಜನೆಗಳನ್ನು ರೂಪಿಸುವವರಿಗೆ ಮಹತ್ವದಾಗಿರುತ್ತದೆ.

**೧.೭ ಅಧ್ಯಾಯಗಳ ವಿನ್ಯಾಸ**

ಈ ಸಂಶೋಧನಾ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಪ್ರಮುಖ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ, ಮಿತಿ ಮತ್ತು ಮಹತ್ವದ ಕುರಿತು ವಿಶ್ಲೇಷಣೆ ನೀಡುತ್ತದೆ.

ಎರಡನೆಯ ಅಧ್ಯಾಯವು ಬಳ್ಳಾರಿ ಜಿಲ್ಲೆಯ ಕ್ಷೇತ್ರ ಪರಿಚಯ ಎಂದಾಗಿದ್ದು, ಇದರಲ್ಲಿ ಪ್ರಸ್ತಾವನೆ, ಜಿಲ್ಲೆಯ ಐತಿಹಾಸಿಕ ಹಿನ್ನಲೆ, ಜಿಲ್ಲೆಯ ಭೌಗೋಳಿಕತೆ, ಭೂಮಿಯ ಮೇಲ್ಮೈ ಲಕ್ಷಣಗಳು, ಜಿಲ್ಲೆಯ ಸಂಕ್ಷಿಪ್ತ ವಿವರ, ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ವಿವರ, ಸಂಪನ್ಮೂಲವಾಗಿ ಕಬ್ಬಿಣದ ಅದಿರು, ಖನಿಜ ನೀತಿ ಮತ್ತು ನಿಯಮಗಳು, ತಾಲ್ಲೂಕಿನ ವಿವರ ಮತ್ತು ಗಣಿ ವಲಯಗಳ ಒಂದು ಸೂಕ್ಷ್ಮ ಚಿತ್ರಣವನ್ನು ನೀಡುತ್ತದೆ.

ಅಧ್ಯಾಯ ಮೂರು ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಸಾಮಾಜಿಕ ಪರಿಣಾಮಗಳು ಎಂದಾಗಿದ್ದು, ಈ ಅಧ್ಯಾಯದಲ್ಲಿ ಪ್ರಸ್ತಾವನೆ, ಸಾಮಾನ್ಯ ಮಾಹಿತಿ, ಗಣಿಗಾರಿಕೆಯ ಸಾಮಾಜಿಕ ಪರಿಣಾಮಗಳು, ಕುಟುಂಬಗಳ ಅನಕ್ಷರಸ್ಥ ಮಕ್ಕಳ ಪ್ರಮಾಣ, ಶೈಕ್ಷಣಿಕ ಪ್ರಭಾವಿತ ಅಂಶಗಳು, ಆಹಾರ ಮತ್ತು ಆರೋಗ್ಯ ಭದ್ರತೆಯ ಮೇಲಿನ ಪರಿಣಾಮಗಳು, ಪ್ರತಿ ಕುಟುಂಬಗಳ ಆರೋಗ್ಯದ ಮೇಲಿನ ವೆಚ್ಚ, ಗಣಿಗಾರಿಕೆ ಮತ್ತು ನೈರ್ಮಲ್ಯ, ಕುಟುಂಬಗಳ ವಸತಿ ವ್ಯವಸ್ಥೆ ಮತ್ತು ಸೌಲಭ್ಯಗಳ ಕುರಿತು ವಿವರಿಸಲಾಗಿದೆ.

ಅಧ್ಯಾಯ ನಾಲ್ಕು ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಆರ್ಥಿಕತೆಯ ಪರಿಣಾಮಗಳು ಎಂದಾಗಿದ್ದು, ಇದರಲ್ಲಿ ಪ್ರಸ್ತಾವನೆ, ಗಣಿಗಾರಿಕೆ ಮತ್ತು ಕೃಷಿ, ಕೃಷಿಯೇತರ ಚಟುವಟಿಕೆ, ಕೃಷಿ ಭೂಮಿ, ದುಡಿಮೆ ಮತ್ತು ವೃತ್ತಿ, ಕೃಷಿ ಮತ್ತು ದುಡಿಮೆ, ಗಣಿಗಾರಿಕೆ ಮತ್ತು ದುಡಿಮೆ, ಗಣಿ ಉದ್ಯಮ ಮತ್ತು ದುಡಿಮೆ, ಕುಟುಂಬಗಳ ಆರ್ಥಿಕ ಸ್ಥಿತಿ ಮತ್ತು ಒಡೆತನಗಳ ಕುರಿತು ವಿಶ್ಲೇಷಿಸಲಾಗಿದೆ.

ಅಧ್ಯಾಯ ಐದು ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶಗಳ ಪರಿಸರದ ಮೇಲಾಗಿರುವ ಪರಿಣಾಮಗಳು ಎಂದಾಗಿದ್ದು, ಇದರಲ್ಲಿ ಪ್ರಸ್ತಾವನೆ, ಪರಿಸರದಲ್ಲಿ ವಾಯು ಮಾಲಿನ್ಯ, ಜಲ ಮಾಲಿನ್ಯ ಮತ್ತು ಹೂಳು, ಅಂತರ್ಜಲದ ಅಭಾವ, ಶಬ್ದ ಮಾಲಿನ್ಯ, ಪರಿಸರ ಮತ್ತು ಭೂ ಕಂಪನ, ಗಣಿ ಧೂಳು, ಗಣಿ ಪ್ರದೇಶದ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು, ಗಣಿ ಕೃಷಿ ಭೂಮಿಯಲ್ಲಿ ಭೂಸವೆತ, ಗಣಿ ಸ್ಫೋಟ ಮತ್ತು ಬಿರುಕು, ಕೆರೆ–ಬಾವಿ–ಅಣೆಕಟ್ಟುಗಳ ನೀರಿನ ಗುಣಮಟ್ಟ ಕುರಿತು ವಿವರಿಸಲಾಗಿದೆ.

ಅಧ್ಯಾಯ ಆರು ಸಮಾರೋಪ ಎಂದಾಗಿದ್ದು, ಇದರಲ್ಲಿ ಅಧ್ಯಯನದ ಫಲಿತಗಳು ಮತ್ತು ಸಲಹೆಗಳನ್ನು ನೀಡಲಾಗಿದೆ.

**ಪರಾಮರ್ಶನ ಗ್ರಂಥಗಳು**


೦೧. ಆರ್ಗನೈಸಡ್ ಬೈ ಸಮತ, (೨೦೦೮), **ಕನ್‌ಸ್ಯೂಲೆಷನ್ ಆನ್ ದಿ ಇಂಪ್ಯಾಕ್ಟ್ ಆಫ್ ಮೈನಿಂಗ್ ಆನ್ ಚಿಲ್ಡ್ರನ್ಸ್ ಇನ್ ಇಂಡಿಯಾ**, ಹೈದ್ರಾಬಾದ್.

೦೨. ಆ್ಯಂಜರ್ ಫೆರೋಜ್ ಆಹಮ್ಮದ್ ಅಂಡ್ ಅದರ್ಸ್, (೨೦೧೪), 'ಇಂಫ್ಯಾಕ್ಟ್ ಆಫ್ ಮೈನಿಂಗ್ ಆ್ಯಕ್ಟಿವಿಟಿಸ್ ಆನ್ ವೈರಸ್ ಎನ್ವಾರನ್ಮೆಂಟಲ್ ಆ್ಯಟ್ರಿಬ್ಯೂಟ್ಸ್ ವಿಥ್ ಸ್ಪೇಸಿಫಿಕ್ಸ್ ಕೆಫರೆನ್ಸ್ ಟು ಹೇಲ್ಥ್ ಇಂಫ್ಯಾಕ್ಟ್ ಇನ್ ಶತಾಬ್ಧಿಮರಂ ಸ್ವಾಲಿಯರ್', ಇಂಡಿಯಾ, ಇಂಟರ್ ನ್ಯಾಷನಲ್ ರಿಸರ್ಚ್ ಜರ್ನಲ್ ಆಫ್ ಎನ್ವಾರನ್ಮೆಂಟ್ ಸೈನ್ಸ್, ವ್ಯಾಲ್ಯೂಮ್ ೩(೬), ಪು.ಸಂ ೮೧-೮೭.

೦೩. ಆದ್ಯ ವೆಂಕಟೇಶ, (೨೦೧೧), **ಕರ್ನಾಟಕದಲ್ಲಿ ಅಕ್ರಮ ಗಣಿಗಾರಿಕೆಯ ಬಗ್ಗೆ ಲೋಕಾಯುಕ್ತ ತನಿಖಾ ವರದಿ**, ಲಂಕೇಶ ಪ್ರಕಾಶನ, ಬೆಂಗಳೂರು.

೦೪. ಇಯಾನ್ ರುಂಗೊ, (೨೦೧೨), **ಮೈನಿಂಗ್ ಅರ್ಥಶಾಸ್ತ್ರ**, ಡಿಸ್ಕವರಿ ಮಂಗೋಲಿಯಾ ಯು.ಎಸ್.ಎ.

೦೫. ಈರಣ್ಣ ಚ. ಮುಳಗುಂದ, (೨೦೦೬), **ಪರಿಸರದ ಅಧ್ಯಯನ**, ಸೃಷ್ಟಿ ಪ್ರಕಾಶನ, ಧಾರವಾಡ.

೦೬. ಎಕಲಾಜಿಕಲ್ ಯೂನಿಟ್, ಇನ್ಸ್ಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೈಂಜ್, (೧೯೯೯), 'ಎನ್ವಾರನ್ಮೆಂಟ್ ಇನ್ ಕರ್ನಾಟಕ್: ಎ ಸ್ಟೆಟ್ಯೂಸ್ ರೀಪೋರ್ಟ್', ಇಪಿಡಬ್ಲ್ಯೂ, ವ್ಯಾಲ್ಯೂಮ್ ೩೪(೩೮), ಪುಸಂ ೨೭೩೫-೨೨೪೪

೦೭. ಕರಣ್.ಎ ವುಡ್ಸನ್ ಎಡ್ವರ್ಡ್ ಇತರರು (೨೦೧೧) 'ಮೈನ್ ವೆಸ್ಟ್, ಪಾಸ್ಟ್, ಪ್ರೆಸೆಂಟ್, ಫ್ಯೂಚರ್', ಎಲಿಮೆಂಟ್ಸ್ ವ್ಯಾಲ್ಯೂಮ್ ೭, ಡಿಸೆಂಬರ್ ಪು.ಸಂ ೩೭೫-೩೮೦.

೦೮. ಕಿತುಲಾ ಎ.ಜಿ.ಎನ್, (೨೦೦೩), 'ದಿ ಎನ್ವಾರನ್ಮೆಂಟಲ್ ಅಂಡ್ ಸೋಷಿಯೋ ಎಕನಾಮಿಕ್ಸ್ ಆಫ್ ಮೈನಿಂಗ್ ಆನ್ ಲೋಕಲ್ ಲೈವ್ಲಿವುಡ್ ಇನ್ ಟಾಂಜನೀಯಾ: ಎ ಕೇಸ್ ಸ್ಟಡಿ ಆಫ್ ಗಯಾಟ ಡಿಸ್ಟಿಕ್', ಜರ್ನಲ್ ಆಫ್ ಕ್ಲಿನರ್ ಪ್ರೊಡೆಕ್ಷನ್, ವ್ಯಾಲೂಮ್ ೧೪, ಪು.ಸಂ ೪೦೫-೪೧೪.

೦೯. ಕುಂತಲ್ ಲಹರಿ ದತ್, (೨೦೧೫), 'ಲೈವ್ಲಿವುಡ್ ಆಫ್ ಮಾರ್ಜಿನಲ್ ಮೈನಿಂಗ್ ಅಂಡ್ ಕ್ವಾರಿಯಿಂಗ್ ಹೌಸ್ ಹೋಲ್ಡ್ ಇನ್ ಇಂಡಿಯಾ', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೋಲಿಟಿಕಲಂ ವಿಕ್ಲಿ, ವ್ಯಾಲ್ಯೂಮ್ ಎಲ್ ನಂ. (೨೬-೨೭) ಪು.ಸಂ ೨೭-೩೨.

೧೦. ಕೃಷ್ಣ ಮೂರ್ತಿ.ಎಂ.ಕೆ ಮತ್ತು ಹರಿಪ್ರಸಾದ್, (೧೯೮೦), ಪರಿಸರ ಮಾಲಿನ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯದ, ಮೈಸೂರು.

೧೧. ಗರ್ವನ್ಮೆಂಟ್ ಆಫ್ ಇಂಡಿಯಾ ಮಿನಿಷ್ಟರಿ ಲೇಬರ್ ಅಬ್‌ಸ್ಟ್ರಕ್ಟ್, (೨೦೦೩), 'ಮೈನಿಂಗ್ ಎನ್ವಾರನ್ಮೆಂಟ್, ಮೈನಿಂಗ್ ಪಾಲಿಸಿ ಅಂಡ್ ಎನ್ವಾರನ್ಮೆಂಟಲ್ ಇಂಫ್ಯಾಕ್ಟ್ ಅಸ್ಸೆಮೆಂಟ್: ಎ ಕ್ರಿಟಿಕಲ್ ಆಪ್‌ರೈಸಲ್', ಇಂಡಿಯಾ.

೧೨. ಗೋಠೆ ಎಂ.ಎನ್, (೧೯೯೧), **ಖನಿಜ ಸಂಸ್ಕರಣ ಪರಿಚಯ**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೧೩. ಗ್ಲೋಬಲ್ ಎನ್ವಾರನ್ಮೆಂಟಲ್ ರಿಸರ್ಚ್ ಲ್ಯಾಬ್, (೨೦೦೯), 'ಪ್ರಸ್ತಾಪಿತ ಕಬ್ಬಿಣದ ಅದಿರಿನ ಹೆಚ್ಚುವರಿ ಉತ್ಪಾದನೆಯಿಂದ ಪರಿಸರದ ಮೆಲಾಗುವ ಪರಿಣಾಮದ ಅಧ್ಯಯನ', ಹೈದರಾಬಾದ್.

೧೪. ಚಂದ್ರಶೇಖರ್ ಟಿ.ಆರ್, (೧೯೯೪), **ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಚಂದ್ರಪೂಜಾರಿ ಎಂ, (೨೦೧೧), **ದೇಶೀಯತೆಯ ನೆರಳಲ್ಲಿ ವಿಕೇಂದ್ರಿಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ ೬೧-೭೨.

೧೬. ಚಂದ್ರಶೇಖರ್ ಡಿ.ಎಂ ಅಂಡ್ ಅದರ್ಸ್, (೧೯೮೭), 'ಸೋಷಿಯಲ್ ಫಾರೆಸ್ಟ್ರಿ ಇನ್ ಕರ್ನಾಟಕ್; ಆ್ಯನ್ ಇಂಫ್ಯಾಕ್ಟ್ ಅನಾಲಿಸ್ಸ್', ಇಪಿಡಬ್ಲ್ಯೂ, ವ್ಯಾಲ್ಯೂಮ್ ೨೨(೨೪), ಪು.ಸಂ ೯೩೫-೯೪೧

೧೭. ಚಂದ್ರಶೇಖರ್ ಟಿ.ಆರ್, (೨೦೧೩), **ಕರ್ನಾಟಕದ ಹೊಸ ಸರ್ಕಾರದ ಮುಂದಿರುವ ಸವಾಲುಗಳು**, ಬೆಂಗಳೂರು.
೧೮. ಚಂದ್ರಭೂಷನ್, (೨೦೦೫), 'ರಿಚ್ ಲ್ಯಾಂಡ್ ಪೂರ್ ಪೀಪಲ್ ದಿ ಸೋಷಿಯೋ ಎನ್ವಿರಾನ್ಮೆಂಟಲ್ ಚಾಲೆಂಜಸ್ ಆಫ್ ಮೈನಿಂಗ್ ಇನ್ ಇಂಡಿಯಾ', ಜರ್ನಲ್ ಆಫ್ ಸೈನ್ಸ್ ಸೆಂಟರ್ ಅಂಡ್ ಎನ್ವಾರನ್ಮೆಂಟಲ್, ದೆಹಲಿ.
೧೯. ಚಕ್ರಬೊರಟಿ, (೨೦೦೨), 'ಡಿಟರ್‌ಮಿನೇಷನ್ ಆಫ್ ದಿ ಇಮಿಷನ್ ರೇಟ್ ಫ್ರಮ್ ವೈರಸ್ ಒಪನ್ ಕಾಸ್ಟ್ ಮೈನಿಂಗ್ ಅಪರೇಷನ್', ಎನ್ವಾರನ್ಮೆಂಟಲ್ ಮಾಡೆಲ್ ಸಾಫ್ಟವೇರ್, ವ್ಯಾಲೂಮ್ ೧೭, ಪು.ಸಂ ೪೬೭-೪೮೦.
೨೦. ಜಾರ್ಜ್ ಎಂ. ಒಸಿಂಗ್, (೨೦೧೦), 'ಇಂಪ್ಯಾಕ್ಟ್ ಆಫ್ ಮೈನಿಂಗ್ ಆನ್ ವಾಟರ್ ರಿಸೋರ್ಸ್ ಇನ್ ಸೌತ್ ಆಫ್ರಿಕಾ ಎ ರಿವ್ಯೂವ್, ಸೆಂಟಿಫಿಕ್ ರಿಸರ್ಚ್ ಅಂಡ್ ಎಸ್ಸೆಸ್ ಅಕಡೆಮಿಕ್ ಜರ್ನಲ್', ವ್ಯಾಲ್ಯೂಮ್ ೫(೨೨) ನವ್ಹೆಂಬರ್ ಪು.ಸಂ ೩೩೫೧-೩೩೫೭.
೨೧. ಜಾನ್ ಹ್ಯಾರಿಸ್ ಅಂಡ್ ಅದರ್ಸ್, (೨೦೧೦), 'ಲ್ಯಾಂಡ್, ಲೇಬರ್ ಅಂಡ್ ಕಾಸ್ಟ್ ಪಾಲಿಟಿಕ್ಸ್ ಇನ್ ತಮಿಳ್‌ನಾಡು ಇನ್ ೨೦ನೇ ಸೆಂಚೂರಿ : ಇರುವಲ್ಪಟ್ (೧೯೧೬-೨೦೦೮)', ಇಪಿಡಬ್ಲ್ಯೂ, ಜುಲೈ ೩೧.
೨೨. ಜುಲಿಯೊ ಹೆನೊ ಅಂಡ್ ಅದರ್ಸ್, (೨೦೦೬), 'ಅಗ್ರಿಕಲ್ಚರಲ್ ಪ್ರೊಡೆಕ್ಷನ್ ಅಂಡ್ ಸ್ವಾಯಲ್ ನ್ಯೂಟ್ರೇಟ್ ಮೈನಿಂಗ್ ಇನ್ ಆಫ್ರಿಕಾ : ಇಂಪ್ಲಿಕೇಷನ್ ಫಾರ್ ರಿಸೋರ್ಸ್ ಕಂಜರ್‌ವೇಷನ್ ಅಂಡ್ ಪಾಲಿಸಿ ಡೆವಲಪ್ಮೆಂಟ್', ಆನ್ ಇಂಟರ್ ನ್ಯಾಷನಲ್ ಸೆಂಟರ್ ಫಾರ್ ಸ್ವಾಯಲ್ ಫೆಟ್ರೀಲಿಟಿ ಅಂಡ್ ಅಗ್ರೀಕಲ್ಚರ್ ಡೆವಲಪ್‌ಮೆಂಟ್, ಯು.ಎಸ್.ಎ ಪು.ಸಂ ೧-೧೩.
೨೩. ಜೋಶ್‌ಚಿನ್, (೨೦೦೬), 'ಬಳ್ಳಾರಿಯ ಗಣಿಗಾರಿಕೆ', ಭಾರತದ ರಾಷ್ಟ್ರೀಯ ಮ್ಯಾಂಗನೀಸ್ ಫ್ರಂಟ್‌ಲೈನ್, ಸಂಪುಟ-೨೩, ಸಂಚಿಕೆ-೧೧ ಜೂನ್.
೨೪. ಜೈಕುಮಾರ್, (೨೦೦೯), **ಪರಿಸರ ಸ್ನೇಹಿ, ಕೃಷಿ ಕ್ಯೂಬಾ ಮಾದರಿ**, ಕ್ರಿಯಾ ಪ್ರಕಾಶನ ಬೆಂಗಳೂರು.
೨೫. ಟೆರನ್ಸ್ ಜಾರ್ಜ್ ಅಂಡ್ ಅದರನ್ಸ್, (೨೦೧೩), 'ಸರ್ವೆ ಆಫ್ ಎನ್ವಾರನ್ಮೆಂಟಲ್ ಅಂಡ್ ಸೋಷಿಯೋ ಎಕನಾಮಿಕ್ ಇಂಪ್ಯಾಕ್ಟ್ ಆಫ್ ಇನ್ವರ್ಮ್ ಬ್ಯಾನ್ ಆನ್ ಮೈನಿಂಗ್ ಇನ್ ಗೋವಾ', ಎ.ಇ.ಎ ರಿಸೋರ್ಸ್ ಅಂಡ್ ರೆಸ್ಪಾನ್ಸ್ ಸೆಂಟರ್, ಗೋವಾ, ಇಂಡಿಯಾ, ಪು.ಸಂ ೧-೪೪.
೨೬. ದಕ್ಷಿಣಮೂರ್ತಿ ಕೆ.ಎಸ್, (೧೯೮೬), 'ಪಾಲಿಟಿಕ್ಸ್ ಆಫ್ ಎನ್ವಾರನ್ಮೆಂಟ್, ಇಪಿಡಬ್ಲ್ಯೂ, ವ್ಯಾಲ್ಯೂಮ್ ೧೧(೧೮), ಪುಸಂ ೭೭೧-೭೭೫.
೨೭. ದಾಂಬ್ಲೆ ಸಿ.ಬಿ, (೧೯೮೯), 'ಲ್ಯಾಂಡ್ ರಿಫಾರ್ಮ್ಸ್ ಲೇಜಿಸ್ಲೇಷನ್ ಇನ್ ಕರ್ನಾಟಕ ಮೈತ್ ಆಫ್ ಸಕ್ಸಸ್', ಇಪಿಡಬ್ಲ್ಯೂ, ವ್ಯಾಲ್ಯೂಮ್ ೨೨(೩೧), ಪುಸಂ ೧೮೯೬-೧೯೦೬.
೨೮. ದಾಲ್ಪೇನ್, (೨೦೧೧), ಮೈನಿಂಗ್ ಅಂಡ್ ಸಸ್ಟೆನೇಬಲ್ ಡೆವಲಪ್‌ಮೆಂಟ್ ಇನ್‌ಸೈಟ್ಸ್ ಫ್ರಮ್ ಇಂಟರ್ ನ್ಯಾಷನಲ್ ಲಾ, ಲಂಡನ್.
೨೯. ದಿನಾ ಡೊಗ್ರೂ ಅಂಡ್ ಅದರ್ಸ್, (೨೦೦೯), 'ಕಮ್ಯುನಿಟಿ ಪ್ರಸ್ಷೆಕ್ಷನ್ ಆಫ್ ವಾಟರ್ ಕ್ವಾಲಿಟಿ ಇನ್ ಎ ಕೇಸ್ ಸ್ಟಡಿ ಫಾರ್ ಸರ್ಟೆಜ್ ಕ್ಯಾಚ್‌ಮೆಂಟ್ ಇನ್ ದಿ ಅಪ್ಸೋನಿ ಮೌಂಟೆನ್ಸ್ ಆ್ಯನ್ ರೊಮೆನೀಯಾ', ಜರ್ನಲ್ ಆಫ್ ಎನ್ವಾರನ್ಮೆಂಟಲ್ ಮ್ಯಾನೇಜ್‌ಮೆಂಟ್, ಜನವರಿ ೨೯ ಪು.ಸಂ ೧೧೩೧-೧೧೪೫.
೩೦. ನಾಡಗೌಡ ಬಿ.ವಿ, (೧೯೯೬), **ಬಂಗಾರದ ನಿಕ್ಷೇಪಗಳು**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.
೩೧. ನಾಡಕರ್ಣಿ ಎಂ.ವಿ ಅಂಡ್ ಅದರ್ಸ್, (೧೯೯೨), 'ಸೋಷಿಯಲ್ ಫಾರೆಸ್ಟ್ರಿ ಪ್ರಾಜೇಕ್ಟ್ಸ್ ಇನ್ ಕರ್ನಾಟಕ', ಇಪಿಡಬ್ಲ್ಯೂ, ವ್ಯಾಲ್ಯೂಮ್ ೨೪(೨೬), ಪುಸಂ ೬೫-೭೪.

೩೨. ನ್ಯಾಯಾಧೀಶ ಸಂತೋಷ್ ಹೆಗ್ಡೆ, (೨೦೧೧), 'ಮೈನಿಂಗ್ ಇನ್ ಬಳ್ಳಾರಿ – ಎ ಪಾಲಿಸಿ ಅನಲಿಸಿಸ್, ಸೆಕೆಂಡ್ ಲೋಕಾಯುಕ್ತ ರಿಪೋರ್ಟ್', ಇಪಿಡಬ್ಲ್ಯೂ ೨೦೧೧.

೩೩. ಪಾಂಡ ಎಸ್ ಮತ್ತು ಅನೀಲ್ ಬೇರಿಕ್, (೨೦೧೦), 'ಇಂಪ್ಯಾಕ್ಟ್ ಆಫ್ ಐರನ್ ಒರ್ ಮೈನ್ಸ್ ಜೆನೆರೆಡೇಡ್ ಪೋಲ್ಯೂಟೆಂಟ್ ಆನ್ ಪೇರಿಪೈರಲ್ ಎನ್ವಾರನ್ಮೆಂಟ್ – ಎ ಕೇಸ್ ಸ್ಟಡಿ ಆಫ್ ಕೊಯಿರಾ ರಿಜಿಯನ್ ಒಡಿಶಾ', ಡಿಪಾರ್ಟ್ಮೆಂಟ್ ಆಫ್ ಮಿನರಲ್ ಪ್ರೋಸಸ್ ಅಂಡ್ ಟೆಕ್ನಾಲಜಿ, ಒಡಿಶಾ, ಪು.ಸಂ ೧೧೪೭–೧೧೫೬.

೩೪. ಪಾಟೀಲ್.ಬಿ.ವಿ, (೨೦೧೬), 'ದೇಶಕ್ಕೆ ಹಿತ ಸಣ್ಣ ಹಿಡುವಳಿದಾರರಿಗೆ ಕೃಷಿ', ಪ್ರಜಾವಾಣಿ, ಆಗಸ್ಟ್ ೧೨.

೩೫. ಪಿಚ್ಚ ಮುತ್ತು, (೨೦೧೧), 'ಭಾರತದ ಖನಿಜ ನೀತಿಯ ವಿಕಾಸ ಮತ್ತು ಮಿನರಲ್ ಇಂಡಸ್ಟ್ರೀಯ ಮೇಲೆ ಅದರ ಪ್ರಭಾವಗಳು', ಜರ್ನಲ್ ಆಫ್ ಜಿಯೋಲಾಜಿ ಇಂಡಿಯಾ, ಸೆಪ್ಟಂಬರ್ ೨೦೧೦.

೩೬. ಪುರುಷೋತ್ತಮ ರೆಡ್ಡಿ, (೧೯೯೦), **ಖನಿಜಗಳು**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ.

೩೭. ಪ್ರತಾಪ್ ದಾಸಗುಪ್ತ, (೧೯೮೨), ದಿ **ಕಂಟ್ರೂಲ್ ಆಫ್ ರೀಸೋರ್ಸ್**, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಲಂಡನ್, ಪು.ಸಂ ೬೮–೯೮.

೩೮. ಪ್ರತಾಪ್ ಸಿಂಹ, (೨೦೦೦), **ಮೈನಿಂಗ್ ಮಾಫಿಯಾ**, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೩೯. ಪ್ರಭಾಕರ.ಬಿ.ಸಿ, (೧೯೯೪), **ತಾಮ್ರ ನಿಕ್ಷೇಪ**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ.

೪೦. ಪ್ರಜ್ಞಾ ಪರಿಮಿತ ಮಿಶ್ರ ಮತ್ತು ಎಂ.ಗೋಪಿನಾಥ್, (೨೦೦೬), 'ಥ್ರೇಟ್ ಆಫ್ ಫಾರೆಸ್ಟ್ ಕಾಮನ್ಸ್' ಮ್ಯಾಪಿಂಗ್ ದಿ ಲೈವ್ಲೀವುಡ್ ಆಫ್ ಮೈನಿಂಗ್ ಇನ್‌ಡ್ಯೂಸಡ್ ಕಮ್ಯೂನಿಟಿಸ್ ಇನ್ ದಿ ಎರ್ಸ್ಟನ್ ಘಟ್ಸ್ ಆಫ್ ಆಂದ್ರ ಪ್ರದೇಶ', ಸೆಂಟರ್ ಆಫ್ ಎಕಾನಾಮಿಕ್ಸ್ ಅಂಡ್ ಸೋಷಿಯಲ್ ಸ್ಟಡೀಸ್, ಹೈದ್ರಾಬಾದ್.

೪೧. ಪ್ರಶಾಂತ್ ಎಚ್.ಡಿ. ಮತ್ತು ಪಿ.ವೀರಭದ್ರನಾಯ್ಕ, (೨೦೧೫), **ಸಾಮಾಜಿಕ ತಲ್ಲಣಗಳು: ಕಾಳಜಿಗಳು, ಕನಸ್ಸುಗಳು**, ರೂಪ ಪ್ರಕಾಶನ, ಮೈಸೂರು, ಪು.ಸಂ ೫೨–೬೧.

೪೨. ಫಿಲಿಪ್ಸ್ ಪೀಕ್, (೨೦೦೫), 'ಮೈನಿಂಗ್ ಕ್ಲೋಸರ್, ಪಾಲಿಸಿ ಅಂಡ್ ಗೈಡ್ ಲೈನ್ಸ್ ಫಾರ್ ಸಸ್ಟೈನೇಬಲ್ ಮೈನಿಂಗ್ ಪ್ರಾಕ್ಟೀಸ್ ಅಂಡ್ ಕ್ಲೋಸರ್ ಮೈನ್ಸ್', ಇಂಟರ್ ನ್ಯಾಷನಲ್ ಇನ್‌ಸ್ಟ್ಯೂಟ್ ಫಾರ್ ಎನ್ವಾರನ್ಮೆಂಟಲ್ ಎಕನಾಮಿಕ್ಸ್, ಲೂಂಡ್ ಯೂನಿವರ್ಸಿಟಿ, ಲೂಂಡ್, ಪು.ಸಂ ೧–೯೪.

೪೩. ಪ್ರಶಾಂತ್.ಎಚ್.ಡಿ, (೨೦೧೬), 'ಮಹಿಳೆಯರನ್ನು ಒಳಗೊಳ್ಳದಿರುವುದೇ ಅಭಿವೃದ್ಧಿಯ ಮಂತ್ರ', ಸಂವಾದ ಮಾಸಿಕ ಪತ್ರಿಕೆ, ಆಗಸ್ಟ್. ಪು.ಸಂ

೪೪. ಪ್ರಶಾಂತ್ ಎಚ್.ಡಿ, ಮತ್ತಿತರರು, (೨೦೧೫), **ಸಾಮಾಜಿಕ ಆಕಾರ ರೇಖೆ**, ಮಯೂರ ಪ್ರೀಂಟ್, ಬೆಂಗಳೂರು.

೪೫. ಭಾಗ್ಯಲಕ್ಷ್ಮಿ ಎಂ, (೨೦೦೭), **ಗಣಿಗಾರಿಕೆ ಮತ್ತು ಅಭಿವೃದ್ಧಿ**, ಸಖಿ ಪ್ರಕಾಶನ, ಬೆಂಗಳೂರು.

೪೬. ಬೆಂಜಿಮಿನ್ ಸ್ಮಿತ್, (೨೦೦೪), ಸಸ್ಟೆನೇಬಲ್ ಮೈನ್ ಪ್ರಾಕ್ಟೀಸ್ ರ್ಹಬ್ಲಿಷನ್ ಅಂಡ್ ಇಂಟಿಗ್ರೇಟೆಡ್ ಮೈನ್ ಕ್ಲೋಸರ್ ಪ್ಲಾನಿಂಗ್, ಆಸ್ಟ್ರೇಲಿಯಾ.

೪೭. ಬೋರಲಿಂಗಯ್ಯ, (೨೦೦೭), **೫೦ ಸುವರ್ಣ ಕರ್ನಾಟಕ ಅಭಿವೃದ್ಧಿ ಪಥ**, ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು.

೪೮. ಬೈರಪ್ಪ ಕೆ, (೨೦೦೫), **ಪರಿಸರ ಅಧ್ಯಯನ**, ಸ್ವಪ್ನಬುಕ್ ಹೌಸ್, ಬೆಂಗಳೂರು.

೪೯. ಮರೀನಾ ವೆಟ್ಜಲ್ ಮೇಯರ್, (೨೦೧೨), 'ಕಲ್ಚರಲ್ ಇಂಪ್ಯಾಕ್ಟ್ ಆಫ್ ಮೈನಿಂಗ್ ಇನ್ ಇಂಡಿಜಿನಸ್ ಪೀಪಲ್ಸ್ ಆನ್‌ಸ್ಟ್ರೇಲ್ ಡೊಮೈನ್ಸ್ ಇನ್ ದಿ ಫಿಲಿಫೈನ್ಸ್', ಆಸ್ಟ್ರೀಯಾ ಜರ್ನಲ್ ಆಫ್ ಸೌತ್–ಇಸ್ಟ್ ಏಷ್ಯನ್ ಸ್ಟಡೀಸ್, ವ್ಯಾಲ್ಯೂಮ್ ೫(೨) ಪು.ಸಂ ೩೩೫–೩೪೪.

೫೦. ಮುಕುಲ್, (೧೯೯೫), 'ಯುನೈಟೆಡ್ ಕಿಂಗಡಮ್ : ಡಿಸ್ಟ್ರೆಕ್ಷನ್ ಆಫ್ ಮೈನಿಂಗ್ ಅಂಡ್ ಮೈನ್ಸ್', ಇ.ಪಿ.ಡಬ್ಲ್ಯೂ, ವಿಕ್ಲಿ, ಸೆಪ್ಟಂಬರ್ ಪು.ಸಂ ೨೩-೬೫.

೫೧. ಮುಜಾಫರ್ ಅಸಾದಿ, (೨೦೦೭), 'ಕುದುರೆಮುಖ: ಆಫ್ ಮೈನಿಂಗ್ ಅಂಡ್ ಎನ್ವಾರನ್ಮೆಂಟ್', ಎಕನಾಮಿಕ್ ಅಂಡ ಪೊಲಿಟಿಕಲ್ ವಿಕ್ಲಿ, ಡಿಸೆಂಬರ್ ಪು.ಸಂ ೪೯೯೮-೫೦೦೧.

೫೨. ಮೋತಿಲಾಲ್ ಟಾಯ್ದೆ ಮತ್ತು ಪ್ರತಿಭಾ ಕರಂದ್ಕಾರ್, (೨೦೧೩), 'ರೋಲ್ ಆಫ್ ಡಾಟ ಮೈನಿಂಗ್ ಟೆಕ್ನಿಕ್ಯೂಜಸ್ ಇನ್ ಹೆಲ್ಥ್‌ಕೇರ್ ಸೆಕ್ಟರ್ ಇನ್ ಇಂಡಿಯಾ', ಸ್ಕಾಲರ್ ಜರ್ನಲ್ ಆಫ್ ಆಪ್ಲೈಡ್ ಸೈನ್ಸ್ ವ್ಯಾಲ್ಯೂಮ್ ೧(೩) ಪು.ಸಂ ೧೫೮-೧೬೦.

೫೩. ಯೂಸಫ್.ಎ. ಜಡ್' ಮತ್ತಿತರರು, (೨೦೧೪), 'ಎಕ್ಸರೇ ಫ್ಲೋರೆಸೆನ್ಸ್ ಆನ್ ಆಕ್ಸಿಸೇಬಲ್ ಅಂಡ್ ಎಫೆಕ್ಟಿವ್ ಟೆಕ್ನಿಕ್ಯೂಸ್ ಇವ್ಯಾಲೂವೇಷನ್ ಆಫ್ ಹಾರ್ಜಡ್ಸ್ ಅಂಡ್ ಎಕನಾಮಿಕ್ ಪೊಟೆಂಡಿಯಲ್ ಅಸೋಷಿಯೇಟೆಡ್ ವಿತ್ ಇಂಪಾರ್ಟೆಂಟ್ ಮಿನರಲ್ ಡಿಪೊಸಿಟ್ ಇನ್ ನೈಜೇರಿಯಾ', ಜರ್ನಲ್ ಆಫ್ ಜಿಯೋಲಾಜಿ ಅಂಡ್ ಮೈನಿಂಗ್ ರಿಸರ್ಜ್, ವ್ಯಾಲೂಮ್ ನಂ.೬(೧) ಜನವರಿ ಪು.ಸಂ ೧೩-೧೭.

೫೪. ರವಿಬೆಳಗೆರೆ, (೨೦೧೦), **ಕಾಂಗ್ರೆಸ್ ಮೈನಿಂಗ್ ಮಾಫಿಯಾ**, ಗೀತಾಂಜಲಿ ಗ್ರಾಫಿಕ್ಸ್, ಬೆಂಗಳೂರು.

೫೫. ರಂಗನಾಥ್ ಮತ್ತಿತರು,(೨೦೦೫), **ಪರಿಸರ ಅಧ್ಯಯನ**, ಮೈಸೂರು ಬುಕ್‌ಹೌಸ್, ಮೈಸೂರು.

೫೬. ರಾಜಶೇಖರ್.ಜಿ, (೨೦೧೪), **ಪರಿಸರ ರಕ್ಷಣೆ ಮತ್ತು ಸಮಾಜವಾದ**, ದರಣಿ ಪ್ರಿಂಟರ್ಸ್, ಬೆಂಗಳೂರು.

೫೭. ರಾಮಚಂದ್ರ ಗುಹಾ, (೨೦೧೬), 'ಅಕ್ರಮ ಗಣಿಗಾರಿಕೆಯಿಂದ ಸವೆದ ಪ್ರಜಾಪ್ರಭುತ್ವ', ಪ್ರಜಾವಾಣಿ ಆಗಸ್ಟ್ ೧೯.

೫೮. ರಾಧಕೃಷ್ಣ ಬಿ.ಪಿ, (೨೦೦೩), **ಕರ್ನಾಟಕದ ಖನಿಜ ಸಂಪತ್ತು**, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೫೯. ರೆಡ್ರಿಕ್ಸ್ ಜಿ ಎಗ್ರೇಟ್, (೨೦೦೧), 'ಮೈನಿಂಗ್ ಅಂಡ್ ಎಕನಾಮಿಕ್ ಸಸ್ಟೈನೇಬಿಲಿಟಿ ನ್ಯಾಷನಲ್ ಎಕನಾಮಿಕ್ ಅಂಡ್ ಲೋಕಲ್ ಕಮ್ಯೂನಿಟಿಸ್ ಡಿವಿಸನ್ ಆಫ್ ಎಕನಾಮಿಕ್ ಅಂಡ್ ಬಿಸ್ಸಿನೆಸ್', ಕೊಲೊಡೊ ಸ್ಕೂಲ್ ಆಫ್ ಮೈನ್ಸ್, ಯು.ಎಸ್.ಎ ಮೈನಿಂಗ್, ಮಿನರಲ್ ಸಸ್ಟೈನೇಬಲ್ ಡೆವೆಲಪ್ಮೆಂಟ್ ನಂ. ೧೯, ಪು.ಸಂ ೧-೮೪.

೬೦. ರೆಮಿ, ಫ್ಲೇಕ್ಸಿ, ಅಂಡ್ ಗ್ಯಾರಿ (೨೦೦೨), **ಲಾರ್ಜ್ ಮೈನ್ಸ್ ಅಂಡ್ ಲೋಕಲ್ ಕಮ್ಯೂನಿಟಿಸ್; ಫಾರಿನ್ ಪಾರ್ಟನಾರ್‌ಶಿಫ್**, ಬಿಲ್ಡಿಂಗ್ ಸಸ್ಟೈನೇಬಲಿಟಿ ಮೈನಿಂಗ್ ವಾಷಿಂಗ್‌ಟನ್, ಡಿ.ಸಿ.

೬೧. ವಸಂತ ಮಾಲವಿ, (೧೯೯೬), 'ಗಣಿಧಣಿಗಳ ರಣಾಂಗಣ', ಸುಧಾ ಮಾಸ ಪತ್ರಿಕೆ, ಫೆಬ್ರುವರಿ.

೬೨. ವಾಸುಕಿ ಕೆ.ಈ, (೧೯೯೪), **ಕರ್ನಾಟಕ ಪರಿಸರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೩. ವಿದ್ಯಾದಾಸ್, (೧೯೯೫), 'ಡೆವೆಲಪ್ಮೆಂಟ್ ಅಂಡ್ ಡಿಸ್ಟ್ರೆಕ್ಷನ್ ನ್ಯೂ ಮೈನಿಂಗ್ ಪ್ರಾಜೆಕ್ಟ್ ಇನ್ ಒರಿಸ್ಸಾ', ಇಪಿ.ಡಬ್ಲ್ಯೂ ವಿಕ್ಲೀ, ಜೂನ್ ಪು.ಸಂ ೧೨೭೬-೧೨೮೧.

೬೪. ವಿದ್ಯಾದಾಸ್, (೨೦೦೧), 'ಒರಿಸ್ಸಾ ಮೈನಿಂಗ್ ಬಾಕ್ಸೈಟ್ ಪೀಪಲ್', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೊಲಿಟಿಕಲ್ ವಿಕ್ಲಿ, ವ್ಯಾಲ್ಯೂಮ್ ೩೬(೨೮) ಪು.ಸಂ ೨೬೧೨-೨೬೧೪.

೬೫. ವಿನೋದ್ ಕುಮಾರ್ ಸಿ.ಪಿ ಅಂಡ್ ಅದರ್ಸ್, (೧೯೯೮), 'ಕೋಲಾರ ಗೋಲ್ಡ್ ಮೈನ್ಸ್: ಲ್ಯಾನ್ ಅನ್‌ಫಿನಿಶಡ್ ಬಯೋಗ್ರಾಫಿ ಆಫ್ ಕೊನೊಲಿಸಂ', ಇಪಿಡಬ್ಲ್ಯೂ, ವ್ಯಾಲ್ಯೂಮ್ ೩೩(೨೪), ಪುಸಂ ೧೪೬೭-೧೪೭೪.

೬೬ ವೀರ ಸಂಗಯ್ಯ.ಜೆ.ಎಂ, (೨೦೦೮), **ಗಣಿಸ್ಫೋಟ : ಒಂದು ಚಿಂತನೆ**, ಕ್ರಿಯಾ ಪ್ರಕಾಶನ ಬೆಂಗಳೂರು.

೬೭ ಸಲ್ಮಾ ಜಾಹನ್, (೨೦೧೪), 'ಸಿಎಸ್‌ಆರ್ ಅಂಡ್ ಎನ್ವಾರನ್ಮೆಂಟಲ್ ಸಸ್ಟೇನೇಬಿಲಿಟಿ ಇನ್ ಲ್ಯಾಕ್ಟೀವ್ಸ್ : ಎ ಕೇಸ್ ಸ್ಟಡಿ ಆಫ್ ಎನ್.ಎಮ್.ಡಿ.ಸಿ', ಇಂಟರ್ ನ್ಯಾಷನಲ್ ಜರ್ನಲ್ ಆಫ್

ಬಿಸಿನೆಸ್ ಅಂಡ್ ಅಡ್ಮಿನಿಸ್ಟ್ರೇಷನ್ ರಿಸರ್ಚ್ ರಿವ್ಯೂವ್, ವ್ಯಾಲ್ಯೂಮ್-೧, ಅಕ್ಟೋಬರ್-ಡಿಸೆಂಬರ್, ಪು.ಸಂ ೧೧೬-೧೨೬.

೬೮. ಸಂಗೀತ.ಪಿ, (೨೦೦೭), **ಗಣಿಗಾರಿಕೆ ಮತ್ತು ಪರಿಸರ**, ಕವನ ಪ್ರಿಂಟ್ಸ್, ಬೆಂಗಳೂರು.

೬೯. ಸಂಬವನ ಸಂಸ್ಥೆ, (೨೦೧೨), 'ಓವರ್ ರೀವ್ಯೂವ್ ಆಫ್ ಮೈನಿಂಗ್ ಇನ್ ಇಂಡಿಯಾ ಮೈನಿಂಗ್ ವರ್ಕ್‌ಶ್ಯಾಪ್', ಡಿಸೆಂಬರ್ ೧.

೭೦. ಸಾಸೂನ್ ಅಂಡ್ ಅದರ್ಸ್, (೨೦೦೦), 'ಎನ್ವಾರನ್ಮೆಂಟಲ್ ಆಸ್ಪೆಟ್ ಆಫ್ ಮೈನ್ ಕ್ಲೊಸರ್ ಇನ್ ಮೈನ್ ಕ್ಲೊಸರ್ ಅಂಡ್ ಸಸ್ಟೆನೇಬಲ್ ಡೆವಲಪ್‌ಮೆಂಟ್ ವರ್ಕ್‌ಶಾಪ್', ಆರ್ಗನೈಜಡ್ ಬೈ ದಿ ವರ್ಲ್ಡ್ ಬ್ಯಾಂಡ್ ಮೆಟಲ್ ಮೈನಿಂಗ್ ಏಜೆನ್ಸಿ ಆಫ್ ಜಪಾನ್, ವಾಸಿಂಗ್ಟನ್ ಡಿ.ಸಿ.

೭೧. ಸ್ಟೀವನ್ ಸಿ ಡೇಲರ್ ಅಂಡ್ ಅದರ್ಸ್, (೨೦೧೨), 'ಪ್ರಾಕ್‌ಸಾಂಡ್ ಮೈನಿಂಗ್ ಅಂಡ್ ಕಮ್ಯೂನಿಟಿ ಎಕನಾಮಿಕ್ ಡೆವಲಪ್‌ಮೆಂಟ್', ಡಿಪಾರ್ಟ್ಮೆಂಟ್ ಆಫ್ ಆಗ್ರಿಕಲ್ಚರಲ್ ಅಂಡ್ ಅಪ್ಲೋಡ್ ಎಕನಾಮಿಕ್ ಸ್ವಾಪ್, ಯುನಿವರಸಿಟಿ ಆಫ್ ವಿಸ್ಕೇಸಿನಿ ಮೆಡಸನ್, ಮೇ ನಂ.೫೬೫.

೭೨. ಸಿನ್ಹ ಆರ್.ಕೆ ಅಂಡ್ ಶರ್ಮ ಎನ್.ಎಲ್, (೧೯೯೮), 'ಮಿನರಲ್ ಎಕಾನಾಮಿಕ್ಸ್, ನ್ಯೂಡೆಲ್ಲಿ.

೭೩. ಸೋಮಶೇಖರ್,(೨೦೦೫), **ಗಣಿಗಾರಿಕೆಯಿಂದ ಕೃಷಿ ಸಮುದಾಯದ ಮೇಲಾಗುವ ಪರಿಣಾಮ**, ಎಂ.ಫಿಲ್ ಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೪. ಸ್ಯಾಮುಲ್ ಪೌಲ್, (೨೦೦೦), 'ಡೂ ಸ್ಟೇಟ್ ಹ್ಯಾವ್ ಕ್ಯಾನ್ ಅನೆಬಲ್ ಇಂಡಸ್ಟ್ರೀಯಲ್ ಗ್ರೋತ್? ಸಮ್ ಎವಿಡೆನ್ಸ್ ಫಾರ್ಮ್ ಕರ್ನಾಟಕ', ಇಪಿಡಬ್ಲ್ಯೂ, ವ್ಯಾಲ್ಯೂಮ್ ೪೩(೪೪), ಪು.ಸಂ ೩೮೬೧-೩೮೬೯.

೭೫. ಶಾಂತ ಎ ತಿಮ್ಮಯ್ಯ ಮತ್ತಿತರು, (೨೦೧೨), 'ಆನ್ ಎಕಾನಾಮಿಕ್ಸ್ ಅನಾಲಿಸಿಸ್ ಆಫ್ ಎನ್ವಾರನ್ಮೆಂಟ್ ಪೊಲ್ಯೂಷನ್ ಅಂಡ್ ಹೇಲ್ಥ್-ಎ ಕೇಸ್ ಸ್ಟಡಿ ಆಫ್ ಬಳ್ಳಾರಿ, ಹೊಸಪೇಟೆ ಸೆಕ್ಟರ್', ಇಂಟರ್ ನ್ಯಾಷನಲ್ ಆಫ್ ಅರ್ಥ್ ಸ್ಕಾನ್ಸ್ ಅಂಡ್ ಇಂಜನಿಯರಿಂಗ್, ವ್ಯಾಲೂಮ್ ೦೫, ನಂ.೬೫(೦೧) ಅಕ್ಟೋಬರ್ ಪು.ಸಂ ೧೪೨೦-೧೪೨೩.

೭೬. ಶಿವ ಪ್ರಕಾಶ.ಎಂ.ಎಂ, (೨೦೧೧), **ಎಂ.ಪಿ.ಪ್ರಕಾಶ ಸಮಗ್ರ ಲೇಖನಗಳು**, ವಿಶ್ವಾಸ್ ಪ್ರಿಂಟರ್ಸ್ ಬೆಂಗಳೂರು.

೭೭. ಶೇಷಾದ್ರಿ ಬಿ, (೧೯೯೮), **ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ ಮತ್ತು ಜನಾಂದೋಲನಾ**, ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ.

೭೮. ಹುಚ್ಚುಸಾಬ್.ಪಿ (೨೦೦೫) **ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ-ಆರ್ಥಿಕ ಅಧ್ಯಯನ**, ಪಿಎಚ್.ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಅಧ್ಯಾಯ ಎರಡು

## ಅಧ್ಯಯನ ಕ್ಷೇತ್ರದ ಪರಿಚಯ

೨.೧ ಪ್ರಸ್ತಾವನೆ

೨.೨ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ

೨.೩ ಜಿಲ್ಲೆಯ ಭೌಗೋಳಿಕತೆ

೨.೪ ಭೂಮಿಯ ಮೇಲ್ಮೈ ಲಕ್ಷಣಗಳು

೨.೫ ಜಿಲ್ಲೆಯ ಸಂಕ್ಷಿಪ್ತ ವಿವರ

೨.೬ ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ವಿವರ

೨.೭ ಸಂಪನ್ಮೂಲವಾಗಿ ಕಬ್ಬಿಣ ಅದಿರು

೨.೮ ಖನಿಜ ನೀತಿ ಮತ್ತು ನಿಯಮಗಳು

೨.೯ ತಾಲ್ಲೂಕಿನ ವಿವರ ಮತ್ತು ಗಣಿ ವಲಯಗಳು

# ಅಧ್ಯಾಯ ೨
# ಅಧ್ಯಯನ ಕ್ಷೇತ್ರದ ಪರಿಚಯ

## ೨.೧ ಪ್ರಸ್ತಾವನೆ

ಬಳ್ಳಾರಿ ಜಿಲ್ಲೆಯು ರಾಜ್ಯದಲ್ಲಿಯೇ ಗಣಿಗಾರಿಕೆಗೆ ಹೆಸರುವಾಸಿಯಾದ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿ ಗಣಿಗಾರಿಕೆ ವಲಯವಾದ ಬಳ್ಳಾರಿ–ಹೊಸಪೇಟೆ–ಸಂಡೂರು ತಾಲ್ಲೂಕಿನಲ್ಲಿ ಗಣಿ ಚಟುವಟಿಕೆಯು ವ್ಯಾಪಕವಾಗಿ ನಡೆಯುತ್ತಿದೆ. ಇತ್ತೀಚೀನ ದಿನಗಳಲ್ಲಿ ಗಣಿಗಾರಿಕೆ ಸ್ಥಗಿತಗೊಂಡರೂ ಅದರಿಂದಾಗಿರುವ ಪರಿಣಾಮಗಳು ಗ್ರಾಮೀಣ ಪ್ರದೇಶ ಹಾಗೂ ಜನ ಸಮುದಾಯಗಳ ಮೇಲೆ ನಿರಂತರವಾಗಿ ಪ್ರಭಾವ ಬೀರಿವೆ. ಯಾವುದೇ ಒಂದು ಅಧ್ಯಯನವನ್ನು ಕೈಗೊಂಡಾಗ ತನ್ನದೇ ಆದ ಪ್ರಾದೇಶಿಕ ಚೌಕಟ್ಟನ್ನು ಗುರುತಿಸುವ ಹಿನ್ನೆಲೆಯಲ್ಲಿ ಒಂದು ಉದ್ದೇಶಿತ ಸಮಸ್ಯೆಯಲ್ಲಿ ಸಿಲುಕಿರುವ ಸೂಕ್ಷ್ಮ ಸಂಗತಿಗಳ ಬಗ್ಗೆ ಕೂಲಂಕಷವಾಗಿ ಅರಿಯುವುದು ಅವಶ್ಯಕವಾಗಿದೆ. ಈ ಹಿನ್ನೆಲೆಯಲ್ಲಿಯೇ ಅಧ್ಯಯನ ಕ್ಷೇತ್ರದಲ್ಲಿ ಗಣಿಗಾರಿಕೆಗೆ ಸಂಬಂಧಿಸಿದ ಭೌಗೋಳಿಕ ಸಾಮಾಜಿಕ ಮತ್ತು ಆರ್ಥಿಕ ಸಂಗತಿಗಳ ವಿವರವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಅಧ್ಯಯನ ಕ್ಷೇತ್ರದಲ್ಲಿ ಲಭ್ಯವಿರುವ ಮಾಹಿತಿಗಳೊಂದಿಗೆ ಸಂಶೋಧನೆಗೆ ಸಂಬಂಧಿಸಿದ ವಿಷಯಗಳನ್ನು ವಿಶ್ಲೇಷಣೆಗೆ ಒಳಪಡಿಸಿ, ಆ ಕ್ಷೇತ್ರಗಳಲ್ಲಿ ವಿವಿಧ ಸಮಸ್ಯೆಗಳನ್ನು ಸರಳೀಕರಣಗೊಳಿಸುವಂತಹ ನಿವಾರಣೋಪಾಯಗಳನ್ನು ಕಂಡುಕೊಳ್ಳಲು ಆಯಾ ಕ್ಷೇತ್ರದಲ್ಲಿರುವ ಮಾಹಿತಿಯು ಅತ್ಯಂತ ಪ್ರಮುಖವಾಗಿ ಕಂಡು ಬರುತ್ತದೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಒಟ್ಟು ಏಳು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಪ್ರಸ್ತಾವನೆಯನ್ನು, ಎರಡನೆಯ ಭಾಗದಲ್ಲಿ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ, ಮೂರನೆಯ ಭಾಗದಲ್ಲಿ ಜಿಲ್ಲೆಯ ಭೌಗೋಳಿಕತೆಯನ್ನು ನಾಲ್ಕನೆಯ ಭಾಗದಲ್ಲಿ ಜಿಲ್ಲೆಯ ಸಂಕ್ಷಿಪ್ತ ನೋಟ ಇದರಲ್ಲಿ ಜಿಲ್ಲೆಯ ವಿಸ್ತೀರ್ಣ, ಆಡಳಿತ ಮಾನವ ಸಂಪನ್ಮೂಲ, ಜನ ಸಾಂದ್ರತೆ, ಲಿಂಗ ನಿಷ್ಪತ್ತಿಯ ಮಾಹಿತಿಯನ್ನು ನೀಡಲಾಗಿದೆ. ಐದನೆಯ ಭಾಗದಲ್ಲಿ ಸಾಮಾಜಿಕ ಮತ್ತು ಆರ್ಥಿಕ ವಿವರವನ್ನು, ಆರನೆಯ ಭಾಗದಲ್ಲಿ ದೇಶದಲ್ಲಿ ಕಬ್ಬಿಣ ಅದಿರಿನ ಮೀಸಲಾಗಿರುವ ಪ್ರಮಾಣದ ವಿವರವನ್ನು, ಜಿಲ್ಲೆಯ ಗಣಿಗಾರಿಕೆಗೆ ಸಂಬಂಧಿಸಿದ ವಿವರ ಇದನ್ನು ಕರ್ನಾಟಕ ರಾಜ್ಯದ ಒಟ್ಟು ಅಂಕಿ–ಅಂಶಗಳೊಂದಿಗೆ ಹೋಲಿಕೆ ಮಾಡಿರುವ ವಿವರವನ್ನು ನೀಡಲಾಗಿದೆ. ಏಕೆಂದರೆ ಇಂತಹ ಕ್ರಮದಿಂದ ರಾಜ್ಯದಲ್ಲಿ ಜಿಲ್ಲೆಯ ಸ್ಥಾನಮಾನಗಳನ್ನು ಅರಿಯಲು ಸಹಾಯಕವಾಗುತ್ತದೆ. ಕೊನೆಯ ಭಾಗದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗಣಿ ವಲಯಗಳಾದ ಬಳ್ಳಾರಿ–ಹೊಸಪೇಟೆ– ಸಂಡೂರು ತಾಲ್ಲೂಕುಗಳು ಮತ್ತು ಪ್ರತಿಯೊಂದು ತಾಲ್ಲೂಕಿನಲ್ಲಿ ಮೂರು ಮೂರು ಹಳ್ಳಿಯಂತೆ ಒಟ್ಟು ಒಂಬತ್ತು ಹಳ್ಳಿಗಳ ಸವಿವರವಾದ ಸಾಮಾಜಿಕ ಮತ್ತು ಆರ್ಥಿಕ ಮಾಹಿತಿಯನ್ನು ನೀಡಲಾಗಿದೆ.

## ೨.೨ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ಬಾಲರಿ ಎಂಬ ಪದದಿಂದ ಬಂದಿದೆ. ಇದು ದುರ್ಗಮ್ಮದೇವಿಯನ್ನು ಉಲ್ಲೇಖಿಸುತ್ತದೆ ಹಾಗೂ ರಾಮಾಯಣದ ಕೆಲವು ಸಂಗತಿಗಳು ಈ ಐತಿಹಾಸಿಕ ಸ್ಥಳಕ್ಕೆ ಸಂಬಂಧಿಸಿವೆ. ರಾಮಾಯಣದಲ್ಲಿ ಸೀತಾಳನ್ನು ಹುಡುಕುತ್ತಿರುವಾಗ ಶ್ರೀರಾಮ ಸುಗ್ರೀವ ಮತ್ತು ಹನುಮಂತನನ್ನು ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ರಾಜಧಾನಿಯಾದ ಹಂಪಿಯ ಹತ್ತಿರವಿರುವ ಸ್ಥಳದಲ್ಲಿ ಬೇಟಿಯಾಗಿದ್ದಾನೆಂಬ ಐತಿಹ್ಯವಿದೆ. ಇತಿಹಾಸಿಕವಾಗಿ ಶಾತವಾಹನರು, ಕದಂಬರು, ಕಲ್ಯಾಣರು, ಚಾಲುಕ್ಯರು, ಸಾವಣರು, ಹೊಯ್ಸಳರು ಮತ್ತು ಚಾಲುಕ್ಯರ ಕಾಲದಲ್ಲಿ ಸ್ವಾಧೀನ ಪಡಿಸಲಾಯಿತು. ಅಲ್ಲಿ ವಿಜಯನಗರ ಆಡಳಿತಗಾರರ ಮೇಲೆ ಹೊಸಪೇಟೆ ತಾಲ್ಲೂಕಿನ ಹಂಪೆಯಲ್ಲಿ ತುಂಗಭದ್ರ ನದಿಯ ತೀರದಲ್ಲಿ ವಿಕ್ಟರಿ ನಗರವನ್ನು ನಿರ್ಮಿಸಿದರು. (೧೫೬೫ರಲ್ಲಿ ವಿಜಯನಗರ ಪತನದ ನಂತರ ಈ ಪ್ರದೇಶವು ಉತುಂಗಕ್ಕೆ ಏರಿತು. ಈ ಜಿಲ್ಲೆಯು ರಾಜಕೀಯ ಪ್ರಕ್ಷುಬ್ಧತೆಗೆ ಒಳಗಾಯಿತು. ಈ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯದಿಂದ ಅಕ್ಟೋಬರ್ ೧, ೧೯೫೩ ರಂದು ಮೈಸೂರು ಪ್ರಾಂತ್ಯಕ್ಕೆ ವರ್ಗಾಯಿಸಲಾಯಿತು. ೧೯೯೭ರಲ್ಲಿ ಜಿಲ್ಲೆಯ ಮರು ವಿಂಗಡನೆಯ ಸಂಘಟನೆಯೊಂದಿಗೆ ತಾಲ್ಲೂಕುಗಳ ಸಂಖ್ಯೆ ೯ಕ್ಕೆ ಇಳಿಸಲಾಯಿತು. ಕ್ರಿ.ಶ. ೧೫೬೫ರಲ್ಲಿ ವಿಜಯನಗರ

ಪತನಗೊಂಡ ನಂತರ ರಾಜಕೀಯ ಪಕ್ಷಗಳು ಪ್ರಬುದ್ಧವಾಗಿ ಬೆಳೆಯಿತು. ಈ ಸ್ಥಳವನ್ನು ಎರಡು ಶತಮಾನದವರೆಗೂ ಉತ್ತರದಿಂದ ಮುಸ್ಲಿಂ ದಾಳಿಕೋರರ ಪಡೆಗಳು ಮುಂದುವರೆದು ಕೊಳ್ಳೆಯಲ್ಲಿ ಸಾಮ್ರಾಜ್ಯದ ವೈಭವವನ್ನು ಮೆರೆದ ರಾಜಧಾನಿಯಾಗಿ ಬೆಳೆಯಿತು. ಕ್ರಿ.ಶ.೧೫೬೫ರಲ್ಲಿ ಡೆಕ್ಕನ್ ಸುಲ್ತಾನರ ಒಕ್ಕೂಟದ ಪಡೆಗಳು ದಾಳಿಗೊಳಗಾದ ದಾಳಿಯು ರಕ್ಕಸ ತಂಗಡಿಯಲ್ಲಿ ನಡೆದ ಯುದ್ಧಕ್ಕೆ ಕಾರಣವಾಯಿತು. ಇದು ತಾಳಿಕೋಟೆ ಕದನದಲ್ಲಿ ಐತಿಹಾಸಿಕ ದಾಖಲೆಗಳಲ್ಲಿ ಉಲ್ಲೇಖವಾಗಿದೆ. ಈ ಅದ್ಭುತವಾದ ಸಾಮ್ರಾಜ್ಯ ನಾಶಗೊಂಡಾಗ ಅದರ ರಾಜಧಾನಿಯು ಸಂಪೂರ್ಣವಾಗಿ ಅವಶೇಷಗಳೊಂದಿಗೆ ಅಂತ್ಯವಾಯಿತು. ವಿಜಯನಗರ ಸಾಮ್ರಾಜ್ಯ ಕುಸಿತದ ನಂತರ ಹಲವಾರು ದಶಕಗಳ ಕಾಲ ಈ ಪ್ರದೇಶದ ಆಳ್ವಿಕೆಯಲ್ಲಿ ಗೊಂದಲಮಯ ಸನ್ನಿವೇಶವು ಉಂಟಾಯಿತು. ಅಲ್ಲಿದ್ದ ಹಲವು ಪಾಳೆಗಾರರು, ಸುಲ್ತಾನರ ಅಧಿಪತ್ಯದಲ್ಲಿ ಸಣ್ಣ ಪುಟ್ಟ ರಾಜ್ಯಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ನಂತರ ಔರಂಗಜೇಬ್ ಡೆಕ್ಕನ್ ಪ್ರದೇಶವನ್ನು ವಶಪಡಿಸಿಕೊಂಡಾಗ ಬಳ್ಳಾರಿ ಜಿಲ್ಲೆಯು ಮೊಘಲ್ ಸಾಮ್ರಾಜ್ಯದ ಭಾಗವಾಗಿ ಸೇರ್ಪಡೆಯಾಗಿತ್ತು. ತರುವಾಯ ಈ ಪ್ರದೇಶ ಮರಾಠರ ಆಳ್ವಿಕೆಗೆ ಒಳಪಟ್ಟಿತ್ತು. ಈ ಪ್ರಾಂತ್ಯವನ್ನು ಮೈಸೂರಿನ ಹೈದರಾಲಿಯು ಆಳ್ವಿಕೆಯನ್ನು ನಡೆಸುತ್ತಿದ್ದನು, ತದನಂತರ ೧೭೯೯ರಲ್ಲಿ ಹೈದಾರಲಿಯ ಉತ್ತರಾಧಿಕಾರಿಯಾದ ಟಿಪ್ಪುಸುಲ್ತಾನ್ ಬ್ರಿಟಿಷರ ಕೈಯಲ್ಲಿ ಸೋತಾಗ, ಟಿಪ್ಪು ಸಾಮ್ರಾಜ್ಯದ ಹಲವು ಭಾಗಗಳನ್ನು ಮೈಸೂರು ಒಡೆಯರಿಗೆ ನೀಡಲಾಯಿತು. ಆದರೆ ಬಳ್ಳಾರಿ ಮತ್ತು ಅದರ ಅಕ್ಕ ಪಕ್ಕದ ಪ್ರದೇಶಗಳು ಹೈದರಾಬಾದ್ ನಿಜಾಮರಿಗೆ ಸೇರಿತು. ೧೮೦೦ರಲ್ಲಿ ನಿಜಾಮರು ಬಳ್ಳಾರಿ ಮತ್ತು ಅದರ ಅಕ್ಕ ಪಕ್ಕದ ಪ್ರದೇಶಗಳನ್ನು ಬ್ರಿಟೀಷರಿಗೆ ಬಿಟ್ಟುಕೊಟ್ಟರು. ತರುವಾಯ ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಯ ಭಾಗವಾಯಿತ್ತು. ಮೊದಲಿಗೆ ಈ ಪ್ರೆಸಿಡೆನ್ಸಿಯಲ್ಲಿ ೧೫ ತಾಲ್ಲೂಕುಗಳು ಒಳಗೊಂಡಿತ್ತು. ೧೮೮೨ರಲ್ಲಿ ಈ ಪ್ರದೇಶವನ್ನು ಬಳ್ಳಾರಿ ಮತ್ತು ಅನಂತಪುರ ಎಂಬ ಎರಡು ಜಿಲ್ಲೆಯನ್ನಾಗಿ ವಿಂಗಡಿಸಲಾಯಿತು. ಬಳ್ಳಾರಿಯಲ್ಲಿ ೮ ತಾಲ್ಲೂಕುಗಳನ್ನು ಮತ್ತು ಅನಂತಪುರ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಾಗಿ ವಿಭಜಿಸಲಾಯಿತು. ಆದರೆ ಎಲ್ಲಾ ಸಮಯದಲ್ಲಿ ಪಾಳೆಗಾರರು ಸರ್ವೋತ್ತಮ ಆಳ್ವಿಕೆಯಲ್ಲಿದ್ದರು. ಅವರ ಗಲಭೆಗಳಿಂದ ಕೃಷಿ ಭೂಮಿಯು ಹಾನಿಕರಕ್ಕೆ ಒಳಗಾಗಿರುವುದರಿಂದ ಅದನ್ನು ವಿಮೋಚನೆ ಮಾಡಿದರು. ನಂತರ ಮೇಜರ್ ಮನ್ರೋ ಎಂದು ಕರೆಯಲ್ಪಡುವ ಸರ್ ಥಾಮಸ್ ಮನ್ರೋ ರವರು ಬಳ್ಳಾರಿ ಜಿಲ್ಲೆಯ ಮೊದಲ ಕಲೆಕ್ಟರ್ ಆಗಿದ್ದರು. ಇವರ ವ್ಯಾಪ್ತಿಯಲ್ಲಿ ಕಡಪ, ಅನಂತಪುರ, ಕರ್ನೂಲ್ ಮತ್ತಿತರ ಜಿಲ್ಲೆಗಳಿದ್ದವು. ಸರ್ ಥಾಮಸ್ ರವರು ಪಾಳೆಗಾರರಲ್ಲಿ ಕಾರ್ಯ ವಿಧಾನವನ್ನು ಬೆಳೆಸುವುದು ಮುಖ್ಯ ಧ್ಯೇಯವಾಗಿತ್ತು. ಆದರೆ ಈ ಕಾರ್ಯ ವಿಧಾನವು ವರ್ಗಗಳನ್ನು ಬೆಳೆಸಿತು. ರಾಪುರಿ ಹೇಳಿಕೆಯ ಪ್ರಕಾರ ಈ ಪ್ರದೇಶದಲ್ಲಿ ಶಾಂತಿ ಮತ್ತು ತೃಪ್ತಿಯ ಮಟ್ಟವನ್ನು ತರಲು ನೆರವಾಯಿತು.

ಬ್ರಿಟೀಷರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯು ಕೇಂದ್ರ ಪಟ್ಟಣವಾದ ಒಂದು ಕಂಟೋನ್ಮೆಂಟ್ ಆಗಿ ಪ್ರಾಮುಖ್ಯತೆಯನ್ನು ಪಡೆದಿತ್ತು. ಇದಲ್ಲದೇ ೧೯೨೬ರಲ್ಲಿ ಸುಮಾರು ೪೦೦ ಕಿ.ಮೀ.ಗಳಷ್ಟು ಪ್ರದೇಶವನ್ನು ಬ್ರಿಟೀಷರು ಸ್ವತಂತ್ರ ರಾಜ್ಯವಾಗಿ ಆಳ್ವಿಕೆ ಮಾಡುತ್ತಿದ್ದರು. ೧೯೪೭ರಲ್ಲಿ ಸ್ವತಂತ್ರವಾದ ನಂತರ ಬ್ರಿಟೀಷರು ೧೯೪೯ ಏಪ್ರಿಲ್ ೧ ರಂದು ಸಂಡೂರಿನ ಆಡಳಿತವನ್ನು ನವಾಬರಿಗೆ ವಹಿಸುವ ಒಪ್ಪಂದಕ್ಕೆ ಸಹಿ ಹಾಕಲಾಯಿತು. ನಂತರ ಇದು ಭಾರತದ ರಾಜ್ಯಕ್ಕೆ ಸೇರ್ಪಡೆಯಾಯಿತು. ೧೯೫೦ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿ – ಹೊಸಪೇಟೆಯ ಕೆಲವು ಗ್ರಾಮಗಳನ್ನು ಸೇರಿಸಿ ಸಂಡೂರು ಪ್ರತ್ಯೇಕ ತಾಲ್ಲೂಕ್ಕಾಗಿ ಸೇರ್ಪಡೆ ಮಾಡಲಾಯಿತು. ಬಳ್ಳಾರಿ ಜಿಲ್ಲೆಯನ್ನು ೧೯೫೩ರಲ್ಲಿ ರಾಜ್ಯ ಕಾಯ್ದೆಯ ಪರಿಣಾಮವಾಗಿ ಮದ್ರಾಸ್ ಪ್ರಾಂತ್ಯದ ಜಿಲ್ಲೆಯಾದ ಬಳ್ಳಾರಿಯಲ್ಲಿ ಒಟ್ಟು ಹತ್ತು ತಾಲ್ಲೂಕುಗಳಿದ್ದವು. ಈ ಹತ್ತು ತಾಲ್ಲೂಕುಗಳ ಪೈಕಿ ಆದೋನಿ, ಆಲೂರು, ರಾಯದುರ್ಗವನ್ನು ಹೊಸದಾಗಿ ಆಂಧ್ರಪ್ರದೇಶಕ್ಕೆ ಸೇರಿಸಲಾಯಿತು. ಇನ್ನುಳಿದ ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ, ಸಂಡೂರು, ಹರಪ್ಪನಹಳ್ಳಿ, ಕೂಡ್ಲಿಗಿ, ಹಡಗಲಿ – ಮಲಪ್ಪುರಂ ಮೊದಲಾದ ೮ ತಾಲ್ಲೂಕುಗಳನ್ನು ನವೀಕರಿಸಲಾಯಿತು. ಇದರ ಪರಿಣಾಮವಾಗಿ ಜಿಲ್ಲೆಯಲ್ಲಿ ೮ ತಾಲ್ಲೂಕುಗಳವರೆಗೆ ಸ್ಥಳಾಂತರಗೊಂಡವು. ೧೯೭೪ರಲ್ಲಿ ಮಲ್ಲಪುರಂ ತಾಲ್ಲೂಕನ್ನು ರದ್ದುಪಡಿಸಿ ಹಗರಿಬೊಮ್ಮನಹಳ್ಳಿ ಎಂಬ ಹೊಸ ಹೆಸರಿನ ತಾಲ್ಲೂಕು ರಚನೆಯಾಯಿತು. ಈ ಸಂದರ್ಭದಲ್ಲಿ ಒಂದು ತಾಲ್ಲೂಕಿನಿಂದ ಮತ್ತೊಂದು ತಾಲ್ಲೂಕಿಗೆ ಹಳ್ಳಿಗಳ ವರ್ಗಾವಣೆಯ ಕಾರಣದಿಂದಾಗಿ ಈ ಮೂರು ತಾಲ್ಲೂಕುಗಳು

ಅಂದರೆ ಕೂಡ್ಲಿಗಿ - ಹಡಗಲಿ - ಹೊಸಪೇಟೆ ಗಡಿಗಳಲ್ಲಿ ಗಣನೀಯ ಬದಲಾವಣೆಗಳಾಗಿವೆ. ೧೯೯೭ರಲ್ಲಿ (ಬಳ್ಳಾರಿ) ಜಿಲ್ಲೆಯ ಮರು ಸಂಘಟನೆಯೊಂದಿಗೆ ತಾಲ್ಲೂಕುಗಳ ಸಂಖ್ಯೆಯನ್ನು ೭ಕ್ಕೆ ಇಳಿಸಿ, ಹರಪ್ಪನಹಳ್ಳಿ ತಾಲ್ಲೂಕನ್ನು ದಾವಣಗೆರೆ ಜಿಲ್ಲೆಗೆ ವರ್ಗಾಯಿಸಲಾಯಿತು. ಪ್ರಸ್ತುತವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ, ಬಳ್ಳಾರಿ ಸಿರುಗುಪ್ಪ, ಕೂಡ್ಲಿಗಿ, ಸಂಡೂರು, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ಎಂಬ ಒಟ್ಟು ಏಳು ತಾಲ್ಲೂಕುಗಳಿವೆ. ಪ್ರಸ್ತುತ ಆಡಳಿತಾತ್ಮಕವಾಗಿ ಬಳ್ಳಾರಿ ಜಿಲ್ಲೆಯು ೫೨೪ ಗ್ರಾಮಗಳನ್ನು, ೧೯೮ ಗ್ರಾಮ ಪಂಚಾಯತ್‌ಗಳನ್ನು, ಒಂದು ನಗರ ಸಭೆ (ಬಳ್ಳಾರಿ ನಗರ), ಒಂದು ನಗರ ಪುರಸಭೆ (ಹೊಸಪೇಟೆ), ನಾಲ್ಕು ಪಟ್ಟಣ ಪುರಸಭೆಗಳನ್ನು (ಹಡಗಲಿ, ಸಂಡೂರು, ಸಿರುಗುಪ್ಪ ಮತ್ತು ಕಂಪ್ಲಿ), ನಾಲ್ಕು ಪಟ್ಟಣ ಪಂಚಾಯತಿಗಳನ್ನು (ಕಮಲಾಪುರ, ಕೂಡ್ಲಿಗಿ, ಕೊಟ್ಟೂರು, ತೆಕ್ಕಲಕೋಟೆ) ಹೊಂದಿದೆ. ಜಿಲ್ಲೆಯಲ್ಲಿ ಪ್ರವಾಸಿ ತಾಣವಾಗಿ ಗುರುತಿಸಲ್ಪಟ್ಟಿದ್ದು, ಅದರಲ್ಲಿ ಹಂಪಿಯು ಯೂನಸ್ಕೋದಿಂದ ಸಾಂಸ್ಕೃತಿಕವಾಗಿ ಪರಂಪರೆಯಾಗಿ ಗುತಿಸಲ್ಪಟ್ಟಿರುವ ಹಾಗೂ ಪ್ರಪಂಚದಾದ್ಯಂತ ಪ್ರವಾಸಿಗರನ್ನು ಆರ್ಕಸಿಸುವಲ್ಲಿ ಹೆಸರುವಾಸಿಯಾಗಿದೆ.

**೨.೩ ಜಿಲ್ಲೆಯ ಭೌಗೋಳಿಕತೆ**

ಜಿಲ್ಲೆಯ ಭೌಗೋಳಿಕತೆಯಲ್ಲಿ ಸರಹದ್ದು, ಪ್ರಾಕೃತಿಕ ಲಕ್ಷಣ, ಮಣ್ಣಿನ ನಮೂನೆ, ಭೂ ವಿಜ್ಞಾನ ಮತ್ತು ಹವಾಮಾನಗಳ ವಿವರಣೆಯನ್ನು ನೀಡಲಾಗಿದೆ.

**೨.೩.೧ ಸರಹದ್ದು** : ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವಭಾಗದ ಮಧ್ಯದಲ್ಲಿ ದಕ್ಷಿಣೋತ್ತರದವರೆಗೆ ಹರಡಿದೆ. ೧೫°-೩೦° ಮತ್ತು ೧೫°-೫೦° ಉತ್ತರ ಅಕ್ಷಾಂಶ ಹಾಗೂ ೭೫°-೪೦° ಮತ್ತು ೭೭°-೧೧° ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರಪ್ರದೇಶ ರಾಜ್ಯದ ಕರ್ನೂಲ್ ಮತ್ತು ಅನಂತಪುರ ಜಿಲ್ಲೆಗಳಿಂದ ಆವೃತವಾಗಿದೆ. ಈ ಜಿಲ್ಲೆಯು ಕಲಬುರಗಿ ವಿಭಾಗಿಯ ಆಡಳಿತದ ನಿಯಂತ್ರಣಕ್ಕೆ ಒಳಪಟ್ಟಿದ್ದು, ಮತ್ತು ಹೈದರಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ, ಕಲಬುರಗಿ ವ್ಯಾಪ್ತಿಗೆ ಒಳಪಟ್ಟಿದೆ. ಈ ಜಿಲ್ಲೆಯಲ್ಲಿ ತುಂಗಭದ್ರ ನದಿಯು ಪಶ್ಚಿಮ ಮತ್ತು ಉತ್ತರ ಮೇರೆಯಾಗಿ ಹರಿಯುತ್ತದೆ.

**೨.೩.೨ ಪ್ರಾಕೃತಿಕ ಲಕ್ಷಣ** : ತುಂಗಭದ್ರ ನದಿಯು ನೈಸರ್ಗಿಕ ಮೇರೆಯಾಗಿದ್ದು, ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ಪೂರ್ವದಲ್ಲಿ ಹಗರಿ ನದಿಯು ಹರಿಯುತ್ತದೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಸಾಮಾನ್ಯವಾಗಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿರುತ್ತದೆ. ಸಂಡೂರು ತಾಲ್ಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು, ಅವುಗಳ ಎತ್ತರವು ಸಮುದ್ರ ಮಟ್ಟದಿಂದ ೩,೪೦೦ ಅಡಿ ಇದೆ.

**೨.೪ ಭೂಮಿಯ ಮೇಲ್ಮೈ ಲಕ್ಷಣಗಳು**

**ಮಣ್ಣಿನ ನಮೂನೆ :**

ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ನಮೂನೆಗಳಿವೆ. ಬಳ್ಳಾರಿ ತಾಲ್ಲೂಕು ಒಂದರಲ್ಲಿ ಕಪ್ಪುಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪು ಮೂಲದ ಮಣ್ಣು ಫಲವತ್ತಾಗಿದ್ದು, ಹೆಚ್ಚಿನ ನೀರಿನ ಅಂಶವನ್ನು ಹಿಡಿದಿಟ್ಟುಕೊಳ್ಳುವ ಗುಣವನ್ನು ಹೊಂದಿದೆ. ಈ ಕಪ್ಪು ಮಣ್ಣು ಶೇ.೬೦ರಷ್ಟು ಜೇಡಿ ಮಣ್ಣಿನಿಂದ ಕೂಡಿರುತ್ತದೆ. ಹೊಸಪೇಟೆ, ಹಡಗಲಿ, ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕಿನಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು, ಜಿಗಿಟ್ಟುಮಣ್ಣು ದೊರೆಯುತ್ತದೆ. ತುಂಗಭದ್ರ ಜಲಾಶಯದಲ್ಲಿನ ಕಪ್ಪು ಮಣ್ಣಿನಲ್ಲಿ ಎರಡರಿಂದ ನಾಲ್ಕು ಅಡಿವರೆಗೆ ಆಳವಾಗಿಯು ಮತ್ತು ಮಣ್ಣಿನ ರಚನೆಯಲ್ಲಿ ಭಾರವಾಗಿದ್ದು ಶೇ.೪೫ ರಿಂದ ಶೇ.೫೮ರಷ್ಟು ಜಿಗಿಟುವುಳ್ಳ ಮಣ್ಣಿನಿಂದ ಕೂಡಿರುತ್ತದೆ. ಭೂ ಗರ್ಭದಲ್ಲಿ ನೀರು ೬.೫ ಮೀ. ನಿಂದ ೩೫ ಮೀ.ಗಳವರೆಗೆ ಇರುತ್ತದೆ.

**ಭೂವಿಜ್ಞಾನ** : ಜಿಲ್ಲೆಯು ಕರ್ನಾಟಕ ಪ್ರಕೇಂಬಿಯಾ ಭೂ ಭಾಗವಾಗಿದ್ದು, ಕಲ್ಲು ಮತ್ತು ಬೆಂಚುಗಳಿಂದ ಕೂಡಿದೆ. ಇಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳು ಹೇರಳವಾಗಿ ದೊರೆಯುವ ಪ್ರಮುಖ ಖನಿಜಗಳಾಗಿವೆ. ಅತಿ ಹೆಚ್ಚು ಅದಿರು ದೊರೆಯುವ ಪ್ರದೇಶಗಳು ಶೇ ೭೩-೭೫ರಷ್ಟು ಸಂಡೂರು ತಾಲ್ಲೂಕಿನಲ್ಲಿದ್ದು, ಹೊಸಪೇಟೆಯು ೨ನೇ ಸ್ಥಾನದಲ್ಲಿದೆ.

**ಹವಾಮಾನ** : ಜಿಲ್ಲೆಯ ಹವಾಮಾನವು ವರ್ಷದಲ್ಲಿ ಹೆಚ್ಚಿನ ಭೂ ಭಾಗವಾಗಿದ್ದು ಬೇಸಿಗೆಯಲ್ಲಿ ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್ ತಿಂಗಳಿನಿಂದ ಫೆಬ್ರುವರಿ ತಿಂಗಳವರೆಗೆ ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶ ೯°ಅ–೧೦°ಅ ಇದ್ದು ಗರಿಷ್ಟ ಉಷ್ಣಾಂಶವು ೩೫°ಅ ವರೆಗೆ ಇರುತ್ತದೆ. ಬೇಸಿಗೆಯ ಕಾಲವು ಮಾರ್ಚ್‌ನಿಂದ ಮೇವರೆಗೆ ಇದ್ದು, ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶತೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಕನಿಷ್ಟ ೧೫°ಅ–೪೪°ಅ ವರೆಗೆ ಉಷ್ಣಾಂಶವಿರುತ್ತದೆ.

**೨.೫ ಜಿಲ್ಲೆಯ ಸಂಕ್ಷಿಪ್ತ ವಿವರ**

ಜಿಲ್ಲೆಯ ಸಂಕ್ಷಿಪ್ತ ನೋಟದಲ್ಲಿ ಪ್ರಮುಖವಾಗಿ ಜಿಲ್ಲೆಯ ವಿಸ್ತೀರ್ಣ, ಆಡಳಿತ, ಮಾನವ ಸಂಪನ್ಮೂಲ, ಜನಸಾಂದ್ರತೆ, ಲಿಂಗ ನಿಷ್ಪತ್ತಿಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೨.೫.೧ ವಿಸ್ತೀರ್ಣ ಮತ್ತು ಆಡಳಿತ**

ಜಿಲ್ಲೆಯು ೮,೪೫೦ ಚ.ಕೀಮೀ. ಹೊಂದಿದ್ದು, ರಾಜ್ಯದ ವಿಸ್ತೀರ್ಣದಲ್ಲಿ ಶೇ.೬ರಷ್ಟು ವಿಸ್ತೀರ್ಣವನ್ನು ಹೊಂದಿದೆ. ವಿಸ್ತೀರ್ಣದಲ್ಲಿ ಜಿಲ್ಲೆಯು ೪ನೇ ಸ್ಥಾನ ಪಡೆದಿದೆ. ಜಿಲ್ಲೆಯ ವಿಸ್ತೀರ್ಣದಲ್ಲಿ ಬಳ್ಳಾರಿ ತಾಲ್ಲೂಕು ೧,೬೮೯ ಚ.ಮೀ. ವಿಸ್ತೀರ್ಣವನ್ನು ಹೊಂದಿದ್ದು, ಜಿಲ್ಲೆಯ ವಿಸ್ತೀರ್ಣದಲ್ಲಿ ಶೇ.೨೦ರಷ್ಟು ವಿಸ್ತೀರ್ಣ ಬಳ್ಳಾರಿ ತಾಲ್ಲೂಕಿನದಾಗಿದೆ. ಈ ಬಳ್ಳಾರಿ ತಾಲ್ಲೂಕು ಜಿಲ್ಲೆಯಲ್ಲಿಯೇ ಹೆಚ್ಚು ವಿಸ್ತೀರ್ಣವನ್ನು ಹೊಂದಿದ ತಾಲ್ಲೂಕಾಗಿದೆ. ಅತಿ ಕಡಿಮೆ ವಿಸ್ತೀರ್ಣವನ್ನು ಹೊಂದಿದ ತಾಲ್ಲೂಕು ಹೊಸಪೇಟೆಯಾಗಿದೆ. ಹೊಸಪೇಟೆ ತಾಲ್ಲೂಕು ೯೩೪ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದ್ದು, ಅದು ಜಿಲ್ಲೆಯಲ್ಲಿ ಶೇ.೧೧ರಷ್ಟು ವಿಸ್ತೀರ್ಣವನ್ನು ಹೊಂದಿದೆ. ಜಿಲ್ಲೆಯು ಬಳ್ಳಾರಿ, ಹಡಗಲಿ, ಹೆಚ್.ಬಿ.ಹಳ್ಳಿ, ಹೊಸಪೇಟೆ ಕೂಡ್ಲಿಗಿ, ಸಂಡೂರು ಮತ್ತು ಸಿರುಗುಪ್ಪ ತಾಲ್ಲೂಕುಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಪ್ರಸ್ತುತ ಏಳು ತಾಲ್ಲೂಕುಗಳಿವೆ. ಜಿಲ್ಲೆಯ ಕೇಂದ್ರ ಸ್ಥಾನ ಬಳ್ಳಾರಿಯಾಗಿದ್ದು, ಇದು ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ೩೦೪ ಕಿಲೋ.ಮೀಟರ್ ದೂರದಲ್ಲಿದೆ. ಬಳ್ಳಾರಿ ಜಿಲ್ಲೆಯಲ್ಲಿ ಒಂದು ಮಹಾನಗರ ಪಾಲಿಕೆ ಬಳ್ಳಾರಿ ಒಂದು ನಗರಸಭೆ, ಹೊಸಪೇಟೆ, ನಾಲ್ಕು ಪುರಸಭೆಯನ್ನು ಹೊಂದಿದೆ. (ಕಂಪ್ಲಿ, ಸಿರುಗುಪ್ಪ, ಹಡಗಲಿ, ಸಂಡೂರು) ಹಾಗೂ ನಾಲ್ಕು ಪಟ್ಟಣ ಪಂಚಾಯಿತಿಗಳಿವೆ. (ಕಮಲಾಪುರ ತೆಕ್ಕಲಕೋಟೆ, ಕೊಟ್ಟೂರು, ಕೂಡ್ಲಿಗಿ) ಜಿಲ್ಲೆಯಲ್ಲಿ ಒಟ್ಟು ೧೯ ನಿಯಂತ್ರಿತ ಮಾರುಕಟ್ಟೆಗಳಿವೆ. ಈ ಜಿಲ್ಲೆಯಲ್ಲಿ ೫೫೪ ಗ್ರಾಮಗಳಿದ್ದು, ಅವುಗಳಲ್ಲಿ ೫೨೪ ಜನವಸತಿ ಇರುವ ಗ್ರಾಮಗಳಾಗಿದ್ದು, ೩೦ ಗ್ರಾಮಗಳು ಜನವಸತಿ ಇಲ್ಲದ ಗ್ರಾಮಗಳಾಗಿವೆಂಬ ಅಂಶಗಳನ್ನು ಕೊಷ್ಟಕ ೨.೧ರಲ್ಲಿ ಗಮನಿಸಿ.

**ಕೊಷ್ಟಕ ೨.೧ ಬಳ್ಳಾರಿ ಜಿಲ್ಲಾ ಸಾಮಾನ್ಯ ಮಾಹಿತಿ**

| ತಾಲ್ಲೂಕುಗಳು | ಭೌಗೋಳಿಕ ಪ್ರದೇಶ | ಗ್ರಾಪಂಗಳ ಸಂಖ್ಯೆ | ವಸತಿ ಗ್ರಾಮಗಳು | ವಸತಿ ರಹಿತ ಗ್ರಾಮಗಳು | ಪಟ್ಟಣಗಳ ಸಂಖ್ಯೆ |
|---|---|---|---|---|---|
| ಬಳ್ಳಾರಿ | ೧,೬೮೮.೫೯ | ೪೦ | ೯೯ | ೪ | ೧ |
| ಹೊಸಪೇಟೆ | ೯೦೪.೧೭ | ೨೩ | ೬೮ | ೬ | ೩ |
| ಸಂಡೂರು | ೧,೧೫೨.೪೨ | ೨೧ | ೭೬ | ೧೩ | ೧ |
| ಕೂಡ್ಲಿಗಿ | ೧,೬೧೮.೮೭ | ೩೩ | ೮೯ | ೨ | ೨ |
| ಸಿರುಗುಪ್ಪ | ೧,೦೩೬.೧೭ | ೨೬ | ೮೩ | ೧ | ೨ |
| ಹಚ್.ಬಿ ಹಳ್ಳಿ | ೯೭೩.೯೫ | ೨೨ | ೫೩ | ೩ | ೦ |
| ಹಡಗಲಿ | ೯೪೭.೮೨ | ೨೪ | ೫೬ | ೧ | ೧ |
| ಜಿಲ್ಲಾ ಒಟ್ಟು | ೮,೪೫೦.೦೦ | ೧೮೯ | ೫೨೪ | ೩೦ | ೧೦ |

ಮೂಲ: ಬಳ್ಳಾರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ, ೨೦೧೪ (*ಗ್ರಾಮ= ಗ್ರಾಮ ಪಂಚಾಯತ್)

**೨.೫.೨ ಜನಸಂಖ್ಯೆ – ಸಾಕ್ಷರತೆ**

೨೦೧೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ೨,೪೫,೨೫೯೫ ಜನಸಂಖ್ಯೆಯನ್ನು ಹೊಂದಿರುವ ಜಿಲ್ಲೆಯಾಗಿದೆ. ಇದರಲ್ಲಿ ೧೨,೩೬,೯೫೪ ಪುರುಷರ ಜನಸಂಖ್ಯೆಯಾಗಿದ್ದು, ೧೨,೧೫,೬೪೧ ಮಹಿಳೆಯರಿದ್ದಾರೆ. ಜಿಲ್ಲೆಯು ರಾಜ್ಯದ ಜನಸಂಖ್ಯೆಯಲ್ಲಿ ೬ನೇ ಸ್ಥಾನದಲ್ಲಿದೆ.

೧೫,೩೨,೩೫೬ (ಶೇ.೬೨ರಷ್ಟು) ಜನರು ಗ್ರಾಮೀಣ ಪ್ರದೇಶಗಳಲ್ಲಿ ೯,೨೦,೨೪೯ ಜನರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆಯನ್ನು ಹೋಲಿಸಿದರೆ ೨೦೧೧ರಲ್ಲಿ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆ ಪ್ರಮಾಣ ಶೆ.೨೦.೯೯ರಷ್ಟಿದೆ. ಜಿಲ್ಲೆಯು ಪ್ರತಿ ಚದರ ಮೀ.ಗೆ ೨೯೦ ಜನ ಸಾಂದ್ರತೆಯನ್ನು ಹೊಂದಿದ್ದು, ರಾಜ್ಯದ ಜನಸಾಂದ್ರತೆಯಲ್ಲಿ ೧೩ನೇ ಸ್ಥಾನದಲ್ಲಿದೆ. ಜಿಲ್ಲೆಯಲ್ಲಿ ೧೪,೨೧,೬೨೧ ಜನರು ಸಾಕ್ಷರತೆಯನ್ನು ಹೊಂದಿದ್ದಾರೆ. ಅದರಲ್ಲಿ ೮,೧೩,೪೪೦ ಪುರುಷರು ಮತ್ತು ೬,೦೮,೧೮೧ರಷ್ಟು ಮಹಿಳೆಯರು ಸಾಕ್ಷರತೆಯನ್ನು ಹೊಂದಿದ್ದಾರೆ. ಜಿಲ್ಲೆಯಲ್ಲಿ ಸಾಕ್ಷರತೆಯ ಪ್ರಮಾಣವು ಶೇ.೬೭.೪೩ರಷ್ಟಿದರೆ, ಮಹಿಳೆಯರ ಸಾಕ್ಷರತೆ ಶೇ.೫೮.೦೯ ರಷ್ಟು ಮತ್ತು ಪುರುಷರ ಸಾಕ್ಷರತೆಯು ಶೇ.೭೬.೬೪ರಷ್ಟಿದೆ. ಜಿಲ್ಲೆಯ ಗ್ರಾಮಾಂತರ ಪ್ರದೇಶದಲ್ಲಿ ೮,೦೯,೩೧೨ ರಷ್ಟು ಜನರು ಸಾಕ್ಷರತೆಯನ್ನು ಹೊಂದಿದ್ದಾರೆ. ಇದರಲ್ಲಿ ಮಹಿಳೆಯರು ೩,೩೧,೨೧೨ ಸಾಕ್ಷರತೆ ಹೊಂದಿದ್ದರೆ ಪುರುಷರು ೪,೭೮,೧೦೦ರಷ್ಟು ಜನರು ಸಾಕ್ಷರಸ್ಥರಾಗಿದ್ದಾರೆ. ಒಟ್ಟಾರೆ ಜಿಲ್ಲೆಯ ಗ್ರಾಮಾಂತರ ಪ್ರದೇಶದಲ್ಲಿ ಶೇ.೬೧.೮೧ರಷ್ಟು ಸಾಕ್ಷರತೆಯ ಪ್ರಮಾಣವನ್ನು ಮತ್ತು ಮಹಿಳೆಯರು ಶೇ.೮೧.೦೨ರಷ್ಟು ಸಾಕ್ಷರತೆಯ ಪ್ರಮಾಣವನ್ನು ಹೊಂದಿದ್ದಾರೆ. ರಾಜ್ಯದ ಸಾಕ್ಷರತೆಯ ಸರಾಸರಿ ಶೇ.೭೫.೩೬ ರಷ್ಟಿದೆ. ರಾಜ್ಯದ ಸಾಕ್ಷರತೆಗಿಂತ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಕಡಿಮೆ ಇದೆ. ಜಿಲ್ಲೆಯ ಮಹಿಳೆಯರ ಸಾಕ್ಷರತೆಯು ಶೇ.೫೯.೦೯ರಷ್ಟಿದೆ, ರಾಜ್ಯದ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೬೮.೦೮ಕ್ಕಿಂತ ಜಿಲ್ಲೆಯ ಮಹಿಳಾ ಸಾಕ್ಷರತೆ ಕಡಿಮೆ ಇರುವುದು ಶೋಚನಿಯ ಸಂಗತಿಯಾಗಿದೆ ಕೋಷ್ಟಕ ೨.೨ರಲ್ಲಿ ಗಮನಿಸಿ.

**ಕೋಷ್ಟಕ ೨.೨ ಬಳ್ಳಾರಿ ಜಿಲ್ಲೆಯ ಜನಸಂಖ್ಯೆ, ಸಾಕ್ಷರತೆ, ೦-೬ ವಯೋಮಾನದ ಮಕ್ಕಳ ಸಂಖ್ಯೆ ಲಿಂಗಾನುಪಾತ ವಿವರ**

| ವಿವರ | ಜನಸಂಖ್ಯೆ | | | ಸಾಕ್ಷರತೆ (ಶೇಕಡವಾರುಗಳಲ್ಲಿ) | | | ೦-೬ ಮಕ್ಕಳ ಸಂಖ್ಯೆ | | | ಲಿಂಗಾನುಪಾತ |
|---|---|---|---|---|---|---|---|---|---|---|
| | ಜನರು | ಪುರುಷರು | ಮಹಿಳೆಯರು | ಸಾಕ್ಷರತೆ | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ | ಒಟ್ಟು ಮಕ್ಕಳು | ಗಂಡು ಮಕ್ಕಳು | ಹೆಣ್ಣು ಮಕ್ಕಳು | (ಸರಾಸರಿ) |
| ಗ್ರಾಮೀಣ | ೧೫,೩೨,೩೬ | ೭,೭೪,೦೯೩ | ೭,೫೮,೨೬೩ | ೬೧.೮% | ೭೨.೪% | ೫೧.೨೫% | ೨,೨೨,೯೧ | ೧೧೩೯೧೦ | ೧,೦೯,೦೧ | ೯೮೦ |
| ನಗರ | ೪,೫೭,೩೭೮ | ೪,೬೨,೮೬೧ | ೪,೫೭,೩೭೮ | ೭೬.೬% | ೮೩.೬% | ೬೯.೬೨% | ೧,೨೧,೧೧ | ೬೧,೬೩೩ | ೫೯,೫೪೮ | ೯೫೭ |
| ಒಟ್ಟು | ೨೪,೫೨,೫೫ | ೧೨,೩೬,೯೪ | ೧೨,೧೫,೬೧ | ೬೭.೪% | ೭೬.೬% | ೫೮.೦೯% | ೩,೪೪,೧೨ | ೧,೭೫,೫೩ | ೧,೬೮,೬೯ | ೯೮೩ |

ಮೂಲ: ೨೦೧೧ರ ಜನಗಣತಿ, ಭಾರತ ಮತ್ತು ಜಿಲ್ಲಾ ಅಧಿಕೃತ ವೆಬ್‌ಸೈಟ್ ದತ್ತಾಂಶ

### ಲಿಂಗ ನಿಷ್ಪತ್ತಿ

ಲಿಂಗ ನಿಷ್ಪತ್ತಿಯು ಒಂದು ಪ್ರದೇಶದ ಜನಸಂಖ್ಯೆಯ ಗುಣಮಟ್ಟ ತಿಳಿಸುವ ಮತ್ತು ಅದರ ಸಾಮಾಜಿಕ, ಆರ್ಥಿಕ ಸ್ಥಿತಿಯ ಮೇಲೆ ಬೆಳಕು ಚೆಲ್ಲುವ ಪ್ರಮುಖವಾದ ಅಂಶವಾಗಿದೆ. ಪ್ರತಿ ಸಾವಿರ ಪುರಿಷರಿಗೆ ಇರುವ ಮಹಿಳೆಯರ ಪ್ರಮಾಣ ಅಂದರೆ ಲಿಂಗ ನಿಷ್ಪತ್ತಿಯಾಗಿದೆ. ಈ ಅನುಪಾತ ಬಳ್ಳಾರಿ ಜಿಲ್ಲೆಯಲ್ಲಿ ಲಿಂಗಾನುಪಾತವು ೧೦೦೦ ಪುರುಷರಿಗೆ ೯೮೮ ಮಹಿಳೆಯರ ಪ್ರಮಾಣ ಇರುವುದು ಕಂಡು ಬಂದಿದೆ. ಗ್ರಾಮಾಂತರ ಪ್ರದೇಶದ ಲಿಂಗಾನುಪಾತವು ಪ್ರತಿ ಸಾವಿರಕ್ಕೆ ೯೮೦ರಷ್ಟಿದ್ದು, ನಗರ ಪ್ರದೇಶಗಳಲ್ಲಿ ೯೮೮ರಷ್ಟು ಲಿಂಗಾನುಪಾತವನ್ನು ಹೊಂದಿದೆ. ರಾಜ್ಯದ ಲಿಂಗಾನುಪಾತ ೯೭೩ ರಷ್ಟಿದೆ. ರಾಜ್ಯಕ್ಕೆ ಹೋಲಿಸಿಕೊಂಡರೆ ಜಿಲ್ಲೆಯ ಲಿಂಗಾನುಪಾತವು ಉತ್ತಮವಾಗಿರುವುದು ಕಂಡುಬಂದಿದೆ. ಆದರೂ ಪ್ರತಿ ೧೦೦೦ ಪುರುಷರಿಗೆ ೧೨ ಮಹಿಳೆಯರ ಲಭ್ಯತೆಯ ಕೊರತೆಯಿದೆ.

### ೨.೬ ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ವಿವರ

ಜಿಲ್ಲೆಯ ಸಾಮಾಜಿಕ ಅಂಶವಾಗಿ ಶಿಕ್ಷಣ, ಮೂಲಭೂತ ಸೌಕರ್ಯಗಳು, ಆರೋಗ್ಯ, ಪಡಿತರ ಚೀಟಿ ಹಾಗೂ ಆರ್ಥಿಕ ಅಂಶವಾದ ಕೃಷಿ, ಭೂ ಹಿಡುವಳಿದಾರರು, ಭೂಮಿಯ ಬಳಕೆಗಳ ವಿವರಣೆಯನ್ನು ನೀಡಲಾಗಿದೆ.

### ೨.೬.೧ ಸಾಮಾಜಿಕ ಅಂಶಗಳು

ಶಿಕ್ಷಣ, ಆರೋಗ್ಯ, ಮೂಲಸೌಕಾರ್ಯ ಸಾಮಾಜಿಕ ಅಂಶಗಳ ವಿವರಣೆಯನ್ನು ಈ ಕೆಳಗಿನಂತೆ ತಿಳಿಸಲಾಗಿದೆ

**ಶಿಕ್ಷಣ** : ಜಿಲ್ಲೆಯಲ್ಲಿ ೧,೮೯೩ ಪ್ರಾಥಮಿಕ ಶಾಲೆಗಳು ೪೫೬ ಪ್ರೌಢಶಾಲೆಗಳು, ೧೧೯ ಪದವಿ ಪೂರ್ವ ಕಾಲೇಜುಗಳು, ೧೯ ಸಾಮಾನ್ಯ ಪದವಿ ಕಾಲೇಜು, ೨ ವೈದ್ಯಕೀಯ ಸಂಸ್ಥೆಗಳು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಜಿಲ್ಲೆಯಲ್ಲಿ ನಾಲ್ಕು ಇಂಜನಿಯರಿಂಗ್ ಕಾಲೇಜುಗಳಿವೆ. ಪ್ರಾಥಮಿಕ ಶಾಲೆಯಲ್ಲಿ ೩,೨೨,೬೫೮ ಲಕ್ಷ ವಿದ್ಯಾರ್ಥಿಗಳು ಪ್ರೌಢಶಾಲೆಯಲ್ಲಿ ೦.೯೦೮೯೩ ಲಕ್ಷ ವಿದ್ಯಾರ್ಥಿಗಳು, ಪದವಿ ಪೂರ್ವ ಕಾಲೇಜಿನಲ್ಲಿ ೦.೨೭೪೭೫ ಲಕ್ಷ ವಿದ್ಯಾರ್ಥಿಗಳು, ಸಾಮಾನ್ಯ ಪದವಿ ಕಾಲೇಜುಗಳಲ್ಲಿ ೦.೦೯೧೦೫ ಲಕ್ಷ ವಿದ್ಯಾರ್ಥಿಗಳು, ಪಾಲಿಟೆಕ್ನಿಕ್‌ಗಳಲ್ಲಿ ೦.೦೦೭೯೫೧ ಲಕ್ಷ ವಿದ್ಯಾರ್ಥಿಗಳು, ಇಂಜಿನಿಯರಿಂಗ್ ಕಾಲೇಜುಗಳಲ್ಲಿ ೦.೦೫೭೫೨ ಲಕ್ಷ ವಿದ್ಯಾರ್ಥಿಗಳು, ಆಯುರ್ವೇದಿಕ್ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ ೦.೦೦೬೭೪ ಲಕ್ಷ ವಿದ್ಯಾರ್ಥಿಗಳು ಜಿಲ್ಲೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

**ಮೂಲಭೂತ ಸೌಕರ್ಯ**

೨೦೧೧-೧೧ನೇ ಸಾಲಿನ ಅಂತ್ಯದವರೆಗೆ ೫೪೨ ಗ್ರಾಮಗಳಿಗೆ ವಿದ್ಯುತ್ ಶಕ್ತಿಯನ್ನು ಒದಗಿಸಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೫೯,೯೬೫ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಶಕ್ತಿಯನ್ನು ಒದಗಿಸಲಾಗಿದೆ. ಜಿಲ್ಲೆಯಲ್ಲಿ ೧೩೪ ವಾಣಿಜ್ಯ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿವೆ. ೬೯ ಗ್ರಾಮೀಣ ಬ್ಯಾಂಕು ೩೧ ಕೋ ಆಪರೇಟಿವ್ ಬ್ಯಾಂಕು ಮತ್ತು ಕೆ.ಎಸ್.ಎಸ್.ಸಿ. ಬ್ಯಾಂಕು ೦೧ ಇದೆ. ಒಟ್ಟಾರೆ ಜಿಲ್ಲೆಯಲ್ಲಿ ೨೩೫ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿದೆ. ಜಿಲ್ಲೆಯಲ್ಲಿ ಸರಾಸರಿ ೮,೯೩೦ ಜನಸಂಖ್ಯೆಗೆ ಒಂದು ಬ್ಯಾಂಕು ಕಾರ್ಯನಿರ್ವಹಿಸುತ್ತದೆ. ಜಿಲ್ಲೆಯಲ್ಲಿ ೨೦೧೧-೧೧ನೇ ಸಾಲಿನಲ್ಲಿ ೭೯೪ ನ್ಯಾಯಬೆಲೆ ಅಂಗಡಿಗಳಿದ್ದು, ಒಟ್ಟು ೫,೧೪೯,೯೧೯ ಪಡಿತರ ಚೀಟಿಗಳಿವೆ. ಇದರಲ್ಲಿ ೬೬,೪೯೪ ಎ.ಎ.ಪಿ. ಕಾರ್ಡು, ೩೦,೦೩೨೭ ಬಿ.ಪಿ.ಎಲ್. ಕಾರ್ಡುಗಳು ಮತ್ತು ೧,೪೮,೦೯೮ ಎ.ಪಿ.ಎಲ್. ಕಾರ್ಡುಗಳನ್ನು ಜಿಲ್ಲೆಯ ಸಾರ್ವಜನಿಕರು ಪಡೆದುಕೊಂಡಿದ್ದಾರೆ.

**ಆರೋಗ್ಯ**

ಆರೋಗ್ಯವೇ ಮಹಾಭಾಗ್ಯ ಎನ್ನುವ ನಾಣ್ಣುಡಿಯಂತೆ ಮನುಷ್ಯನ ಜೀವನಕ್ಕೆ ಅಗತ್ಯವಾಗಿ ಬೇಕಾದ ಅಂಶವೆಂದರೆ ಆರೋಗ್ಯವಾಗಿದೆ. ಒಂದು ರಾಜ್ಯ-ರಾಷ್ಟ್ರದ ಆರ್ಥಿಕ ಬೆಳವಣಿಗೆಗೆ ಆರೋಗ್ಯ ಅತಿಮುಖ್ಯವಾದ ಅಂಶವಾಗಿದೆ. ಆರೋಗ್ಯವು ಯಾವುದೇ ಆದಾಯವನ್ನು ಬಯಸದೆ ಇರುವ ಆಯಾಮಗಳಲ್ಲಿ ಒಂದಾಗಿದ್ದು, ಆರೋಗ್ಯವು ನಿರೀಕ್ಷಿತ ಜೀವಿತಾವಧಿ, ಮಕ್ಕಳ ಜನನ ಮತ್ತು ಮರಣದ ದೀರ್ಘಾಯುಷ್ಯ ಆಯಾಮಗಳನ್ನು ಹೊಂದಿದೆ. ಇವು ಆರೋಗ್ಯವನ್ನು ಅಳೆಯುವ ಮಾಪನಗಳಾಗಿದ್ದು, ಮಾನವ ಅಭಿವೃದ್ಧಿಯ ಮಾನದಂಡವಾಗಿದೆ. ಆರೋಗ್ಯವು ಸೇವೆಯ ಲಭ್ಯತೆ ಮತ್ತು ಆರೋಗ್ಯ ಸೇವೆಗಳನ್ನು ಒದಗಿಸುವ ಖರ್ಚುಗಳನ್ನು ಮಾಡುವ ಸಾಮರ್ಥ್ಯವನ್ನು ನಿರ್ಧರಿಸುವ ಪ್ರಮುಖ ಅಂಶಗಳಾಗಿವೆ. ಸಾರ್ವಜನಿಕ ಆರೋಗ್ಯ ಸೇವೆಯನ್ನು ಮತ್ತು ಆರೋಗ್ಯದ ಮೂಲ ಸೌಕರ್ಯಗಳ ಮೇಲೆ ಹೂಡುವ ಬಂಡವಾಳ ಇವರೆಡೂ ಸಮುದಾಯದ ಆರೋಗ್ಯವನ್ನು ಉತ್ತಮ ಪಡಿಸಲು ಸಹಾಯಕವಾಗಿದೆ. ಜಿಲ್ಲೆಯಲ್ಲಿ ಆರು ಸಾಮಾನ್ಯ ಆಸ್ಪತ್ರೆಗಳಿವೆ ಎಲ್ಲಾ ಸಾಮಾನ್ಯ ಆಸ್ಪತ್ರೆಗಳಲ್ಲಿ ೫೦ ಹಾಸಿಗೆಯ ಸಾಮರ್ಥ್ಯವನ್ನು ಹೊಂದಿದರೆ, ಹೊಸಪೇಟೆಯ ಸಾಮಾನ್ಯ ಆಸ್ಪತ್ರೆಯು ಮಾತ್ರ ೧೦೦ ಹಾಸಿಗೆಯನ್ನು ಹೊಂದಿರುವ ಆಸ್ಪತ್ರೆಯಾಗಿದೆ. ಜಿಲ್ಲೆಯಲ್ಲಿ ಒಟ್ಟು ೫೪ ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ. ಏಳು ಸಮುದಾಯ ಆರೋಗ್ಯ ಕೇಂದ್ರಗಳು ಇದೆ. ಆರು ಆರೋಗ್ಯ ಕೇಂದ್ರ ಘಟಕಗಳು ಇದೆ. ೪ ಜಿ.ಎ.ಡಿ. ಸಂಸ್ಥೆಯು ಇವೆ. ಮೂರು ನಗರ ಕುಟುಂಬ ಕಲ್ಯಾಣಗಳಿವೆ. ಒಂದು ಎಂ.ವಿಲ್ಸಿಯು ಕೇಂದ್ರಗಳು, ರಾಷ್ಟ್ರೀಯ ಕುಷ್ಠ ರೋಗ ಕೇಂದ್ರಗಳು ಸಹ

ಒಂದಿದೆ. ಜಿಲ್ಲೆಯಲ್ಲಿ ೭ ತಾಲ್ಲೂಕು ಆರೋಗ್ಯ ಕಛೇರಿಗಳು ಇವೆ. ೨ ಟಿ.ಬಿ. ನಿಯಂತ್ರಣ ಕೇಂದ್ರಗಳು ಇದೆ. ೨ ಮೊಬೈಲ್ ವೈದ್ಯಕೀಯ ಘಟಕಗಳು ಹಾಗೂ ೧ ಮೊಬೈಲ್ ಆಪಾಲಿಕ್ ಯುನಿಬ್ ಇದೆ. ಒಟ್ಟು ಜಿಲ್ಲೆಯಲ್ಲಿ ೨೪ ಆರೋಗ್ಯ ಕೇಂದ್ರಗಳಿವೆ.

**೨.೬.೨. ಆರ್ಥಿಕ ಅಂಶಗಳ ವಿವರ**

ಕೃಷಿ ಚಟುವಟಿಕೆ, ಭೂಹಿಡುವಳಿ, ಭೂ ಬಳಕೆ, ಜಿಲ್ಲೆಯ ಆದಾಯ, ಸಂಪನ್ಮೂಲವಾಗಿ ಕಬ್ಬಿಣದ ಅದಿರು, ಕರ್ನಾಟಕದಲ್ಲಿ ಕಬ್ಬಿಣದ ಅದಿರು, ಬಳ್ಳಾರಿ ಜಿಲ್ಲೆಯ ಕಬ್ಬಿಣದ ಅದಿರು, ಜಿಲ್ಲೆಯ ಖನಿಜ ಸಂಪನ್ಮೂಲಗಳು, ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ, ಖನಿಜ ನೀತಿ ಮತ್ತು ನಿಯಮಗಳು ಇತ್ಯಾದಿ ಆರ್ಥಿಕ ಅಂಶಗಳ ವಿವರಣೆಯನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**ಕೃಷಿ ಚಟುವಟಿಕೆ**

ಬಳ್ಳಾರಿ ಜಿಲ್ಲೆಯು ಇತರ ಜಿಲ್ಲೆಗಳಂತೆ ಕೃಷಿಯನ್ನೇ ಅವಲಂಬಿಸಿದೆ. ಜಿಲ್ಲೆಯಲ್ಲಿ ಕೈಗಾರಿಕೆ, ಶಿಕ್ಷಣ ಕ್ಷೇತ್ರ ಎಷ್ಟು ಪ್ರಾಮುಖ್ಯತೆಯನ್ನು ಹೊಂದಿದೆಯೋ, ಅದರಷ್ಟೇ ಕೃಷಿ ಕ್ಷೇತ್ರವೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಜಿಲ್ಲೆಯು ಅತಿ ಹೆಚ್ಚು ಖುಷ್ಕ ಭೂಮಿಯನ್ನು ಹೊಂದಿದ್ದು, ನೈರುತ್ಯ ಮುಂಗಾರು ಮಳೆಯ ಮೇಲೆ ತನ್ನ ಕೃಷಿ ಚಟುವಟಿಕೆಯನ್ನು ಅವಲಂಬಿಸಿದೆ. ಈ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ೬೩,೯೯೧ (ಶೇ.೭೩) ರಷ್ಟು ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ವಲಯವಾರು ದುಡಿಯುವ ವರ್ಗದ ದೃಷ್ಟಿಕೋನದಲ್ಲಿ ಪ್ರಾಥಮಿಕ ವಲಯ ೩,೭೭,೮೫೫ (ಶೇ.೭೬.೧೮) ರಷ್ಟು, ದ್ವಿತೀಯಾ ವಲಯ ೩೧,೪೨,೨೫೩ (ಶೇ.೭.೧) ಮತ್ತು ತೃತೀಯಾ ವಲಯದಲ್ಲಿ ೩,೭೭,೮೫೫ (ಶೇ.೧೬.೦೯)ರಷ್ಟಿದೆ. ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಕ್ರಮವಾಗಿ ೧೩, ೧೬ ಮತ್ತು ೧೨ನೇಯ ಸ್ಥಾನವನ್ನು ಪಡೆದಿವೆ. ರಾಜ್ಯದ ದುಡಿಮೆಗಾರರ ವರ್ಗಕ್ಕೆ ಹೋಲಿಸಿದರೆ ಪ್ರಾಥಮಿಕ ವಲಯದಲ್ಲಿ ಶೇ.೯ರಷ್ಟು ಹೆಚ್ಚು ದ್ವಿತೀಯ ವಲಯ ಶೇ.೫.೨ರಷ್ಟು ಮತ್ತು ತೃತೀಯಾ ವಲಯದಲ್ಲಿ ಶೇ.೨.೫ ರಷ್ಟು ಕಡಿಮೆ ಇರುವುದು ಗಮನಿಸಬಹುದು.

**ಭೂ ಹಿಡುವಳಿದಾರರು**

ಬಳ್ಳಾರಿ ಜಿಲ್ಲೆಯಲ್ಲಿ ೨,೬೧,೫೯೦ ಭೂ ಹಿಡುವಳಿದಾರರಿದ್ದಾರೆ, ಈ ಭೂ ಹಿಡುವಳಿದಾರರು ೫,೪೮,೫೦೦ ಹೆಕ್ಟರ್‌ನಷ್ಟು ಭೂ ವಿಸ್ತೀರ್ಣವನ್ನು ಹೊಂದಿದ್ದಾರೆ. ೧ ಹೆಕ್ಟರ್‌ಗಿಂತ ಕಡಿಮೆ ಇರುವವರ ಸಂಖ್ಯೆ ೯೬,೧೨೧ ರಷ್ಟು ಭೂ ಹಿಡುವಳಿದಾರರಿದ್ದಾರೆ. ೨ ರಿಂದ ೪ ಹೆಕ್ಟರ್ ಭೂ ಹಿಡುವಳಿದಾರರು ೫೫,೫೪೪ರಷ್ಟಿದ್ದಾರೆ. ೪ ರಿಂದ ೧೦ ಹೆಕ್ಟರ್ ಇರುವ ಭೂ ಹಿಡುವಳಿದಾರರು ೨೯,೮೨೮ ರಷ್ಟು ಮತ್ತು ೧೦ಕ್ಕಿಂತ ಜಾಸ್ತಿ ಹೆಕ್ಟರ್ ಭೂ ಹಿಡುವಳಿ ಹೊಂದಿರುವರು ೪,೩೪೭ ರಷ್ಟಿದ್ದಾರೆ ಒಟ್ಟು ಜಿಲ್ಲೆಯಲ್ಲಿ ೨,೬೧,೯೫೦ ಲಕ್ಷ ಹಿಡುವಳಿದಾರರಿದ್ದಾರೆ (೨೦೦೫-೦೬ ಕೃಷಿ ಗಣತಿ) ಕೋಷ್ಟಕ ೨.೩ ರಲ್ಲಿ ಗಮನಿಸಿ.

**ಕೋಷ್ಟಕ ೨.೩ ಜಿಲ್ಲೆಯ ಭೂಹಿಡುವಳಿದಾರರು ಮತ್ತು ವಿಸ್ತೀರ್ಣದ ವಿವರ**

(೨೦೦೫-೦೬ ಕೃಷಿ ಗಣತಿ ಪ್ರಕಾರ)

| ಕ್ರಸಂ. | ಭೂ ಹಿಡುವಳಿದಾರರು | ಸಂಖ್ಯೆ | ಶೇಕಡವಾರು | ವಿಸ್ತೀರ್ಣ | ಶೇಕಡವಾರು | ಸರಾಸರಿ ವಿಸ್ತೀರ್ಣ |
|---|---|---|---|---|---|---|
| ೦೧ | ಅತಿ ಸಣ್ಣ | ೯೬,೧೨೧ | ೩೬.೬೯% | ೪೯,೯೨೫ | ೯.೦೪% | ೦.೫೧೬ |
| ೦೨ | ಸಣ್ಣ | ೭೬,೧೧೦ | ೨೯.೦೫% | ೧,೦೮,೯೯೨ | ೧೯.೮೭% | ೧.೪೩೨ |
| ೦೩ | ಅರೆ ಮಾಧ್ಯಮ | ೫೫,೫೪೪ | ೨೧.೨೦% | ೧,೫೧,೬೫೪ | ೨೭.೬೪% | ೨.೭೩೦ |
| ೦೪ | ಮಾಧ್ಯಮ | ೨೯,೮೨೮ | ೧೧.೩೮% | ೧,೭೩,೪೭೬ | ೩೧.೬೨% | ೫.೮೧೫ |
| ೦೫ | ದೊಡ್ಡ | ೪,೩೪೭ | ೧.೬೬% | ೬೪,೭೫೩ | ೧೧.೮೦% | ೧೪.೮೯೬ |
| | ಒಟ್ಟು | ೨,೬೧,೯೫೦ | - | ೫,೪೮,೫೦೦ | - | ೨.೦೯೩ |

**ಮೂಲ : ೨೦೧೦-೧೧ರ ಬಳ್ಳಾರಿ ಜಿಲ್ಲೆಯ ಸಾಮಾಜಿಕ - ಆರ್ಥಿಕ ಅವಲೋಕನ ವರದಿ**

## ಭೂಮಿಯ ಬಳಕೆ

ಬಳ್ಳಾರಿ ಜಿಲ್ಲೆಯಲ್ಲಿ ೮,೧೩,೧೯೬ ಲಕ್ಷ ಹೆಕ್ಟರ್ ಭೌಗೋಳಿಕ ಪ್ರದೇಶವಿದೆ. ಅದರಲ್ಲಿ ಅರಣ್ಯ ಪ್ರದೇಶ ೦.೯೭೦೧೭ (ಶೇ.೧೧.೯೩) ಲಕ್ಷ ಹೆಕ್ಟರ್‌ಯಿದೆ. ವ್ಯವಸಾಯವನ್ನು ಬಿಟ್ಟು ಇತರೆ ಉದ್ದೇಶಗಳಿಗಾಗಿ ಬಳಕೆ ಮಾಡಿಕೊಂಡ ಪ್ರದೇಶವು ೧,೧೦,೨೯೧ ಲಕ್ಷ ಹೆಕ್ಟರ್ (ಶೇ.೧೩.೫೬) ರಷ್ಟಿದೆ. ಬಂಜರು ಭೂಮಿ ಮತ್ತು ಸಾಗುವಳಿ ಮಾಡಲು ಸಾಧ್ಯವಿಲ್ಲದೇ ಇರುವ ಪ್ರದೇಶ ೦.೫೩೪೭೭ ಲಕ್ಷ ಹೆಕ್ಟರ್ ಅಂದರೆ ಶೇ.೩.೦೫ರಷ್ಟಿದೆ. ಖಾಯಂ ಗೋಮಾಳ ಮತ್ತು ಇತರೆ ಹುಲ್ಲುಗಾವಲು ಪ್ರದೇಶಗಳು ೦.೦೫೪೭೨ ಲಕ್ಷ ಹೆಕ್ಟರ್ (ಶೇ.೦.೬೭)ರಷ್ಟಿದೆ. ವಿವಿಧ ವೃಕ್ಷ ಮತ್ತು ತೋಪುಗಳಿಂದ ಕೂಡಿದ ಪ್ರದೇಶವು ಶೇ.೦.೪೪ ರಷ್ಟಿದೆ ಅಂದರೆ ೦.೩೬೦೬ ಲಕ್ಷ ಹೆಕ್ಟರ್‌ರಷ್ಟಿದೆ. ಬೀಳು ಭೂಮಿ ೦.೭೬೩೧೫ ಲಕ್ಷ ಹೆಕ್ಟರ್ (ಶೇ.೯.೩೬) ರಷ್ಟು ಮತ್ತು ಬಿತ್ತನೆಯಾದ ನಿವ್ವಳ ಪ್ರದೇಶ ೪.೨೧೭೯ ಲಕ್ಷ ಹೆಕ್ಟರ್ (ಶೇ.೫೪.೩೭) ರಷ್ಟಿರುವುದು ಕೆಳಗಿನ ಕೋಷ್ಟಕ ೨.೪ ರಲ್ಲಿ ಗಮನಿಸಿ.

**ಕೋಷ್ಟಕ ೨.೪ ಭೂಮಿಯ ಬಳಕೆಯ ವಿವರ (೨೦೦೬–೧೧ರವರೆಗೆ)**

| ಕ್ರ. ಸಂ. | ವರ್ಷಗಳು | ಭೂಮಿಯ ಬಳಕೆ ವಿವರಗಳು (ಹೆಕ್ಟರ್‌ಗಳಲ್ಲಿ) | | | |
|---|---|---|---|---|---|
| | | ಬಂಜರು ಭೂಮಿ | ಸಾಗುವಳಿ ಯೋಗ್ಯವಾದ ಬಂಜರು ಭೂಮಿ | ಬೀಳು ಭೂಮಿ | ಬಿತ್ತನೆಯಾದ ನಿವ್ವಳ ಪ್ರದೇಶ |
| ೦೧ | ೨೦೦೬–೦೭ | ೫೩.೪೭೭ | ೨೪.೮೩೯ | ೧,೦೯,೬೦೩ | ೪,೫೦,೫೫೯ |
| ೦೨ | ೨೦೦೭–೦೮ | ೫೩.೪೭೭ | ೨೪.೮೩೯ | ೯೬,೧೦೧ | ೪,೬೪,೦೬೧ |
| ೦೩ | ೨೦೦೮–೦೯ | ೫೩.೪೭೭ | ೨೪.೮೩೯ | ೧,೨೫,೨೪೪ | ೪,೩೪,೯೧೮ |
| ೦೪ | ೨೦೦೯–೧೦ | ೫೩.೪೭೭ | ೨೪.೮೩೯ | ೧,೨೪,೦೬೧ | ೪,೩೬,೦೬೭ |
| ೦೫ | ೨೦೧೦–೧೧ | ೫೩.೪೭೭ | ೨೪.೮೩೯ | ೭೬,೩೧೫ | ೪,೪೨,೧೭೯ |

**ಮೂಲ : ಬಳ್ಳಾರಿ ಜಿಲ್ಲಾ ಸಾಮಾಜಿಕ – ಆರ್ಥಿಕ ಅವಲೋಕನ ವರದಿ ೨೦೧೦–೧೧**

## ಜಿಲ್ಲೆಯ ಆದಾಯ

ಜಿಲ್ಲೆಯ ನಿವ್ವಳ ಆದಾಯ ೨೦೦೭–೦೮ ನೇ ಸಾಲಿಗೆ ಚಾಲ್ತಿ ಬೆಲೆಗಳಲ್ಲಿ ವಿವಿಧ ಬಾಬ್ತುಗಳಿಂದ ಅಂದರೆ, ಕೃಷಿ ಮತ್ತು ಪಶುಸಂಗೋಪನೆಯಿಂದ ೧,೨೧,೦೪೯ ಲಕ್ಷ ರೂ, ಅರಣ್ಯ ಮತ್ತು ಮರ ಕೆಲಸದಿಂದ ೮,೩೮೫ ಲಕ್ಷ ರೂ ಮೀನುಗಾರಿಕೆಯಿಂದ ೨,೪೩೧ ಲಕ್ಷ ರೂ, ಗಣಿ ಮತ್ತು ಕಲ್ಲು ಅಗೆತದಿಂದ ೨,೨೧,೦೭೦ ಲಕ್ಷ ರೂ ಒಟ್ಟು ಪ್ರಾಥಮಿಕ ವಲಯದಿಂದ ೩,೫೨,೯೮೫ ಲಕ್ಷ ರೂ ತಯಾರಿಕೆಯಿಂದ ೬೮,೯೯೮ ಲಕ್ಷ ರೂ ನಿರ್ಮಾಣ ಕಾರ್ಯದಿಂದ ೭೮,೫೮೭ ಲಕ್ಷ ರೂ, ವಿದ್ಯುಚ್ಛಕ್ತಿ ಅನಿಲ ಮತ್ತು ನೀರು ಸರಬರಾಜುನಿಂದ ೫,೧೨೨ ಲಕ್ಷ. ರೂ ಒಟ್ಟು ದ್ವಿತೀಯ ವಲಯದಿಂದ ೧,೫೨,೭೦೭ ಲಕ್ಷ. ರೂ ರೈಲ್ವೆಯಿಂದ ೪,೫೧೮ ಲಕ್ಷ ರೂ, ಇತರೇ ರೀತಿಯ ಸಾರಿಗೆಯಿಂದ ೫೯,೫೪೪ ಲಕ್ಷ ರೂ ದಾಸ್ತಾನುಗಳಿಂದ ೨೬೫ ಲಕ್ಷ ರೂ ಸಂಪರ್ಕದಿಂದ ೭,೫೩೬ ಲಕ್ಷ ರೂ ವ್ಯಾಪಾರ ವಸತಿ ಮತ್ತು ಉಪಹಾರ ಗೃಹಗಳಿಂದ ೧,೬೦,೭೫೬ ಲಕ್ಷ.ರೂ ಬ್ಯಾಂಕಿಂಗ್ ಮತ್ತು ವಿಮೆಯಿಂದ ೪೯,೯೮೫ ಲಕ್ಷ ರೂ ಸ್ಥಿರಾಸ್ತಿ ವಾಸಗೃಹಗಳ ಒಡೆತನ ಮತ್ತು ವ್ಯಾಪಾರ ಸೇವೆಗಳಿಗಿಂತ ೫೫,೩೭೨ ಲಕ್ಷ ರೂ ಸಾರ್ವಜನಿಕ ಆಡಳಿತದಿಂದ ೧೬,೧೫೩ ಲಕ್ಷ ರೂ ಗಳಾಗಿದ್ದು ಇತರೆ ಸೇವೆಗಳಿಂದ ೫೯,೯೭೮ ಲಕ್ಷ ರೂ ತೃತೀಯ ವಲಯಗಳಿಂದ ೪,೧೪,೧೦೭ ಲಕ್ಷ ರೂ.ಗಳಾಗಿದ್ದು ತಲಾ ಆದಾಯ ೪೧,೮೫೭ ರೂ ಗಳೆಂದು ಅಂದಾಜು ಮಾಡಲಾಗಿದೆ. ರಾಜ್ಯದ

ಒಟ್ಟು ಆದಾಯ ೨,೧೧,೬೬,೭೫೨ ಲಕ್ಷ ರೂ ಗಳಲ್ಲಿ ಜಿಲ್ಲೆಯ ಆದಾಯ ೯,೧೯,೭೯ ಲಕ್ಷ.ರೂ.ಗಳಾಗಿದ್ದು ಇದ್ದು ರಾಜ್ಯದ ಒಟ್ಟು ಆದಾಯಕ್ಕೆ ಹೋಲಿಸಿದರೆ ಶೇ.೪.೩೪ ರಷ್ಟಾಗಿರುತ್ತದೆ. ಜಿಲ್ಲೆಯ ತಲಾ ಆದಾಯ ೪೧,೮೫೭ ರೂಗಳಿರುತ್ತದೆ. ಆದರೆ ಜಿಲ್ಲೆಯ ಆದಾಯ ಮತ್ತು ತಲಾ ಆದಾಯವನ್ನು ಪ್ರಾಥಮಿಕ, ದ್ವಿತೀಯಾ ಮತ್ತು ತೃತೀಯ ವಲಯಗಳಲ್ಲಿ ವಿವಿಧ ವರ್ಷವಾರು ಅಂಕಿ-ಅಂಶವನ್ನು ಈ ಕೆಳಗಿನ ಕೋಷ್ಟಕದ ಮೂಲಕ ಗ್ರಹಿಸಬಹುದಾಗಿದೆ.

**ಕೋಷ್ಟಕ ೨.೫ ಜಿಲ್ಲೆಯ ಪ್ರಾಥಮಿಕ, ದ್ವಿತೀಯಾ ಮತ್ತು ತೃತೀಯ ವಲಯಗಳಿಂದ ಬರುವ ಆದಾಯ ಮತ್ತು ತಲಾ ಆದಾಯದ ಪ್ರಮಾಣ(ಲಕ್ಷ ರೂಗಳಲ್ಲಿ)**

| ಸಮಗ್ರ ಅಂತರಿಕ ಉತ್ಪನ್ನ | ಬಳ್ಳಾರಿ | | | | ರಾಜ್ಯ(ಸ್ಥಿರ) | |
|---|---|---|---|---|---|---|
| | ೨೦೦೧-೦೨ | | ೨೦೧೧-೧೨ | | ೨೦೧೧-೧೨ | |
| | ಒಟ್ಟು | ಶೇಕಡಾ ಪಾಲು | ಒಟ್ಟು | ಶೇಕಡಾ ಪಾಲು | ಒಟ್ಟು | ಶೇಕಡಾ ಪಾಲು |
| ಪ್ರಾಥಮಿಕ ವಲಯ | ೧,೧೭,೦೧೫ | ೩೧.೯೪ | ೧೯೪೨೨೪ | ೩೪.೬೧ | ೪೬,೬೪,೨೭೩ | ೧೭.೧೭ |
| ದ್ವಿತೀಯಾ ವಲಯ | ೭೫,೮೧೦ | ೨೦.೬೯ | ೧೨೫೫೫೫ | ೨೨.೩೭ | ೭೭,೨೨,೫೨೭ | ೨೮.೪೫ |
| ತೃತೀಯ ವಲಯ | ೭೩,೫೨೭ | ೪೭.೩೭ | ೨೪೧೪೭೯ | ೪೩.೦೨ | ೧,೪೭,೬೪,೭೨೧ | ೫೪.೩೮ |
| ಒಟ್ಟು | ೩,೬೬,೩೫೨ | ೧೦೦.೦೦ | ೫,೬೧,೨೫೮ | ೧೦೦ | ೨,೭೧,೪೮,೫೨೧ | ೧೦೦.೦೦ |
| ತಲಾ ವರಮಾನ (ರೂ) | ೧೭,೮೯೫ | | ೨೬,೪೪೭ | | ೪೫,೮೮೨ | |

**ಮೂಲ: ಬಳ್ಳಾರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ, ೨೦೧೪**

ಮೇಲಿನ ಕೋಷ್ಟಕವು ಜಿಲ್ಲೆಯ ಪ್ರಾಥಮಿಕ, ದ್ವಿತೀಯಾ ಮತ್ತು ತೃತೀಯ ವಲಯಗಳಿಂದ ಬರುವ ಆದಾಯ ಮತ್ತು ತಲಾ ಆದಾಯದ ಪ್ರಮಾಣವನ್ನು ಜಿಲ್ಲೆ ಮತ್ತು ರಾಜ್ಯಕ್ಕೆ ತುಲನಾತ್ಮಕವಾಗಿ ಹೋಲಿಸಿರುವ ಅಂಕಿ-ಅಂಶಗಳನ್ನು ತೋರಿಸುತ್ತದೆ.



**೨.೭ ಸಂಪನ್ಮೂಲವಾಗಿ ಕಬ್ಬಿಣದ ಅದಿರು**

ಭಾರತದಲ್ಲಿ ಕಬ್ಬಿಣ ಅದಿರಿನ ಸಂಪನ್ಮೂಲಗಳು ಬೃಹತ್ ಪ್ರಮಾಣದ ಮೂಲವನ್ನು ಹೊಂದಿದೆ. ಕಬ್ಬಿಣದ ಅದಿರುಗಳಾದ ಹೆಮಾಟೈಟ್ ಮತ್ತು ಮ್ಯಾಂಗನೀಸ್ ೨೫.೨೪ ಶತಕೋಟಿ ಟನ್‌ಗಳಿಷ್ಟಿವೆ. ಇದರಲ್ಲಿ ಮ್ಯಾಂಗನೀಸ್ ಕಬ್ಬಿಣದ ಅದಿರು ೧೮.೧೮ ಬಿಲಿಯನಷ್ಟಿದ್ದು, ಹೆಮಾಟೈಟ್ ಅದಿರು ೭.೦೬ ಶತಕೋಟಿ ಟನ್‌ಗಳಿಷ್ಟಿದೆ. ಮೀಸಲಾಗಿರುವ ೭.೦೬ ಶತಕೋಟಿ ಹೆಮಾಟೈಟ್ ಅದಿರಿನಲ್ಲಿ ೭.೦ ಬಿಲಿಯನ್ ಟನ್ ಬಳಕೆಯಾಗಿದೆ. (ಎನ್.ಎ.ಐ.ಎಲ್. ೨೦೦೭, ಐ.ಐ.ಡಿ. ಐರನ್ ೨೦೧೦, ಗ್ಲೋಬಲ್ ಸ್ಟೀಲ್ ೨೦೧೧). ಯು.ಎನ್.ಎಫ್. ಪ್ರಕಾರ ೧.೪.೨೦೦೫ರಂತೆ ಭಾರತವು ೧೪,೬೩೦ ಮಿಲಿಯನ್ ಟನ್‌ಗಳಷ್ಟು ಹೆಮಾಟೈಟ್ ಸಂಪನ್ಮೂಲಗಳನ್ನು ಹೊಂದಿದೆ. ಅದರಲ್ಲಿ ೭,೬೨೬ ಮಿಲಿಯನ್ ಟನ್‌ನಷ್ಟು ಹೆಮಾಟೈಟ್ ಅದಿರು ಬಳಕೆಯಾಗಿದೆ. ಇನ್ನು ಕೇವಲ ೭,೦೦೪ ಮಿಲಿಯನ್ ಟನ್ ಉಳಿದಿದೆ. ಭಾರತದಲ್ಲಿ ಮುಖ್ಯವಾಗಿ ಹೆಮಾಟೈಟ್ ಅದಿರಿನ ಸಂಪನ್ಮೂಲ ಜಾರ್ಖಂಡ್ ರಾಜ್ಯದಲ್ಲಿ ಕಂಡು ಬರುತ್ತದೆ. ಜಾರ್ಖಂಡ್‌ನಲ್ಲಿ ೪,೦೩೬ ಮಿಲಿಯನ್ ಟನ್ (ಶೇ.೨೮)ರಷ್ಟು ಹೊಂದಿದೆ. ಒರಿಸ್ಸಾದಲ್ಲಿ ೪,೭೬೧ ಮಿಲಿಯನ್ ಟನ್‌ಗಳಷ್ಟು (ಶೇ.೩೩) ಚತ್ತಿಸ್‌ಘಡ್‌ನಲ್ಲಿ ೨,೭೩೧ ಮಿಲಿಯನ್ ಟನ್ ಶೇ.೧೯ರಷ್ಟು, ಕರ್ನಾಟಕದಲ್ಲಿ ೧,೬೭೬ ಮಿಲಿಯನ್ ಟನ್ ಪ್ರತಿಶತ ಶೇ.೧೧ರಷ್ಟು ಮತ್ತು ಗೋವಾದಲ್ಲಿ ೭೧೩ ಮಿಲಿಯನ್ ಟನ್ (ಶೇ.೮ರಷ್ಟು) ಕಬ್ಬಿಣದ ಅದಿರುಗಳಿವೆ. ಮಹಾರಾಷ್ಟ್ರ, ಮದ್ಯಪ್ರದೇಶ, ಆಂಧ್ರಪ್ರದೇಶ, ರಾಜಸ್ಥಾನ್, ಉತ್ತರ ಪ್ರದೇಶ, ಅಸ್ಸಾಂ ಮತ್ತಿತರ ರಾಜ್ಯಗಳು ಶೇ.೪ರಷ್ಟು ಹೆಮಾಟೈಟ್ ಕಬ್ಬಿಣದ ಅದಿರಿನ ಪ್ರಮಾಣಗಳನ್ನು ಹೊಂದಿದೆ. ಪ್ರಸ್ತುತವಾಗಿ ಹೆಮಾಟೈಟ್ ಅದಿರನ್ನು ಭೂಮಿಯ ಮೇಲ್ಭಾಗದಲ್ಲಿ ಕಂಡು ಬರುವಂತೆ ಹೊರ ತೆಗೆಯಲಾಗುತ್ತದೆ. ಮ್ಯಾಂಗನೀಸ್ ಅದಿರನ್ನು ಹೆಚ್ಚಾಗಿ ಭೂಮಿಯ ಕೆಳ ಪದರಿನಲ್ಲಿರುತ್ತದೆ (ಕೋಷ್ಟಕ ೨.೬ರಲ್ಲಿ ಗಮನಿಸಿ).

**ಕೋಷ್ಟಕ ೨.೬ ರಾಜ್ಯಗಳಲ್ಲಿ ಕಬ್ಬಿಣ ಅದಿರಿನ ಉತ್ಪಾದನೆ (೨೦೦೫ ರಿಂದ ೨೦೧೧ರವರೆಗೆ)**

**ಲಂಪ್ಸ್ ಮತ್ತು ಫೈನ್ಸ್ ಉತ್ಪಾದನೆಯ ವಿವರ ಮಿಲಿಯನ್ ಟನ್‌ಗಳಲ್ಲಿ**

| ಕ್ರ ಸಂ. | ರಾಜ್ಯಗಳು | ೨೦೦೪-೦೫ | | ೨೦೦೫-೦೬ | | ೨೦೦೬-೦೭ | | ೨೦೦೭-೦೮ | | ೨೦೦೮-೦೯ | | ೨೦೦೯-೧೦ | | ೨೦೧೦-೧೧ | | ಒಟ್ಟು |
|---|---|---|---|---|---|---|---|---|---|---|---|---|---|---|---|---|
| | | ಐ | ಈ | ಐ | ಈ | ಐ | ಈ | ಐ | ಈ | ಐ | ಈ | ಐ | ಈ | ಐ | ಈ | |
| ೧. | ಚತ್ತೀಸ್‌ಘಡ್ | ೧೦.೩೪ | ೧೨.೭೭ | ೧೨.೦೫ | ೧೪.೦೩ | ೧೨.೮೩ | ೧೫.೯೧ | ೧೩.೦೩ | ೧೭.೯೭ | ೧೧.೦೭ | ೧೮.೯೩ | ೧೧.೫೨ | ೧೪.೯೬ | ೧೧.೮೬ | ೧೯.೭೪ | ೧೯೭.೦೧ |
| ೨. | ಗೋವಾ | ೪.೨ | ೧೭.೫೩ | ೪.೯ | ೧೮.೪೨ | ೬.೬೬ | ೨೦.೯೧ | ೫.೭ | ೨೪.೨೭ | ೫.೫೩ | ೨೫.೧೬ | ೮.೬೪ | ೨೯.೯೬ | ೮.೪ | ೨೭.೬೩ | ೨೦೭.೬೯ |
| ೩. | ಜಾಖಾಂಡ್ | ೭.೫ | ೯.೧೮ | ೦೭.೦೧ | ೧೦.೮೭ | ೮.೯೮ | ೯.೬೩ | ೯.೭೭ | ೧೦.೯೮ | ೯.೮೬ | ೧೧.೪೭ | ೧೦.೭೧ | ೧೨.೩ | ೧೦.೭೪ | ೧೨.೪೭ | ೧೪೧.೫೮ |
| ೪. | ಒರಿಸ್ಸಾ | ೨೨.೫೦ | ೧೮.೮೭ | ೨೮.೮೭ | ೨೩.೨೮ | ೩೮.೦೩ | ೨೫.೮೮ | ೪೧.೯೪ | ೨೭.೯೫ | ೪೨.೧೩ | ೩೦.೦೫ | ೪೧.೧೯ | ೩೮.೧೯ | ೩೫.೫೯ | ೩೯.೪೩ | ೪೫೪.೮೪ |
| ೫. | ಕರ್ನಾಟಕ | ೧೨.೨೯ | ೨೧.೩೨ | ೧೦.೦೧ | ೨೨.೯೧ | ೧೮.೦೫ | ೨೧.೭೭ | ೨೧.೫೩ | ೨೭.೪೬ | ೧೮.೬೬ | ೨೮.೩೧ | ೧೬ | ೨೭.೦೨ | ೧೩.೬೬ | ೨೪ | ೨೮೩.೮೯ |
| ೬. | ಭಾರತ | ೫೮.೦೨ | ೫೨.೫೧ | ೬೮.೩೧ | ೯೩.೩೧ | ೮೮.೩೧ | ೯೮.೨೪ | ೯೭.೮೫ | ೧೧೪.೮೭ | ೯೨.೦೪ | ೧೨೦.೦೧ | ೯೧.೭೨ | ೧೨೬.೧೬ | ೮೨.೦೬ | ೧೨೫.೩೪ | ೧೩೩೪.೩೮ |

ಮೂಲ : (ಐ.ಬಿ.ಎಂ. ನಾಗಪುರ ಮತ್ತು ಎಫ್.ಐ.ಎಂ.ಐ. ೨೦೧೧)

ಐ – ಲಂಪ್ಸ್ ಈ – ಫೈನ್ಸ್

ಮೇಲಿನ ಕೋಷ್ಟಕವು ಭಾರತದ ಚತ್ತಿಸ್‌ಘಡ್, ಗೋವಾ, ಜಾಖಾಂಡ್. ಒರಿಸ್ಸಾ, ಕರ್ನಾಟಕ ರಾಜ್ಯಗಳಲ್ಲಿ ೨೦೦೫ ರಿಂದ ೨೦೧೧ರವರೆಗೆ ಕಬ್ಬಿಣದ ಅದಿರಿನ ಉತ್ಪಾದನೆಯ ವಿವರಣೆಯನ್ನು ಅಂಕಿ-ಅಂಶಗಳ ಮೂಲಕ ನೀಡಲಾಗಿದೆ. ಇಲ್ಲಿ ಕಬ್ಬಿಣದ ಅದಿರನ್ನು ಲಂಪ್ಸ್- ಮತ್ತು ಫೈನ್ಸ್‌ಗಳ ಉತ್ಪಾದನೆಯ ಪ್ರಮಾಣವನ್ನು ರಾಜ್ಯ ಮತ್ತು ದೇಶಕ್ಕೆ ಹೋಲಿಕೆ ಮಾಡಿರುವ ಪಟ್ಟಿಯ ದತ್ತಾಂಶವನ್ನು ತೋರಿಸುತ್ತದೆ. ೨೦೦೫ ರಿಂದ ೨೦೧೧ರವರೆಗೆ ಚತ್ತಿಸ್‌ಘಡ್‌ನಲ್ಲಿ ಲಂಪ್ಸ್ ಮತ್ತು ಪೈನ್ ಅದಿರು ೧೯೭.೦೧ ಮಿಲಿಯನ್ ಟನ್ ಉತ್ಪಾದನೆಯಾಗಿದೆ. ಗೋವಾದಲ್ಲಿ ೨೦೭.೬೯ ಮಿಲಿಯನ್ ಟನ್‌ಷ್ಟು ಉತ್ಪಾದಿಸಲಾಗಿದೆ.

ಜಾರ್ಖಂಡ್ ೧೪೯೧.೫೮ ಮಿಲಿಯನ್ ಟನ್, ಓರಿಸ್ಸಾದಲ್ಲಿ ೪೫೪.೮೪ ಮಿಲಿಯನ್ ಟನ್, ಕರ್ನಾಟಕದಲ್ಲಿ ೨೮೩.೮೯ ಮಿಲಿಯನ್ ಟನ್ ಹಾಗೂ ಭಾರತದಲ್ಲಿ ಲಂಪ್ಸ್ ಮತ್ತು ಪೈನ್ಸ್ ಅದಿರಿನ ಉತ್ಪಾದನೆಯು ೧೩೩೮.೭೮ ರಷ್ಟಿದೆ ಎಂದು ಈ ಕೋಷ್ಟಕದ ಮೂಲಕ ಸ್ಪಷ್ಟವಾಗಿ ತಿಳಿಯಬಹುದು.

### ೨.೭.೧ ಕರ್ನಾಟಕದಲ್ಲಿ ಕಬ್ಬಿಣದ ಅದಿರು

ಭಾರತವು ಕಬ್ಬಿಣದ ಅದಿರುಗಳಾದ ಹೆಮಾಟೈಟ್ ಮತ್ತು ಮ್ಯಾಂಗನೀಸ್ ಎರಡು ಪ್ರಮುಖವಾದ ಅದಿರುಗಳಾಗಿದ್ದು, ಹೇರಳವಾಗಿ ದೇಶದಲ್ಲಿ ದೊರೆಯುತ್ತದೆ. ಈ ಕಬ್ಬಿಣದ ಅದಿರಿನ ಗುಣಮಟ್ಟವು ಉತ್ತಮ ದರ್ಜೆಯದಾಗಿದೆ. ದೇಶದಲ್ಲಿ ಒಟ್ಟು ೧೪.೬೩೦ ಮಿಲಿಯನ್ ಕಬ್ಬಿಣದ ಅದಿರುಗಳಿದ್ದು, ೭,೬೨೬ ಮಿಲಿಯನ್ ಟನ್ ಬಳಕೆಯಾಗಿದೆ. ಕೇವಲ ೭,೦೦೪ ಮಿಲಿಯನ್ ಟನ್ ಮಾತ್ರ ಉಳಿದಿದೆ. ಭಾರತದಂತಹ ದೇಶದಲ್ಲಿ ತಂತ್ರಜ್ಞಾನದ ಸೂಕ್ತ ಪರಿಶೋಧನೆ ಮತ್ತು ಪ್ರಗತಿಯೊಂದಿಗೆ ಇತರ ಸಂಪನ್ಮೂಲಗಳನ್ನು ಗುರುತಿಸುವುದು ಅವಶ್ಯಕವಾಗಿದೆ. ದೇಶದ ಜಾರ್ಖಂಡ್‌ನಲ್ಲಿ ಶೇ.೨೧.೮ರಷ್ಟು, ಅಂದರೆ ೪,೦೩೬ ಮಿಲಿಯನ್ ಟನ್ (ಶೇ.೩೩) ಚತ್ತಿಸ್‌ಘಡ್‌ನಲ್ಲಿ ಶೇ.೧೧ರಷ್ಟು ಮತ್ತು ಗೋವಾದಲ್ಲಿ ಶೇ.೫ರಷ್ಟು ಕಬ್ಬಿಣದ ಅದಿರನ್ನು ನಿರಂತರವಾಗಿ ಹೊರ ತೆಗೆದಿದ್ದರೂ ೧೯೯೮-೨೦೦೫ರ ಅವಧಿಯಲ್ಲಿ ೧೭.೫೬೪ ರಿಂದ ೨೫.೨೪೯ ಬಿಲಿಯನ್ ಟನ್‌ಗಳಷ್ಟು ಅದಿರುಗಳಿವೆ. ಕರ್ನಾಟಕದಲ್ಲಿ ಕಬ್ಬಿಣದ ಅದಿರುಗಳ ನಿಕ್ಷೇಪ ೧,೬೭೬ ಮಿಲಿಯನ್ ಟನ್‌ಗಳಿವೆ. ಭಾರತದ ಒಟ್ಟು ನಿಕ್ಷೇಪಗಳಲ್ಲಿ ಕರ್ನಾಟಕದ ಪಾಲು ಶೇ ೧೬.೫ರಷ್ಟಿದೆ ಎಂದು ಅಂದಾಜಿಸಿದೆ (೨೦೦೬ ಜಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾ).

ಇಂಡಿಯಾ ಬ್ಯೂರೋ ಆಫ್ ಮೈನ್ಸ್ ವರದಿಯ ಪ್ರಕಾರ ಕರ್ನಾಟಕದಲ್ಲಿ ದಿನಾಂಕ : ೦೧.೦೪.೨೦೦೫ ರಿಂದ ೨೦೧೦ರವರೆಗೆ ಹೆಮಾಟೈಟ್ ಅದಿರಿನ ಸಂಪನ್ಮೂಲ ೧,೬೭೦ ಮಿಲಿಯನ್ ಟನ್‌ಗಳಿಂದ ೨,೧೬೭ ಮಿಲಿಯನ್ ಟನ್ ಹೆಚ್ಚಾಗಿದೆ. ಈ ಅವಧಿಯಲ್ಲೇ ೨೨೦ ದಶಲಕ್ಷ ಟನ್‌ಗಳಷ್ಟು ಉತ್ಪಾದನೆ ಮಾಡಲು ಅದಿರನ್ನು ಹೊರ ತೆಗೆಯಲಾಗಿದೆ. ಈ ರೀತಿಯಾಗಿ ಅದಿರುಗಳನ್ನು ನಿರಂತರವಾಗಿ ಹೊರತೆಗೆಯುವುದರಿಂದ ಮುಂದಿನ ಪೀಳಿಗೆಗೆ ಈ ಸಂಪತ್ತು ಬರಿದಾಗುವ ಆತಂಕ ಕಾಡಿದೆ. ಭಾರತದಲ್ಲಿ ೧೯೮೦-೨೦೦೫ರ ಅವಧಿಯ ನಡುವೆ ಕಬ್ಬಿಣದ ಅದಿರು ೩,೦೦೦ ಮಿಲಿಯನ್ ಟನ್‌ಗಳಿಷ್ಟದ್ದರೂ ೧,೦೦೦ ದಶಲಕ್ಷ ಟನ್ ಬಳಕೆಯಾಗಿರುವುದು ಈ ವರದಿಯಲ್ಲಿ ಬಲಪಡಿಸಲಾಗಿದೆ. (ಕೊನೆಯದಾಗಿ ಅಧಿಕೃತವಾಗಿ ಪ್ರಕಟವಾಗಿರುವ ಅಂಕಿ-ಅಂಶದ ಪ್ರಕಾರ ಕರ್ನಾಟಕ ರಾಜ್ಯವು ಪಶ್ಚಿಮ ಘಟ್ಟಗಳಲ್ಲಿ ಬೃಹತ್ ಪ್ರಮಾಣದ ಮ್ಯಾಗ್ನೆಟ್ ಅದಿರು ಸಂಪನ್ಮೂಲಗಳ ಮೂಲವನ್ನೆ ಹೊಂದಿದೆ. ಆದರೆ ೧೯೯೧ರ ಪರಿಸರ ಸೂಕ್ಷ್ಮ ಕಾರ್ಯ ನೀತಿಯಿಂದ ಈ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಿಷೇಧಿಸಲಾಗಿದೆ.

ಕಬ್ಬಿಣದ ಅದರಿನ ಉತ್ಪಾದನೆಯಲ್ಲಿ ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ಆವೃತ್ತವಾಗಿದೆ. ಭಾರತದಲ್ಲಿ ಕಬ್ಬಿಣದ ಉತ್ಪಾದನೆಯು ರಾಜ್ಯದ (೩) ಭಾಗದಷ್ಟು (ಟನ್) ಉತ್ಪಾದನೆಯಾಗಿದೆ. ಅಂದರೆ ೪೦ ಮಿಲಿಯನ್ ಕಬ್ಬಿಣದ ಅದಿರುಗಳಲ್ಲಿ ಶೇ.೭೦ರಷ್ಟು ಲಂಪ್ಸ್ (ಕಬ್ಬಿಣದ ಉಂಡೆ)ಗಳಿವೆ ಮತ್ತು ಶೇ.೩೦ರಷ್ಟು ಕಬ್ಬಿಣದ ಪುಡಿಗಳನ್ನು ಹೊಂದಿದೆ. ಲಂಪ್ಸ್ ರೂಪದ ಕಬ್ಬಿಣದ ಅದಿರುಗಳನ್ನು ಪುಡಿ ರೂಪದಲ್ಲಿ ಬೇರ್ಪಡಿಸುವ ಪ್ರಕ್ರಿಯೆಯೇ ಫೈನ್ಸ್ ಎಂದು ಕರೆಯಲಾಗುತ್ತದೆ. ದೇಶ ಮತ್ತು ರಾಜ್ಯಗಳಲ್ಲಿ ತಂತ್ರಜ್ಞಾನದ ಕೊರತೆಯಿಂದಾಗಿ ಈ ಸಂಪನ್ಮೂಲಗಳನ್ನು ರಫ್ತು ಮಾಡಲಾಗುತ್ತಿದೆಂಬ ಕಾರಣವೇ ದೇಶದಲ್ಲಿ ಸೀಮಿತವಾದ ಮಾರುಕಟ್ಟೆಗಳು ಇಲ್ಲವಾಗಿದೆ.

### ೨.೭.೨ ಬಳ್ಳಾರಿ ಜಿಲ್ಲೆಯ ಕಬ್ಬಿಣದ ಅದಿರು

ಜಿಲ್ಲೆಯಲ್ಲಿ ಬಳ್ಳಾರಿ, ಸಂಡೂರು, ಹೊಸಪೇಟೆಯು ಗಣಿಗಾರಿಕೆ ವಲಯವೆಂದೆ ಗುರುತಿಸಿಕೊಂಡಿದೆ. ಈ ವಲಯಗಳಲ್ಲಿ ಕಬ್ಬಿಣದ ಅದರಿನ ನಿಕ್ಷೇಪಗಳು ೧,೦೦೦ ದಶಲಕ್ಷ ಟನ್‌ಗಳಿವೆ (ಎನ್.ಇ.ಇ.ಆರ್.ಐ, ೨೦೦೪). ಜಿಲ್ಲೆಯಲ್ಲಿ ಹೆಮಾಟೈಟ್ ಅದಿರು ೧,೧೪೮

ಮಿಲಿಯನ್ ಟನ್‌ಗಳಿಷ್ಟಿದ್ದು, ೫೨೮ ಮಿಲಿಯನ್ ಟನ್ ಬಳಕೆಯಾಗಿದೆ. ಕೇವಲ ೬೨೦ ಮಿಲಿಯನ್ ಟನ್ ಉಳಿದಿದೆ(ಯೂನೈಟೆಡ್ ನ್ಯಾಷನಲ್ ಫ್ರೆವಲ್ ವರ್ಕ್ ಸರ್ಟಿಫಿಕೇಟ್ ೦೧.೦೪.೨೦೦೫ ಮತ್ತು ಐ.ಬಿ.ಎಂ. ವರದಿಯಲ್ಲಿ ಅಂದಾಜಿಸಲಾಗಿದೆ).

**ಕೋಷ್ಟಕ ೨.೭ ಭಾರತದಲ್ಲಿ ಒಟ್ಟಾರೆ ಕಬ್ಬಿಣದ ಅದಿರಿನ ಉತ್ಪಾದನೆಯಲ್ಲಿ ಬಳ್ಳಾರಿಯ ಕೊಡುಗೆ, ಕರ್ನಾಟಕಕ್ಕೆ ಬಳ್ಳಾರಿ ಅದಿರಿನ ಉತ್ಪಾದನೆಯ ವಿವರ (೧೯೮೯ ರಿಂದ ೨೦೧೧ರವರೆಗೆ)**

| ವಿವರಗಳು | ಕಬ್ಬಿಣದ ಅದಿರಿನ ಉತ್ಪಾದನೆ (ಮಿಲಿಯನ್ ಟನ್‌ಗಳಲ್ಲಿ) | | | | | | |
|---|---|---|---|---|---|---|---|
| | ೧೯೮೯-೯೦ | ೯೭-೯೮ | ೨೦೦೪-೦೫ | ೦೭-೦೮ | ೦೮-೦೯ | ೦೯-೧೦ | ೧೦-೧೧ |
| ಬಳ್ಳಾರಿ | ೫.೭೬೬ | ೮.೯೮೫ | ೩೧.೦೬೧ | ೩೭.೬೯೫ | ೪೦.೨೦ | ೩೩.೬೯ | ೨೯.೬೭ |
| ಕರ್ನಾಟಕ | ೧೧.೪೩೯ | ೧೬.೧೨೩ | ೩೭.೯೬೨ | ೪೫.೬೦೫ | ೪೬.೯೭ | ೪೩.೦೨ | ೨೯.೬೭ |
| ಬಳ್ಳಾರಿಯಿಂದ ಕರ್ನಾಟಕಕ್ಕೆ ಶೇಕಡವಾರು | ೫೦.೪೨ | ೫೫.೭೦ | ೮೨.೦೦ | ೮೨.೬೫ | ೮೫.೫೯ | ೭೮.೩೧ | ೧೦೦ |
| ಭಾರತ | ೫೫.೪೩೭ | ೭೫.೭೨೩ | ೧೪೫.೯೪೨ | ೨೦೬.೪೫೨ | ೧೨೦.೦೧ | ೨೧೭.೮೮ | ೨೦೭.೯ |
| ಬಳ್ಳಾರಿಯಿಂದ ಭಾರತಕ್ಕೆ ಶೇಕಡ | ೧೦.೪ | ೧೧.೦೯ | ೨೧.೦೩ | ೧೮.೨೬ | ೩೩.೫೦ | ೧೫.೪೬ | ೧೪.೩೧ |

**ಮೂಲ : ಇಂಡಿಯನ್ ಮಿನರಲ್ ಇಯರ್ ಬುಕ್, ವಿವಿಧ ವರ್ಷಗಳು.**

ಈ ಕೋಷ್ಟಕದಲ್ಲಿ ಭಾರತ ಮತ್ತು ಕರ್ನಾಟಕಕ್ಕೆ ಬಳ್ಳಾರಿ ಜಿಲ್ಲೆಯು ಕಬ್ಬಿಣದ ಅದಿರಿನ ಉತ್ಪಾದನೆಯಲ್ಲಿ ನೀಡಿರುವ ಕೊಡುಗೆಗಳನ್ನು ವಿವಿಧ ವರ್ಷವಾರುಗಳಿಂದ ತಿಳಿಯಬಹುದಾಗಿದೆ. ಜಿಲ್ಲೆಯ ಕಬ್ಬಿಣ ಅದಿರಿನ ಉತ್ಪಾದನೆಯಲ್ಲಿ ಕರ್ನಾಟಕಕ್ಕೆ ನೀಡಿರುವ ಕೊಡುಗೆ ಗಣನೀಯವಾಗಿದೆ. ಬಳ್ಳಾರಿಯಿಂದ ಕರ್ನಾಟಕಕ್ಕೆ ಕಬ್ಬಿಣ ಅದಿರಿನ ಉತ್ಪಾದನೆಯನ್ನು ಶೇಕಡವಾರುಗಳಲ್ಲಿ ಗಮನಿಸಿದಾಗ ೧೯೮೯-೯೦ನೇ ಸಾಲಿನಲ್ಲಿ ಶೇ.೫೦.೪೨ ರಷ್ಟು, ೧೯೯೭-೯೮ರಲ್ಲಿ ಶೇ.೫೫.೭೦ರಷ್ಟು, ೨೦೦೪-೦೫ರಲ್ಲಿ ಶೇ.೮೨ರಷ್ಟು, ೨೦೦೭-೦೮ರಲ್ಲಿ ಶೇ.೮೨.೬೫ರಷ್ಟು, ೨೦೦೫-೦೯ರಲ್ಲಿ ಶೇ.೮೫.೫೯ರಷ್ಟು, ೨೦೦೯-೧೦ರಲ್ಲಿ ಶೇ.೭೮.೩೧ರಷ್ಟು, ೨೦೧೦-೧೧ರಲ್ಲಿ ಶೇ.೧೦೦ರಷ್ಟು ಕೊಡುಗೆಯನ್ನು ನೀಡಿರುವುದು ಗೋಚರಿಸುತ್ತದೆ. ಅದೇ ರೀತಿ ಭಾರತಕ್ಕೆ ನೀಡಿರುವ ಕೊಡುಗೆಯನ್ನು ಗಮನಿಸಬಹುದಾದರೆ ೧೯೮೯-೯೦ರಲ್ಲಿ ಶೇ.೧೦.೪ರಷ್ಟು ೧೯೯೭-೯೮ರಲ್ಲಿ ಶೇ.೧೧.೯ರಷ್ಟು, ೨೦೦೪-೦೫ರಲ್ಲಿ ಶೇ.೨೧.೩ರಷ್ಟು, ೨೦೦೭-೦೮ರಲ್ಲಿ ಶೇ.೧೮.೨೬ರಷ್ಟು, ೨೦೦೮-೦೯ರಲ್ಲಿ ಶೇ ೩೩.೫೦ರಷ್ಟು, ೨೦೦೯-೧೦ರಲ್ಲಿ ಶೇ.೧೫.೪೬ರಷ್ಟು, ೨೦೧೦-೧೧ರಲ್ಲಿ ಶೇ.೧೪.೩೧ರಷ್ಟು ಕಬ್ಬಿಣದ ಅದಿರಿನ ಉತ್ಪಾದನೆಯ ಕೊಡುಗೆಯನ್ನು ನೀಡಿರುವುದು ಈ ಕೋಷ್ಟಕದ ಮೂಲಕ ಕಾಣಸಿಗುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣದ ಅದಿರುಗಳಾದ ಹೆಮಾಟೈಟ್ ಮತ್ತು ಮ್ಯಾಂಗನೀಸ್ ಅದಿರುಗಳು ಹೇರಳವಾಗಿವೆ. ಈ ಕಬ್ಬಿಣದ ಅದಿರುಗಳು ಅಚೇತ್ಯವಾಗಿ ಸಂಡೂರು-ಬಳ್ಳಾರಿ-ಹೊಸಪೇಟೆ ವಲಯಗಳಲ್ಲಿ ಕಂಡು ಬರುತ್ತದೆ. ಹಾಗಾಗಿ ಬಳ್ಳಾರಿ ಜಿಲ್ಲೆಯಲ್ಲಿರುವ ಕಬ್ಬಿಣದ ಅದಿರಿನ ಪ್ರಮಾಣವನ್ನು ಕೋಷ್ಟಕ ೨.೮ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ ೨.೮ ಜಿಲ್ಲೆಯ ಹೊಸಪೇಟೆ-ಸಂಡೂರು ಸೆಕ್ಟರ್‌ಗಳಲ್ಲಿ ಕಬ್ಬಿಣದ ಅದಿರಿನ ಪ್ರಮಾಣದ ವಿವರ**

| ಕಬ್ಬಿಣದ ಅದಿರು (ಮಿಲಿಯನ್ ಟನ್‌ಗಳಲ್ಲಿ) | ಒಟ್ಟು ಸಂಪನ್ಮೂಲ | ಬಳಕೆಯಾದ ಸಂಪನ್ಮೂಲ | ಉಳಿದ ಸಂಪನ್ಮೂಲ |
|---|---|---|---|
| ಹೆಮಾಟೈಟ್ | ೧,೧೪೮.೩೨೪ | ೫೨೭.೯೬೭ | ೬೨೦.೩೫೭ |
| ಮ್ಯಾಂಗನೀಸ್ | ೭,೮೮೩.೮೪೭ | ೨೨೦.೫೦೦ | ೭,೬೬೩.೩೪೭ |
| ಒಟ್ಟು | ೯,೦೩೨.೧೭೧ | ೭೪೮.೪೬೭ | ೮,೨೮೩.೭೦೪ |

**ಮೂಲ : ಸ್ಟೀಲ್ ಟೈಮ್ ಇಂಟರ್‌ನ್ಯಾಷನಲ್ ಜುಲೈ-ಆಗಸ್ಟ್-೨೦೧೧**

ಈ ಮೇಲಿನ ಕೋಷ್ಟಕದಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸಂಡೂರು ಗಣಿ ವಲಯಗಳಲ್ಲಿ ಮೀಸಲಾಗಿರುವ ಕಬ್ಬಿಣದ ಅದರಿನ ಪ್ರಮಾಣವನ್ನು ತೋರಿಸಲಾಗಿದೆ. ಕಬ್ಬಿಣದ ಅದಿರುಗಳಾದ ಹೆಮಾಟೈಟ್ ಮತ್ತು ಮ್ಯಾಂಗನೀಸ್ ಅದಿರು ಬಳಕೆಯಾಗಿರುವ ಪ್ರಮಾಣ ಮತ್ತು ಉಳಿದಿರುವ ಸಂಪನ್ಮೂಲಗಳ ಪ್ರಮಾಣವು ಅಡಕವಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ಹೊಸಪೇಟೆಯ ಗಣಿ ವಲಯಗಳಲ್ಲಿ ಒಟ್ಟು ಕಬ್ಬಿಣ ಅದರಿನ ಪ್ರಮಾಣ ೯,೦೩೨.೧೭೧ ಮಿಲಿಯನ್ ಟನ್‌ಷ್ಟು ಸಂಪನ್ಮೂಲ ಮೀಸಲಾಗಿದೆ. ಅದರಲ್ಲಿ ಹೇಮಾಟೈಟ್ ೧,೧೪೮.೩೨೪ ಮಿಲಿಯನ್ ಟನ್‌ನಷ್ಟಿದ್ದು, ೫೨೭.೯೬೭ ಮಿಲಿಯನ್ ಟನ್‌ಗಳಷ್ಟು ಬಳಕೆಯಾಗಿದೆ. ಇನ್ನು ೬೨೦.೩೫೭ ಮಿಲಿಯನ್ ಟನ್ ಮೊತ್ತ ಉಳಿದಿದೆ. ಹಾಗೆಯೇ ಮ್ಯಾಂಗನೀಸ್ ಅದಿರು ೭,೮೮೩.೮೪೭ ಮಿಲಿಯನ್ ಟನ್‌ನಷ್ಟು ಸಂಪನ್ಮೂಲಗಳು ಈ ಎರಡು ವಲಯಗಳಲ್ಲಿ ಮೀಸಲಾಗಿದ್ದು, ಸುಮಾರು ೨೨೦.೫೦೦ ಮಿಲಿಯನ್ ಟನ್ ಬಳಕೆಯಾಗಿವೆ. ಇನ್ನು ೭೬೬.೩೪೭ ಟನ್‌ನಷ್ಟು ಸಂಪನ್ಮೂಲಗಳು ಉಳಿದಿವೆ. ಹೀಗೆ ಕಬ್ಬಿಣದ ಅದಿರುಗಳನ್ನು ನಿರಂತರವಾಗಿ ೧೫ ವರ್ಷಗಳವರೆಗೆ ಬಳಸಿದ್ದೇ ಆದರೆ ಈ ವಲಯಗಳ ಸಂಪನ್ಮೂಲಗಳು ಬರಿದಾಗುವ ಸಾಧ್ಯತೆಗಳಿವೆಂಬುವುದು ಜಿಲ್ಲೆಯ ದುಸ್ಥಿತಿಯೇ ಆಗಿರುವುದು ಈ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

**೨.೭.೩ ಜಿಲ್ಲೆಯ ಖನಿಜ ಸಂಪನ್ಮೂಲಗಳು**

ಬಳ್ಳಾರಿ ಜಿಲ್ಲೆಯು ಆರ್ಥಿಕವಾಗಿ ಲೋಹಿಯ ಮತ್ತು ಅಲೋಹಿಯ ಖನಿಜ ಸಂಪನ್ಮೂಲವನ್ನು ಹೊಂದಿದೆ. ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ವಲಯಗಳಲ್ಲಿ ಕಬ್ಬಿಣ ಅದಿರಿನ ನಿಕ್ಷೇಪಗಳು ದೊಡ್ಡ ಪ್ರಮಾಣದಲ್ಲಿದೆ. ಈ ವಲಯಗಳಲ್ಲಿ ಗಣಿಗಾರಿಕೆ ಚಟುವಟಿಕೆಗಳು ನಡೆದಿರುವುದು ೫೦ ವರ್ಷಗಳಿಂದಲೂ ಹೆಸರುವಾಸಿಯಾಗಿದೆ. ಗಣಿಗಾರಿಕೆಯಲ್ಲಿ ಲೋಹಿಯ ಮತ್ತು ಅಲೋಹಿಯ ಖನಿಗಳೆಂದರೆ ಯಾವುದು ಎಂಬುವುದು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಲೋಹಿಯ ಖನಿಜವು ಮುಖ್ಯವಾಗಿ ಕಬ್ಬಿಣದ ಅದಿರು, ಮ್ಯಾಂಗನೀಸ್, ಕೆಂಪು ಆಕ್ಸೈಡ್ ಅದಿರು, ಚಿನ್ನ, ತಾಮ್ರ ಮತ್ತು ಸೀಸವನ್ನು ಒಳಗೊಂಡಿದೆ. ಅಲೋಹಿಯ ಖನಿಜವು ಆಸ್ವೆಸ್ಕೀನ್, ಕೊರುಂಡಮ್, ಡಾಲೋವೈಟ್, ಸುಣ್ಣದ ಕಲ್ಲು, ಸುಣ್ಣದ ಕಾಂಕನ್, ಮೇಲ್ಡಿಂಗ್ ಮರಳು, ಸ್ಪಟಿಕ ಶಿಲೆ, ಸೋಪುಕಲ್ಲು, ಗ್ರಾನೈಟ್ ಮತ್ತು ಕೆಂಪು ಓರ್‌ಗಳನ್ನು ಒಳಗೊಂಡಿರುತ್ತದೆ. ಬಳ್ಳಾರಿಯ ಸೆಕ್ಟರ್‌ಗಳಾದ ಬಳ್ಳಾರಿ–ಹೊಸಪೇಟೆ ಸಂಡೂರು ವಲಯಗಳಲ್ಲಿ ಲೋಹಿಯ ಖನಿಜಗಳು ಹೇರಳವಾಗಿದೆ. ಈ ಜಿಲ್ಲೆಯಲ್ಲಿ ಗಣಿ ಗುತ್ತಿಗೆಯು ಸುಮಾರು ೯೦೦ ಮೀಟರ್‌ನಿಂದ ೧,೦೦೦ ಮೀಟರ್‌ವರೆಗೂ ಕಬ್ಬಿಣದ ಅದಿರು ನಿಕ್ಷೇಪಗಳನ್ನು ಹೊಂದಿರುವ ಬೆಟ್ಟದ ಪರ್ವತ ಪ್ರದೇಶಗಳಾಗಿವೆ. ಈ ವಲಯಗಳಲ್ಲಿ ದೊರೆಯುವ ಹೆಮಾಟೈಟ್ ಅದಿರು ಶೇ.೬೫ ರಿಂದ ಶೇ.೬೮ರಷ್ಟು ಉತ್ತಮ ದರ್ಜೆಯದಾಗಿದೆ.

**೨.೭.೪ ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ**

ಅರಣ್ಯ ಪ್ರದೇಶವು ಗ್ರಾಮೀಣ ಅಥವಾ ಹಳ್ಳಿಯ ಹೊರಭಾಗದಲ್ಲಿ ಸಾಗುವಳಿ ಮಾಡದ ಮತ್ತು ಜನರು ವಾಸವಾಗಿರುವ ಹಾಗೂ ನೈಸರ್ಗಿಕ ಸಸ್ಯಗಳನ್ನೊಳಗೊಂಡ ಭೂ ಭಾಗವಾಗಿದೆ. ಈ ಅರಣ್ಯ ಪ್ರದೇಶವು ವಿವಿಧ ವೃಕ್ಷ ಸಮೂಹಗಳಿಂದ ಆವೃತವಾದ ಭೂ ವಲಯವಾಗಿರುತ್ತದೆ. ಅರಣ್ಯ ಎಂಬ ಪದವು ಲ್ಯಾಟಿನ್ ಬಾಷೆಯ ಫ್ಲೇರೀಸ್ ಎಂಬ ಪದದಿಂದ ಬಂದಿದೆ. (ಫುಡ್ ಅಂಡ್ ಅಗ್ರಿಕಲ್ಚರ್ ಆರ್ಗನೈಜೇಷನ್ ಎಫ್.ಎ.ಓ.) ನೀಡಿರುವ ವ್ಯಾಖಾನ ಪ್ರಕಾರ ಸಸ್ಯ ಸಮುದಾಯ ವ್ಯಾಪಿಸಿರುವ ಎಲ್ಲಾ ಗಾತ್ರದ ಗಿಡ–ಮರಗಳು ಪ್ರಧಾನವಾಗಿದೆ ಇವುಗಳನ್ನು ಕಡಿಯಲಿ ಅಥವಾ ಬಿಡಲಿ, ಮರಮುಟ್ಟು ಸೌದೆ ಒದಗಿಸಲು ಸಾಮರ್ಥ್ಯವಿರುವ ಅಥವಾ ಸ್ಥಳೀಯ ಹವೆಯ ಮೇಲೆ ಅಥವಾ ಜನ ಸಂಪತ್ತಿನ ಮೇಲೆ ಪ್ರಭಾವ ಬೀರುವ ಎಲ್ಲಾ ನೆಲಗಳಿಗೂ ಅರಣ್ಯವೆಂದು ಕರೆಯಲಾಗುತ್ತದೆ. ಅರಣ್ಯಗಳ ಅಳಿವು–ಉಳಿವು ಮಾನವರಿಂದ ನಿರ್ಧರಿತವಾದ ಸಂಗತಿಯಾಗಿದೆ. ಅರಣ್ಯ ಪ್ರದೇಶಗಳಲ್ಲಿ ಕೃಷಿ ವಿಸ್ತರಣೆ, ಕೈಗಾರೀಕರಣ, ನೀರಾವರಿ ಅಭಿವೃದ್ಧಿ, ಸಾರಿಗೆ ಮಾರ್ಗಗಳ ನಿರ್ಮಾಣ ಮುಂತಾದ ಉದ್ದೇಶಗಳಿಂದ ಮನುಷ್ಯ ಅರಣ್ಯ ನಾಶಗೊಳಿಸುವುದು ನಿರಂತರವಾಗಿ ಸಾಗಿದೆ. ಇತ್ತೀಚಿಗೆ ಗಣಿಕೈಗಾರಿಕೆ ಮತ್ತು ಗಣಿಗಾರಿಕೆಯಿಂದ ಅರಣ್ಯ ಪ್ರದೇಶಗಳು ಬಹುಪಾಲು ನಾಶವಾಗಿದೆ(ಶಿವಶಂಕರ್.ಎಂ.ಎಲ್,ಶ್ರೀಕಂಠ.ಎನ್., ಕುಮಾರ್ ಸ್ವಾಮಿ.ಎ ೨೦೦೯). ಕರ್ನಾಟಕದಲ್ಲಿ ಒಟ್ಟು ಭೌಗೋಳಿಕ ಕ್ಷೇತ್ರದಲ್ಲಿ ೩೮,೭೨೪ ಚ.ಕಿ.ಮೀ. ಅರಣ್ಯ ಪ್ರದೇಶವಿದೆ. ಅಂದರೆ ಭೌಗೋಳಿಕ

ಕ್ಷೇತ್ರದಲ್ಲಿ ಶೇ.೨೦.೨ರಷ್ಟು ಅರಣ್ಯ ಪ್ರದೇಶವೆಂದೂ ದಾಖಲಾಗಿದ್ದರೂ ಶೇ.೧೧ರಷ್ಟು ಪ್ರದೇಶ ಮಾತ್ರ ವೃಕ್ಷಗಳಿಂದ ಆವೃತವಾಗಿದೆ. ಆದರೆ ಅರಣ್ಯ ನಾಶಪಡಿಸುವಲ್ಲಿ ಗಣಿಗಾರಿಕೆಯ ಚಟುವಟಿಕೆ ನಡೆದಿರುವುದು ಸಾಬೀತಾಗಿರುವ ಅಂಶವಾಗಿದೆ (ರಾಜ.ಬಿ.ಎ.೨೦೦೯). ಕರ್ನಾಟಕ ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣದ ಶೇ.೨೧.೩೫ರಷ್ಟು ಅರಣ್ಯ ಪ್ರದೇಶವಿದೆ. ಕರ್ನಾಟಕದಲ್ಲಿ ೧,೯೧,೭೯೧ ಚ.ಕಿ.ಮೀ ಭೌಗೋಳಿಕ ಪ್ರದೇಶವನ್ನು ಹೊಂದಿದ್ದು, ಅದರಲ್ಲಿ ೩೬,೪೨೧ ಅರಣ್ಯ ಪ್ರದೇಶವನ್ನು ಹೊಂದಿದ್ದು, ಶೇ.೧೦ರಷ್ಟು ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಮಾಡಲಾಗಿದೆ. (ಕರ್ನಾಟಕ ಆರ್ಥಿಕ ಸಮೀಕ್ಷೆ ೨೦೧೬-೧೭). ಕರ್ನಾಟದಲ್ಲಿ ೨೬೬ ಕಬ್ಬಿಣದ ಅದಿರಿನ ಗಣಿಗಳನ್ನು ಹೊಂದಿದ್ದು, ಅದರಲ್ಲಿ ೧೩೪ ಗಣಿಗಳು ಅರಣ್ಯ ಪ್ರದೇಶಗಳು ಕಂಡಿವೆ. ಬಳ್ಳಾರಿಯಲ್ಲಿ ೯,೫೨೭ ಹೆಕ್ಟರ್ ಅರಣ್ಯ ಪ್ರದೇಶವನ್ನು ಹೊಂದಿದ್ದು, ೯೮ ಗಣಿಗಳಿವೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ವಿಸ್ತೀರ್ಣದಲ್ಲಿ ೦.೯೭ ಲಕ್ಷ ಹೆಕ್ಟರ್‌ಗಳಷ್ಟು ಅರಣ್ಯ ಪ್ರದೇಶವಿದ್ದು, ಒಟ್ಟು ವಿಸ್ತೀರ್ಣದಲ್ಲಿ ಶೇ ೧೧.೯೦ರಷ್ಟು ಅರಣ್ಯ ಪ್ರದೇಶವಿದೆ. ೨೦೦೯ರಲ್ಲಿ ಬಳ್ಳಾರಿ ಜಿಲ್ಲೆಯು ೧,೩೪,೦೦೦ ಹೆಕ್ಟರ್ ಅರಣ್ಯ ಪ್ರದೇಶವನ್ನು ಹೊಂದಿದ್ದು, ೭೭,೨೦೦ ಹೆಕ್ಟರ್ ಅರಣ್ಯ ಪ್ರದೇಶ ಮಾತ್ರ ಕಂಡು ಬರುತ್ತದೆ. ಅದರಲ್ಲಿ ೧೧,೦೦೦ ಹೆಕ್ಟರ್ ಮಧ್ಯಮ ದಟ್ಟವಾದ ಅರಣ್ಯಗಳನ್ನು ಹೊಂದಿದೆ. ಇನ್ನುಳಿದ ಅರಣ್ಯ ಪ್ರದೇಶಗಳು ಗಣಿಗಾರಿಕೆ ಮತ್ತು ಅದರ ಸಂಬಂಧಿತ ಚಟುವಟಿಕೆಯ ಪರಿಣಾಮವಾಗಿ ಅರಣ್ಯ ಪ್ರದೇಶು ನಾಶವಾಗಿದೆ (ನ್ಯಾಯಾಧೀಶ ಸಂತೋಷ ಹೆಗ್ಡೆ ೨ನೇ ಲೋಕಾಯುಕ್ತ ವರದಿ ೨೦೧೧).

**೨.೮ ಖನಿಜ ನೀತಿ ಮತ್ತು ನಿಯಮಗಳು**

ಭಾರತ ಸಂವಿಧಾನದ ಏಳನೆಯ ವೇಳಾ ಪಟ್ಟಿ ಪ್ರಕಾರ ಖನಿಜ ಸಂಪನ್ಮೂಲಗಳ ನಿರ್ವಹಣೆಯನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಿಯಂತ್ರಿಸುತ್ತವೆ. ಭಾರತ ಸರ್ಕಾರವು ೧೯೯೩ರಲ್ಲಿ ರಾಷ್ಟ್ರೀಯ ಮಿನರಲ್ ಪಾಲಿಸಿಯನ್ನು ಘೋಷಿಸಿ, ಅದನ್ನು ಮತ್ತಷ್ಟು ಪರಿಷ್ಕರಣೆಗೆ ಒಳಪಡಿಸಲಾಯಿತು. ಮ್ಯಾಕ್ರೋ ಇ.ಐ.ಎ ಬಳ್ಳಾರಿ ಗಣಿ ಪ್ರದೇಶದ ಐ.ಓ.ಎಫ್.ಆರ್ ಅಧ್ಯಯನ ವರದಿಯು ಗಣಿಗಾರಿಕೆ ವಲಯದಲ್ಲಿ ವೈಜ್ಞಾನಿಕ ವಿಧಾನಗಳನ್ನು ತರಲು ಪ್ರೋತ್ಸಾಹಿಸುತ್ತದೆ. ಕರ್ನಾಟಕ ಸರ್ಕಾರ ೨೦೦೦ರಲ್ಲಿ ಖನಿಜ ನೀತಿಯನ್ನು ತ್ಯಾಜ್ಯವನ್ನು ಕಡಿಮೆಗೊಳಿಸುವಿಕೆ, ಪರಿಸರ ಸಮತೋಲನ ಸಾಧಿಸುವ, ಮೌಲ್ಯಗಳ ಸೇರ್ಪಡೆ, ಅಭಿವೃದ್ಧಿ ಮತ್ತು ಸಂಶೋಧನಾ ಚಟುವಟಿಕೆಗಳು, ಅಂತರ್ ಜನಾಂಗೀಯ ಸಮಾನತೆ, ವಿದೇಶಿ ವಿನಿಮಯ ಖನಿಜಗಳನ್ನು ರಫ್ತು ಮಾಡಲಾಗುತ್ತದೆ ಎಂದು ಸೂಚಿಸುತ್ತದೆ. ಇದು ಮುಖ್ಯವಾಗಿ ಗಣಿಗಾರಿಕೆಯಲ್ಲಿ ಜೀವ ವೈವಿದ್ಯತೆಯನ್ನು ಕಾಪಾಡುವ ಅರಣ್ಯ ಸಂಪತ್ತನ್ನು ರಕ್ಷಿಸುವ, ಕಬ್ಬಿಣದ ಅದಿರಿನ ಸ್ಥಳೀಯ ಬಳಕೆ ಮತ್ತು ಕಡಿಮೆ ದರ್ಜೆಯ ಅದಿರುಗಳ ಮೇಲೆ ದಂಡ ವಿಧಿಸುವ ನಿಟ್ಟಿನಲ್ಲಿ ರಚನೆಯಾಗಿದೆ. ಇದು ಗಣಿಗಾರಿಕೆ ಮತ್ತು ಪರಿಸರದ ರಕ್ಷಣೆಗೆ ವ್ಯವಸ್ಥಿತವಾಗಿ ಮತ್ತು ವೈಜ್ಞಾನಿಕವಾಗಿ ಕೇಂದ್ರೀಕರಿಸಿ ಈ ನೀತಿಯನ್ನು ೨೦೦೮ರಲ್ಲಿ ಮತ್ತಷ್ಟು ಪರಿಷ್ಕರಿಸಲಾಯಿತು.

ಗಣಿ ಮತ್ತು ಖನಿಜಗಳಿಗೆ ಸಂಬಂಧಿಸಿದಂತೆ ಕಾಯ್ದೆ ಮತ್ತು ನಿಯಮಗಳು ಜಾರಿಗೆ ಬಂದಿವೆ. ಅದರಲ್ಲಿ ಪ್ರಮುಖವಾದ ಕಾಯ್ದೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ೧೯೫೭ರ ಗಣಿ ಮತ್ತು ಖನಿಜಾಭಿವೃದ್ಧಿ ನಿಯಂತ್ರಣ ಕಾಯ್ದೆ (ಎ.ಎಂ.ಡಿ.ಆರ್. ಕಾಯ್ದೆ), ೧೯೬೦ರ ಮಿನರಲ್ ಕನ್ಸ್‌ಲೇಶನ್ ರೂಲ್ಸ್ (ಡಬ್ಲ್ಯೂ.ಸಿ.ಆರ್) ೧೯೮೮ರ ಮಿನರಲ್ ಕನ್ಸ್‌ಲೇಶನ್ ಅಂಡ್ ಡೆವಲಪ್‌ಮೆಂಟ್ ರೂಲ್ಸ್ (ಎಂ.ಸಿ.ಡಿ.ಆರ್.) ಕಾಯ್ದೆಗಳನ್ನು ಭಾರತ ಸರ್ಕಾರವು ಖನಿಜಗಳ ಸಂರಕ್ಷಣೆ ಮತ್ತು ಗಣಿ ಅಭಿವೃದ್ಧಿಗಾಗಿ ನಿಯೋಜಿಸಲಾಗಿದೆ. ೧೯೮೮ರಲ್ಲಿ ಎಂ.ಸಿ.ಡಿ.ಆರ್. ಕಾಯ್ದೆಯ ಅಡಿಯಲ್ಲಿ ಖನಿಜಗಳ ಅಭಿವೃದ್ಧಿಗಾಗಿ ರಾಜ್ಯಗಳಿಗೆ ಅಧಿಕಾರವನ್ನು ಬಳಸಿಕೊಳ್ಳಲು ಸೆಕ್ಷೆನ್ ೧೫ರ ಅಡಿಯಲ್ಲಿ ಎಂ.ಎಂ.ಡಿ.ಆರ್. ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಈ ಅಧಿಕಾರವನ್ನು ೧೯೯೪ರಲ್ಲಿ ಕರ್ನಾಟಕ ಮೈನ್ಸ್ ಮಿನರಲ್ ಕನ್ಸ್‌ಲೇಶನ್ ರೂಲ್ಸ್‌ನ್ನು ರೂಪಿಸಲಾಯಿತು. ೧೯೫೭ರ ಎಂ.ಎಂ.ಡಿ.ಆರ್. ಕಾಯ್ದೆಯ ಸೆಕ್ಷನ್ ೨೩ರಲ್ಲಿ ಅಕ್ರಮ ಗಣಿಗಾರಿಕೆ, ಅಕ್ರಮ ಅದಿರು ಸಾಗಣೆ ಮತ್ತು ಖನಿಜಗಳ ಸಂಗ್ರಹಣೆಯನ್ನು ತಡೆಯುವ ನಿಟ್ಟಿನಲ್ಲಿ ರಾಜ್ಯಗಳಿಗೆ ಅಧಿಕಾರವನ್ನು ನೀಡುತ್ತದೆ. ಖನಿಜ ವಿನಾಯಿತಿ ಹೊಂದಿರುವ ೧೯೮೦ರ ಅರಣ್ಯ ಸಂರಕ್ಷಣಾ ಕಾಯ್ದೆ, ೧೯೮೬ರ ಪರಿಸರ ಸಂರಕ್ಷಣಾ ಕಾಯ್ದೆ, ೧೯೮೦ರ ಜಲ ರಕ್ಷಣಾ ಮತ್ತು ಮಾಲಿನ್ಯ

ನಿಯಂತ್ರಣ ಕಾಯ್ದೆ, ೧೯೭೪ರ ವಾಯು ರಕ್ಷಣಾ ಮತ್ತು ಮಾಲಿನ್ಯ ತಡೆಗಟ್ಟುವ ಕಾಯ್ದೆ, ೧೯೮೧ರ ಕಾಯ್ದೆಯ ನಿಯಮಗಳಡಿಯಲ್ಲಿ, ಖನಿಜ ವಿನಾಯಿತಿ ಹೊಂದಿರುವ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಮಾಡಬಹುದಾಗಿದೆ ಎಂದು ತಿಳಿಸುತ್ತದೆ.

**೨.೯ ತಾಲ್ಲೂಕಿನ ವಿವರ ಮತ್ತು ಗಣಿ ವಲಯ**

ಪ್ರಸ್ತುತ ಕ್ಷೇತ್ರ ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯ ಗಣಿ ವಲಯಗಳೆಂದೇ ಹೆಸರು ವಾಸಿಯಾಗಿರುವ (ಹೆಚ್.ಬಿ.ಎಸ್.) ಬಳ್ಳಾರಿ-ಸಂಡೂರು-ಹೊಸಪೇಟೆ ತಾಲ್ಲೂಕುಗಳ ಗಣಿ ಗ್ರಾಮೀಣ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡಿದ್ದು, ಪ್ರತಿ ತಾಲ್ಲೂಕಿನಲ್ಲಿ ಮೂರು-ಮೂರು ಗ್ರಾಮಗಳನ್ನು ಕ್ಷೇತ್ರ ಕಾರ್ಯಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಇದರಲ್ಲಿ ತಾಲ್ಲೂಕಿನ ಭೌಗೋಳಿಕತೆ, ಜನಸಂಖ್ಯೆ, ಸಾಕ್ಷರತೆ, ಲಿಂಗ ನಿಷ್ಪತ್ತಿ, ಹಾಗೂ ಪ್ರತಿ ಗ್ರಾಮಗಳ ಸಂಕ್ಷಿಪ್ತವಾದ ವಿವರವನ್ನು ನೀಡಲಾಗಿದೆ.

**೨.೯.೧ ಬಳ್ಳಾರಿ ತಾಲ್ಲೂಕು ಮತ್ತು ಗಣಿ ವಲಯ**

ಬಳ್ಳಾರಿ ತಾಲ್ಲೂಕು ಜಿಲ್ಲೆಯ ಪೂರ್ವಕ್ಕೆ ಇದ್ದು, ಜಿಲ್ಲೆಯ ಅತಿ ದೊಡ್ಡ ತಾಲ್ಲೂಕಾಗಿದೆ. ಪೂರ್ವಕ್ಕೆ ಆಂಧ್ರಪ್ರದೇಶ, ಪಶ್ಚಿಮಕ್ಕೆ ಸಂಡೂರು, ಹೊಸಪೇಟೆ ಉತ್ತರಕ್ಕೆ ಸಿರುಗುಪ್ಪ, ದಕ್ಷಿಣಕ್ಕೆ ಮೊಳಕಾಲ್ಮೂರು ತಾಲ್ಲೂಕುಗಳನ್ನು ಹೊಂದಿದೆ. ಬಳ್ಳಾರಿ ಜಿಲ್ಲಾ ಪಕ್ಷಿ ನೋಟ ೨೦೧೧-೧೨ರ ಪ್ರಕಾರ ತಾಲ್ಲೂಕಿನ ಭೌಗೋಳಿಕ ಪ್ರದೇಶವು ೧,೬೮೮.೫೯ ಚ.ಕಿ.ಮೀ. ಇದೆ. ನೈಸರ್ಗಿಕವಾಗಿ ಉತ್ತಮ ದರ್ಜೆಯ ಸಂಪನ್ಮೂಲವನ್ನು ಈ ತಾಲ್ಲೂಕು ಹೊಂದಿದೆ. ಕೃಷಿಯೋಗ್ಯ ಅತ್ಯುತ್ತಮ ಸಾಗುವಳಿ ಭೂಮಿ ಜೊತೆಗೆ ಜಲ ಸಂಪತ್ತು, ವನಸಂಪತ್ತು ಹಾಗೂ ಖನಿಜ ಸಂಪತ್ತು ಸಾಕಷ್ಟಿವೆ. ಈ ತಾಲ್ಲೂಕಿನಲ್ಲಿ ಕಬ್ಬಿಣ ಅದಿರಿನ ಉತ್ಪಾದನೆಗೆ ಬೇಕಾಗುವ ಕಚ್ಚಾವಸ್ತುಗಳು ಸಾಕಷ್ಟಿದೆ. ಇಲ್ಲಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಉತ್ಪಾದನೆ ಮಾಡುವುದಕ್ಕೆ ೩,೧೩೬ ಕೈಗಾರಿಕ ಘಟಕಗಳಿವೆ. ಘಟಕಗಳು ಒಟ್ಟು ೧೫,೪೫೪ ಜನರಿಗೆ ಉದ್ಯೋಗವನ್ನು ಕಲ್ಪಿಸಿ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಮಿಕರಿಗೆ ಉದ್ಯೋಗ ಒದಗಿಸಿರುವ ಕೀರ್ತಿಯಿದೆ. ಈ ರೀತಿ ಬಳ್ಳಾರಿ ತಾಲ್ಲೂಕು ಜಿಲ್ಲೆಯ ಇತರ ತಾಲ್ಲೂಕುಗಳಿಗೆ ಹೋಲಿಸಿದಾಗ ಜಿಲ್ಲೆಯ ಇತರ ತಾಲ್ಲೂಕುಗಳು ಕೈಗಾರಿಕಾ ದೃಷ್ಟಿಯಿಂದ ಬೆಳವಣಿಗೆ ಸಾಧಿಸಿರುವುದು ಕಾಣಿಸುತ್ತದೆ.

**ಮಾನವ ಸಂಪನ್ಮೂಲ – ಸಾಕ್ಷರತೆ – ಜನಸಾಂದ್ರತೆ**

ಜಿಲ್ಲೆಯ ಬಳ್ಳಾರಿ ತಾಲ್ಲೂಕು ವಿಸ್ತೀರ್ಣದಲ್ಲಿ ಅತಿ ದೊಡ್ಡದಾಗಿದ್ದು, ೨೦೧೧ರ ಜನಗಣತಿಯ ಪ್ರಕಾರ ೪,೧೦,೪೪೫ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪುರುಷರು ೩,೮೭,೭೪೪ ಜನಸಂಖ್ಯೆಯನ್ನು ಮತ್ತು ೩,೮೩,೧೮೫ ಮಹಿಳೆಯರಿದ್ದಾರೆ. ಒಟ್ಟು ೧,೫೬,೦೮೧ ಕುಟುಂಬಗಳು ಈ ತಾಲೂಕಿನಲ್ಲಿ ವಾಸವಾಗಿದ್ದಾರೆ. ಸಾಕ್ಷರತೆಯ ದೃಷ್ಟಿಯಿಂದ ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು ಸಾಕ್ಷರತೆಯ ಪ್ರಮಾಣವು ಶೇ.೬೮.೬೧ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತೆಯ ಶೇ.೫೧.೭೬ರಷ್ಟಿದರೆ, ಪುರುಷ ಸಾಕ್ಷರತೆಯು ಶೇ.೬೬.೭೫ರಷ್ಟಿದೆ. ಜಿಲ್ಲೆಯ ಸಾಕ್ಷರತೆಯ ಸರಾಸರಿ ಶೇ.೬೭.೪೩ಕ್ಕಿಂತ ಬಳ್ಳಾರಿ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಅಧಿಕವಾಗಿದೆ. ಬಳ್ಳಾರಿ ತಾಲ್ಲೂಕಿನ ಪ್ರತಿ ೧,೦೦೦ ಪುರುಷರಿಗೆ ೯೮೮ ಮಹಿಳೆಯರಿದ್ದಾರೆ. ಹಾಗಾಗಿ ಈ ತಾಲ್ಲೂಕಿನ ಲಿಂಗಾನುಪಾತವು ೯೮೮ ರಷ್ಟಿದ್ದರೆ ಜಿಲ್ಲೆಯ ಲಿಂಗಾನುಪಾತವು ೯೮೩ ಇದೆ. ಅಂದರೆ ಈ ತಾಲ್ಲೂಕು ಜಿಲ್ಲೆಯ ಲಿಂಗಾನುಪಾತ ಪ್ರಮಾಣಕ್ಕಿಂತ ಬಳ್ಳಾರಿ ತಾಲ್ಲೂಕಿನ ಲಿಂಗಾನುಪಾತ ಅಧಿಕವಾಗಿದೆ. ಈ ತಾಲೂಕಿನಲ್ಲಿ ಪ್ರತಿ ೧,೦೦೦ ಪುರುಷರಿಗೆ ೯೮೮ ಮಹಿಳೆಯರಿದ್ದರೆ, ಇನ್ನು ೧೨ ಮಹಿಳೆಯರ ಕೊರತೆ ಇರುವುದು ಕಾಣಸಿಗುತ್ತದೆ. ಬಳ್ಳಾರಿ ತಾಲ್ಲೂಕಿನಲ್ಲಿ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಯ ಜನಾಂಗದವರು ವಾಸವಾಗಿದ್ದು, ಪರಿಶಿಷ್ಟ ಪಂಗಡದವರು ೧,೩೨,೧೬೬ ಜನರಿದ್ದು, ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೧೭.೧ ರಷ್ಟಿದ್ದಾರೆ ಹಾಗೂ ಪರಿಶಿಷ್ಟ ಜಾತಿಯ ಜನರು ೧,೩೮,೯೭೯ರಷ್ಟಿದ್ದು, ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೧೮ರಷ್ಟು ಜನಸಂಖ್ಯೆಯನ್ನು ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಯ ಜನಾಂಗದವರು ಹೊಂದಿದ್ದಾರೆ.

**ಲಿಂಗ ನಿಷ್ಪತ್ತಿ**

ಒಂದು ಪ್ರದೇಶದ ಜನಸಂಖ್ಯೆಯ ಆಧಾರದ ಮೇಲೆ ಗುಣಮಟ್ಟ ತಿಳಿಸುವಲ್ಲಿ ಮತ್ತು ಅದರ ಸಾಮಾಜಿಕ–ಆರ್ಥಿಕ ಸ್ಥಿತಿಯ ಮೇಲೆ ಬೆಳಕು ಚೆಲ್ಲುವ ಪ್ರಮುಖವಾದ ಅಂಶ ಪ್ರತಿ ಸಾವಿರ ಪುರುಷರಿಗೆ ಇರುವ ಮಹಿಳೆಯರ ಪ್ರಮಾಣ ಅಂದರೆ ಲಿಂಗ ನಿಷ್ಪತ್ತಿ. ಬಳ್ಳಾರಿ ತಾಲ್ಲೂಕಿನಲ್ಲಿ ಲಿಂಗಾನುಪಾತವು ೯೯೮ ಇರುವುದು ಕಂಡು ಬರುತ್ತದೆ. ಇದನ್ನು ಜಿಲ್ಲೆಯ ಇತರ ತಾಲ್ಲೂಕಿಗೆ ಹೋಲಿಸಿದಾಗ ಉತ್ತಮವಾಗಿರುವುದು ಅಷ್ಟೇ ಅಲ್ಲದೇ, ಜಿಲ್ಲೆಯ ಲಿಂಗಾನುಪಾತ ೯೮೮ ಸರಾಸರಿಗಿಂತ ಹೆಚ್ಚಾಗಿದ್ದು, ಈ ತಾಲ್ಲೂಕಿನ ಲಿಂಗ ನಿಷ್ಪತಿ ಉತ್ತಮವಾಗಿದೆ ಎಂದು ತಿಳಿಯುತ್ತದೆ. ಲಿಂಗಾನುಪಾತವು ಏನನ್ನು ವ್ಯಕ್ತಿಪಡಿಸುತ್ತದೆಂದರೆ ಪ್ರತಿ ೧,೦೦೦ ಪುರುಷರಿಗೆ ೯೯೫ ಮಹಿಳೆಯುರು ಇದ್ದಾರೆ. ವ್ಯತ್ಯಾಸವೆಂದರೆ ೫ ಮಹಿಳೆಯರ ಕೊರತೆ ಇರುವುದು ಎದ್ದು ಕಾಣುತ್ತದೆ. ಕಾರಣ ಹುಟ್ಟುವಿಕೆಯಲ್ಲಿ ಆಯ್ಕೆ ಮಾಡದಿರುವುದು ಉತ್ತಮ ನಿರ್ದಶನವಾಗಿದೆ. ಒಟ್ಟಾರೆಯಾಗಿ ಈ ತಾಲ್ಲೂಕಿನ ಲಿಂಗಾನುಪಾತವು ಉತ್ತಮವಾಗಿದೆ. ಕೃಷಿ ಮತ್ತು ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಬಳ್ಳಾರಿ ತಾಲ್ಲೂಕು ಜಿಲ್ಲೆಯ ಇತರೆ ತಾಲ್ಲೂಕುಗಳಂತೆ ಕೃಷಿಯನ್ನೇ ಅವಲಂಬಿಸಿದೆ. ಕೃಷಿತೋನಾಸ್ತಿ ದುರ್ಬಿಕ್ಷಂ ಎನ್ನುವಂತೆ ಕೃಷಿಯನ್ನೆ ಅವಲಂಬಿಸಿ ಶೇ೬೫.೪೭ ರಷ್ಟು ಅಧಿಕ ಜನರು ಜೀವನವನ್ನು ಸಾಗಿಸುತ್ತಿದ್ದಾರೆ. ೨೦೧೦–೨೦೧೧ರ ಅವಧಿಯಲ್ಲಿ ಒಟ್ಟು ಈ ತಾಲ್ಲೂಕಿನಲ್ಲಿ ಒಟ್ಟು ೧,೦೭,೬೬೨ ಹೆಕ್ಟರ್‌ಗಳನ್ನು ಬಿತ್ತನೆ ಮಾಡಲಾಗಿದೆ. ಬಳ್ಳಾರಿ ತಾಲ್ಲೂಕು ಮುಖ್ಯವಾಗಿ ಹತ್ತಿ, ಜೋಳ, ಮೆಕ್ಕೆಜೋಳ, ಶೇಂಗಾ, ಸಜ್ಜೆ, ತರಕಾರಿ, ಇತ್ಯಾದಿ ಬೆಳೆಗಳನ್ನು ಈ ತಾಲ್ಲೂಕು ನೈಸರ್ಗಿಕ ದೃಷ್ಟಿಕೋನದಿಂದ ಬೆಳೆಯುತಿದ್ದಾರೆ. ಗಣಿಕೈಗಾರಿಕೆಯ ದೃಷ್ಟಿಕೋನದಿಂದ, ಕೃಷಿ ದೃಷ್ಟಿಕೋನದಿಂದ ಜಿಲ್ಲೆಯಲ್ಲಿಯೇ ವಿಶಿಷ್ಟ ಸ್ಥಾನ ಪಡೆದಿದೆ. ಈ ತಾಲ್ಲೂಕು ಗಣಿ ಚಟುವಟಿಕೆಯ ವಲಯಗಳಲ್ಲಿ ಒಂದಾಗಿದ್ದು, ಗಣಿಯ ಪರಿಣಾಮಗಳಿಂದ ಗ್ರಾಮೀಣ ಪ್ರದೇಶದ ಕೃಷಿ, ಆರೋಗ್ಯ, ಶೈಕ್ಷಣಿಕ ಇತ್ಯಾದಿ ಅಂಶಗಳ ಮೇಲೆ ಬೀರಿರುವ ಪ್ರಭಾವವನ್ನು ಅರಿಯಲು ಪ್ರಸ್ತುತ ಅಧ್ಯಯನಕ್ಕಾಗಿ ಜಾನೆಕುಂಟೆ, ಹನ್ನೊಳಿ, ಬೆಳಗಲ್ ಗ್ರಾಮವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಗ್ರಾಮಗಳ ಸಂಕ್ಷಿಪ್ತ ವಿವರಣೆಯನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**ಜಾನೆಕುಂಟೆ ಗ್ರಾಮ**

ಬಳ್ಳಾರಿ ತಾಲ್ಲೂಕಿನಲ್ಲಿರುವ ಜಾನೆಕುಂಟೆ ಗ್ರಾಮವು ವಿಸ್ತಾರದಲ್ಲಿ ಮಧ್ಯಮ ಗಾತ್ರದ್ದಾಗಿದೆ. ಗ್ರಾಮದಲ್ಲಿ ಒಟ್ಟು ೩೪೮ ಕುಟುಂಬಗಳು ವಾಸಿಸುತ್ತಿದ್ದು, ೨೦೧೧ರ ಜನಗಣತಿಯ ಪ್ರಕಾರ ಜಾನೆಕುಂಟೆಯಲ್ಲಿ ೧,೮೫೪ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೯೩೩ ಪುರುಷರು ಮತ್ತು ೨೯೧ ಮಹಿಳೆಯರು ಇದ್ದಾರೆ. ೦–೬ ವಯೋಮಾನ ಇರುವ ಮಕ್ಕಳು ಒಟ್ಟು ೨೮೯ರಷ್ಟಿದ್ದಾರೆ. ಇದರಲ್ಲಿ ಗಂಡು ಮಕ್ಕಳು ೧೩೮ರಷ್ಟಿದ್ದರೆ, ೧೫೧ರಷ್ಟು ಹೆಣ್ಣು ಮಕ್ಕಳಿದ್ದಾರೆ. ಈ ಗ್ರಾಮದ ಲಿಂಗಾನುಪಾತವು ೯೮೭ ರಷ್ಟಿದೆ. ಅಂದರೆ ಪ್ರತಿ ೧,೦೦೦ ಪುರುಷರಿಗೆ ೯೮೭ರಷ್ಟು ಮಹಿಳೆಯರು ಇದ್ದಾರೆ. ಇನ್ನು ೧೩ ಮಹಿಳೆಯರ ಕೊರತೆ ಇರುವುದು ಕಂಡುಬರುತ್ತದೆ. ಜಿಲ್ಲೆಯ ಸರಾಸರಿ ಲಿಂಗಾನುಪಾತ ೯೮೩ಕ್ಕೆ ಹೋಲಿಸಿದಾಗ ಈ ಗ್ರಾಮದ ಲಿಂಗಾನುಪಾತವು ಅಧಿಕವಾಗಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ಈ ಗ್ರಾಮದಲ್ಲಿ ಶೇ.೬೫.೬೯ರಷ್ಟು ಜನರು ಸಾಕ್ಷರತೆಯನ್ನು ಹೊಂದಿದ್ದು, ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ.೮೨.೬೪ರಷ್ಟಿದ್ದರೆ, ಮಹಿಳೆಯರ ಸಾಕ್ಷರತೆಯ ಪ್ರಮಾಣವು ಶೇ.೪೮.೧೮ರಷ್ಟಿದೆ. ಜಿಲ್ಲೆಯ ಸರಾಸರಿ ಸಾಕ್ಷರತೆ ಶೇ.೫೮.೦೯ ಪ್ರಮಾಣಕ್ಕೆ ಹೋಲಿಸಿದಾಗ ಜಾನೆಕುಂಟೆ ಗ್ರಾಮದ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದು ಕಂಡು ಬರುತ್ತದೆ. ಈ ಗ್ರಾಮದ ಜನಸಂಖ್ಯೆಯ ಆಧಾರದ ಮೇಲೆ ಶೈಕ್ಷಣಿಕ ಬೆಳವಣಿಗೆಯ ದೃಷ್ಟಿಯಿಂದ ಇನ್ನೂ ಶೈಕ್ಷಣಿಕ ಪ್ರಗತಿಯನ್ನು ಸಾಧಿಸಬೇಕಾದದ್ದು ಬಹಳಷ್ಟಿದೆ. ಈ ಗ್ರಾಮದ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕೇವಲ ಶೇ.೪೮.೧೮ರಷ್ಟಿರುವುದು ಚಿಂತಾಜನಕವಾಗಿದೆ. ಜಾತಿಯ ದೃಷ್ಟಿಯಿಂದ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಜನ ಸಮುದಾಯದವರು ಬಹುತೇಕವಾಗಿ ವಾಸವಾಗಿದ್ದಾರೆ. ಪರಿಶಿಷ್ಟ ಜಾತಿಗೆ ಸೇರಿದವರು ೯೪೪ ಜನರಿದ್ದು, ಇದರಲ್ಲಿ ೪೭೨ ಪುರುಷರು ಮತ್ತು ೪೭೨ ಮಹಿಳೆಯರು ವಾಸಿಸುತ್ತಿದ್ದಾರೆ. ಈ

ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯವರು ಶೇ.೫೦.೯೨ರಷ್ಟಿದ್ದಾರೆ. ಪರಿಶಿಷ್ಟ ಪಂಗಡಕ್ಕೆ ಸೇರಿದವರು ೨೧ ಜನರಿದ್ದು, ೧೩ ಪುರುಷರನ್ನು ಮತ್ತು ೮ ಮಹಿಳೆಯರನ್ನು ಒಳಗೊಂಡಿದೆ. ಈ ಗ್ರಾಮದಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಶೇ.೧.೧೩ರಷ್ಟು ಜನರಿದ್ದಾರೆ. ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡದ ಜನರ ಪ್ರಮಾಣಕ್ಕಿಂತ ಪರಿಶಿಷ್ಟ ಜಾತಿಯ ಸಮುದಾಯದವರು ಗಣಿ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಸಿರುವುದು ಕಾಣಸಿಗುತ್ತದೆ. ದುಡಿಮೆಯ ದೃಷ್ಟಿಯಿಂದ ಈ ಗ್ರಾಮದಲ್ಲಿ ೫೨೮ ಮಂದಿ ಮುಖ್ಯ ಕೆಲಸದಲ್ಲಿ ತೊಡಗಿದ್ದು, ಅಂದರೆ (೬ ತಿಂಗಳಿಗಿಂತಲೂ ಹೆಚ್ಚು ಅವಧಿಯವರೆಗೆ ಆದಾಯವನ್ನು ಗಳಿಸಿದವರಾಗಿದ್ದಾರೆ) ಇವರು ಶೇ.೨೯.೪೯ರಷ್ಟಿದ್ದಾರೆ. ಹಾಗೆಯೇ ೬ ತಿಂಗಳಿಗಿಂತಲೂ ಕಡಿಮೆ ಆದಾಯವನ್ನು ಗಳಿಸಿ ಜೀವನ ಸಾಗಿಸುವ ಕಾರ್ಮಿಕರು ಶೇ.೭೦.೪೧ರಷ್ಟಿದ್ದಾರೆ. ಕೃಷಿಯನ್ನು ತೊಡಗಿಸಿಕೊಂಡವರಲ್ಲಿ ೩೮ ಮಂದಿ ರೈತರಿದ್ದಾರೆ, ೧೮ ಮಂದಿ ಕೃಷಿ ಚಟುವಟಿಕೆಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಈ ಗ್ರಾಮದ ದುಸ್ಥಿತಿಯೇ ಆಗಿದೆ.

**ಹನ್ನೊಳಿ ಗ್ರಾಮ**

ಬಳ್ಳಾರಿ ತಾಲ್ಲೂಕಿನ ದೊಡ್ಡ ಗ್ರಾಮವಾದ ಹನ್ನೊಳಿಯಲ್ಲಿ ಒಟ್ಟು ೪೯೦ ಕುಟುಂಬಗಳಿವೆ. ೨೦೧೧ರ ಜನಗಣತಿಯ ಪ್ರಕಾರ ೩,೩೦೭ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೧,೬೬೫ ಪುರುಷರನ್ನು ಮತ್ತು ೧,೬೪೨ ಮಹಿಳೆಯರನ್ನು ಒಳಗೊಂಡಿದೆ. ೦–೬ ವಯೋಮಾನದ ಮಕ್ಕಳು ಒಟ್ಟು ೬೧೦ ರಷ್ಟಿದ್ದು, ೩೨೩ ಗಂಡು ಮಕ್ಕಳು ಮತ್ತು ೨೮೭ ಹೆಣ್ಣು ಮಕ್ಕಳಿದ್ದಾರೆ. ಈ ಗ್ರಾಮದ ಲಿಂಗಾನುಪಾತವು ೯೮೬ರಷ್ಟಿದೆ. ಇದು ಜಿಲ್ಲೆಯ ಸರಾಸರಿ ೯೮೩ ಲಿಂಗಾನುಪಾತಕ್ಕೆ ಹೋಲಿಸಿದರೆ ಈ ಗ್ರಾಮದ ಲಿಂಗಾನುಪಾತವು ಅಧಿಕವಿದೆ. ಅಂದರೆ ಹನ್ನೊಳಿ ಗ್ರಾಮದಲ್ಲಿ ಪ್ರತಿ ೧,೦೦೦ ಪುರುಷರಿಗೆ ೯೮೬ ಮಹಿಳೆಯರಿದ್ದಾರೆ. ಒಟ್ಟು ೧೪ ಮಹಿಳೆಯರ ಕೊರತೆ ಇರುವುದು ಶೋಚನಿಯವಾಗಿದೆ. ಸಾಕ್ಷರತೆಯ ದೃಷ್ಟಿಯಿಂದ ಹನ್ನೊಳಿ ಗ್ರಾಮವು ಶೇ.೫೭.೧೭ರಷ್ಟು ಸಾಕ್ಷರತೆಯನ್ನು ಹೊಂದಿದೆ. ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣವು ಶೇ.೭೧.೧೫ರಷ್ಟಿದ್ದರೇ, ಮಹಿಳೆಯರು ಶೇ.೪೩.೧೨ರಷ್ಟು ಸಾಕ್ಷರತೆಯ ಪ್ರಮಾಣವನ್ನು ಹೊಂದಿದ್ದಾರೆ. ಜಿಲ್ಲೆಯ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೫೮.೦೯ಕ್ಕೆ ಹೋಲಿಕೆ ಮಾಡಿದಾಗ ಈ ಗ್ರಾಮದ ಮಹಿಳೆಯರ ಸಾಕ್ಷರತೆಯು ಕಡಿಮೆ ಇದೆ. ಹಾಗಾಗಿ ಈ ಗ್ರಾಮದ ಮಹಿಳೆಯರು ಸಾಕ್ಷರತೆಯಲ್ಲಿ ಸಾಧನೆ ಮಾಡಬೇಕಾಗಿರುವುದು ಬಹಳಷ್ಟಿದೆ. ಒಟ್ಟಾರೆ ಸಾಕ್ಷರತೆಯ ಪ್ರಮಾಣವನ್ನು ಜಿಲ್ಲೆಯ ಸರಾಸರಿ ಸಾಕ್ಷರತೆಯ ಪ್ರಮಾಣ ಶೇ.೬೭.೪೩ಕ್ಕೆ ಹೋಲಿಸಿದರೆ ಗ್ರಾಮದ ಸಾಕ್ಷರತೆಯ ಪ್ರಮಾಣ ಅತ್ಯಂತ ಕಡಿಮೆ ಇರುವುದು ಕಂಡುಬರುತ್ತದೆ. ಗ್ರಾಮದ ಶೈಕ್ಷಣಿಕ ಬೆಳವಣಿಗೆಯ ದೃಷ್ಟಿಯಿಂದ ಇನ್ನು ಸಾಧಿಸಬೇಕಾದದ್ದು ಬಹಳಷ್ಟಿದೆ. ಮಹಿಳೆಯರ ಸಾಕ್ಷರತೆಯ ಪ್ರಮಾಣ ಕೇವಲ ಶೇ.೪೩.೧೨ ರಷ್ಟಿರುವುದು ಅತಂಕಕಾರಿ ಸಂಗತಿ ಆಗಿದೆ. ಜಾತಿಯ ದೃಷ್ಟಿಯಿಂದ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಜನಸಮುದಾಯಗಳು ವಾಸವಾಗಿದ್ದು, ಪರಿಶಿಷ್ಟ ಜಾತಿಯ ಜನರು ೨,೪೨೫ರಷ್ಟು ವಾಸವಾಗಿದ್ದಾರೆ. ಇದರಲ್ಲಿ ೧,೨೩೪ ಪುರುಷರು ಮತ್ತು ೧,೯೯೧ ಮಹಿಳೆಯರು ವಾಸವಾಗಿದ್ದಾರೆ. ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯವರು ಶೇ.೭೩.೩೨ರಷ್ಟು ಜನರು ನೆಲೆಗೊಂಡಿದ್ದಾರೆ ಹಾಗೂ ಪರಿಶಿಷ್ಟ ಪಂಗಡ ೩೮೧ ಜನರು ವಾಸವಾಗಿದ್ದು ಪುರುಷರು ೧೭೯ರಷ್ಟಿದ್ದರೆ, ಮಹಿಳೆಯರು ೨೦೨ರಷ್ಟಿದ್ದಾರೆ. ಈ ಗ್ರಾಮದಲ್ಲಿ ಪರಿಶಿಷ್ಟ ಪಂಗಡದವರು ಶೇ.೧೧.೫೨ರಷ್ಟು ಜನರು ನೆಲೆಗೊಂಡಿದ್ದಾರೆ. ದುಡಿಮೆಯ ನೆಲೆಯಲ್ಲಿ ೧,೫೩೬ ಜನರು ಕೆಲಸದ ಚಟುವಟಿಕೆಯಲ್ಲಿ ತೊಡಗಿದ್ದು, ಈ ಗ್ರಾಮದಲ್ಲಿ ಅಂದರೆ ಇವರು ೬ ತಿಂಗಳಿಗಿಂತ ಹೆಚ್ಚಿನ ಅವಧಿಯವರೆಗೆ ಕೆಲಸದಲ್ಲಿ ತೊಡಗಿದವರಾಗಿರುತ್ತಾರೆ. ಈ ಗ್ರಾಮದಲ್ಲಿ ೧೫೪ ಕೃಷಿ ದುಡಿಮೆಗಾರರಿದ್ದಾರೆ.

**ಬೆಳಗಲ್ ಗ್ರಾಮ**

ಬಳ್ಳಾರಿ ತಾಲ್ಲೂಕಿನ ಬೆಳಗಲ್ ಗ್ರಾಮವು ಗಾತ್ರದಲ್ಲಿ ದೊಡ್ಡದಾಗಿದ್ದು, ಒಟ್ಟು ೧,೦೫೧ ಕುಟುಂಬಗಳು ವಾಸಿಸುತ್ತಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಬೆಳಗಲ್ ಗ್ರಾಮದಲ್ಲಿ ಒಟ್ಟು ೫,೮೭೬ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪುರುಷರ ಸಂಖ್ಯೆ ೨,೯೮೬ರಷ್ಟಿದ್ದರೆ,

ಮಹಿಳೆಯರ ಸಂಖ್ಯೆ ೨೫೪೦ರಷ್ಟಿದೆ. ೦-೬ ವಯೋಮಾನದ ಮಕ್ಕಳ ಸಂಖ್ಯೆ ೧೦೧೨ರಷ್ಟಿದ್ದು, ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೨.೩೭ರಷ್ಟಿದ್ದಾರೆ. ಈ ಗ್ರಾಮದ ಲಿಂಗಾನುಪಾತವು ಸರಾಸರಿ ೯೫೧ರಷ್ಟಿದೆ. ಅಂದರೆ ಪ್ರತಿ ಸಾವಿರ ಪುರುಷರಿಗೆ ೯೫೧ ಮಹಿಳೆಯರಿದ್ದಾರೆ. ಇನ್ನು ೪೯ ಮಹಿಳೆಯರ ಕೊರತೆಯಿದೆ. ಜಿಲ್ಲೆಯ ಸರಾಸರಿ ಲಿಂಗಾನುಪಾತ ೯೮೩ಕ್ಕೆ ಹೋಲಿಸಿದಾಗ ಈ ಗ್ರಾಮದ ಲಿಂಗಾನುಪಾತವು ಕಡಿಮೆ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ದೃಷ್ಟಿಯಿಂದ ಬೆಳಗಲ್ ಗ್ರಾಮದ ಸಾಕ್ಷರತೆಯ ಪ್ರಮಾಣವು ಶೇ.೬೨.೯೦ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣವು ಶೇ.೭೦.೩೦ರಷ್ಟಿದ್ದರೆ, ಮಹಿಳೆಯರ ಸಾಕ್ಷರತೆಯ ಪ್ರಮಾಣವು ಶೇ.೪೮.೭೪ ರಷ್ಟಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ.೬೭.೪೩ಕ್ಕೆ ಹೋಲಿಕೆ ಮಾಡಿದಾಗ ಈ ಗ್ರಾಮದ ಸಾಕ್ಷರತೆಯು (ಶೇ.೬೨.೯೦) ಕಡಿಮೆ ಇದೆ ಮತ್ತು ಮಹಿಳೆಯರ ಸಾಕ್ಷರತೆಯು ಶೇ.೪೮.೭೪ರಷ್ಟಿರುವುದು ಶೋಚನಿಯವಾಗಿದೆ. ಬೆಳಗಲ್ ಗ್ರಾಮದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗಗಳು ವಾಸಿಸುತ್ತಿದ್ದಾರೆ. ಪರಿಶಿಷ್ಟ ಜಾತಿಗೆ ಸೇರಿದವರು ೩,೪೮೯ ಜನರಿದ್ದು, ಇದರಲ್ಲಿ ೧,೫೧೩ ಪುರುಷರು ಮತ್ತು ೧,೪೯೯ ಮಹಿಳೆಯರು ಪರಿಶಿಷ್ಟ ಜಾತಿಯಲ್ಲಿದ್ದಾರೆ. ಒಟ್ಟು ಗ್ರಾಮದ ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯವರು ಶೇ.೫೮.೬೯ರಷ್ಟಿರುವುದು ಕಂಡು ಬರುತ್ತದೆ. ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗದವರು ೭೮೬ ಜನರಿದ್ದು, ಇದರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ೩೬೦ ಪುರುಷರಿದ್ದರೇ, ೩೯೦ ಮಹಿಳೆಯರು ಈ ವರ್ಗದಲ್ಲಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೩.೪೯ರಷ್ಟು ಪರಿಶಿಷ್ಟ ಪಂಗಡವಿರುವುದು ಕಂಡುಬರುತ್ತದೆ. ಗ್ರಾಮದಲ್ಲಿ ೨,೨೭೭ ಜನರು ಕೆಲಸ ಚಟುವಟಿಕೆಯಲ್ಲಿ ತೊಡಗಿದ್ದಾರೆ. ೨೯೬ ರೈತರು ಮತ್ತು ೧೯೮ ಕೃಷಿ ದುಡಿಮೆಗಾರರಿರುವುದು ಕಂಡುಬರುತ್ತದೆ. ಬಳ್ಳಾರಿ ತಾಲೂಕಿನಲ್ಲಿ ಪ್ರಸ್ತುತ ಕ್ಷೇತ್ರ ಅಧ್ಯಯನಕ್ಕೆ ಮಾಡಿಕೊಂಡ ಜಾನೆಕುಂಟೆ, ಬೆಳಗಲ್ ಮತ್ತು ಹನ್ನೊಳಿ ಗ್ರಾಮಗಳ ಜನಸಂಖ್ಯೆಯ ಪ್ರಮಾಣ, ಸಾಕ್ಷರತೆಯ ಪ್ರಮಾಣ ಹಾಗೂ ಲಿಂಗಾನುಪಾತಗಳ ಅಂಕಿ-ಅಂಶವನ್ನು ಈ ಕೆಳಗಿನ ಕೋಷ್ಟಕದಲ್ಲಿ ಗಮನಿಸಿ.

**ಕೋಷ್ಟಕ ೨.೯ ಬಳ್ಳಾರಿ ತಾಲ್ಲೂಕಿನ ಬೆಳಗಲ್, ಹನ್ನೊಳಿ ಮತ್ತು ಜಾನೆಕುಂಟೆ ಗ್ರಾಮದ ಜನಸಂಖ್ಯೆ, ಸಾಕ್ಷರತೆ ಮತ್ತು ಲಿಂಗಾನುಪಾತದ ವಿವರ**

| ಗ್ರಾಮಗಳು | ಜನಸಂಖ್ಯೆ | ಪುರುಷರು | ಮಹಿಳೆಯರು | ಸಾಕ್ಷರತೆ ಶೇಕಡವಾರು | ಲಿಂಗಾನುಪಾತ ಜನಸಾಂದ್ರತೆ |
|---|---|---|---|---|---|
| ಜಾನೆಕುಂಟೆ | ೧,೮೫೪ | ೯೩೩ | ೯೨೧ | ೬೫.೬೯ | ೯೮೭ |
| ಹನ್ನೊಳಿ | ೩,೩೦೭ | ೧,೬೬೫ | ೧,೬೪೨ | ೫೭.೧೭ | ೯೮೬ |
| ಬೆಳಗಲ್ | ೫,೮೨೬ | ೨,೯೮೬ | ೨,೮೪೦ | ೬೨.೯೦ | ೯೫೧ |

ಮೂಲ : ೨೦೧೧ ಜನಗಣತಿಯ ಅಂಕಿ-ಅಂಶ

ಈ ಮೇಲಿನ ಕೋಷ್ಟಕದಲ್ಲಿ ಬಳ್ಳಾರಿ ತಾಲ್ಲೂಕಿನ ಜಾನೆಕುಂಟೆ, ಬೆಳಗಲ್, ಹನ್ನೊಳಿ ಗ್ರಾಮಗಳ ಜನಸಂಖ್ಯೆ ಮಹಿಳೆಯರ ಸಂಖ್ಯೆ, ಪುರುಷರ ಸಂಖ್ಯೆ, ಸಾಕ್ಷರತೆಯ ಪ್ರಮಾಣ (ಶೇಕಡವಾರುಗಳಲ್ಲಿ) ಮತ್ತು ಲಿಂಗಾನುಪಾತದ ಅಂಕಿ-ಅಂಶಗಳನ್ನು ನೀಡಲಾಗಿದೆ. ಜನಸಂಖ್ಯೆಯ ದೃಷ್ಟಿಯಿಂದ ಈ ಮೂರು ಗ್ರಾಮಗಳಲ್ಲಿ ಬೆಳಗಲ್ ಗ್ರಾಮವು ಅಧಿಕ ಜನಸಂಖ್ಯೆಯನ್ನು ಹೊಂದಿರುವ ಗ್ರಾಮವಾಗಿದೆ. ಸಾಕ್ಷರತೆಯ ದೃಷ್ಟಿಯಿಂದ ಗಮನಿಸಬಹುದಾದರೆ ಜಾನೆಕುಂಟೆ ಗ್ರಾಮವು, ಬೆಳಗಲ್, ಹನ್ನೊಳಿ ಗ್ರಾಮದ ಸಾಕ್ಷರತೆಯ ಪ್ರಮಾಣಕ್ಕಿಂತ ಅಧಿಕ ಸಾಕ್ಷರತೆಯನ್ನು ಹೊಂದಿದೆ. ಹಾಗೆಯೇ ಈ ಮೂರು ಗ್ರಾಮಗಳಲ್ಲಿ ಜಾನೆಕುಂಟೆ ಗ್ರಾಮದ ಲಿಂಗಾನುಪಾತವು ೯೮೭ ರಷ್ಟಿದ್ದು, ಹನ್ನೊಳಿ, ಬೆಳಗಲ್ ಕ್ರಮವಾಗಿ ಗ್ರಾಮದ ಲಿಂಗಾನುಪಾತ ಸರಾಸರಿ ೯೮೬, ೯೫೧ಕ್ಕಿಂತ ಜಾನೆಕುಂಟೆ ಗ್ರಾಮದ ಲಿಂಗಾನುಪಾತವು ಅಧಿಕವಾಗಿದೆ ಎಂದು ತಿಳಿಯಬಹುದಾಗಿದೆ.

### ೨.೯.೨ ಹೊಸಪೇಟೆ ತಾಲ್ಲೂಕು ಮತ್ತು ಗಣಿ ವಲಯ

ಬಳ್ಳಾರಿ ಜಿಲ್ಲೆಯಲ್ಲಿರುವ ಹೊಸಪೇಟೆ ತಾಲ್ಲೂಕು ಪ್ರಮುಖ ಕೇಂದ್ರ ಬಿಂದುವಾಗಿದೆ. ಹೊಸಪೇಟೆ ತಾಲ್ಲೂಕು ಪ್ರದೇಶವನ್ನು ಭೌಗೋಳಿಕವಾಗಿ ಎರಡು ಭಾಗಗಳಲ್ಲಿ ಗುರುತಿಸಲಾಗಿದೆ. ತಾಲ್ಲೂಕಿನ ವಿಶಾಲವಾಗಿರುವ ಭಾಗವನ್ನು ಈಶಾನ್ಯದಲ್ಲಿ ಸಿರುಗುಪ್ಪ, ಪೂರ್ವದಲ್ಲಿ ಬಳ್ಳಾರಿ, ದಕ್ಷಿಣದಲ್ಲಿ ಸಂಡೂರು ಹಾಗೂ ಉತ್ತರದಲ್ಲಿ ಕೊಪ್ಪಳ ಜಿಲ್ಲೆ ಪ್ರದೇಶಗಳು ಸುತ್ತುವರೆದಿದೆ. ನೈರುತ್ಯಕ್ಕಿರುವ ತಾಲ್ಲೂಕಿನ ಮತ್ತೊಂದು ಭಾಗ ಪೂರ್ವದಲ್ಲಿ ಸಂಡೂರು, ದಕ್ಷಿಣದಲ್ಲಿ ಕೂಡ್ಲಿಗಿ, ಪಶ್ಚಿಮದಲ್ಲಿ ಹಗರಿಬೊಮ್ಮನಹಳ್ಳಿ ಮತ್ತು ಉತ್ತರದಲ್ಲಿ ಜಲಾಶಾಯದ ಹಿನ್ನಿರಿನ ಪ್ರದೇಶಗಳಿಂದ ಸುತ್ತುವರೆದಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ನೈಸರ್ಗಿಕ ಸಂಪನ್ಮೂಲಗಳು ಹೇರಳವಾಗಿದ್ದು, ಈ ಸಂಪನ್ಮೂಲಗಳನ್ನು ಹೊಂದಿರುವ ಪ್ರದೇಶವು ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಗಳ ಕೇಂದ್ರವೂ ಆಗಿದೆ. ಹೊಸಪೇಟೆಯ ವಾಯುವ್ಯ, ಆಗ್ನೇಯವಾಗಿ ಚಾಚಿಕೊಂಡಿರುವ ಸಂಡೂರಿನ ಬೆಟ್ಟದ ಸಾಲುಗಳು ಅತೀ ಎತ್ತರವಾಗಿದ್ದು, ಕಬ್ಬಿಣದ ಅದಿರಿನಿಂದ ಕೂಡಿವೆ. ಈ ತಾಲ್ಲೂಕು ಬಳ್ಳಾರಿ ಜಿಲ್ಲೆಯಿಂದ ೬೦ ಕಿ.ಮೀ. ದೂರದಲ್ಲಿದ್ದು, ಬಳ್ಳಾರಿ ಜಿಲ್ಲಾ ಪಕ್ಷಿ ನೋಟ ೨೦೧೧-೧೨ರ ಪ್ರಕಾರ ತಾಲ್ಲೂಕಿನ ಭೌಗೋಳಿಕ ಪ್ರದೇಶ ೯೦೪.೧೭ ಚ.ಕಿ.ಮೀ. ಇದೆ. ಜಲ್ಲೆಯ ವಿಸ್ತೀರ್ಣತೆಯಲ್ಲಿ ಅತಿ ಚಿಕ್ಕದಾದ ತಾಲ್ಲೂಕಾಗಿದೆ. ದೇಶದ ಆರ್ಥಿಕಾಭಿವೃದ್ಧಿಯನ್ನು ಸಾಧಿಸುವ ಪ್ರಮುಖ ವಿಧಾನವೆಂದರೆ ಕೈಗಾರಿಕರಣವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣವು ವೇಗವಾಗಿ ಬೆಳವಣಿಗೆಯನ್ನು ಹೊಂದಿರುವ ತಾಲ್ಲೂಕು ಹೊಸಪೇಟೆ ಒಂದಾಗಿದೆ.ಇಲ್ಲಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಉತ್ಪಾದನೆ ಮಾಡುವುದಕ್ಕೆ ೨,೯೭೪ ಕೈಗಾರಿಕಾ ಘಟಕಗಳು ಈ ತಾಲ್ಲೂಕಿನಲ್ಲಿದೆ. ಈ ಘಟಕಗಳು ೧೫,೬೦೨ ಜನರಿಗೆ ಉದ್ಯೋಗ ಅವಕಾಶವನ್ನು ಕಲ್ಪಿಸಿದೆ. ಈ ರೀತಿಯಾಗಿ ಹೊಸಪೇಟೆ ತಾಲ್ಲೂಕು ಜಿಲ್ಲೆಯ ಇತರೆ ತಾಲ್ಲೂಕುಗಳಿಗೆ ಹೋಲಿಕೆ ಮಾಡಿಕೊಂಡಾಗ ಕೈಗಾರಿಕ ದೃಷ್ಟಿಯಿಂದ ಬೆಳವಣಿಗೆಯನ್ನು ಸಾಧಿಸಿರುವುದು ಕಾಣಸಿಗುತ್ತದೆ.

**ಜನಸಂಖ್ಯೆ – ಸಾಕ್ಷರತೆ – ಜನಸಾಂದ್ರತೆ**

೨೦೧೧ರ ಜನಗಣತಿಯ ಪ್ರಕಾರ ಹೊಸಪೇಟೆ ತಾಲ್ಲೂಕು ಜನಸಂಖ್ಯೆಯ ದೃಷ್ಟಿಯಿಂದ ಜಿಲ್ಲೆಯಲ್ಲಿ ೩ನೇ ಸ್ಥಾನವನ್ನು ಪಡೆದಿದೆ. ಈ ತಾಲ್ಲೂಕಿನಲ್ಲಿ ೪,೫೯,೯೧ ಜನಸಂಖ್ಯೆಯನ್ನು ಹೊಂದಿದ್ದು, ಪುರುಷರು ೨,೨೯,೩೩೮ರಷ್ಟಿದ್ದರೇ, ಮಹಿಳೆಯರು ೨,೩೦,೬೫೩ರಷ್ಟಿದ್ದಾರೆ. ಈ ತಾಲ್ಲೂಕಿನಲ್ಲಿ ಒಟ್ಟು ೯೪,೧೯೦ ಕುಟುಂಬಗಳು ವಾಸಿಸುತ್ತಿದ್ದಾರೆ. ನಗರ ಪ್ರದೇಶಗಳಲ್ಲಿ ಶೇ ೫೮.೦೯ರಷ್ಟು ಜನರು ಹಾಗೂ ಗ್ರಾಮೀಣ ಪ್ರದೇಶದಲ್ಲಿ ಶೇ.೪೧.೦೧ರಷ್ಟು ವಾಸಿಸುತ್ತಿದ್ದಾರೆ. ಜಾತಿವಾರು ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ವಾಸಿಸುತ್ತಿದ್ದಾರೆ. ಪರಿಶಿಷ್ಟ ಜಾತಿಯವರು ೧,೦೪,೯೦೨ರಷ್ಟು ಜನರಿದ್ದು, ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೨೨.೮ರಷ್ಟಿದ್ದಾರೆ.ಇದರಲ್ಲಿ ಪುರುಷರು ೫೧,೯೭೭ರಷ್ಟಿದ್ದರೆ, ೫೨,೯೨೮ರಷ್ಟು ಮಹಿಳೆಯರಿದ್ದಾರೆ. ಅದೇ ರೀತಿಯಾಗಿ ಪರಿಶಿಷ್ಟ ಪಂಗಡದವರು ೭೫,೦೬೯ರಷ್ಟು ಜನರಿದ್ದು, ಇದರಲ್ಲಿ ೩೬,೮೫೦ ಪುರುಷರು ಮತ್ತು ೩೮,೨೧೯ ಮಹಿಳೆಯರಿದ್ದಾರೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೧೬.೩ರಷ್ಟು ಪರಿಶಿಷ್ಟ ಪಂಗಡದ ಜನರಿದ್ದಾರೆ. ಸಾಕ್ಷರತೆಯ ದೃಷ್ಟಿಕೋನದಲ್ಲಿ ತಾಲ್ಲೂಕಿನಲ್ಲಿರುವ ಸಾಕ್ಷರತೆಯು ಒಟ್ಟು ಸಂಖ್ಯೆ ೨,೭೬,೩೧೮ರಷ್ಟಿದೆ. ಇದರಲ್ಲಿ ಪುರುಷ ಸಾಕ್ಷರಸ್ಥರು ೧,೫೩,೫೬೭ ರಷ್ಟಿದ್ದರೆ, ಮಹಿಳಾ ಸಾಕ್ಷರಸ್ಥರು ೧,೨೨,೭೫೧ರಷ್ಟಿದ್ದಾರೆ. ಹೊಸಪೇಟೆ ತಾಲ್ಲೂಕಿನ ಸಾಕ್ಷರತೆಯ ದರವು ಶೇ.೬೬.೯೬ ರಷ್ಟಿದ್ದರೆ, ಮಹಿಳೆಯರ ಸಾಕ್ಷರತೆಯ ದರವು ಶೇ.೫೩.೨೨ ರಷ್ಟಿದ್ದಾರೆ. ಹೊಸಪೇಟೆ ತಾಲ್ಲೂಕಿನ ಸಾಕ್ಷರತೆಯ ದರವು ಜಿಲ್ಲೆಯ ಸಾಕ್ಷರತೆ ಸರಾಸರಿ ಶೇ.೬೭.೪೩ಕ್ಕಿಂತ ಕಡಿಮೆಯಿದೆ. ಈ ತಾಲೂಕಿನಲ್ಲಿ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಶೇ.೫೩.೨೨ರಷ್ಟಿದ್ದು, ಇದನ್ನು ಜಿಲ್ಲೆಯ ಮಹಿಳಾ ಸಾಕ್ಷರತರು ಶೇ.೫೮.೦೯ಕ್ಕಿಂತ ಕಡಿಮೆ ಇರುವುದು ಕಂಡು ಬರುತ್ತದೆ. ತಾಲ್ಲೂಕಿನ ಜನಸಂಖ್ಯೆಯ ದೃಷ್ಟಿಯಿಂದ ಇನ್ನು ಶೈಕ್ಷಣಿಕ ಬೆಳವಣಿಗೆಯನ್ನು ಸಾಧಿಸುವುದು ಅವಶ್ಯಕವಾಗಿದೆ. ಹೊಸಪೇಟೆ ತಾಲ್ಲೂಕು ಪ್ರತಿ ಚದರ ಕೀಲೋಮೀಟರ್‌ಗೆ ೨೯೦ ಜನಸಾಂದ್ರತೆಯನ್ನು ಹೊಂದಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ೦-೬ ವರ್ಷ ವಯೋಮಾನದ

ಮಕ್ಕಳ ಸಂಖ್ಯೆಯು ೬೬,೧೨೮ರಷ್ಟಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ೨೯,೬೮೭ರಷ್ಟು, ನಗರ ಪ್ರದೇಶದಲ್ಲಿ ೩೬,೪೪೧ ರಷ್ಟು ಮಕ್ಕಳಿದ್ದಾರೆ.

**ಲಿಂಗಾನುಪಾತ**

ಯಾವುದೇ ಒಂದು ಪ್ರದೇಶದ ಜನಸಂಖ್ಯೆಯ ಗುಣಮಟ್ಟವನ್ನು ಅರಿಯುವ ಮತ್ತು ಆ ಪ್ರದೇಶದ ಸಾಮಾಜಿಕ-ಆರ್ಥಿಕತೆಯ ಮೇಲೆ ಬೆಳಕು ಚೆಲ್ಲುವ ಪ್ರಮುಖವಾದ ಸಾಧನವೆಂದರೆ ಲಿಂಗಾನುಪಾತವಾಗಿದೆ. ಲಿಂಗಾನುಪಾತವೆಂದರೆ ಪ್ರತಿ ೧,೦೦೦ ಪುರುಷರಿಗೆ ಎಷ್ಟು ಮಹಿಳೆಯರು ಇದ್ದಾರೆ ಎಂಬುದಾಗಿದೆ. ಹಾಗೆಯೇ ಹೊಸಪೇಟೆ ತಾಲೂಕಿನಲ್ಲಿ ೨೦೧೧ರ ಜನಗಣತಿಯ ಪ್ರಕಾರ ಪ್ರತಿ ೧,೦೦೦ ಪುರುಷರಿಗೆ ೧,೦೦೬ ಮಹಿಳೆಯರಿದ್ದಾರೆ. ಹೊಸಪೇಟೆ ತಾಲ್ಲೂಕಿನ ಸರಾಸರಿ ಲಿಂಗಾನುಪಾತವು ೧,೦೦೬ರಷ್ಟಿದೆ. ಈ ತಾಲ್ಲೂಕಿನ ಲಿಂಗಾನುಪಾತವು ಉತ್ತಮವಾಗಿರುವುದು ಕಂಡು ಬರುತ್ತದೆ. ಅಲ್ಲದೆ ಜಿಲ್ಲೆಯ ಸರಾಸರಿ ಲಿಂಗಾನುಪಾತಕ್ಕಿಂತ(೯೮೮)ಅಧಿಕವಾಗಿರುವುದು ಸಾಧನೀಯ. ತಾಲ್ಲೂಕಿನ (೦-೬) ಮಕ್ಕಳ ಲಿಂಗಾನುಪಾತ ೯೬೩ರಷ್ಟಿದೆ ಕೋಷ್ಟಕ ೨.೧೨ರಲ್ಲಿ ಗಮನಿಸಿ.

ಕೃಷಿ ಮತ್ತು ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಉತ್ತರದಲ್ಲಿ ಹರಿಯುವ ತುಂಗಭದ್ರ ನದಿಯು ಹೊಸಪೇಟೆ ಮತ್ತು ಕೊಪ್ಪಳ ಜಿಲ್ಲೆಯ ಗಡಿ ಭಾಗದಲ್ಲಿ ಹರಿಯುತ್ತದೆ. ಜಲಾಶಯದಿಂದ ಹೊರಟ ನೀರು ಇದರ ಕಾಲುವೆಗಳ ಮೂಲಕ ಹೊಸಪೇಟೆ ಪಟ್ಟಣದೊಳಗೆ ಹರಿದು ಕೃಷಿ ಭೂಮಿಗೆ ನೀರುಣಿಸುತ್ತದೆ. ನದಿಗೆ ಅಲ್ಲಲ್ಲಿ ಹಳೆಯ ಆಣೆಕಟ್ಟುಗಳಿದ್ದು, ಅವು ಸಹ ಕಾಲುವೆಯ ಮೂಲಕ ಕೃಷಿಗೆ ನೀರೊದಗಿಸುತ್ತವೆ. ಕಪ್ಪು ಜೇಡಿಮಣ್ಣು, ಕೆಂಪು ಜೇಡಿ ಮಣ್ಣು ಮತ್ತು ಮರಳು ಮಿಶ್ರಿತ ಮಣ್ಣುಗಳನ್ನು ಕಾಣುತ್ತೇವೆ ಈ ವಲಯದಲ್ಲಿ ಕಾಣಸಿಗುತ್ತದೆ. ಈ ಭಾಗದ ಗ್ರಾಮೀಣ ಪ್ರದೇಶದಲ್ಲಿ ಕಬ್ಬು, ಬಾಳೆ, ಜೋಳ, ಶೇಂಗಾ, ದ್ವಿದಳ ಧಾನ್ಯಗಳು ಮುಂತಾದ ಪ್ರಮುಖವಾದ ಬೆಳೆಗಳನ್ನು ಬೆಳೆಯುತ್ತಾರೆ. ೨೦೧೦-೧೧ನೇ ಸಾಲಿನಲ್ಲಿ ೨,೦೦೧ ಹೆಕ್ಟರ್ ಪ್ರದೇಶ ಭೂಮಿ ಬೀಳು ಇದ್ದು, ೩೪,೩೫೬ ಹೆಕ್ಟರ್ ಪ್ರದೇಶದಲ್ಲಿ ಸಾಗುವಳಿ ಮಾಡಲಾಗಿದೆ. ಒಟ್ಟು ಜನಸಂಖ್ಯೆಯಲ್ಲಿ ೧,೮೯,೬೮೯ ಜನರು ಕೆಲಸ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಶೇ.೮೮.೩೨ರಷ್ಟು ಜನರು ಹೆಚ್ಚು ದುಡಿಮೆಯ ಚಟುವಟಿಕೆಯಲ್ಲಿ ತೊಡಗಿದ್ದು, ಇವರು ೬ ತಿಂಗಳಿಗಿಂತ ಕಡಿಮೆ ಆದಾಯ ಪಡೆಯುವ ದುಡಿಮೆಗಾರರು ಶೇ.೧೧.೮ರಷ್ಟು ಜನರು ಕೆಲಸದಲ್ಲಿ ತೊಡಗಿದ್ದಾರೆ. ೨೫,೨೯೪ ರೈತರು ಮತ್ತು ೪೮,೧೮೬ ಕೃಷಿ ಕಾರ್ಮಿಕರು ಈ ತಾಲ್ಲೂಕಿನಲ್ಲಿ ಇರುವುದು ಕಂಡು ಬರುತ್ತದೆ.

ಈ ತಾಲ್ಲೂಕು ನೈಸರ್ಗಿಕ ಸಂಪನ್ಮೂಲಗಳ ದೃಷ್ಟಿಯಿಂದ, ಗಣಿ ಕೈಗಾರಿಕೆಯ ಕೃಷಿಯಿಂದ, ಕೃಷಿಯ ದೃಷ್ಟಿಯಿಂದ ಜಿಲ್ಲೆಯಲ್ಲಿಯೇ ವಿಶಿಷ್ಟ ಸ್ಥಾನ ಪಡೆದಿದೆ. ಗಣಿ ಚಟುವಟಿಕೆ ವಲಯಗಳಲ್ಲಿ ಹೊಸಪೇಟೆ ತಾಲೂಕು ಒಂದಾಗಿದ್ದು, ಈ ತಾಲೂಕಿನ ಕಲ್ಲಹಳ್ಳಿ, ರಾಜಾಪುರ, ಪಾಪಿನಾಯಕನಹಳ್ಳಿ ಎಂಬ ಮೂರು ಗ್ರಾಮಗಳನ್ನು ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಹಾಗಾಗಿ ಈ ಗ್ರಾಮಗಳ ಸಂಕ್ಷಿಪ್ತವಾದ ವಿವರವನ್ನು ಈ ಕೆಳಗೆ ನೀಡಲಾಗಿದೆ.

**ಕಲ್ಲಹಳ್ಳಿ ಗ್ರಾಮ**

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಕಲ್ಲಹಳ್ಳಿಯು ಒಂದು ಗ್ರಾಮವಾಗಿದೆ. ಈ ಗ್ರಾಮದಲ್ಲಿ ಒಟ್ಟು ೪೮೯ ಕುಟುಂಬಗಳು ವಾಸಿಸುತ್ತಿದ್ದು, ೨೦೧೧ರ ಜನಗಣತಿಯ ಪ್ರಕಾರ ಕಲ್ಲಹಳ್ಳಿ ಗ್ರಾಮದಲ್ಲಿ ೨,೫೨೫ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪುರುಷರ ಜನಸಂಖ್ಯೆ ೧,೨೬೯ರಷ್ಟಿದ್ದರೇ, ೧,೨೫೬ ಮಹಿಳೆಯರಿದ್ದಾರೆ. ೦-೬ ವಯೋಮಾನದ ಮಕ್ಕಳ ಸಂಖ್ಯೆ ೫೦೪ರಷ್ಟಿದೆ. ಇದರಲ್ಲಿ ೨೫೨ ಗಂಡು ಮಕ್ಕಳಿದ್ದಾರೆ ಮತ್ತು ೨೫೨ ಹೆಣ್ಣು ಮಕ್ಕಳಿದ್ದಾರೆ. ಈ ಗ್ರಾಮದ ಲಿಂಗಾನುಪಾತವು ೯೯೦ರಷ್ಟಿದೆ. ಅಂದರೆ ಪ್ರತಿ ೧,೦೦೦ ಪುರುಷರಿಗೆ ೯೯೦ ಮಹಿಳೆಯರಿದ್ದಾರೆ. ಇನ್ನೂ ೧೦ ಮಹಿಳೆಯರ ಕೊರತೆಯಿದೆ. ಆದರೂ ಗ್ರಾಮದ ಲಿಂಗಾನುಪಾತವನ್ನು ಜಿಲ್ಲೆಯ ಲಿಂಗಾನುಪಾತಕ್ಕಿಂತ (೯೮೩) ಅಧಿಕವಾಗಿದೆ. ಸಾಕ್ಷರತೆಯ ದೃಷ್ಟಿಯಿಂದ ಈ ಗ್ರಾಮದ ಸಾಕ್ಷರತೆಯ ಪ್ರಮಾಣವು ಶೇ.೪೯.೬೮ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ.೬೦.೩೭ರಷ್ಟಿದ್ದರೆ, ಮಹಿಳಾ ಸಾಕ್ಷರತೆ ಪ್ರಮಾಣ ಶೇ.೩೮.೮೪ರಷ್ಟಿದೆ.

ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ.೬೭.೪೩ಕ್ಕೆ ಹೋಲಿಸಿದರೆ ಕಲ್ಲಹಳ್ಳಿ ಗ್ರಾಮದ ಸಾಕ್ಷರತೆಯು ಅತಿ ಕಡಿಮೆ ಇರುವುದು ಕಂಡು ಬರುತ್ತದೆ. ಈ ಗ್ರಾಮದ ಮಹಿಳೆಯರ ಸಾಕ್ಷರತೆಯ ಪ್ರಮಾಣವು ತೀರ ಅಂದರೆ ಕೇವಲ ಶೇ.೩೮.೮೪ ರಷ್ಟಿರುವುದು ಶೋಚನಿಯ ಸಂಗತಿಯಾಗಿದೆ. ಈ ಗ್ರಾಮದ ಜನಸಂಖ್ಯೆಯ ದೃಷ್ಟಿಯಿಂದ ಶೈಕ್ಷಣಿಕವಾಗಿ ಬೆಳವಣಿಗೆಯನ್ನು ಸಾಧಿಸುವುದು ಒಳಿತು. ಮಹಿಳೆಯರ ಸಾಕ್ಷರತೆಯ ಪ್ರಮಾಣ ಜಿಲ್ಲೆಯ ಮಹಿಳಾ ಸಾಕ್ಷರತೆಯ ಪ್ರಮಾಣ ಶೇ.೫೮.೦೯ಕ್ಕಿಂತಲೂ ಕಡಿಮೆ ಇದೆ. ಅಂದರೇ ಶೇ.೨೦ರಷ್ಟು ಕಡಿಮೆ ಇರುವುದು ಕ್ಲಿಷ್ಟಕರವಾದ ಸಂಗತಿಯೇ ಆಗಿದೆ. ಗ್ರಾಮದಲ್ಲಿ ಮೀಸಲಾತಿಯ ವರ್ಗಕ್ಕೆ ಸೇರಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ವಾಸಿಸುತ್ತಿದ್ದಾರೆ. ಪರಿಶಿಷ್ಟ ಜಾತಿಗೆ ಸೇರಿದ ವರ್ಗದವರು ೧,೭೫೭ ಜನಸಂಖ್ಯೆ ಜೀವಿಸುತ್ತಿದ್ದು, ಅದರಲ್ಲಿ ೮೭೯ರಷ್ಟು ಪುರುಷರು ಮತ್ತು ೮೭೫ರಷ್ಟು ಮಹಿಳೆಯರು ಜೀವಿಸುತ್ತಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೬೯.೫೮ರಷ್ಟು ಜನರಿದ್ದಾರೆ. ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗದವರು ೫೧೦ ಜನಸಂಖ್ಯೆಯನ್ನು ಹೊಂದಿದ್ದು, ೨೫೨ ಪುರುಷರಿದ್ದರೆ ೨೫೮ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೨೦.೨೦ರಷ್ಟು ಪರಿಶಿಷ್ಟ ಪಂಗಡದ ಜನರಿದ್ದಾರೆ. ದುಡಿಮೆಯ ದೃಷ್ಟಿಯಿಂದ ದುಡಿಯುವ ವರ್ಗವು ೧,೧೫೫ರಷ್ಟಿದ್ದು, ಪುರುಷರು ೬೭೩ರಷ್ಟಿದ್ದರೇ, ಮಹಿಳೆಯರು ೪೮೨ರಷ್ಟಿದ್ದಾರೆ. ಸಮಾಜದ ಅಂಚಿನಲ್ಲಿ ದುಡಿಯುವ ವರ್ಗವು ೨೩೪ರಷ್ಟಿದ್ದಾರೆ. ಇದರಲ್ಲಿ ಪುರುಷರು ೧೧೮ರಷ್ಟು ಮತ್ತು ೧೧೬ರಷ್ಟು ಮಹಿಳೆಯರಿದ್ದಾರೆ. ಕೃಷಿ ಭೂಮಿಯನ್ನು ಹೊಂದಿರುವ ಭೂಮಾಲಿಕರು ೨೮೫ ರೈತರಿದ್ದರೇ, ಆ ಕೃಷಿಯಲ್ಲಿ ದುಡಿಯುವವರು ೩೮೫ರಷ್ಟಿರುವುದು ಗೋಚರಿಸುತ್ತದೆ.

**ರಾಜಾಪುರ ಗ್ರಾಮ**

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ರಾಜಾಪುರವು ಒಂದು ಗ್ರಾಮವಾಗಿದ್ದು, ಈ ಗ್ರಾಮದಲ್ಲಿ ಒಟ್ಟು ೧೭೨ ಕುಟುಂಬದವರು ವಾಸಿಸುತ್ತಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಗ್ರಾಮವು ೮೮೪ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೪೫೧ ಪುರುಷರ ಸಂಖ್ಯೆಯನ್ನು ಮತ್ತು ೪೩೩ ಮಹಿಳೆಯರಿದ್ದಾರೆ. ೦-೬ ವಯೋಮಾನದ ಮಕ್ಕಳ ಸಂಖ್ಯೆ ೧೨೧ರಷ್ಟಿದ್ದು, ೬೨ ಗಂಡು ಮಕ್ಕಳಿದ್ದರೇ, ೫೯ ಹೆಣ್ಣು ಮಕ್ಕಳಿದ್ದಾರೆ. ರಾಜಪುರ ಗ್ರಾಮದ ಲಿಂಗಾನುಪಾತವು ೯೭೩ರಷ್ಟಿದೆ. ಈ ಗ್ರಾಮದಲ್ಲಿ ಪ್ರತಿ ೧,೦೦೦ ಪುರುಷರಿಗೆ ೯೭೩ರಷ್ಟು ಮಹಿಳೆಯರಿದು, ಇನ್ನು ೨೭ ಮಹಿಳೆಯರು ಕೊರತೆಯಲ್ಲಿದ್ದಾರೆ. ಜಿಲ್ಲೆಯ ಸರಾಸರಿ ಲಿಂಗಾನುಪಾತಕ್ಕಿಂತ(೯೮೩)ಈ ಗ್ರಾಮದ ಲಿಂಗಾನುಪಾತ ಕಡಿಮೆಯಿದೆ. ಇನ್ನು ಗ್ರಾಮದಲ್ಲಿ ೨೭ ಮಹಿಳೆಯರ ಕೊರತೆ ಇರುವುದು ಶೋಚನೀಯವಾಗಿದೆ. ಸಾಕ್ಷರತೆಯಲ್ಲಿ ಈ ಗ್ರಾಮವು ಶೇ.೫೭.೧೪ರಷ್ಟು ಸಾಕ್ಷರತೆಯ ಪ್ರಮಾಣವನ್ನು ಹೊಂದಿದೆ. ಇದರಲ್ಲಿ ಪುರುಷರ ಸಾಕ್ಷರತೆ ಶೇ.೬೪.೨೨ರಷ್ಟಿದ್ದರೇ, ಮಹಿಳೆಯರ ಸಾಕ್ಷರತೆಯು ಶೇ.೪೯.೭೩ರಷ್ಟಿದ್ದಾರೆ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ.೬೭.೪೩ಕ್ಕಿಂತ ಗ್ರಾಮದ ಸಾಕ್ಷರತೆ ಕಡಿಮೆ ಇದೆ ಹಾಗೂ ಜಿಲ್ಲೆಯ ಮಹಿಳೆಯರ ಸಾಕ್ಷರತೆ ಶೇ.೫೮.೦೯ಕ್ಕಿಂತ ಗ್ರಾಮದ ಮಹಿಳೆಯರ ಸಾಕ್ಷರತೆ ಕಡಿಮೆ ಇರುವುದು ಕಂಡುಬರುತ್ತದೆ. ಹಾಗಾಗಿ ಈ ಗ್ರಾಮದಲ್ಲಿ ಮಹಿಳೆಯರ ಸಾಕ್ಷರತೆಯನ್ನು ಅಧಿಕಗೊಳಿಸುವ ಅನಿವಾರ್ಯತೆಯಿದೆ. ಗ್ರಾಮದಲ್ಲಿ ಮೀಸಲಾತಿಯ ವರ್ಗಕ್ಕೆ ಸೇರಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಜೀವಿಸುತ್ತಿದ್ದಾರೆ. ಪರಿಶಿಷ್ಟ ಪಂಗಡದವರು ೨೯೩ ಜನರಿದ್ದು ಇದರಲ್ಲಿ ೧೫೪ ಪುರುಷರಿದ್ದರೆ, ಮಹಿಳೆಯರು ೧೫೯ರಷ್ಟಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೩೩.೧೪ರಷ್ಟು ಪರಿಶಿಷ್ಟ ಪಂಗಡದ ಜನರು ವಾಸಿಸುತ್ತಿದ್ದಾರೆ. ಹಾಗೂ ಪರಿಶಿಷ್ಟ ಜಾತಿಗೆ ಸೇರಿದವರು ೯೩ ಜನರಿದ್ದು ಇದರಲ್ಲಿ ೪೯ ಪುರುಷರು ಮತ್ತು ೪೪ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೦.೫೨ರಷ್ಟು ಪರಿಶಿಷ್ಟ ಜಾತಿಯ ಜನರು ಜೀವಿಸುತ್ತಿದ್ದಾರೆ. ದುಡಿಯುವ ವರ್ಗದ ದೃಷ್ಟಿಯಿಂದ ಗ್ರಾಮದಲ್ಲಿ ದುಡಿಯುವ ವರ್ಗವು ೪೩೪ರಷ್ಟಿದ್ದಾರೆ. ಇದರಲ್ಲಿ ೨೮೪ ದುಡಿಯುವ ಪುರುಷರಿದ್ದರೆ, ೧೫೦ ದುಡಿಯುವ ಮಹಿಳೆಯರಿದ್ದಾರೆ. ಈ ಗ್ರಾಮದಲ್ಲಿ ಕೃಷಿ

ಭೂಮಿಯನ್ನು ಹೊಂದಿರುವ ಭೂಮಾಲೀಕರು ೨೨೦ ರಷ್ಟಿದ್ದಾರೆ, ೪೬ ಕೃಷಿ ಕಾರ್ಮಿಕರು ಕೃಷಿಯಲ್ಲಿ ದುಡಿಯುತ್ತಿರುವುದು ಸೋಜಿಗವಾಗಿದೆ.

**ಪಿ.ಕೆ.ಹಳ್ಳಿ ಗ್ರಾಮ**

ಹೊಸಪೇಟೆ ತಾಲ್ಲೂಕಿನ ಪಾಪಿನಾಯಕನಹಳ್ಳಿಯು ಒಂದು ಗ್ರಾಮವಾಗಿದೆ. ಈ ಗ್ರಾಮದಲ್ಲಿ ೧,೩೮೫ ಕುಟುಂಬಗಳು ವಾಸಿಸುತ್ತಿದ್ದು, ಒಟ್ಟು ೬,೯೫೭ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೩,೪೭೨ ಪುರುಷರ ಸಂಖ್ಯೆಯಿದ್ದು, ೩,೪೮೫ ಮಹಿಳೆಯರಿದ್ದಾರೆ. ಗ್ರಾಮದಲ್ಲಿ (೦–೬) ವಯೋಮಾನದ ಮಕ್ಕಳ ಸಂಖ್ಯೆ ೧,೧೯೮ರಷ್ಟಿದ್ದು, ಗಂಡು ಮಕ್ಕಳು ೬೦೪ ರಷ್ಟಿದ್ದರೇ, ೫೯೪ ಹೆಣ್ಣು ಮಕ್ಕಳಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೭.೨೨ರಷ್ಟು (೦–೬) ವಯೋಮಾನದ ಮಕ್ಕಳಿದ್ದಾರೆ. ಲಿಂಗಾನುಪಾತದ ದೃಷ್ಟಿಯಿಂದ ಗ್ರಾಮದ ಪ್ರತಿ ೧,೦೦೦ ಪುರುಷರಿಗೆ ೯೭೩ ಮಹಿಳೆಯರಿದ್ದು, ಇನ್ನೂ ೨೭ ಮಹಿಳೆಯರ ಕೊರತೆಯಿದೆ. ಗ್ರಾಮದ ಸರಾಸರಿ ಲಿಂಗಾನುಪಾತವು ೯೭೩ರಷ್ಟಿದೆ. ಜಿಲ್ಲೆಯ ಲಿಂಗಾನುಪಾತಕ್ಕೆ (೯೮೩) ಹೋಲಿಸಿದಾಗ ಈ ಗ್ರಾಮದ ಲಿಂಗಾನುಪಾತವು ಕಡಿಮೆ ಇರುವುದು ಕಂಡುಬರುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಪಾಪಿನಾಯಕನಹಳ್ಳಿ ಗ್ರಾಮದ ಸಾಕ್ಷರತೆಯ ಪ್ರಮಾಣವು ಶೇ.೬೪.೪೮ರಷ್ಟಿದ್ದು, ಪುರುಷರ ಸಾಕ್ಷರತೆಯು ಶೇ.೭೬.೪೬ರಷ್ಟಿದ್ದರೇ, ಶೇ.೫೩.೫೮ರಷ್ಟು ಸಾಕ್ಷರಸ್ಥ ಮಹಿಳೆಯರಿದ್ದಾರೆ. ಗ್ರಾಮದ ಸಾಕ್ಷರತೆಯು ಜಿಲ್ಲೆಯ ಸಾಕ್ಷರತೆಯ ಪ್ರಮಾಣಕ್ಕಿಂತಲೂ(ಶೇ.೬೭.೪೩) ಕಡಿಮೆ ಇದೆ. ಅದೇ ರೀತಿಯಾಗಿ ಮಹಿಳೆಯರ ಸಾಕ್ಷರತೆಗೆ ಸಂಬಂಧಿಸಿದಂತೆ ಜಿಲ್ಲೆಯ ಮಹಿಳಾ ಸಾಕ್ಷರತೆಕ್ಕಿಂತ (ಶೇ.೫೮.೦೯) ಗ್ರಾಮದ ಮಹಿಳಾ ಸಾಕ್ಷರತೆಯು ಕಡಿಮೆ ಇರುವುದು ಕಂಡು ಬರುತ್ತದೆ. ಜಾತಿಯ ಆಧಾರದ ಮೇಲೆ ಗ್ರಾಮದಲ್ಲಿ ಬಹುತೇಕವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ವರ್ಗದವರು ೨,೦೫೩ರಷ್ಟು ಜನರಿದ್ದು, ಇದರಲ್ಲಿ ೧,೦೩೬ ಪುರುಷರು ಸಂಖ್ಯೆಯಿದ್ದರೆ, ೧,೦೧೭ರಷ್ಟು ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯವರು ಶೇ ೨೯.೫೧ ರಷ್ಟಿದ್ದು, ಗ್ರಾಮದಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರು ಶೇ.೧೨.೪೮ರಷ್ಟಿದ್ದಾರೆ. ಇದರಲ್ಲಿ ೬೧೨ ಪುರುಷರಿದ್ದರೇ ಮಹಿಳೆಯರು ಶೇ.೧೭.೯೪ರಷ್ಟು ಜನರು ಜೀವಿಸುತ್ತಿದ್ದಾರೆ. ದುಡಿಯುವ ವರ್ಗದ ಆಧಾರದ ಮೇಲೆ ಗ್ರಾಮದಲ್ಲಿ ೨,೭೨೬ ದುಡಿಯುವ ವರ್ಗದವರಿದ್ದಾರೆ. ಇದರಲ್ಲಿ ೧,೮೫೬ ಪುರುಷರು ದುಡಿಯುವ ವರ್ಗದಲ್ಲಿದ್ದರೇ, ಮಹಿಳಾ ದುಡಿಯುವ ವರ್ಗವು ೮೭೦ರಷ್ಟಿದ್ದಾರೆ. ಸಮಾಜದ ಅಂಚಿನಲ್ಲಿ ದುಡಿಯುವವರು ೪೫೦ರಷ್ಟು ಜನರಿದ್ದು, ಇದರಲ್ಲಿ ೧೭೪ ಪುರುಷರು ಹಾಗೂ ೨೭೦ ಮಹಿಳೆಯರು ದುಡಿಯುತ್ತಿದ್ದಾರೆ. ಸಮಾಜದ ಅಂಚಿನಲ್ಲಿ ದುಡಿಯುವ ವರ್ಗವೆಂದರೆ ಆರು ತಿಂಗಳಿಗಿಂತ ಕಡಿಮೆ ದುಡಿಮೆ ಲಭ್ಯವಿದ್ದು, ಅವರ ಆದಾಯದ ಪ್ರಮಾಣ ಕಡಿಮೆಯಾಗಿರುತ್ತದೆ. ಗ್ರಾಮದ ಒಟ್ಟು ದುಡಿಯುವ ವರ್ಗದಲ್ಲಿ ೨೬೮ ಭೂಮಾಲೀಕತ್ವ ಅಥವಾ ಸಹ ಮಾಲೀಕತ್ವ ಪಡೆದ ರೈತರಿದ್ದಾರೆ. ಕೃಷಿ ಭೂಮಿಯಲ್ಲಿ ದುಡಿಯುವ ಕಾರ್ಮಿಕರು ೧೭೭ರಷ್ಟಿರುವುದು ಕಂಡುಬರುತ್ತದೆ. ಹೊಸಪೇಟೆ ತಾಲ್ಲೂಕಿನ, ಕಲ್ಲಹಳ್ಳಿ, ರಾಜಾಪುರ ಮತ್ತು ಪಾಪಿನಾಯಕನಹಳ್ಳಿಯ ಜನಸಂಖ್ಯೆ, ಸಾಕ್ಷರತೆ, ಲಿಂಗಾನುಪಾತವನ್ನು ಕೋಷ್ಟಕ ೨.೧೦ರಲ್ಲಿ ಗಮನಿಸಿ.

**ಕೋಷ್ಟಕ ೨.೧೦ ಹೊಸಪೇಟೆ ತಾಲ್ಲೂಕಿನ ಕಲ್ಲಹಳ್ಳಿ, ರಾಜಾಪುರ ಮತ್ತು ಪಾಪಿನಾಯಕನಹಳ್ಳಿಯ ಜನಸಂಖ್ಯೆ, ಸಾಕ್ಷರತೆ, ಲಿಂಗಾನುಪಾತದ ವಿವರ**

| ಗ್ರಾಮ | ಜನಸಂಖ್ಯೆ | ಪುರುಷರ ಜನಸಂಖ್ಯೆ | ಮಹಿಳೆಯರ ಜನಸಂಖ್ಯೆ | ಸಾಕ್ಷರತೆ ಶೇಕಡವಾರು | ಲಿಂಗಾನುಪಾತ |
|---|---|---|---|---|---|
| ಕಲ್ಲಹಳ್ಳಿ | ೨,೫೨೫ | ೧,೨೬೯ | ೧,೨೫೬ | ೪೯.೬೮ | ೯೯೦ |
| ಪಾಪಿನಾಯಕನಹಳ್ಳಿ | ೬,೯೫೭ | ೩,೪೭೨ | ೩,೪೮೫ | ೬೪.೯೮ | ೯೭೩ |
| ರಾಜಾಪುರ | ೮೮೪ | ೪೫೧ | ೪೩೩ | ೫೭.೧೪ | ೯೭೩ |

ಮೂಲ : ೨೦೧೧ರ ಜನಗಣತಿ, ಬಳ್ಳಾರಿ ಜಿಲ್ಲೆ.

ಮೇಲಿನ ಕೋಷ್ಟಕವನ್ನು ಗಮನಿಸಿದರೆ ಕಲಹಳ್ಳಿ, ಮತ್ತು ರಾಜಾಪುರ ಗ್ರಾಮಗಳ ಜನಸಂಖ್ಯೆಗಿಂತ ಪಾಪಿನಾಯಕನಹಳ್ಳಿ ಜನಸಂಖ್ಯೆಯು ಅಧಿಕವಾಗಿದೆ. ಕಡಿಮೆ ಜನಸಂಖ್ಯೆಯನ್ನು ರಾಜಾಪುರ ಹೊಂದಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ಕಲ್ಲಹಳ್ಳಿ, ಪಾಪಿನಾಯಕನಹಳ್ಳಿ, ರಾಜಾಪುರ ಗ್ರಾಮಗಳಲ್ಲಿ ಸಾಕ್ಷರತೆಯ ಪ್ರಮಾಣ ಕ್ರಮಾಂಕವಾಗಿ ಶೇ.೪೯.೬೮, ಶೇ.೬೪.೯೮, ಶೇ ೫೭.೧೪ರಷ್ಟಿದೆ. ಆದರೆ ಕಲ್ಲಹಳ್ಳಿ ಗ್ರಾಮವು ಶೇ.೪೯.೬೮ ಸಾಕ್ಷರತೆಯ ಪ್ರಮಾಣವು ಪಾಪಿನಾಯಕನಹಳ್ಳಿ ಮತ್ತು ರಾಜಾಪುರ ಗ್ರಾಮದ ಸಾಕ್ಷರತೆಯ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಾಣಸಿಗುತ್ತದೆ. ಅದೇ ರೀತಿಯಾಗಿ ಲಿಂಗಾನುಪಾತವನ್ನು ಗ್ರಹಿಸುವುದಾದರೆ ಈ ಮೂರು ಗ್ರಾಮಗಳನ್ನು ಹೋಲಿಸಿದಾಗ ಕಲ್ಲಹಳ್ಳಿ, ರಾಜಾಪುರ ಗ್ರಾಮದ ಲಿಂಗಾನುಪಾತಕ್ಕಿಂತ ಪಿ.ಕೆ.ಹಳ್ಳಿಯ ಲಿಂಗಾನುಪಾತವು (೯೯೦) ಅಧಿಕವಾಗಿರುವುದು ಕಂಡುಬರುತ್ತದೆ. ಒಟ್ಟಾರೆ ಯಾವುದೇ ಗ್ರಾಮದಲ್ಲಿ ಜನಸಂಖ್ಯೆ, ಸಾಕ್ಷರತೆ, ಲಿಂಗಾನುಪಾತ, ಜನಸಾಂದ್ರತೆ ಇತ್ಯಾದಿ ಒಂದೇ ತೆರನಾಗಿ ಇರುವುದಿಲ್ಲ. ಒಂದು ವೇಳೆ ಒಂದೇ ತೆರನಾಗಿದ್ದರೆ, ಗ್ರಾಮದಲ್ಲಿ ಹಿಂದುಳಿದ–ಮುಂದುವರೆದ ಅಂಶವನ್ನು ಗುರುತಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಎಂಬ ಸಂಗತಿ ಗಮನಾರ್ಹವಾಗಿದೆ.

**೨.೯.೩. ಸಂಡೂರು ತಾಲ್ಲೂಕು ಮತ್ತು ಗಣಿ ವಲಯ**

ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಸಂಡೂರು ತಾಲ್ಲೂಕು ಒಂದಾಗಿದ್ದು, ಸಂಡೂರು ತಾಲ್ಲೂಕನ್ನು ಹಿಂದೆ ಸ್ಕಂದಪುರಿ, ಸ್ಕಂದ ಅಥವಾ ಕುಮಾರಸ್ವಾಮಿ ನಗರವೆಂದು ಕರೆಯಲಾಗುತ್ತಿತು. ಈ ತಾಲ್ಲೂಕು ಆಂಧ್ರಪ್ರದೇಶ ರಾಜ್ಯದ ಗಡಿಯಲ್ಲಿದೆ. ಭೌಗೋಳಿಕವಾಗಿ ಸಂಡೂರು ತಾಲ್ಲೂಕು ಉತ್ತರ ಮತ್ತು ಪಶ್ಚಿಮಕ್ಕೆ ಹೊಸಪೇಟೆ ತಾಲ್ಲೂಕು, ದಕ್ಷಿಣದಲ್ಲಿ ಕೂಡ್ಲಿಗಿ ತಾಲ್ಲೂಕು, ಪೂರ್ವದಲ್ಲಿ ಬಳ್ಳಾರಿ ತಾಲ್ಲೂಕಿನಿಂದ ಸುತ್ತುವರೆದಿದೆ. ಸಂಡೂರು ತಾಲ್ಲೂಕಿನಲ್ಲಿ ನೈಸರ್ಗಿಕ ಸಂಪತ್ತು ಹೇರಳವಾಗಿದ್ದು, ಹೊಸಪೇಟೆಯ ವಾಯುವ್ಯ ಮತ್ತು ಆಗ್ನೇಯವಾಗಿ ಚಾಚಿಕೊಂಡಿರುವ ಸಂಡೂರಿನ ಬೆಟ್ಟದ ಸಾಲುಗಳ ಕಬ್ಬಿಣದ ಅದಿರಿನ ನಿಕ್ಷೇಪಗಳಿಂದ ಕೂಡಿದೆ. ಈ ತಾಲ್ಲೂಕು ಜಿಲ್ಲೆಯಿಂದ ೩೮ ಕಿ.ಮೀ. ದೂರದಲ್ಲಿದೆ. ಬಳ್ಳಾರಿ ಜಿಲ್ಲಾ ಪಕ್ಷಿ ನೋಟ ೨೦೧೧–೧೨ರ ಪ್ರಕಾರ ಸಂಡೂರು ತಾಲ್ಲೂಕು ೧,೧೫೨.೪೨ ಚ.ಕಿ.ಮೀ ಭೌಗೋಳಿಕ ಪ್ರದೇಶವನ್ನು ಹೊಂದಿದೆ.

ದೇಶವು ಆರ್ಥಿಕವಾಗಿ ತೀವ್ರಗತಿಯಲ್ಲಿ ಬೆಳವಣಿಗೆ ಆಗಬೇಕಾದರೆ ಕೈಗಾರೀಕರಣವು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣವು ವೇಗವಾಗಿ ಬೆಳವಣಿಗೆ ಹೊಂದಿರುವ ತಾಲ್ಲೂಕುಗಳಲ್ಲಿ ಸಂಡೂರು ತಾಲ್ಲೂಕು ಒಂದಾಗಿದೆ. ಸಂಡೂರು ತಾಲೂಕಿನಲ್ಲಿ ಮ್ಯಾಂಗನೀಸ್, ಹೆಮಾಟೈಟ್ ಕಬ್ಬಿಣ ಅದಿರಿನ ಗಣಿಗಳು ಮತ್ತು ಉಕ್ಕಿನ ಸ್ಥಾವರುಗಳು ವಿಫುಲವಾಗಿ ಇಲ್ಲಿವೆ. ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಸಂಡೂರಿನ ಸ್ಮಯರ್ ಕಂಪನಿ, ದೋಣಿಮಲೈ ಮೈನ್ಸ್, ನ್ಯಾಶನಲ್ ಮಿನರಲ್ ಡೆವಲಪ್ಮೆಂಟ್ ಕಾರ್ಪೋರೇಷನ್ ಒಡೆತನದ ಕಬ್ಬಿಣದ ಗಣಿ, ಮೈಸೂರು ಮಿನರಲ್ಸ್ ಲಿಮಿಟೆಡ್ ಒಡತನದಲ್ಲಿರುವ ನಂದಿಹಳ್ಳಿಯಲ್ಲಿರುವ ಕಬ್ಬಿಣದ ಅದಿರಿನ ಗಣಿ, ರಾಮಘಡ್ ಗ್ರಾಮದಲ್ಲಿ ಧರ್ಮಪುರ ಕಬ್ಬಿಣದ ಅದಿರಿನ ಗಣಿ, ಯಶ್ವಂತ ನಗರದ ಜೈಸಿಂಗ್‌ಪುರ ಕಬ್ಬಿಣದ ಅದಿರು ಗಣಿ, ತೋರಣಗಲ್ಲಿನ ಜೆ.ಎಸ್.ಡಬ್ಲ್ಯೂ. ಸ್ಟೀಲ್ಸ್, ಭುಜಂಗನಗರ ಗ್ರಾಮದಲ್ಲಿ ವಿ.ಎಸ್.ಎಲ್. ಕಬ್ಬಿಣದ ಅದಿರಿನ ಗಣಿಗಳಿವೆ. ಇದರಲ್ಲಿ ತೋರಣಗಲ್ಲು ಜೆ.ಎಸ್.ಡಬ್ಲ್ಯೂ ಕಂಪನಿ ಹಾಗೂ ದೋಣಿಮಲೈಯ ಎನ್.ಎಂ.ಡಿ.ಸಿ. ಕಂಪನಿಯು ಪ್ರಮುಖವಾಗಿದೆ. ಇಲ್ಲಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಉತ್ಪಾದನೆ ಮಾಡಲಿಕ್ಕೆ ೮೫೭ ಕೈಗಾರಿಕಾ ಘಟಕಗಳು ಈ ತಾಲ್ಲೂಕಿನಲ್ಲಿದೆ. ಈ ಗಣಿಕೈಗಾರಿಕಾ ವಲಯವು ೩,೦೮೪ ಜನರಿಗೆ ಉದ್ಯೋಗ ಅವಕಾಶವನ್ನು ಕಲ್ಪಿಸಿದೆ. ಹಾಗಾಗಿ ಸಂಡೂರು ತಾಲ್ಲೂಕು ಜಿಲ್ಲೆಯ ಇತರೆ ತಾಲ್ಲೂಕುಗಳಿಗೆ ಹೋಲಿಕೆ ಮಾಡಿದಾಗ ಕೈಗಾರಿಕೆಯ ದೃಷ್ಟಿಯಿಂದ ಬೆಳವಣಿಗೆಯನ್ನು ಸಾಧಿಸಿರುವುದು ಕಾಣಸಿಗುತ್ತದೆ.

**ಜನಸಂಖ್ಯೆ – ಸಾಕ್ಷರತೆ – ಜನಸಾಂದ್ರತೆ**

೨೦೧೧ರ ಜನಗಣತಿಯ ಪ್ರಕಾರ ಸಂಡೂರು ತಾಲ್ಲೂಕಿನಲ್ಲಿ ೨,೬೦,೨೧೩ ಜನಸಂಖ್ಯೆಯಿದ್ದು, ಇದರಲ್ಲಿ ಪುರುಷರ ಸಂಖ್ಯೆ ೧,೧೩೪,೦೩೪ ರಷ್ಟಿದ್ದರೆ, ೧,೨೬,೧೭೯ರಷ್ಟು ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಜನಸಂಖ್ಯೆ ದೃಷ್ಟಿಯಿಂದ ಜಿಲ್ಲೆಯಲ್ಲಿಯೇ ೫ನೆ ಸ್ಥಾನವನ್ನು ಪಡೆದಿದೆ. ಈ

ತಾಲ್ಲೂಕಿನಲ್ಲಿ ಒಟ್ಟು ೩೫,೨೧೮ ಕುಟುಂಬಗಳಿದ್ದು, ಗ್ರಾಮೀಣ ಪ್ರದೇಶದಲ್ಲಿ ೨೮,೪೫೪ ಕುಟುಂಬಗಳಿವೆ ಹಾಗೂ ನಗರ ಪ್ರದೇಶಗಳಲ್ಲಿ ೬,೭೬೪ ಕುಟುಂಬಗಳು ವಾಸವಾಗಿವೆ. ೨೦೧೧ರ ಜನಗಣತಿಯಂತೆ ಸಂಡೂರು ತಾಲ್ಲೂಕಿನಲ್ಲಿ ೫೨,೦೬೭ ಕುಟುಂಬಗಳು ವಾಸಿಸುತ್ತಿದ್ದಾರೆ. ಸಂಡೂರು ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೩೦.೪ರಷ್ಟು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದರೆ, ಶೇ.೬೯.೬ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ ನೆಲೆಗೊಂಡಿದ್ದಾರೆ. ಅಂದರೆ ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ನಗರ ಪ್ರದೇಶಗಳಲ್ಲಿ ೭೯,೧೧೬ರಷ್ಟು ಜನರಿದ್ದರೆ, ಗ್ರಾಮೀಣ ಪ್ರದೇಶಗಳಲ್ಲಿ ೧,೮೧,೯೭೭ರಷ್ಟು ಜನರು ನೆಲೆಸಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ ೦–೬ ವರ್ಷ ವಯೋಮಾನದ ಮಕ್ಕಳ ಸಂಖ್ಯೆ ೪೦,೯೧೫ರಷ್ಟಿದ್ದು, ಇದರಲ್ಲಿ ೨೦,೮೦೪ ಗಂಡು ಮಕ್ಕಳು ಮತ್ತು ೨೦೧೧೧ ಹೆಣ್ಣು ಮಕ್ಕಳಿದ್ದಾರೆ. ಇದು ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೧೬ರಷ್ಟು ೦–೬ ವಯೋಮಾನ ಮಕ್ಕಳಿದ್ದಾರೆ. ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ೦–೬ ವಯೋಮಾನ ಮಕ್ಕಳ ಸಂಖ್ಯೆಯನ್ನು ನೋಡುವುದಾದರೆ ನಗರ ಪ್ರದೇಶಗಳಲ್ಲಿ ೧೧,೪೦೮ರಷ್ಟು ೦–೬ ವಯೋಮಾನದ ಮಕ್ಕಳಿದ್ದರೆ, ಗ್ರಾಮೀಣ ಪ್ರದೇಶದಲ್ಲಿ ೨೯,೫೦೭ರಷ್ಟು ಮಕ್ಕಳ ಸಂಖ್ಯೆಯಿದೆ. ಜಾತಿಯ ಆಧಾರದಲ್ಲಿ ಮೀಸಲಾತಿಯಾದ ಪರಿಶಿಷ್ಟ ಜಾತಿ ಮಕ್ಕಳ ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗದವರು ಬಹುತೇಕವಾಗಿ ನೆಲೆಸಿದ್ದಾರೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ಸಮುದಾಯವರು ೪೬,೪೧೧ರಷ್ಟು ಜನರಿದ್ದು, ಇದರಲ್ಲಿ ಪುರುಷರು ೨೩,೨೬೫ರಷ್ಟಿದ್ದರೆ, ಮಹಿಳೆಯರು ೨೩,೧೪೬ರಷ್ಟು ಸಂಖ್ಯೆಯಲ್ಲಿ ಇದ್ದಾರೆ. ಇದು ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೧೭.೮ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಗ್ರಾಮಾಂತರ ಪ್ರದೇಶದಲ್ಲಿ ೩೫,೮೧೩ರಷ್ಟು ಮತ್ತು ನಗರ ಪ್ರದೇಶಗಳಲ್ಲಿ ೧೦,೫೯೮ರಷ್ಟು ಪರಿಶಿಷ್ಟ ಜಾತಿಯವರು ಇರುವುದು ಕಾಣಸಿಗುತ್ತದೆ. ಸಾಕ್ಷರತೆಯ ದೃಷ್ಟಿಯಿಂದ ೨೦೧೧ರ ಜನಗಣತಿಯ ಪ್ರಕಾರ ಸಂಡೂರು ತಾಲ್ಲೂಕು ಶೇ.೬೬.೮೧ರಷ್ಟು ಸಾಕ್ಷರತೆಯ ಪ್ರಮಾಣವನ್ನು ಹೊಂದಿದ್ದು, ಪುರುಷರ ಸಾಕ್ಷರತೆಯ ಪ್ರಮಾಣವು ಶೇ.೬೪.೭೪ರಷ್ಟಿದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಶೇ.೪೭.೩೪ರಷ್ಟಿದೆ. ಈ ಸಾಕ್ಷರತೆಯ ಪ್ರಮಾಣವನ್ನು ಜಿಲ್ಲೆಯ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕಿಂತ (ಶೇ.೬೭.೪೩) ಸಂಡೂರು ತಾಲ್ಲೂಕಿನ ಸಾಕ್ಷರತೆಯ ಪ್ರಮಾಣವು ಕಡಿಮೆಯಿದೆ. ಹಾಗೆಯೇ ಜಿಲ್ಲೆಯ ಮಹಿಳಾ ಸಾಕ್ಷರತೆಯ ಪ್ರಮಾಣಕ್ಕಿಂತ (ಶೇ.೫೮.೦೯) ತಾಲ್ಲೂಕಿನ ಮಹಿಳಾ ಸಾಕ್ಷರತೆಯು ಅತ್ಯಂತ ಕಡಿಮೆ ಇರುವುದು ಶೋಚನಿಯವಾಗಿದೆ. ಆದ್ದರಿಂದ ತಾಲ್ಲೂಕಿನಲ್ಲಿ ಮಹಿಳೆಯರು ಸಾಕ್ಷರತೆಯಲ್ಲಿ ಸಾಧಿಸಬೇಕಾದದ್ದು ಅನಿವಾರ್ಯವಾಗಿದೆ ಎಂದು ಹೇಳಬಹುದಾಗಿದೆ. ಜನಸಾಂದ್ರತೆಗೆ ಸಂಬಂಧಿಸಿದಂತೆ ೨೦೦೧ರ ಜನಗಣತಿಯ ಪ್ರಕಾರ ತಾಲೂಕಿನಲ್ಲಿ ೧೬೬ ಜನಸಾಂದ್ರತೆಯಿದ್ದು. ೨೦೧೧ರ ಜನಗಣತಿಯ ಪ್ರಕಾರ ೧೨,೦೦೦ ಚದರ ಕಿಲೋ. ಮೀಟರ್‌ಗೆ ೧೧೧ ಜನಸಾಂದ್ರತೆಯನ್ನು ಈ ತಾಲ್ಲೂಕು ಹೊಂದಿದೆ.

**ಲಿಂಗಾನುಪಾತ**

ಯಾವುದೇ ಒಂದು ಪ್ರದೇಶದ ಜನಸಂಖ್ಯೆಯ ಗುಣಮಟ್ಟ ಅರಿಯುವಲ್ಲಿ ಮತ್ತು ಆ ಪ್ರದೇಶದ ಸಾಮಾಜಿಕ–ಆರ್ಥಿಕ ಅಂಶಗಳ ಮೇಲೆ ಬೆಳಕು ಚೆಲ್ಲಲು ಲಿಂಗಾನುಪಾತವು ಪ್ರಮುಖ ಸಾಧನವಾಗಿದೆ. ಲಿಂಗಾನುಪಾತವೆಂದರೆ ಪ್ರತಿ ೧,೦೦೦ ಪುರುಷರಿಗೆ ಎಷ್ಟು ಮಹಿಳೆಯರಿದ್ದಾರೆ ಎಂಬುದನ್ನು ತಿಳಿಸುವುದಾಗಿದೆ. ಸಂಡೂರು ತಾಲ್ಲೂಕಿನ ಸರಾಸರಿ ಲಿಂಗಾನುಪಾತವು ೯೪೧ ಆಗಿದೆ. ಅಂದರೆ ಈ ತಾಲೂಕಿನಲ್ಲಿ ೧,೦೦೦ ಪುರುಷರಿಗೆ ೯೪೧ ಮಹಿಳೆಯರಿದ್ದಾರೆ, ಇನ್ನೂ ೫೯ ಮಹಿಳೆಯರ ಕೊರತೆ ಇರುವುದು ಕಂಡುಬರುತ್ತದೆ. ಇದು ಮಹಿಳೆಯರ ಹುಟ್ಟುವಿಕೆಯ ಆಯ್ಕೆಯಲ್ಲಾದ ಪರಿಣಾಮವಾಗಿದೆ. ತಾಲ್ಲೂಕಿನ ಲಿಂಗಾನುಪಾತವನ್ನು ಜಿಲ್ಲೆಯ ಲಿಂಗಾನುಪಾತಕ್ಕೆ ಹೋಲಿಕೆ ಮಾಡಿದಾಗ ಜಿಲ್ಲೆಯ ಸರಾಸರಿ ಲಿಂಗಾನುಪಾತಕ್ಕಿಂತ (೯೮೩) ಸಂಡೂರು ತಾಲ್ಲೂಕಿನ ಲಿಂಗಾನುಪಾತ ಕಡಿಮೆ ಇರುವುದು ಕಂಡುಬರುತ್ತದೆ (೨೦೧೧ರ ಜನಗಣತಿ) ಕೊಷ್ಟಕ ೨.೧೨ರಲ್ಲಿ ಗಮನಿಸಿ.

ಕೃಷಿ ಮತ್ತು ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಈ ಸಂಡೂರು ತಾಲ್ಲೂಕಿನಲ್ಲಿ ೨೦೧೦-೧೧ನೇ ಸಾಲಿನಲ್ಲಿ ೧೭,೭೦೦ ಹೆಕ್ಟರ್ ಬಂಜರು ಭೂಮಿ ಇದ್ದು, ಸಾಗುವಳಿಗೆ ಯೋಗ್ಯವಾದ ಬಂಜರು ಭೂಮಿ ೧,೬೪೫ ಹೆಕ್ಟರ್‌ಗಳಷ್ಟಿದೆ. ಒಟ್ಟು ಈ ತಾಲ್ಲೂಕಿನಲ್ಲಿ ಬೀಳು ಭೂಮಿಯು ೯,೦೭೬ ಹೆಕ್ಟರ್ ಇದೆ. ಒಟ್ಟಾರೆ ತಾಲೂಕಿನಲ್ಲಿ ಬಿತ್ತನೆಯು ೨೮,೩೩೦ ಹೆಕ್ಟರ್ ಭೂ ಪ್ರದೇಶದಲ್ಲಿ ಮಾಡಲಾಗಿದೆ. ೨೦೦೧ರ ಕೃಷಿಗಣತಿಯ ಪ್ರಕಾರ ತಾಲೂಕಿನಲ್ಲಿ ಒಟ್ಟು ೨೫,೩೬೬ ಬೆಳೆಗಾರರಿದ್ದು, ಒಟ್ಟು ೧೩,೫೫೭ ಕೃಷಿ ಕಾರ್ಮಿಕರಿದ್ದಾರೆ. ಈ ತಾಲ್ಲೂಕಿನಲ್ಲಿ ಕಬ್ಬು, ಮೆಕ್ಕೆಜೋಳ, ಹತ್ತಿ, ಜೋಳ ಮತ್ತು ಸೂರ್ಯಕಾಂತಿ ಪ್ರಮುಖವಾಗಿ ಬೆಳೆಯುವ ಬೆಳೆಗಳಾಗಿವೆ.

ಒಟ್ಟಾರೆ ಸಂಡೂರು ತಾಲ್ಲೂಕು ನೈಸರ್ಗಿಕ ಸಂಪತ್ತಿನ ದೃಷ್ಟಿಯಿಂದ, ಗಣಿಗಾರಿಕೆಯ ದೃಷ್ಟಿಯಿಂದ, ಕೃಷಿಯ ದೃಷ್ಟಿಯಿಂದ ಜಿಲ್ಲೆಯಲ್ಲಿಯೇ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಗಣಿ ವಲಯಗಳಲ್ಲಿ ಸಂಡೂರು ತಾಲ್ಲೂಕು ಒಂದು ವಲಯವಾಗಿದ್ದು, ತಾಲ್ಲೂಕಿನ ಜೈಸಿಂಗ್‌ಪುರ ಸುಶೀಲನಗರ ಮತ್ತು ತುಮಟಿ ಎಂಬ ಮೂರು ಗ್ರಾಮಗಳನ್ನು ಕ್ಷೇತ್ರ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದು, ಈ ಗ್ರಾಮಗಳ ಸಂಕ್ಷಿಪ್ತವಾದ ವಿವರವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಸುಶೀಲನಗರ ಗ್ರಾಮ**

ಸಂಡೂರು ತಾಲ್ಲೂಕಿನ ಸುಶೀಲನಗರ ಒಂದು ಗ್ರಾಮವಾಗಿದ್ದು, ಒಟ್ಟು ೮೫೪ ಕುಟುಂಬಗಳು ನೆಲೆಸಿವೆ. ೨೦೧೧ರ ಜನಗಣತಿಯ ಪ್ರಕಾರ ಸುಶೀಲ ನಗರದಲ್ಲಿ ೪,೯೭೭ರಷ್ಟು ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೨,೪೬೯ ಪುರುಷರು ಮತ್ತು ೨,೫೦೮ ಮಹಿಳೆಯರಿದ್ದಾರೆ. ೦-೬ ವಯೋಮಾನದ ಮಕ್ಕಳ ಸಂಖ್ಯೆ ೯೦೨ರಷ್ಟಿದ್ದು, ಗಂಡು ಮಕ್ಕಳು ೪೪೬ ಸಂಖ್ಯೆಯಲ್ಲಿದ್ದರೇ, ೪೫೬ ಹೆಣ್ಣು ಮಕ್ಕಳಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ೦-೬ ವಯೋಮಾನದ ಮಕ್ಕಳ ಪ್ರಮಾಣವು ಶೇ.೧೮.೧೨ರಷ್ಟಿದ್ದಾರೆ ಮತ್ತು ಶಿಶು ಲೈಂಗಿಕ ಅಥವಾ ೦-೬ ವಯೋಮಾನದ ಮಕ್ಕಳ ಲಿಂಗಾನುಪಾತವು ೧,೦೨೨ರಷ್ಟಿದೆ. ಜಿಲ್ಲೆಯ ಮಕ್ಕಳ ಲಿಂಗಾನುಪಾತ ೯೬೦ಕ್ಕಿಂತಲೂ ಸುಶೀಲ ನಗರದ ಮಕ್ಕಳ ಲಿಂಗಾನುಪಾತ ಅಧಿಕವಾಗಿದೆ. ಈ ಗ್ರಾಮದ ಸರಾಸರಿ ಲಿಂಗಾನುಪಾತವು ೧,೦೧೬ರಷ್ಟಿದೆ. ಅಂದರೆ ಗ್ರಾಮದಲ್ಲಿ ಪ್ರತಿ ೧,೦೦೦ ಪುರುಷರಿಗೆ ೧೦೧೬ರಷ್ಟು ಮಹಿಳೆಯರಿದ್ದಾರೆ. ಹಾಗಾಗಿ ಈ ಗ್ರಾಮದ ಲಿಂಗಾನುಪಾತವು ಅಧಿಕವಾಗಿದ್ದು, ಉತ್ತಮ ಸ್ಥಿತಿಯಲ್ಲಿರುವುದು ಕಾಣಸಿಗುತ್ತದೆ. ಗ್ರಾಮದ ಸರಾಸರಿ ಲಿಂಗಾನುಪಾತವನ್ನು ಜಿಲ್ಲೆಯ ಲಿಂಗಾನುಪಾತಕ್ಕಿಂತಲೂ (೯೮೩) ಅಧಿಕವಾಗಿದೆ. ಸುಶೀಲ ನಗರದ ಗ್ರಾಮದಲ್ಲಿ ಬಹುತೇಕವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವರ್ಗದವರು ಕಂಡುಬರುತ್ತಾರೆ. ಪರಿಶಿಷ್ಟ ಜಾತಿಯವರು ಈ ಗ್ರಾಮದಲ್ಲಿ ೩,೧೪೧ರಷ್ಟು ಜನರಿದ್ದು, ಇದರಲ್ಲಿ ೧,೫೩೮ ಪುರುಷರು ಮತ್ತು ೧,೬೦೩ರ ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ವರ್ಗದವರು ಶೇ.೬೩.೧೧ರಷ್ಟಿದ್ದಾರೆ. ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರು ಈ ಗ್ರಾಮದಲ್ಲಿ ೭೦೯ ಸಂಖ್ಯೆಯಷ್ಟಿದ್ದಾರೆ. ಇದರಲ್ಲಿ ಪುರುಷರು ೩೫೦ರಷ್ಟಿದ್ದರೇ, ೩೫೯ರಷ್ಟು ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆ ಶೇ.೧೪.೨೫ ರಷ್ಟು ಜನರು ಪರಿಶಿಷ್ಟ ಪಂಗಡದವರಾಗಿದ್ದಾರೆ. ಸಾಕ್ಷರತೆಯ ದೃಷ್ಟಿಯಲ್ಲಿ ಗ್ರಾಮದ ಸಾಕ್ಷರತೆಯ ಪ್ರಮಾಣವು ಶೇ.೫೨.೬೬ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೪೩.೯ರಷ್ಟಿದ್ದರೇ, ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ (ಶೇ.೬೭.೪೩) ಕಡಿಮೆಯಿದೆ. ಹಾಗೂ ಮಹಿಳೆಯರ ಸಾಕ್ಷರತೆಯನ್ನು ಜಿಲ್ಲೆಯ ಮಹಿಳೆಯರ ಸಾಕ್ಷರತೆಯ ಪ್ರಮಾಣಕ್ಕಿಂತ (ಶೇ.೫೯.೦೯) ಕಡಿಮೆಯಿದೆ. ಈ ಗ್ರಾಮದ ಮಹಿಳೆಯರ ಸಾಕ್ಷರತೆಯ ಪ್ರಮಾಣದಲ್ಲಿ ಇನ್ನಷ್ಟು ಪ್ರಗತಿ ಸಾಧಿಸುವ ಅಗತ್ಯತೆ ಇರುವುದು ಕಂಡುಬರುತ್ತದೆ. ದುಡಿಯುವ ವರ್ಗದ ದೃಷ್ಟಿಯಿಂದ ಈ ಗ್ರಾಮದಲ್ಲಿ ೧,೯೮೦ರಷ್ಟು ಜನರು ದುಡಿಯುವ ಕಾರ್ಯ ಚಟುವಟಿಕೆಯಲ್ಲಿ ತೊಡಗಿದ್ದು, ಇದರಲ್ಲಿ ೧,೩೧೪ ಪುರುಷರು ಮತ್ತು ೬೬೬ ಮಹಿಳೆಯರು ದುಡಿಯುತ್ತಿದ್ದಾರೆ. ೬ ತಿಂಗಳಿಗಿಂತಲೂ ಹೆಚ್ಚು ಕೆಲಸ ಮಾಡುತ್ತಿದ್ದು, ಆದಾಯವನ್ನು ಗಳಿಸುವ ವರ್ಗದವರು ೧,೬೬೦ರಷ್ಟು ಜನರು ದುಡಿಯುತ್ತಿದ್ದಾರೆ. ಈ ಗ್ರಾಮದಲ್ಲಿ ೬ ತಿಂಗಳಿಗಿಂತಲೂ ಕಡಿಮೆ ಕೆಲಸ ಮಾಡಿ, ಬರುವ ಆದಾಯ ಅವರ ಜೀವನೋಪಾಯಕ್ಕೆ ಸಾಕಾಗದೇ ಇರುವ ಸಿಮಾಂತ ಅಥವಾ ಸಮಾಜದ ಕೆಳಸ್ಥರ ಅಂಚಿನಲ್ಲಿ ದುಡಿಯುವವರು ೩೨೦ರಷ್ಟು ಜನರಿದ್ದಾರೆ.

ಗ್ರಾಮದಲ್ಲಿ ಕೃಷಿ ತೊಡಗಿಸಿದವರು ೮೪೮ ಜನರು ಕೃಷಿ ಭೂಮಿಯ ಮಾಲೀಕತ್ವ ಮತ್ತು ಸಹ ಮಾಲೀಕತ್ವ ಪಡೆದಿರುವ ರೈತರಿದ್ದಾರೆ. ಕೃಷಿ ಜಮೀನಿನಲ್ಲಿ ದುಡಿಯುವ ಕೃಷಿ ಕಾರ್ಮಿಕರು ೩೧೫ರಷ್ಟಿರುವುದು ಕಂಡುಬರುತ್ತದೆ.

**ಜೈಸಿಂಗ್‌ಪುರ ಗ್ರಾಮ**

ಸಂಡೂರು ತಾಲ್ಲೂಕಿನಲ್ಲಿ ಜೈಸಿಂಗ್‌ಪುರ ಒಂದು ಗ್ರಾಮವಾಗಿದ್ದು, ಒಟ್ಟು ೫೪೯ ಕುಟುಂಬಗಳು ನೆಲೆಸಿವೆ. ೨೦೧೧ರ ಜನಗಣತಿಯ ಪ್ರಕಾರ ಜೈಸಿಂಗ್‌ಪುರ ಗ್ರಾಮದಲ್ಲಿ ಒಟ್ಟು ೨,೭೧೪ರಷ್ಟು ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೧,೩೭೨ ಪುರುಷರಿದ್ದರೆ ೧,೩೪೨ರ ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಜೈಸಿಂಗ್‌ಪುರ ಗ್ರಾಮದಲ್ಲಿ (೦–೬) ವಯೋಮಾನ ಮಕ್ಕಳು ೫೬೨ ಸಂಖ್ಯೆಯಲ್ಲಿದ್ದಾರೆ. ಇದರಲ್ಲಿ ಗಂಡು ಮಕ್ಕಳು ೨೯೪ ಸಂಖ್ಯೆಯಲ್ಲಿದ್ದರೆ, ೨೬೮ ಹೆಣ್ಣು ಮಕ್ಕಳಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೨೦.೭೧ರಷ್ಟು (೦–೬) ವಯೋಮಾನದ ಮಕ್ಕಳ ಸಂಖ್ಯೆಯಿದೆ. ಲಿಂಗಾನುಪಾತಕ್ಕೆ ಸಂಬಂಧಿಸಿದಂತೆ (೦–೬) ವಯೋಮಾನದ ಮಕ್ಕಳ ಲಿಂಗಾನುಪಾತ ಗ್ರಾಮದಲ್ಲಿ ೯೧೨ರಷ್ಟಿದೆ. ಇದು ಜಿಲ್ಲೆಯ ಮಕ್ಕಳ ಲಿಂಗಾನುಪಾತಕ್ಕಿಂತ ಕಡಿಮೆಯಿದೆ. ಗ್ರಾಮದ ಸರಾಸರಿ ಲಿಂಗಾನುಪಾತವು ೯೭೮ರಷ್ಟಿದ್ದು, ಜಿಲ್ಲೆಯ ಸರಾಸರಿ ಲಿಂಗಾನುಪಾತಕ್ಕಿಂತ (೯೮೩) ಕಡಿಮೆಯಿದೆ. ಅಂದರೆ ಗ್ರಾಮದಲ್ಲಿ ಪ್ರತಿ ೧,೦೦೦ ಪುರುಷರಿಗೆ ೯೭೮ ಮಹಿಳೆಯರಿದ್ದು, ಇನ್ನೂ ೨೨ ಮಹಿಳೆಯರ ಕೊರತೆಯು ಅತಂಕಕಾರಿಯಗಿದೆ. ಜಾತಿಯ ಆಧಾರದ ಮೇಲೆ ಜೈಸಿಂಗ್‌ಪುರ ಗ್ರಾಮದಲ್ಲಿ ಬಹುತೇಕವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗದವರು ನೆಲೆಸಿದ್ದಾರೆ. ಪರಿಶಿಷ್ಟ ಜಾತಿಯವರು ಈ ಗ್ರಾಮದಲ್ಲಿ ೧,೫೧೩ರಷ್ಟಿದ್ದು, ಪರಿಶಿಷ್ಟ ಜಾತಿಗೆ ಸೇರಿದ ೭೬೪ ಪುರುಷರು ಮತ್ತು ೭೪೯ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೫೫.೭೫ರಷ್ಟು ಜನರು ಪರಿಶಿಷ್ಟ ಜಾತಿಯವರಾಗಿದ್ದಾರೆ. ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವರ್ಗದವರು ೩೮೦ ಜನರಿದ್ದು, ಇದರಲ್ಲಿ ೧೮೮ ಪುರುಷರಿದ್ದರೆ ಮಹಿಳೆಯರು ೧೯೨ ಸಂಖ್ಯೆಯಲ್ಲಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೪.೦೦ರಷ್ಟು ಜನರು ಪರಿಶಿಷ್ಟ ಪಂಗಡದವರಾಗಿದ್ದಾರೆ. ಸಾಕ್ಷರತೆಯ ದೃಷ್ಟಿಯಿಂದ ಈ ಗ್ರಾಮದಲ್ಲಿ ಶೇ.೬೬.೩೬ರಷ್ಟು ಸಾಕ್ಷರತೆಯ ಪ್ರಮಾಣವಿದೆ. ಇದರಲ್ಲಿ ಮಹಿಳಾ ಸಾಕ್ಷರತೆ ಪ್ರಮಾಣ ಶೇ.೫೩.೯೧ರಷ್ಟಿದ್ದರೆ, ಪುರುಷರ ಸಾಕ್ಷರತೆಯ ಪ್ರಮಾಣ ಶೇ.೭೮.೭೬ರಷ್ಟಿದೆ. ಗ್ರಾಮದ ಸರಾಸರಿ ಸಾಕ್ಷರತೆಯ ಪ್ರಮಾಣವು ಜಿಲ್ಲೆಯ ಸರಾಸರಿ ಸಾಕ್ಷರತೆ ಶೇ.೬೭.೪೩ ಪ್ರಮಾಣಕ್ಕಿಂತ ಕಡಿಮೆ ಇದೆ. ಮಹಿಳಾ ಸಾಕ್ಷರತೆಯ ಪ್ರಮಾಣವನ್ನು ಜಿಲ್ಲೆಯ ಮಹಿಳೆಯರ ಸರಾಸರಿ ಸಾಕ್ಷರತೆ ಶೇ.೫೮.೯ ಪ್ರಮಾಣಕ್ಕಿಂತ ಕಡಿಮೆಯಿದೆ. ದುಡಿಯುವ ವರ್ಗದ ದೃಷ್ಟಿಯಿಂದ ಈ ಗ್ರಾಮದಲ್ಲಿ ೧,೧೨೯ ಜನರು ದುಡಿಯುವ ಕಾರ್ಯ ಚಟುವಟಿಕೆಯಲ್ಲಿ ತೊಡಗಿದ್ದು, ಇದರಲ್ಲಿ ೭೨೦ ಪುರುಷರು ಮತ್ತು ೪೦೯ ಮಹಿಳೆಯರಿದ್ದಾರೆ. ಗ್ರಾಮದ ಸಮಾಜದ ಅಂಚಿನಲ್ಲಿ ದುಡಿಯುವವರು ೪೨೫ ಜನರಿದ್ದು, ಇವರು ೧೯೬ ಪುರುಷರು ಮತ್ತು ಮಹಿಳೆಯರು ೨೨೯ ಸಂಖ್ಯೆಯಲ್ಲಿದ್ದಾರೆ. ಕೃಷಿ ಭೂಮಿಯನ್ನು ಹೊಂದಿರುವ ಭೂಮಾಲೀಕರು ಅಂದರೆ ೧೨೧ ಜನರು ರೈತಾಪಿ ವರ್ಗದವರಾಗಿರುವುದು ಕಾಣಸಿಗುತ್ತದೆ.

**ತುಮಟಿ ಗ್ರಾಮ**

ತುಮಟಿ ಗ್ರಾಮವು ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನಲ್ಲಿದೆ. ಈ ಗ್ರಾಮದಲ್ಲಿ ಒಟ್ಟು ೨೬೫ ಕುಟುಂಬಗಳು ವಾಸವಾಗಿದ್ದು, ಒಟ್ಟು ೧,೪೨೫ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೭೨೪ ಪುರುಷರು ಮತ್ತು ೭೦೧ ಮಹಿಳೆಯರಿದ್ದಾರೆ. ಗ್ರಾಮದಲ್ಲಿ ೦–೬ ವಯೋಮಾನದ ಮಕ್ಕಳು ೨೫೫ರಷ್ಟಿದ್ದಾರೆ. ಇದರಲ್ಲಿ ೧೩೫ ಗಂಡು ಮಕ್ಕಳು ಮತ್ತು ೧೨೦ ಹೆಣ್ಣು ಮಕ್ಕಳಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೭.೮೯ರಷ್ಟು ೦–೬ ವಯೋಮಾನದ ಮಕ್ಕಳಿದ್ದಾರೆ. ಲಿಂಗಾನುಪಾತದ ದೃಷ್ಟಿಯಿಂದ ಗ್ರಾಮದಲ್ಲಿ (೦–೬) ಮಕ್ಕಳ ಲಿಂಗಾನುಪಾತವು ೮೮೯ರಷ್ಟಿದ್ದು, ಜಿಲ್ಲೆಯ ಮಕ್ಕಳ ಲಿಂಗಾನುಪಾತ ೯೬೦ ಸರಾಸರಿಕ್ಕಿಂತ ಈ ಗ್ರಾಮದ ಮಕ್ಕಳ ಲಿಂಗಾನುಪಾತ ಕಡಿಮೆ ಇರುವುದು ಕಂಡುಬರುತ್ತದೆ. ಒಟ್ಟಾರೆ ಗ್ರಾಮದ ಸರಾಸರಿ ಲಿಂಗಾನುಪಾತವು ೯೬೮ರಷ್ಟಿದೆ. ಈ ಗ್ರಾಮದ

ಲಿಂಗಾನುಪಾತವನ್ನು ಜಿಲ್ಲೆಯ ಸರಾಸರಿ ಲಿಂಗಾನುಪಾತಕ್ಕಿಂತ (೯೮೩) ಕಡಿಮೆಯಿದೆ. ಗ್ರಾಮದಲ್ಲಿ ಪ್ರತಿ ೧,೦೦೦ ಪುರುಷರಿಗೆ ೯೬೮ ಮಹಿಳೆಯರಿದ್ದಾರೆ, ಇನ್ನು ೩೨ ಮಹಿಳೆಯರ ಕೊರತೆ ಇರುವುದು ಕಂಡುಬರುತ್ತದೆ. ಜೈಸಿಂಗ್‌ಪುರ ಗ್ರಾಮದಲ್ಲಿ ಜಾತಿಯ ಆಧಾರದ ಮೇಲೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಬಹುತೇಕವಾಗಿ ನೆಲೆಸಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯವರು ೫೪೯ರಷ್ಟು ಜನರಿದ್ದು, ೨೮೬ ಪುರುಷರು ಮತ್ತು ೨೭೩ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೩೯.೨೩ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಪರಿಶಿಷ್ಟ ಪಂಗಡದವರು ತುಮಟಿ ಗ್ರಾಮದಲ್ಲಿ ೭೨೮ ಜನರಿದ್ದು, ೩೬೬ ಪುರುಷರು ಮತ್ತು ೩೬೨ ಮಹಿಳೆಯರಿದ್ದಾರೆ. ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.೫೧.೦೯ರಷ್ಟು ಪರಿಶಿಷ್ಟ ಪಂಗಡದವರು ನೆಲೆಸಿದ್ದಾರೆ. ಸಾಕ್ಷರತೆಯ ದೃಷ್ಟಿಯಿಂದ ಗ್ರಾಮದಲ್ಲಿ ಶೇ.೫೨.೯೧ರಷ್ಟು ಸಾಕ್ಷರತೆಯ ಪ್ರಮಾಣವನ್ನು ಹೊಂದಿದ್ದು, ಪುರುಷರ ಸಾಕ್ಷರತೆಯ ಪ್ರಮಾಣ ಶೇ.೬೯.೭೮ರಷ್ಟಿದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೩೫.೮೦ರಷ್ಟಿದೆ. ಗ್ರಾಮದ ಮಹಿಳಾ ಸಾಕ್ಷರತೆಯ ಪ್ರಮಾಣ ಅತ್ಯಂತ ಕಡಿಮೆ ಇರುವುದು ಶೋಚನಿಯವಾಗಿದೆ. ಗ್ರಾಮದ ಸಾಕ್ಷರತೆಯನ್ನು ಜಿಲ್ಲೆಯ ಸರಾಸರಿ ಸಾಕ್ಷರತೆ ಶೇ.೬೭.೪೩ ಪ್ರಮಾಣಕ್ಕಿಂತ ಕಡಿಮೆಯಿದೆ. ಮಹಿಳೆಯರ ಸಾಕ್ಷರತೆಯು ಜಿಲ್ಲೆಯಲ್ಲಿ ಶೇ.೫೮.೦೯ ಇದ್ದು, ಈ ಗ್ರಾಮದ ಮಹಿಳಾ ಸಾಕ್ಷರತೆ ಶೇ.೩೫.೮೦ ಪ್ರಮಾಣವನ್ನು ಜಿಲ್ಲೆಯ ಸಾಕ್ಷರತೆ ಪ್ರಮಾಣಕ್ಕೆ ಹೋಲಿಸಿದಾಗ ಅತಿ ಕಡಿಮೆ ಇರುವುದು ಕಂಡುಬರುತ್ತದೆ. ಹಾಗಾಗಿ ಈ ಗ್ರಾಮದ ಜನಸಂಖ್ಯಾ ಬೆಳವಣಿಗೆಯ ದೃಷ್ಟಿಯಿಂದ ಶೈಕ್ಷಣಿಕವಾಗಿ ಸಾಧಿಸುವ ಅಗತ್ಯತೆ ಇರುವುದು ಗಮನಿಸಬೇಕಾದ ಅಂಶವಾಗಿದೆ. ದುಡಿಮೆಯ ದೃಷ್ಟಿಯಿಂದ ಈ ಗಾತ್ರದಲ್ಲಿ ದುಡಿಯುವ ವರ್ಗ ೫೭೮ರಷ್ಟಿದ್ದು, ಇದರಲ್ಲಿ ಪುರುಷರು ೩೫೪ರಷ್ಟು, ಮಹಿಳೆಯರು ೨೨೪ರಷ್ಟು ಕೆಲಸದಲ್ಲಿ ತೊಡಗಿದವರಾಗಿದ್ದಾರೆ. ಗ್ರಾಮದ ಸಮಾಜದ ಅಂಚಿನಲ್ಲಿ ದುಡಿಯುವವರು ೨೮ ಜನರಿದ್ದು, ೯ ಪುರುಷರು ಮತ್ತು ೧೯ ಮಹಿಳೆಯರಿದ್ದಾರೆ. ಈ ಗ್ರಾಮದಲ್ಲಿ ಕೃಷಿಯನ್ನು ತೊಡಗಿಸಿಕೊಂಡವರು ೧೧೬ ರೈತರು ಮತ್ತು ೮೯ ಕೃಷಿ ಕಾರ್ಮಿಕರು ಇದ್ದಾರೆ. ಸಂಡೂರು ತಾಲ್ಲೂಕಿನ ಸುಶೀಲ ನಗರ, ಜೈಸಿಂಗ್‌ಪುರ, ತುಮಟಿ ಗ್ರಾಮದ ಜನಸಂಖ್ಯೆ, ಸಾಕ್ಷರತೆ ಪ್ರಮಾಣ, ಲಿಂಗಾನುಪಾತವನ್ನು ಕೋಷ್ಟಕ ೨.೧೧ರಲ್ಲಿ ಗಮನಿಸಿ.

**ಕೋಷ್ಟಕ ೨.೧೧ ಸಂಡೂರು ತಾಲ್ಲೂಕಿನ ಸುಶೀಲ ನಗರ, ಜೈಸಿಂಗ್‌ಪುರ, ತುಮಟಿ ಗ್ರಾಮಗಳ ಕುಟುಂಬಗಳ ಜನಸಂಖ್ಯೆ, ಸಾಕ್ಷರತೆ, ಲಿಂಗಾನುಪಾತದ ವಿವರ**

| ಗ್ರಾಮಗಳು | ಕುಟುಂಬಗಳು | ಜನಸಂಖ್ಯೆ | ಪುರುಷರ ಜನಸಂಖ್ಯೆ | ಮಹಿಳೆಯರ ಜನಸಂಖ್ಯೆ | ಸಾಕ್ಷರತೆ ಶೇಕಡವಾರುಗಳು | ಲಿಂಗಾನುಪಾತ |
|---|---|---|---|---|---|---|
| ಸುಶೀಲನಗರ | ೮೫೪ | ೪,೯೭೭ | ೨,೪೬೯ | ೨,೫೦೮ | ೫೨.೬೬ | ೧,೦೧೬ |
| ಜೈಸಿಂಗ್‌ಪರ | ೫೩೯ | ೨,೭೧೪ | ೧,೩೭೨ | ೧,೩೪೨ | ೬೬.೩೬ | ೯೭೮ |
| ತುಮಟಿ | ೨೬೫ | ೧,೪೨೫ | ೭೨೪ | ೭೦೧ | ೫೨.೯೧ | ೯೬೮ |

ಮೂಲ : ೨೦೧೧ರ ಜನಗಣತಿ.

ಮೇಲಿನ ಕೋಷ್ಟಕದಲ್ಲಿ ಸಂಡೂರು ತಾಲ್ಲೂಕಿನ ಸುಶೀಲ ನಗರ, ಜೈಸಿಂಗ್‌ಪುರ ಮತ್ತು ತುಮಟಿ ಗ್ರಾಮಗಳಲ್ಲಿರುವ ಕುಟುಂಬಗಳ ಸಂಖ್ಯೆ, ಜನಸಂಖ್ಯೆ, ಸಾಕ್ಷರತೆಯ ಪ್ರಮಾಣ ಹಾಗೂ ಲಿಂಗಾನುಪಾತವನ್ನು ಅಂಕಿ-ಅಂಶಗಳಲ್ಲಿ ನೀಡಲಾಗಿದೆ. ಈ ತಾಲ್ಲೂಕಿನ ಮೂರು ಗ್ರಾಮಗಳಲ್ಲಿ ಕುಟುಂಬಗಳು, ಜನಸಂಖ್ಯೆ, ಲಿಂಗಾನುಪಾತದ ದೃಷ್ಟಿಯಿಂದ ಸುಶೀಲ ನಗರ ಗ್ರಾಮವು ಅಧಿಕವಾಗಿರುವುದು ಕಂಡುಬಂದಿದೆ. ಅಂದರೆ ಸುಶೀಲನಗರವು ಗ್ರಾಮ ಮತ್ತು ಜನಸಂಖ್ಯೆಯಲ್ಲಿ ದೊಡ್ಡದಾದ ಗ್ರಾಮವಾಗಿದ್ದು, ತುಮಟಿ ಗ್ರಾಮವು ಅತೀ ಚಿಕ್ಕದಾದ ಗ್ರಾಮವಾಗಿದೆ ಹಾಗೂ ಜೈಸಿಂಗ್‌ಪುರ ಗ್ರಾಮವು ಮದ್ಯಮ ಗಾತ್ರದ ಗ್ರಾಮವಾಗಿದೆ ಎಂದು ಈ ಕೋಷ್ಟಕದ ಮೂಲಕ

ತಿಳಿಯಬಹುದಾಗಿದೆ. ಸಾಕ್ಷರತೆಯ ದೃಷ್ಟಿಯಿಂದ ಸುಶೀಲನಗರ ಸಾಕ್ಷರತೆ ಮತ್ತು ತುಮಟಿ ಗ್ರಾಮದ ಸಾಕ್ಷರತೆಯ ಪ್ರಮಾಣ ಕ್ರಮಾಂಕವಾಗಿ ಶೇ.೫೨.೬೬ ಮತ್ತು ಶೇ.೫೨.೯ ರಷ್ಟು ಒಂದೇ ತರನಾಗಿದ್ದು, ಜೈಸಿಂಗ್‌ಪುರದ ಸಾಕ್ಷರತೆ ಪ್ರಮಾಣ (ಶೇ.೬೬.೩೬) ಈ ಎರಡು ಗ್ರಾಮಗಳಿಗಿಂತ ಹೆಚ್ಚಾಗಿರುವುದು ಕಂಡುಬರುತ್ತದೆ.

ಪ್ರಸ್ತುತ ಎರಡನೆಯ ಅಧ್ಯಾಯಕ್ಕೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಸಂಡೂರು ತಾಲ್ಲೂಕು, ಬಳ್ಳಾರಿ ತಾಲ್ಲೂಕುಗಳ ಗಣಿ ಗ್ರಾಮೀಣ ಪ್ರದೇಶವನ್ನು ಕ್ಷೇತ್ರ ಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿದ್ದು, ಪ್ರತಿ ಮೂರು ತಾಲ್ಲೂಕುಗಳಲ್ಲಿ ಮೂರು ಮೂರು ಗ್ರಾಮಗಳಂತೆ ಒಟ್ಟು ಒಂಭತ್ತು ಗ್ರಾಮಗಳ ಜನಸಂಖ್ಯೆ, ಸಾಕ್ಷರತೆ ಮತ್ತು ಲಿಂಗಾನುಪಾತದ ಅಂಕಿ-ಅಂಶಗಳನ್ನು ಒಟ್ಟಾರೆ ಸಂಗ್ರಹಿಸಿ ಜಿಲ್ಲೆ ಮತ್ತು ತಾಲ್ಲೂಕುಗಳಿಗೆ ಈ ಗ್ರಾಮಗಳ ಅಂಕಿ-ಅಂಶವನ್ನು ಸಂಗ್ರಹಿಸಿ ಕೊಟ್ಟಿರುವ ವಿವರವನ್ನು ಕೋಷ್ಟಕ ೨.೧೨ರಲ್ಲಿ ನೀಡಲಾಗಿದೆ.

ಕೋಷ್ಟಕ ೨.೧೨ : ಬಳ್ಳಾರಿ ಜಿಲ್ಲೆ ಮತ್ತು ಗಣಿವಲಯಗಳಾದ ಹೊಸಪೇಟೆ, ಬಳ್ಳಾರಿ ಸಂಡೂರು ತಾಲೂಕಿನ ಜನಸಂಖ್ಯೆ, ಲಿಂಗಾನುಪಾತ, ಸಾಕ್ಷರತೆಯ ವಿವರ

| ಜಿಲ್ಲೆ ತಾಲ್ಲೂಕು ಗ್ರಾಮ | ಜನಸಂಖ್ಯೆ | | | ಲಿಂಗಾನುಪಾತ | | ಸಾಕ್ಷರತೆ (ಶೇಕಡವಾರುಗಳಲ್ಲಿ) | | |
|---|---|---|---|---|---|---|---|---|
| | ಜನರು | ಮಹಿಳೆಯರು | ಪುರುಷರು | ಒಟ್ಟು ಸರಾಸರಿ ಲಿಂಗಾನುಪಾತ | (೦-೬) ಮಕ್ಕಳ ಲಿಂಗಾನುಪಾತ | ಒಟ್ಟು ಸಾಕ್ಷರತೆ | ಮಹಿಳಾ ಸಾಕ್ಷರತೆ | ಪುರುಷರ ಸಾಕ್ಷರತೆ |
| ಬಳ್ಳಾರಿ ಜಿಲ್ಲೆ | ೨೫,೩೨,೩೮೩ | ೧೨,೬೦,೪೦೨ | ೧೨,೭೧,೯೮೧ | ೯೮೩ | ೯೬೦ | ೬೭.೪೩ | ೫೮.೦೯ | ೭೬.೬೪ |
| ಬಳ್ಳಾರಿ ತಾಲ್ಲೂಕು | ೭,೭೦,೯೨೯ | ೩,೮೩,೧೮೫ | ೩,೮೭,೭೪೪ | ೯೮೮ | ೯೬೫ | ೬೮.೬೧ | ೫೧.೭೬ | ೬೬.೭೫ |
| ಹನ್ನೊಳ್ಳಿ | ೩,೩೦೭ | ೧,೬೪೨ | ೧,೬೬೫ | ೯೮೬ | ೯೪೯ | ೫೭.೧೭ | ೪೩.೧೨ | ೭೧.೧೫ |
| ಜಾನೆಕುಂಟೆ | ೧,೮೫೪ | ೯೨೧ | ೯೯೩ | ೯೮೭ | ೧,೦೯೪ | ೬೫.೦೯ | ೪೮.೧೮ | ೮೨.೬೪ |
| ಬೆಳಗಲ್ | ೫,೮೨೬ | ೨,೮೪೦ | ೨,೯೮೬ | ೯೫೧ | ೯೭೩ | ೬೨.೯೦ | ೪೮.೭೪ | ೭೬.೩೦ |
| ಹೊಸಪೇಟೆ ತಾಲ್ಲೂಕು | ೪,೫೯,೯೯೧ | ೨,೩೦,೬೫೩ | ೨,೨೯,೩೩೮ | ೧,೦೦೬ | ೯೬೩ | ೭೦.೧೬ | ೫೩.೨೨ | ೬೬.೯೬ |
| ಪಾಪಿನಾಯಕನಹಳ್ಳಿ | ೬,೯೫೭ | ೩,೪೮೫ | ೩,೪೭೨ | ೯೭೩ | ೧,೧೯೮ | ೬೪.೯೮ | ೫೩.೫೮ | ೭೬.೪೬ |
| ಕಲ್ಲಹಳ್ಳಿ | ೨,೫೨೫ | ೧,೨೫೬ | ೧,೨೬೯ | ೯೯೦ | ೧,೦೦೦ | ೪೯.೬೮ | ೩೮.೮೪ | ೬೦.೩೭ |
| ರಾಜಾಪುರ | ೮೮೪ | ೪೩೩ | ೪೫೧ | ೯೬೦ | ೯೫೨ | ೫೭.೧೪ | ೪೯.೭೩ | ೬೪.೨೭ |
| ಸಂಡೂರು ತಾಲ್ಲೂಕು | ೨,೬೦,೨೧೩ | ೧,೨೬,೧೭೯ | ೧,೩೪,೩೦೪ | ೯೪೧ | ೯೬೭ | ೬೬.೮೧ | ೪೭.೩೪ | ೬೪.೭೪ |
| ಸುಶೀಲ ನಗರ | ೪,೯೭೭ | ೨,೫೦೮ | ೨,೪೬೯ | ೧,೦೧೬ | ೧,೦೨೨ | ೫೨.೬೬ | ೪೩.೯೧ | ೬೧.೯೧ |
| ಜೈಸಿಂಗ್‌ಪುರ | ೨,೭೧೪ | ೧,೩೪೨ | ೧,೩೭೨ | ೯೭೮ | ೯೧೨ | ೬೬.೩೬ | ೫೩.೯೧ | ೭೮.೭೬ |
| ತುಮಟಿ | ೧,೪೨೫ | ೭೦೧ | ೭೨೪ | ೯೬೮ | ೮೮೯ | ೫೨.೯೧ | ೩೫.೮೦ | ೬೯.೭೮ |

ಮೂಲ : ೨೦೧೧ ಜನಗಣತಿ, ಭಾರತ ಮತ್ತು ಬಳ್ಳಾರಿ ಜಿಲ್ಲಾ ಅಧಿಕೃತ ವೆಬ್‌ಸೈಟ್ ದತ್ತಾಂಶ

**ಕೊನೆಯ ಟಿಪ್ಪಣಿಗಳು**


೦೧. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, **ಬಳ್ಳಾರಿ ಜಿಲ್ಲಾ ಅಂಕಿ-ಅಂಶ ನೋಟ ೨೦೧೧,** ಕರ್ನಾಟಕ ಸರ್ಕಾರ, ಬೆಂಗಳೂರು.

೦೨. ಬಳ್ಳಾರಿ ಜಿಲ್ಲಾ ಸಾಂಖ್ಯಿಕ ಇಲಾಖೆ, ೨೦೧೦-೧೧ನೇ ಸಾಲಿನ **ಬಳ್ಳಾರಿ ಜಿಲ್ಲೆಯ ಸಾಮಾಜಿಕ-ಆರ್ಥಿಕ ಅವಲೋಕನ** ವರದಿ, ಜಿಲ್ಲಾ ಪಂಚಾಯತ್, ಬಳ್ಳಾರಿ.

೦೩. ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಷನ್ಸ್, **ಡಿಸ್ಟ್ರಿಕ್ ಸೆನ್ಸಸ್ ಹ್ಯಾಂಡ್ ಬುಕ್,** ಬಳ್ಳಾರಿ ಡಿಸ್ಟ್ರಿಕ್ಟ್ ಬೆಂಗಳೂರು, ಗವರ್ನ್‌ಮೆಂಟ್ ಆಫ್ ಕರ್ನಾಟಕ ೨೦೧೧.

೦೪. ಕರ್ನಾಟಕ ಸರ್ಕಾರ, **ಬಳ್ಳಾರಿ ಜಿಲ್ಲಾ ಪಕ್ಷಿ ನೋಟ ೨೦೧೬-೧೭,** ಬೆಂಗಳೂರು.

೦೫. ಕರ್ನಾಟಕ ಸರ್ಕಾರ, ಕರ್ನಾಟಕ ಲೋಕಲ್ ಲಾ, ೧೯೫೭-೨೦೦೦, ಬೆಂಗಳೂರು.

೦೬. ಸತ್ಪಾಲ್ ಪಾಲಿಯಾನಿ, (೨೦೦೨), **ಕರ್ನಾಟಕ ಲೋಕಲ್ ಲಾ ಕರ್ನಾಟಕ,** ಲಾ ಜನರಲ್, ವ್ಯಾಲ್ಯುಮ್ ೪೦, ೨೦೦೨.

೦೭. ಗವರ್ನ್‌ಮೆಂಟ್ ಆಫ್ ಇಂಡಿಯಾ ಮಿನಿಸ್ಟರಿ ಆಫ್ ಮೈನ್ಸ್, **ಇಂಡಿಯನ್ ಬ್ಯೂರೋ ಮೈನ್ಸ್ ಇಂಡಿಯನ್ ಮಿನರಲ್ ಇಯರ್ ಬುಕ್ಸ್ ೨೦೧೪,** ಸ್ಟೇಟ್ ರಿವ್ಯೂವ್ ಕರ್ನಾಟಕ ನಾಗಪುರ್.

೦೮. ಗೆಜೆಟೆಡ್ ಆಫ್ ಇಂಡಿಯಾ, (೧೯೭೨), **ಮೈಸೂರು ಸ್ಟೇಟ್ – ಬಳ್ಳಾರಿ ಡಿಸ್ಟ್ರಿಕ್ಟ್,** ಬೆಂಗಳೂರು

೦೯. ಮೈಕ್ರೋ ಲೆವೆಲ್ ಇಂಪ್ಯಾಕ್ಟ್ ಅಸೆಸ್‌ಮೆಂಟ್ ಸ್ಟಡೀ ರಿಪೋರ್ಟ್ಸ್ ಆಫ್ ಬಳ್ಳಾರಿ ಡಿಸ್ಟ್ರಿಕ್ಟ್ ಕರ್ನಾಟಕ, ಗವರ್ನ್‌ಮೆಂಟ್ ಆಫ್ ಇಂಡಿಯಾ, ವ್ಯಾಲ್ಯೂಮ್-೧, ನವೆಂಬರ್ ೨೦೧೧.

೧೦. ಬಳ್ಳಾರಿ ಜಿಲ್ಲಾ ಅಧಿಕೃತ ವೆಬ್‌ಸೈಟ್ ಮಾಹಿತಿ, www.bellary.nic.in ಮತ್ತು ವಿಕೀಪಿಡಿಯಾ, https://kn.m.wikipedia.org.

೧೧. ಹೊಸಪೇಟೆ ತಾಲ್ಲೂಕು ಅಧಿಕೃತ ವೆಬ್‌ಸೈಟ್ ಮಾಹಿತಿ, www.bellary.nic.in/hosp ಮತ್ತು ವಿಕೀಪಿಡಿಯಾ.

೧೨. ಸಂಡೂರು ತಾಲ್ಲೂಕು ಅಧಿಕೃತ ವೆಬ್‌ಸೈಟ್ ಮಾಹಿತಿ, www.bellary.nic.in/sanF ಮತ್ತು ವಿಕೀಪಿಡಿಯಾ.

೧೩. ಬಳ್ಳಾರಿ ತಾಲ್ಲೂಕು ಅಧಿಕೃತ ವೆಬ್‌ಸೈಟ್ ಮಾಹಿತಿ, www.bellary.nic.in/distp ಮತ್ತು ವಿಕೀಪಿಡಿಯಾ.

# ಅಧ್ಯಾಯ ಮೂರು

## ಗಣಿಗಾರಿಕೆ: ಗ್ರಾಮೀಣ ಜನರ ಸಾಮಾಜಿಕ ಬದುಕಿನ ಮೇಲಾದ ಪರಿಣಾಮಗಳು

# ಅಧ್ಯಾಯ ೩
# ಗಣಿಗಾರಿಕೆ: ಗ್ರಾಮೀಣ ಜನರ ಸಾಮಾಜಿಕ ಬದುಕಿನ ಮೇಲಾದ ಪರಿಣಾಮಗಳು

## ೩.೧ ಪ್ರಸ್ತಾವನೆ

ಈ ಅಧ್ಯಾಯದಲ್ಲಿ ಗಣಿಗಾರಿಕೆಯಿಂದಾಗಿ ಗ್ರಾಮೀಣ ಜನರು ಬದುಕಿನ ಮೇಲಾಗುವ ಸಾಮಾಜಿಕ ಪರಿಣಾಮಗಳನ್ನು ತಿಳಿಸಲಾಗಿದೆ. ಈ ಹಿನ್ನಲೆಯಲ್ಲಿ ಸಾಮಾನ್ಯ ಮಾಹಿತಿಯಲ್ಲಿ ಕುಟುಂಬ ಸದಸ್ಯರ ವಿವರ, ಜಾತಿ-ಧರ್ಮ, ವೈವಾಹಿಕ ವಿವರ, 'ಶೈಕ್ಷಣಿಕ ವಿವರ' ಉದ್ಯೋಗ ಮತ್ತು ವಾರ್ಷಿಕ ಆದಾಯ ಕುರಿತು ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಲಾಗಿದೆ. ಹಾಗೆಯೇ ಸಾಮಾಜಿಕ ಪರಿಣಾಮಗಳಿಗೆ ಸಂಬಂದಿಸಿದಂತೆ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯ, ವಸತಿಗಳ ಮೇಲಾಗಿರುವ ಪರಿಣಾಮ ಇತ್ಯಾದಿ ವಿಷಯಗಳ ಕುರಿತು ವಿಶ್ಲೇಷಿಸಲಾಗಿದೆ. ಗಣಿಗಾರಿಕೆಯಿಂದಾಗಿರುವ ಸಾಮಾಜಿಕ ಪರಿಣಾಮಗಳ ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯ ಗಣಿ ವಲಯಗಳು ಸಂಡೂರು-ಹೊಸಪೇಟೆ-ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಗ್ರಾಮಗಳನ್ನು ಅಧ್ಯಯನ ಕ್ಷೇತ್ರವನ್ನಾಗಿ ಆಯ್ದುಕೊಳ್ಳಲಾಗಿದೆ.

## ೩.೨ ಸಾಮಾನ್ಯ ಮಾಹಿತಿ

ಗಣಿಗಾರಿಕೆ ಮತ್ತು ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಪರಿಣಾಮಗಳ ಮಾಹಿತಿಯನ್ನು ಕ್ಷೇತ್ರ ಕಾರ್ಯದ ಮೂಲಕ ಪಡೆಯಲಾಗಿದೆ. ಬಳ್ಳಾರಿ ಜಿಲ್ಲೆಯ ವ್ಯಾಪ್ತಿಗೆ ಬರುವ ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಕಲ್ಹಳ್ಳಿ, ರಾಜಾಪುರ, ಪಾಪಿನಾಯಕನಹಳ್ಳಿ, ಸುಶೀಲನಗರ, ಜೈಸಿಂಗ್‌ಪುರ, ತುಮಟಿ, ಬೆಳಗಲ್, ಹನ್ನೊಳ್ಳಿ ಮತ್ತು ಜಾನೆಕುಂಟೆ ಗ್ರಾಮಗಳಿಗೆ ಭೇಟಿ ನೀಡಿ, ಕ್ಷೇತ್ರ ಕಾರ್ಯದ ಮಾಹಿತಿಯನ್ನು ಸಂಗ್ರಹಿಸಲು ರಚಿತ ಪ್ರಶ್ನಾವಳ್ಳಿಯ ಮೂಲಕ ಉತ್ತರವನ್ನು ಗ್ರಾಮದ ಕುಟುಂಬಗಳಿಂದ ಪಡೆಯಲಾಗಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಒಟ್ಟು ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿ, ನೀಡಿರುವ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅಂದರೆ ಪ್ರತಿಯೊಂದು ತಾಲ್ಲೂಕಿನಲ್ಲೂ ೯೦ ಕುಟುಂಬಗಳಂತೆ ಮೂರು ತಾಲ್ಲೂಕಿಗೆ ೨೭೦ ಕುಟುಂಬಗಳನ್ನು ಆಯ್ಕೆ ಮಾಡಲಾಗಿದೆ. ಅದರಂತೆಯೇ ಪ್ರತಿಯೊಂದು ತಾಲ್ಲೂಕಿನಲ್ಲೂ ಮೂರು ಗ್ರಾಮಗಳನ್ನು ಅಯ್ಕೆ ಮಾಡಿ ಪ್ರತಿ ಗ್ರಾಮಗಳಲ್ಲಿಯು ೩೦ ಕುಟುಂಬಗಳಂತೆ ಒಟ್ಟು ಒಂದು ತಾಲ್ಲೂಕಿನಲ್ಲಿ ೯೦ ಕುಟುಂಬಗಳನ್ನು ಅಧ್ಯಯನ ಸಮೀಕ್ಷೆಗೆ ಒಳಪಡಿಸಿ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕ್ಷೇತ್ರಕಾರ್ಯದ ರಚಿತ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ದತ್ತಾಂಶಗಳಿಂದ ನಿರ್ಧರಿತವಾದ ಅಂಶಗಳನ್ನು ವಿವರಿಸಲಾಗಿದೆ.

### ೩.೨.೧ ಕುಟುಂಬಗಳ ವಿವರ

ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸಲು ಮೊದಲನೆಯದಾಗಿ ಕುಟುಂಬಗಳ ನಮೂನೆಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಕುಟುಂಬಗಳು ಸಾಮಾನ್ಯವಾಗಿ ಗಣಿಗಾರಿಕೆಯ ಪ್ರಕ್ರೀಯೆಯಲ್ಲಿ ಮೂಲ ಕುಟುಂಬಳಾಗಿವೆಯೇ ಅಥವಾ ಕುಟುಂಬಗಳು ಗಣಿಗಾರಿಕೆ ಕೆಲಸಕ್ಕಾಗಿ ಬಂದು ನೆಲೆಸಿದವರೆ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಅಂತಿಮ ಫಲಿತವನ್ನು ದಾಖಲಿಸಲಾಗಿದೆ. ಕೋಷ್ಟಕ ೩.೧ರಲ್ಲಿ ಕೌಟಂಬಿಕವಾಗಿ ವಾಸವಾಗಿರುವ ಮೂಲಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

**ಕೋಷ್ಟಕ ೩.೧ ಕುಟುಂಬ ನಿವಾಸಿಯ ಮಾಹಿತಿಯ ವಿವರ**

| ಕ್ರಸಂ | ನಿವಾಸಿ | ಕುಟುಂಬಗಳು | ಶೇ |
|---|---|---|---|
| ೦೧ | ಮೂಲ ನಿವಾಸಿ | ೨೭೦ | ೧೦೦ |
| ೦೨ | ಗಣಿ ಕೆಲಸಕ್ಕೆ ಬಂದವರೇ | - | - |
| | ಒಟ್ಟು | ೨೭೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೩.೧ರಲ್ಲಿ ನಮೂದಿಸಲಾದ ಅಂಕಿ-ಅಂಶಗಳ ಪ್ರಕಾರ ೨೭೦ ಕುಟುಂಬಗಳು ಮೂಲ ನಿವಾಸಿಗಳಾಗಿದ್ದು, ಶೇ.೧೦೦ರಷ್ಟಿರುವುದು ಕಂಡುಬಂದಿದೆ. ಈ ೨೭೦ ಕುಟುಂಬಗಳನ್ನು ತಾಲ್ಲೂಕುವಾರು ವಿಂಗಡಿಸಿದರೆ ಪ್ರತಿ ತಾಲ್ಲೂಕಿನಲ್ಲಿಯು ೯೦ ಕುಟುಂಬಗಳಿದ್ದು, ಈ ೯೦ ಕುಟುಂಬಗಳು ಮೂಲನಿವಾಸಿಗಳೇ ಅಗಿರುವುದು ಕಂಡು ಬಂದಿದೆ. ಗಣಿಗಾರಿಕೆಯ ಪರಿಣಾಮಗಳನ್ನು ಅಧ್ಯಯನ ಮಾಡಲು ಪ್ರತಿ ತಾಲ್ಲೂಕಿನಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ಸುತ್ತಮುತ್ತಲಿರುವ ಗ್ರಾಮಗಳನ್ನು ಅಯ್ಕೆ ಮಾಡಿಕೊಂಡು, ಆ ಗ್ರಾಮಗಳಿಂದ ಪ್ರತಿ ೩೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಿ ಬಂದ ಫಲಿತಾಂಶವನ್ನು ವಿಶ್ಲೇಷಿಸಲಾಗಿದೆ.

**೩.೨.೨ ಜಾತಿ, ಉಪಜಾತಿ ಮತ್ತು ಧರ್ಮದ ವಿವರ**

ಧರ್ಮ ಮತ್ತು ಜಾತಿಗಳು ಸಮಾಜದ ಅರ್ಥಿಕ, ಸಾಮಾಜಿಕ ಕ್ಷೇತ್ರದ ಮೇಲೆ ಪ್ರಭಾವ ಬೀರುವ ಅಂಶಗಳಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿಯವರನ್ನು ಕ್ಷೇತ್ರಕಾರ್ಯದ ಸಮೀಕ್ಷೆಗೆ ಒಳಪಡಿಸಲಾಗಿದೆ. ಈ ೨೭೦ ಕುಟುಂಬಗಳು ಪರಿಶಿಷ್ಟ ಜಾತಿಯ ಸಮುದಾಯಗಳಾಗಿದ್ದು, ಹಿಂಧೂ ಧರ್ಮಕ್ಕೆ ಸೇರಿದವರಾಗಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಪರಿಶಿಷ್ಟ ಜಾತಿ ಮತ್ತು ಧರ್ಮದ ಮಾಹಿತಿಯ ವಿವರಗಳು ಈ ಕೆಳಗಿನಂತಿವೆ.

**ಕೋಷ್ಟಕ ೩.೨ ಕುಟುಂಬಗಳ ಧರ್ಮ ಮತ್ತು ಜಾತಿಯ ಪ್ರಮಾಣ ವಿವರ**

| ಕ್ರ ಸಂ | ಜಾತಿ | ಕುಟುಂಬಗಳು | ಶೇ | ಧರ್ಮ | ಕುಟುಂಬಗಳು | ಶೇ |
|---|---|---|---|---|---|---|
| ೦೧ | ಪ.ಜಾ | ೨೭೦ | ೧೦೦ | ಹಿಂಧೂ | ೨೭೦ | ೧೦೦ |
| ೦೨ | ಇತರೆ | - | - | ಇತರೆ | - | - |
| | ಒಟ್ಟು | ೨೭೦ | ೧೦೦ | - | ೨೭೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೩.೨ರಲ್ಲಿ ಜಾತಿ ಮತ್ತು ಧರ್ಮಕ್ಕೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿಯ ೨೭೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜಾತಿಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿಯವರು ಶೇ.೧೦೦ರಷ್ಟಿರುವುದು ಈ ಕೋಷ್ಟಕದಲ್ಲಿ ಗಮನಿಸಬಹುದಾಗಿದೆ. ಹಾಗೆಯೇ ಈ ೨೭೦ ಕುಟುಂಬಗಳು ಹಿಂಧೂ ಧರ್ಮಕ್ಕೆ ಸೇರಿದವರಾಗಿದ್ದು, ಶೇ.೧೦೦ರಷ್ಟಿರುವುದು ಕಂಡುಬಂದಿದೆ. ಈ ಪರಿಶಿಷ್ಟ ಜಾತಿಯಲ್ಲಿ ಪ್ರಮುಖವಾಗಿ ಲಂಬಾಣಿ, ಹರಿಜನ ಮತ್ತು ವಡ್ಡರು ಸಮುದಾಯಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ.

**ಉಪಜಾತಿ**

ಪರಿಶಿಷ್ಟ ಜಾತಿಯಲ್ಲಿ ಪ್ರಮುಖವಾಗಿ ಲಂಬಾಣಿ(ಬಂಜಾರ), ಹರಿಜನರು(ಆದಿ ಕರ್ನಾಟಕ), ವಡ್ಡರು(ಬೋವಿ) ಜಾತಿಯ ಜನರನ್ನು ಪರಿಗಣನೆಗೆ ತೆಗೆದುಕೊಂಡಿದ್ದೇನೆ. ಈ ಅಂಶದ ಆಧಾರದ ಮೇಲೆ ಮೂರು ವರ್ಗಗಳನ್ನಾಗಿ ಮಾಡಿ ಅಂತಿಮ ಫಲಿತಾಂಶವನ್ನು ದಾಖಲಿಸಲಾಗಿದೆ.

**ಕೋಷ್ಟಕ ೩.೩ ಕುಟುಂಬಗಳ ಉಪಜಾತಿಯ ವಿವರ.**

| ಕ್ರ ಸಂ | ಉಪಜಾತಿ | ಕುಟುಂಬಗಳು | ಶೇ |
|---|---|---|---|
| ೦೧ | ಲಂಬಾಣಿ | ೯೦ | ೩೩.೩೩ |
| ೦೨ | ಹರಿಜನರು | ೯೦ | ೩೩.೩೪ |
| ೦೩ | ವಡ್ಡರು | ೯೦ | ೩೩.೩೩ |
| ೦೪ | ಒಟ್ಟು | ೨೭೦ | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಲಂಬಾಣಿ ಜನಾಂಗಕ್ಕೆ ಸೇರಿದ ೯೦ ಕುಟುಂಬಗಳನ್ನು ಅಧ್ಯಯನ ಕ್ಷೇತ್ರದ ಸಮೀಕ್ಷೆಗೆ ಒಳಪಡಿಸಲಾಗಿದ್ದು, ೯೦ ಕುಟುಂಬಗಳಲ್ಲಿ ಲಂಬಾಣಿ ಜನಾಂಗದ

ಕುಟುಂಬಗಳು ಶೇ.೩೩.೩೩ರಷ್ಟು, ಹರಿಜನರು ಶೇ.೩೩.೩೪ರಷ್ಟು ಮತ್ತು ವಡ್ಡರು ಶೇ.೩೩.೩೩ರಷ್ಟು ಸಮಾನ್ಯ ಮಾಹಿತಿಯ ಸಂಗ್ರಹಣೆಗಾಗಿ ಒಳಪಡಿಸಿಕೊಳ್ಳಲಾಗಿದೆ. ಪ್ರತಿಶತ ನೂರಕ್ಕೆ ಈ ಮೂರು ಜಾತಿಯ ಜನಾಂಗದವರು ಶೇ.೩೩.೩೩ ರಷ್ಟಿರುವುದು ಕಂಡುಬಂದಿದೆ.

**೩.೨.೩ ವೈವಾಹಿಕ ಸ್ಥಿತಿಗತಿಗಳು**

ಕುಟುಂಬಗಳ ಮಹಿತಿದಾರರು ನೀಡುವ ಮಾಹಿತಿಗಳು ಅವರ ವೈವಾಹಿಕ ಬದುಕಿನ ಸ್ಥಿತಿಗತಿಗಳನ್ನು ಅವಲಂಬನೆಗೊಂಡಿರುತ್ತವೆ. ಅದರಿಂದ ವೈವಾಹಿಕ ಬದುಕಿನ ಸ್ಥಿತಿಗತಿಗಳು ಅಧ್ಯಯನದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ವೈವಾಹಿಕ ಸ್ಥಿತಿಗತಿಗಳಲ್ಲಿ ೩ ವರ್ಗಗಳನ್ನು ಮಾಡಲಾಗಿದೆ. ವಿವಾಹಿತರು, ವಿಧವೆಯರ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ ೩.೪ ಕುಟುಂಬ ವೈವಾಹಿಕ ವಿವರ.**

| ಕ್ರಸಂ | ವೈವಾಹಿಕ ಅಂತಸ್ತು | ವೈವಾಹಿತ ಪ್ರಮಾಣ | ಶೇ |
|---|---|---|---|
| ೦೧ | ವಿವಾಹಿತರು | ೩೪೭ | ೪೪.೧೧ |
| ೦೨ | ಅವಿವಾಹಿತರು | ೩೧೨ | ೪೦.೨೨ |
| ೦೩ | ವಿಧವೆಯರು | ೧೧೭ | ೧೫.೦೭ |
| | **ಒಟ್ಟು** | **೨೨೬** | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಒಟ್ಟು ೨೭೦ ಕುಟುಂಬಗಳಿಗೆ ಅನ್ವಯವಾಗುವಂತೆ ಪ್ರತಿಶತ ಶೇ.೪೪.೭೧ರಷ್ಟು ಸದಸ್ಯರು ವಿವಾಹಿತರಾಗಿದ್ದು, ಶೇ.೪೦;೨೦ರಷ್ಟು ಕುಟುಂಬದ ಸದಸ್ಯರು ಅವಿವಾಹಿತರಾಗಿದ್ದಾರೆ. ವಿಧವೆಯರು ಪ್ರತಿಶತ ಶೇ.೧೫.೦೭ರಷ್ಟು ಇರುವುದು ಕಂಡು ಬರುತ್ತದೆ. ಈ ಕೋಷ್ಟಕದಲ್ಲಿ ವಿವಾಹಿತರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದಾಗಿದೆ.

**೩.೨.೪ ಕುಟುಂಬ ಸದಸ್ಯರ ವಿವರ**

ಹೊಸಪೇಟೆ-ಬಳ್ಳಾರಿ-ಸಂಡೂರು ಗಣಿ ಗ್ರಾಮೀಣ ಪ್ರದೇಶದ ೨೭೦ ಕುಟುಂಬಗಳಲ್ಲಿ ಎಷ್ಟು ಜನ ಅಥವಾ ಸದಸ್ಯರಿದ್ದಾರೆ ಎಂಬುವುದು ಗಣನೆಗೆ ತೆಗೆದುಕೊಳ್ಳಲಾಗಿದೆ. ಸಾಮಾನ್ಯವಾಗಿ ಲಿಂಗದ ಆಧಾರದ ಮೇಲೆ ವಿಂಗಡಿಸಿ ಈ ೨೭೦ ಕುಟುಂಬಗಳಲ್ಲಿರವ ಒಟ್ಟು ಸದಸ್ಯರ ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ: ೩.೫ ಕುಟುಂಬ ಸದಸ್ಯರ ವಿವರ**

| ಕ್ರ ಸಂ | ಲಿಂಗ | ಕುಟುಂಬ ಸದಸ್ಯರ ಪ್ರಮಾಣ | ಶೇ |
|---|---|---|---|
| ೦೧ | ಹೆಣ್ಣು | ೭೭೮ | ೪೮.೧೪ |
| ೦೨ | ಗಂಡು | ೮೩೯ | ೫೧.೮೬ |
| | **ಒಟ್ಟು** | ೧,೬೧೬ | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ೨೭೦ ಕುಟುಂಬಗಳ ಸದಸ್ಯರ ಪ್ರಮಾಣವನ್ನು ಲಿಂಗ ಆಧಾರದ ಮೇಲೆ ತಿಳಿಸಲಾಗಿದೆ. ೨೭೦ ಕುಟುಂಬಗಳಲ್ಲಿ ೭೭೮ ಮಹಿಳೆಯರ ಪ್ರಮಾಣವಿದ್ದು ಶೇ.೪೮.೧೪ರಷ್ಟಿದ್ದರೆ, ಪುರುಷರು ೮೩೮ ಪ್ರಮಾಣದಲ್ಲಿದ್ದು ಶೇ.೫೧.೮೬ರಷ್ಟಿದ್ದಾರೆ. ಕುಟುಂಬಗಳಲ್ಲಿ ಒಟ್ಟು ೧,೬೧೬

ಸದಸ್ಯರುಗಳಿದ್ದು ಶೇ.೧೦೦ರಷ್ಟು ಇರುವುದು ಕಂಡು ಬರುತ್ತದೆ. ಇದರಲ್ಲಿ ಮಹಿಳೆಯರ ಪ್ರಮಾಣಕ್ಕಿಂತ ಪುರುಷರ ಪ್ರಮಾಣ ಅಧಿಕವಾಗಿರುವುದು ಕುಟುಂಬಗಳಿಂದ ತಿಳಿದುಕೊಳ್ಳಲಾಗಿದೆ.

### ೩.೨.೫ ಶೈಕ್ಷಣಿಕ ವಿವರ

ವ್ಯಕ್ತಿಯ ಜೀವನದಲ್ಲಿ ಶಿಕ್ಷಣದ ಪಾತ್ರ ಅತಿ ಮೌಲ್ಯವಾದ ಅಂಶವಾಗಿದೆ. ವ್ಯಕ್ತಿಯ ಜ್ಞಾನ, ತಿಳುವಳಿಕೆ, ವ್ಯಕ್ತಿತ್ವ ಬೆಳವಣಿಗೆಯಲ್ಲಿ ಉದ್ಯೋಗಗಳನ್ನು ನಿರ್ವಹಿಸಲು ಸಹಾಯಕವಾಗಿರುತ್ತದೆ. ದೇಶದ ಅಭಿವೃದ್ಧಿ ಜನರ ಶಿಕ್ಷಣದ ಪ್ರಮಾಣವನ್ನು ಅವಲಂಬಿಸಿದ್ದು, ಪ್ರಜಾಪ್ರಭುತ್ವದ ಯಶಸ್ವಿಗೆ ಪ್ರಮುಖ ಕಾರಣ ಶಿಕ್ಷಣವೇ ಅಗಿದೆ. ಕುಟುಂಬಗಳ ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸುವ ಸೂಚಿಯಾಗಿ ಶಿಕ್ಷಣ ಮಟ್ಟವನ್ನು ಬಳಸಿಕೊಳ್ಳಲಾಗಿದೆ. ಒಟ್ಟು ೨೭೦ ಕುಟುಂಬಗಳಲ್ಲಿ ೮೩೮ ಕುಟುಂಬದ ಪುರುಷ ಸದಸ್ಯರಿದ್ದು, ಪ್ರತಿಶತ ಶೇ.೫೧.೮೬ರಷ್ಟು ಕಂಡು ಬಂದಿದೆ. ಮತ್ತು ೭೭೮ ಮಹಿಳಾ ಸದಸ್ಯರಿದ್ದು, ಶೇ ೪೯.೧೪ರಷ್ಟಿದ್ದಾರೆ. ಶೈಕ್ಷಣಿಕವಾಗಿ ೨೭೦ ಕಟುಂಬದ ಸದ್ಯಸರು ೧,೬೧೬ರಷ್ಟಿದ್ದು, ಶೇ.೫೧.೧೮ರಷ್ಟು ಅನಕ್ಷರಸ್ಥರಿದ್ದು, ಶೇ.೪೮.೮೨ರಷ್ಟು ಸಾಕ್ಷರಸ್ಥರಿರುವುದು ಕಂಡುಬಂದಿದೆ. ಸಾಕ್ಷರಸ್ಥರಲ್ಲಿ ೪೬೬ ಪುರುಷರು ಮತ್ತು ೩೨೩ ಮಹಿಳೆಯರಿದ್ದಾರೆ. ಒಟ್ಟು ಪ್ರತಿಶತ ಸಾಕ್ಷರಸ್ಥರ ಪುರುಷರು ಪ್ರಮಾಣ ಶೇ.೫೯.೦೭ರಷ್ಟಿದರೆ, ಮಹಿಳೆಯರು ಶೇ.೪೦.೯೩ರಷ್ಟರುವುದು ಕಂಡುಬಂದಿದೆ. ಸಾಕ್ಷರತೆಯಲ್ಲಿ ಪುರುಷರ ಸಾಕ್ಷರತೆಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೧೮.೧೪ರಷ್ಟು ಕಡಿಮೆ ಇರುವುದು ಶೋಚನಿಯವಾಗಿದೆ. ಹಾಗೆಯೇ ಅನಕ್ಷರಸ್ಥರು ಒಟ್ಟು ೮೨೭ ಕುಟುಂಬ ಸದಸ್ಯರಿದ್ದಾರೆ. ಇದರಲ್ಲಿ ೩೭೮ ಪುರುಷ ಸಂಖ್ಯೆ ಇದ್ದಾರೆ, ೪೪೯ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಪ್ರತಿಶತ ಅನಕ್ಷರಸ್ಥ ಪುರುಷರ ಪ್ರಮಾಣ ಶೇ.೪೫.೭೧ರಷ್ಟಿದರೆ ಮಹಿಳೆಯರು ಶೇ.೫೪.೨೯ರಷ್ಟಿರುವುದು ಗಮನಿಸಬೇಕಾದ ಅಂಶವಾಗಿದೆ. ಅಂದರೆ ಇಲ್ಲಿ ಪುರುಷರಿಗಿಂತ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಅನಕ್ಷರಸ್ಥರು ಇರುವುದು ಗಣಿ ಗ್ರಾಮೀಣ ಪ್ರದೇಶದ ದುಸ್ಥಿತಿಯೇ ಆಗಿದೆ.

### ೩.೨.೬ ಉದ್ಯೋಗ ಮತ್ತು ವರಮಾನ

ಸಮರ್ಪಕ ಮತ್ತು ಫಲದಾಯಕ ಉದ್ಯೋಗದಿಂದ ಉಂಟಾಗುವ ವರಮಾನ ಸೃಷ್ಟಿಯು ಬಡತನವನ್ನು ನಿರ್ಮೂಲನೆ ಮಾಡವ ಅವಶ್ಯಕತೆ ಇದೆ. ಯೋಗ್ಯ ಜೀವನ ಮಟ್ಟವನ್ನು ಒದಗಿಸಲು ವರಮಾನವು ಕೂಡ ಅವಶ್ಯಕವಾದ ಸಂಗತಿಯಾಗಿದೆ. ವರಮಾನ ಮತ್ತು ಉದ್ಯೋಗ ಲಭ್ಯತೆಯ ಪ್ರಮಾಣ ಹೆಚ್ಚಾಗಿದಲ್ಲಿ ಆರ್ಥಿಕ ವ್ಯವಸ್ಥೆಯ ರಚನೆಯಿಂದ ಪ್ರಭಾವಿತವಾಗಿರುತ್ತದೆ. ಈ ರೀತಿಯ ಆರ್ಥಿಕ ರಚನೆಯಿಂದ, ಆರ್ಥಿಕ ಸಬಲವಾಗುತ್ತಿರುವ ಕಾರ್ಮಿಕರ ಶಕ್ತಿಗೆ ಪರ್ಯಾಯ ಉದ್ಯೋಗ ಅವಕಾಶವನ್ನು ಸೃಷ್ಟಿಸಲು ಸಾದ್ಯವಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ವರಮಾನ ಮತ್ತು ಉದ್ಯೋಗ ಲಭ್ಯತೆಯ ಪ್ರಮಾಣ ಕಡಿಮೆ ಆದಲ್ಲಿ, ಆರ್ಥಿಕ ವ್ಯವಸ್ಥೆಯ ರಚನೆಯು ಪ್ರಭಾವಿತವಾಗುವುದಿಲ್ಲ. ಇದರಿಂದ ಅಧಿಕವಾಗುತ್ತಿರುವ ಕಾರ್ಮಿಕ ಶಕ್ತಿಗೆ ಪರ್ಯಾಯ ಉದ್ಯೋಗ ಅವಕಾಶವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಜನರ ಉದ್ಯೋಗ ಮತ್ತು ವರಮಾನವು ತಮ್ಮ ಅವಶ್ಯಕತೆಗಳನ್ನು ನಿರ್ಧರಿಸುವ ಮತ್ತು ಪೂರೈಸುವ ಹಾಗು ತಮ್ಮ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳಲು ಅನುಕೂಲಕರ. ವರಮಾನ ಮತ್ತು ಉದ್ಯೋಗವು ಪರಿಸರ, ಸಾಮಾಜಿಕ ಮತ್ತು ಆರ್ಥಿಕ ಸಂಗತಿಗಳಂತಹ ವೈವಿಧ್ಯಮಯ ಸವಾಲುಗಳನ್ನು ಎದುರಿಸಲು, ಜನರಿಗೆ ಉತ್ತಮ ಜೀವನ ನಡೆಸಲು ಮತ್ತು ಸಮಾಜದಲ್ಲಿ ಸಕ್ರಿಯವಾಗಿ ಭಾಗವಹಿಸಲು ಲಭ್ಯವಿರುವ ಅವಕಾಶವನ್ನು ವಿಸ್ತರಿಸುತ್ತದೆ. ವರಮಾನ ಮತ್ತು ಉದ್ಯೋಗವು ಜನರ ಯೋಗಕ್ಷೇಮವನ್ನು ನಿರ್ಧರಿಸುವ ಮಹತ್ವದ ಅಂಶವಾಗಿದೆ. ವರಮಾನವು ಜನರಲ್ಲಿ ಸಮರ್ಪಕ ಮತ್ತು ನಿರಂತರವಾಗಿ ಉದ್ಯೋಗದಲ್ಲಿ ತೊಡಗಿರಬೇಕು. ಇಲ್ಲವಾದರೆ ಜನರಲ್ಲಿ ನಿರುದ್ಯೋಗ ಉಂಟಾಗಿ ಆದಾಯದಲ್ಲಿ ವೈಪರಿತ್ಯಗಳ ಆಗಿರುವುದು ಕಾಣುತ್ತೇವೆ. ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸಲು ಉದ್ಯೋಗ ಮತ್ತು ವಾರ್ಷಿಕ ಅದಾಯವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಉದ್ಯೋಗದಲ್ಲಿ ೨ ವರ್ಗಗಳನ್ನಾಗಿ ವಿಂಗಡಿಸಿ, ಕುಟುಂಬಗಳಿಂದ ಬಂದಿರುವ ಉತ್ತರವನ್ನು ಈ ಕೋಷ್ಟಕದ ಮೂಲಕ ದಾಖಲಿಸಲಾಗಿದೆ.

**ಕೋಷ್ಟಕ ೩.೬ ಕುಟುಂಬಗಳ ಉದ್ಯೋಗದ ವಿವರ**

| ಕ್ರಸಂ | ಉದ್ಯೋಗ | ಕುಟುಂಬಗಳು | ಶೇ |
|---|---|---|---|
| ೦೧ | ಕೂಲಿ | ೨೦೬ | ೭೬.೨೯ |
| ೦೨ | ವ್ಯವಸಾಯ | ೬೪ | ೨೩.೭೧ |
| | ಒಟ್ಟು | ೨೭೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ಉದ್ಯೋಗವನ್ನು ಅರಿತುಕೊಳ್ಳಲು ೨ ವರ್ಗಗಳನ್ನಾಗಿ ವಿಂಗಡಿಸಲಾಗಿದೆ. ಒಟ್ಟು ೨೭೦ ಕುಟುಂಬಗಳಲ್ಲಿ ೬೪ ಕುಟುಂಬಗಳು ವ್ಯವಸಾಯ ಉದ್ಯೋಗದಲ್ಲಿ ನಿರತರಾಗಿದ್ದು, ಇನ್ನೂ ೨೦೬ ಕುಟುಂಬಗಳು ಕೂಲಿ ಉದ್ಯೋಗದಲ್ಲಿ ನಿರತರಾಗಿದ್ದಾರೆ. ಈ ಕುಟುಂಬಗಳಲ್ಲಿ ಕೂಲಿ ವೃತ್ತಿಯಲ್ಲಿ ಶೇ.೭೬.೨೯ರಷ್ಟಿದರೇ ವ್ಯವಾಸಾಯವನ್ನು ತೊಡಗಿಸಿಕೊಂಡವರು ಶೇ೨೩.೭೧ರಷ್ಟಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ಕುಟುಂಬಗಳು ವೃತ್ತಿಯಲ್ಲಿ ಅಧಿಕವಾಗಿ ಕೂಲಿ ದುಡಿಮೆಯಲ್ಲಿ ತೋಡಗಿರುವುದು ಕಾಣಸಿಗುತ್ತದೆ.

**ಕೋಷ್ಟಕ ೩.೭ ಕುಟುಂಬಗಳ ವಾರ್ಷಿಕ ಅದಾಯದ ವಿವರ**

| ಕ್ರ. ಸಂ | ಆದಾಯ ಮಟ್ಟ | ಕುಟುಂಬಗಳು | ಶೇ |
|---|---|---|---|
| ೦೧ | ೫೦೦೦-೧೦,೦೦೦ | ೪೭ | ೧೭.೪೧ |
| ೦೨ | ೨೦,೦೦೦-೩೦,೦೦೦ | ೫೩ | ೧೯.೬೨ |
| ೦೩ | ೩೦,೦೦೦-೪೦,೦೦೦ | ೫೮ | ೨೧.೪೮ |
| ೦೪ | ೪೦,೦೦೦-೫೦,೦೦೦ | ೬೪ | ೨೩.೭೨ |
| ೦೫ | ೫೦,೦೦ ಕ್ಕಿಂತ ಹೆಚ್ಚು | ೪೮ | ೧೭.೭೭ |
| | ಒಟ್ಟು | ೨೭೦ | ೧೦೦ |

**ಮೂಲ : ಕ್ಷೇತ್ರ ಕಾರ್ಯ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ಕುಟುಂಬಗಳ ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸಲು ವರಮಾನವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಕುಟುಂಬಗಳ ವಾರ್ಷಿಕ ಅದಾಯವನ್ನು ತಿಳಿಯಲು ಒಟ್ಟು ಐದು ವರ್ಗಗಳನ್ನಾಗಿ ವಿಂಗಡಿಸಿ, ಕುಟುಂಬಗಳ ಮಾಹಿತಿದಾರರ ಅಂಕಿ ಅಂಶವನ್ನು ದಾಖಲಿಸಿ ಫಲಿತಾಂಶವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಒಟ್ಟು ೨೭೦ ಕುಟುಂಬಗಳಲ್ಲಿ ೫,೦೦೦ – ೧೦,೦೦೦ವರೆಗೆ ಅದಾಯ ಇರುವ ಕುಟುಂಬಗಳು ಶೇ.೪೭ರಷ್ಟಿದ್ದು, ಪ್ರತಿಶತ ಶೇ.೧೭.೪೧ರಷ್ಟಿದೆ. ೨೦,೦೦೦ – ೩೦,೦೦೦ ರವರೆಗೆ ಅದಾಯವನ್ನು ಗಳಿಸುವ ಕುಟುಂಬಗಳು ೫೩ ಗಳಾಗಿದ್ದು, ಪ್ರತಿಶತ ಶೇ೧೯.೬೨ರಷ್ಟಿದೆ. ೩೦,೦೦೦-೪೦,೦೦೦-ಆದಾಯ ಪಡೆಯುವ ಕುಟುಂಬಗಳು ೫೮ ಇದ್ದು, ಪ್ರತಿಶತ ಶೇ೨೧.೪೮ರಷ್ಟು, ೪೦,೦೦೦-೫೦,೦೦೦ ಆದಾಯ ಗಳಿಕೆಯ ೬೪ ಕುಟುಂಬಗಳು ಪ್ರತಿಶತ ಶೇ೨೩.೭೨ರಷ್ಟು ಹಾಗೂ ೫೦,೦೦೦ಕ್ಕಿಂತ ಹೆಚ್ಚು ಅದಾಯವನ್ನು ಗಳಿಕೆ ಮಾಡುವ ೪೮ ಕುಟುಂಬಗಳಿದ್ದು ಶೇ೧೭.೭೭ ರಷ್ಟಿರುವುದು ಕಂಡು ಬಂದಿದೆ. ಒಟ್ಟಾರೆಯಾಗಿ ಈ ಕೋಷ್ಟಕದಲ್ಲಿ ೪೦,೦೦೦ – ೫೦.೦೦೦ ರವರೆಗೆ ಆದಾಯವನ್ನು ಹೆಂದಿರುವ ಕುಟುಂಬಗಳು ಹೆಚ್ಚಾಗಿದ್ದು, ಪ್ರತಿಶತ ಶೇ.೨೩.೭೨ರಷ್ಟಿದೆ. ಅತ್ಯಂತ ಕಡಿಮೆ ಅಂದರೆ ೫೦,೦೦೦ಕ್ಕಿಂತ ಹೆಚ್ಚು ಆದಾಯವನ್ನು ಗಳಿಕೆ ಮಾಡುವವರು ಕಡಿಮೆ ಮಟ್ಟದ ಕುಟುಂಬಗಳಾಗಿವೆ ಎಂದು ಈ ಕೋಷ್ಟಕದ ಮೂಲಕ ಗಮನಿಸಬಹುದಾಗಿದೆ.

### ೩.೩ ಗಣಿಗಾರಿಕೆಯ ಸಾಮಾಜಿಕ ಪರಿಣಾಮಗಳು

ಗಣಿಗಾರಿಕೆಗೂ ಮತ್ತು ಗ್ರಾಮೀಣ ಜನರ ಬದುಕಿಗೂ ಪೂರಕವಾದ ಸಂಬಂಧ ಹೇಗಿದೆ. ಗಣಿಗಾರಿಕೆಯ ಪೂರ್ವ, ಗಣಿಗಾರಿಕೆ ನಡೆದಾಗ ಮತ್ತು ಗಣಿಗಾರಿಕೆ ಸ್ಥಗಿತತೆಯ ನಂತರ ನಡೆದ ಚಟುವಟಿಕೆಯಿಂದಾಗಿ ಗ್ರಾಮೀಣ ಪ್ರದೇಶಗಳ ಮೇಲಾಗಿರುವ ಪರಿಣಾಮಗಳು ಏನಾಗಿವೆ ಎಂಬುವುದು ವಿವರಿಸುವ ಅಗತ್ಯವಿದೆ. ಗಣಿ ಕೇಂದ್ರಿಕೃತ ಪ್ರದೇಶದಲ್ಲಿ ನಗರಗಳಿಗಿಂತಲೂ ಹೆಚ್ಚು ಪ್ರಭಾವಿತವಾಗಿ ಪರಿಣಾಮ ಬೀರಿರುವಂತದ್ದು, ಸುತ್ತಮುತ್ತಲಿರುವ ಗ್ರಾಮೀಣ ಪ್ರದೇಶದ ಗ್ರಾಮಗಳ ಜನರ ಬದುಕಿನ ಮೇಲೆ ಎಂಬುದು ಅತ್ಯಂತ ಗಮನಾರ್ಹ ಸಂಗತಿಯಾಗಿದೆ. ಹೇಗೆ ಗಣಿಗಾರಿಕೆಗೂ ಮತ್ತು ಗ್ರಾಮೀಣ ಬದುಕಿಗೂ ಸಂಬಂಧವನ್ನು ಕಲ್ಪಿಸಬಹುದು. ಅಂದರೆ ಪ್ರಸ್ತುತ ಕ್ಷೇತ್ರ ಅಧ್ಯಯನವಾದ ಗಣಿ ವಲಯ ಹೊಸಪೇಟೆ, ಬಳ್ಳಾರಿ, ಸಂಡೂರುಗಳ ಒಟ್ಟು ಒಂಭತ್ತು ಗ್ರಾಮೀಣ ಪ್ರದೇಶವನ್ನು ಆಯ್ಕೆಮಾಡಿಕೊಂಡು, ಈ ಗ್ರಾಮೀಣ ಪ್ರದೇಶಗಳ ಆಹಾರ, ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯ, ವಸತಿಗಳ ಮೇಲಾಗಿರುವ ಸಾಮಾಜಿಕ ಪರಿಣಾಮಗಳೇನು? ಎಂಬುವುದರ ಕುರಿತು ವಿಶ್ಲೇಷಣೆ ಮಾಡುವ ಆಶಯವಾಗಿದೆ. ಗಣಿಗಾರಿಕೆಯ ಸಾಮಾಜಿಕ ಪರಿಣಾಮಗಳು ಪೂರ್ವದಲ್ಲಿ ಸ್ವಲ್ಪ ಮಟ್ಟಿಗೆ ಆಗಿರಬಹುದು. ಗಣಿ ಹಾವಳಿಯಾದಾಗ ಅದರ ಪರಿಣಾಮ ಸ್ವಲ್ಪ ಮಟ್ಟಿಗೆ ಮರುಕಳಿಸಿರಬಹುದು. ಆದರೆ ಇಂದು-ಅಂದು ಗಣಿ ಕೇಂದ್ರಿತ ಪ್ರದೇಶದ ಸುತ್ತ ಮುತ್ತಲಿನ ಗ್ರಾಮಗಳ ಮೇಲೆ ಸಾಮಾಜಿಕ ಪರಿಣಾಮಗಳಾಗಿರುವುದು ಸತ್ಯ ಸಂಗತಿಯಾಗಿದೆ. ಈ ಸಾಮಾಜಿಕ ಸಂಗತಿಗಳ ಪರಿಣಾಮಗಳು ಜಿಲ್ಲೆಯ ಸಾಮಾಜಿಕ ಆಯಾಮಗಳೊಂದಿಗೆ ಬೆರೆಸಿ, ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡಂತಹ ಅಥವಾ ಕಟುಂಬಗಳ ಮಾಹಿತಿದಾರರು ನೀಡಿರುವ ಮಾಹಿತಿಯೊಂದಿಗೆ ತುಲನಾತ್ಮಕವಾಗಿ ಹೋಲಿಕೆ ಮಾಡವುದರ ಮೂಲಕ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯ, ವಸತಿಗಳ ಮೇಲಾಗಿರುವ ಪರಿಣಾಮಗಳನ್ನು ಈ ಮೇಲಿನ ಐದು ಸಾಮಾಜಿಕ ಅಯಾಮಗಳ ಆಧಾರದ ಮೇಲೆ ವಿವರಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

#### ೩.೩.೧ ಅಂಗನವಾಡಿ ಶಾಲಾ ಮಕ್ಕಳು ಮತ್ತು ಕುಟುಂಬಗಳ ಪ್ರಮಾಣ

ಗಣಿ ಕೇಂದ್ರಿತ ಪ್ರದೇಶದ ಸುತ್ತಮುತ್ತಲಿರುವ ೯ ಗ್ರಾಮಗಳ ೨೭೦ ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ಕ್ಷೇತ್ರಕಾರ್ಯದ ಅಂಕಿ ಆಂಶಗಳನ್ನು ದಾಖಲಿಸಲಾಗಿದೆ. ಅಂಗನವಾಡಿಗೆ ಕುರಿತಂತೆ ನಿಮ್ಮ ಊರಿನಲ್ಲಿ ಅಂಗವಾಡಿ ಶಾಲೆ ಇದೆಯೇ ಎಂಬ ಪ್ರಶ್ನೆಗೆ ೨೭೦ ಕುಟುಂಬಗಳಲ್ಲಿ ೨೭೦ ಕುಟುಂಬಗಳು ಇದೆ ಎಂಬ ಉತ್ತರವನ್ನು ನೀಡಿದ್ದಾರೆ. ಅಂದರೆ ಜಿಲ್ಲೆಯಲ್ಲಿ ಆಯ್ಕೆ ಮಾಡಿಕೊಂಡ ಗಣಿ ವಲಯ ತಾಲ್ಲೂಕುಗಳಲ್ಲಿ ಪ್ರತಿಶತ ಶೇ.೧೦೦ರಷ್ಟು ಅಂಗನವಾಡಿ ಶಾಲೆಗಳು ಗ್ರಾಮೀಣ ಪ್ರದೇಶದಲ್ಲಿರುವುದು ಕಂಡುಬಂದಿದೆ. ಈ ಅಂಕಿ-ಅಂಶವನ್ನು ಗಣಿ ವಲಯಗಳಾದ ಬಳ್ಳಾರಿ, ಹೊಸಪೇಟೆ, ಸಂಡೂರು, ತಾಲ್ಲೂಕುವಾರು ಕುಟುಂಬಗಳ ಮಾಹಿತಿ ಆಧಾರದ ಮೂಲಕ ಕೋಷ್ಟಕ ೩.೮ ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ ೩.೮ ಅಂಗನವಾಡಿ ಶಾಲೆ ವಿವರ**

| ಕ್ರಸಂ | ಪ್ರಶ್ನೆ | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | | ಹೊಸಪೇಟೆ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಅಂಗನವಾಡಿ ಶಾಲೆ ಇದೆಯಾ | | | | | | |
| | ಹೌದು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| | ಇಲ್ಲ | - | - | - | - | - | - |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ

**(ಸೂಚನೆ: ಗಣಿ ವಲಯಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕುಗಳ ಒಟ್ಟು ೯ ಗ್ರಾಮಗಳಿಗೆ ಸೀಮಿತವಾದ ಕ್ಷೇತ್ರಕಾರ್ಯದ ಅಂಕಿ-ಅಂಶಗಳನ್ನು ಪರಿಗಣಿಸಲಾಗಿದೆ).**

ಕೋಷ್ಟಕ ೩.೮ರಲ್ಲಿ ಒಟ್ಟು ೨೭೦ ಕುಟುಂಬಗಳಲ್ಲಿ ಸಂಡೂರು ತಾಲ್ಲೂಕಿನ ೯೦ ಕುಟುಂಬಗಳು ಅಂಗವಾಡಿ ಶಾಲೆ ಇದೆ. ಹೊಸಪೇಟೆ ತಾಲ್ಲೂಕಿನ ೯೦ ಕುಟುಂಬಗಳು ಶೇ.೧೦೦ರಷ್ಟು ಅಂಗನವಾಡಿ ಶಾಲೆ ಇದೆ ಎಂದೂ, ಬಳ್ಳಾರಿ ತಾಲ್ಲೂಕಿನ ೯೦ ಕುಟುಂಬಗಳು ಅಂಗನವಾಡಿ ಶಾಲೆ ಇರುವುದು ಕಂಡು ಬಂದಿದೆ. ಪ್ರತಿಶತವಾಗಿ ಈ ಮೂರು ವಲಯದ ಗ್ರಾಮೀಣ ಪ್ರದೇಶದಲ್ಲಿ ಶೇ.೧೦೦ರಷ್ಟಿದ್ದು, ಅಂಗನವಾಡಿ ಶಾಲೆಯು ಊರ ಒಳಗಿರುವ ಮಾಹಿತಿಯನ್ನು ಸೂಚಿಸಿದ್ದಾರೆ. ಅಂದರೆ ಅಂಗನವಾಡಿ ಶಾಲೆ ಪ್ರತಿಶತ ಶೇ.೧೦೦ರಷ್ಟು ಊರಿನ ಒಳಗೆ ಇರುವುದು ಕಂಡುಬರುತ್ತದೆ. ನಿಮ್ಮ ಮಕ್ಕಳು ಅಂಗನವಾಡಿ ಶಾಲೆಗೆ ಹೋಗ್ತಾರಾ ಎಂಬ ಪ್ರಶ್ನೆಯನ್ನು ಕೇಳಿದಾಗ ಕುಟುಂಬಗಳು ನೀಡಿರುವ ಮಾಹಿತಿಯನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

**ಕೋಷ್ಟಕ ೩.೮.೧ ಅಂಗನವಾಡಿ ಶಾಲೆಗೆ ಹೋಗುವ ಕುಟುಂಬಗಳ ಮಕ್ಕಳ ಪ್ರಮಾಣ**

| ಕ್ರಸಂ. | ಪ್ರಶ್ನೆ | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | | ಹೊಸಪೇಟೆ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಮಕ್ಕಳು ಅಂಗನವಾಡಿ ಶಾಲೆಗೆ ಹೋಗುತ್ತಾರೆಯೇ? | | | | | | |
| | ಹೌದು | ೬೩ | ೭೦ | ೭೦ | ೭೭.೭೨ | ೬೯ | ೭೬.೬೬ |
| | ಇಲ್ಲ | ೨೭ | ೩೦ | ೨೦ | ೨೨.೭೮ | ೨೧ | ೨೩.೩೪ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೩.೮.೧ರಲ್ಲಿ ಗಣಿ ವಲಯಗಳಾದ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕುಗಳ ಅಂಗನವಾಡಿ ಶಾಲೆಗೆ ಹೋಗುವ ಕುಟುಂಬಗಳ ಮಕ್ಕಳ ಪ್ರಮಾಣದ ಅಂಕಿ ಅಂಶಗಳನ್ನು ದಾಖಲಿಸಲಾಗಿದೆ. ಸಂಡೂರು ತಾಲ್ಲೂಕಿನ ೯೦ ಕುಟುಂಬಗಳಲ್ಲಿ ೬೩ ಕುಟುಂಬಗಳ ಮಕ್ಕಳು ಅಂಗನವಾಡಿ ಶಾಲೆಗೆ ಹೋಗುತ್ತಿದ್ದು, ಶೇ.೭೦ರಷ್ಟಿದ್ದಾರೆ. ಇನ್ನುಳಿದ ೨೭ ಕುಟುಂಬಗಳ ಮಕ್ಕಳು ಅಂಗನವಾಡಿ ಶಾಲೆಗೆ ಹೋಗುತ್ತಿಲ್ಲ. ಅಂಗನವಾಡಿ ಶಾಲೆಗೆ ಹೋಗದಿರುವ ಮಕ್ಕಳ ಪ್ರಮಾಣ ಶೇ.೩೦ರಷ್ಟು ಕುಟುಂಬಗಳಲ್ಲಿ ಕಾಣಸಿಗುತ್ತದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೭೦ ಕುಟುಂಬಗಳ ಮಕ್ಕಳು ಅಂಗನವಾಡಿ ಶಾಲೆಗೆ ಹೋಗುತ್ತಿದ್ದು, ಶೇ.೭೭.೭೨ರಷ್ಟಿದ್ದರೆ, ಇನ್ನು ಅಂಗನವಾಡಿ ಶಾಲೆಗೆ ಶೇ೨೨.೭೮ರಷ್ಟು ಮಕ್ಕಳು ಹೋಗದಿರುವ ೨೦ ಕುಟುಂಬಗಳಾಗಿವೆ. ಸಂಡೂರು ತಾಲ್ಲೂಕಿನ ಗ್ರಾಮಿಣ ಪ್ರದೇಶದ ಮಕ್ಕಳು ಅಂಗನವಾಡಿ ಶಾಲೆಗೆ ಹೋಗುವ ಪ್ರಮಾಣ ೬೯ ಕುಟುಂಬಗಳಲ್ಲಿ ಶೇ೭೬.೬೬ ರಷ್ಟಿದರೆ, ಅಂಗನವಾಡಿ ಶಾಲೆಗೆ ಹೋಗದೆ ಇರುವ ಮಕ್ಕಳ ಪ್ರಮಾಣ ೨೧ ಕುಟುಂಬಗಳಲ್ಲಿ ಶೇ.೨೩.೩೪ರಷ್ಟು ಇರುವುದು ಕಂಡುಬರುತ್ತದೆ. ಒಟ್ಟಾರೆ ಹೊಸಪೇಟೆ-ಸಂಡೂರು-ಬಳ್ಳಾರಿ ಗ್ರಾಮೀಣ ಪ್ರದೇಶದಲ್ಲಿ ಅಂಗನವಾಡಿ ಶಾಲೆಗೆ ಹೋಗುವ ಕುಟುಂಬಗಳ ಪ್ರಮಾಣ ಶೇ.೭೭.೭೨ರಷ್ಟು ಬಳ್ಳಾರಿ ವಲಯದಲ್ಲಿ ಅಧಿಕವಾಗಿರುವುದು ಗೋಚರಿಸುವ

ಅಂಶವಾಗಿದೆ. ಹೌದಾದರೆ ಅಂಗನವಾಡಿ ಶಾಲೆಗೆ ಹೋಗುವ ಕುಟುಂಬಗಳಲ್ಲಿ ಮಕ್ಕಳ ಪ್ರಮಾಣವೆಷ್ಟು? ಎಂಬ ಪ್ರಶ್ನೆ ಕೇಳಿದಾಗ ಕುಟುಂಬಗಳು ನೀಡಿರುವ ಅಂಕಿ-ಅಂಶಗಳನ್ನು ಕೋಷ್ಟಕ ೩.೮.೧ರಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೩.೮.೨ ಅಂಗನವಾಡಿ ಶಾಲೆಗೆ ದಾಖಲಾಗಿರುವ ಮಕ್ಕಳ ಪ್ರಮಾಣ.**

| ಕ್ರಸಂ. | ಲಿಂಗ | ಸಂಡೂರು ತಾಲ್ಲೂಕು | | ಹೊಸಪೇಟೆ ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಮಕ್ಕಳ ಪ್ರಮಾಣ | ಶೇ | ಮಕ್ಕಳ ಪ್ರಮಾಣ | ಶೇ | ಮಕ್ಕಳ ಪ್ರಮಾಣ | ಶೇ |
| ೦೧ | ಗಂಡು | ೪೭ | ೫೬.೬೨ | ೬೦ | ೫೮.೨೮ | ೫೩ | ೫೦.೪೭ |
| ೦೨ | ಹೆಣ್ಣು | ೩೬ | ೪೩.೩೮ | ೪೩ | ೪೧.೭೨ | ೫೨ | ೪೦.೫೮ |
| ಒಟ್ಟು | | ೮೩ | ೧೦೦ | ೧೦೩ | ೧೦೦ | ೧೦೫ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

**(ಸೂಚನೆ: ಗಣಿ ವಲಯ ಹೊಸಪೇಟೆ-ಸಂಡೂರು-ಬಳ್ಳಾರಿ ತಾಲ್ಲೂಕಿನ ಒಟ್ಟು ೯ ಗ್ರಾಮಗಳನ್ನು ಮಾತ್ರ ಪರಿಗಣಿಸಲಾಗಿದೆ)**

ಮೇಲಿನ ಕೋಷ್ಟಕದಲ್ಲಿ ಸಂಡೂರು-ಹೊಸಪೇಟೆ-ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಅಂಗನವಾಡಿ ಶಾಲೆಯಲ್ಲಿ ದಾಖಲಾಗಿರುವ ಮಕ್ಕಳ ಪ್ರಮಾಣವನ್ನು ಸೂಚಿಸುತ್ತದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ವಲಯದಲ್ಲಿ ೮೩ ಮಕ್ಕಳು ಅಂಗನವಾಡಿ ಶಾಲೆಯಲ್ಲಿ ದಾಖಲಾಗಿದ್ದು, ಇದರಲ್ಲಿ ಗಂಡು ಮಕ್ಕಳ ೪೭ ಸಂಖ್ಯೆಯಲ್ಲಿದ್ದರೆ, ಹೆಣ್ಣು ಮಕ್ಕಳು ೩೬ ಸಂಖ್ಯೆಯಲ್ಲಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ ಶೇ.೫೬.೬೨ರಷ್ಟು ಗಂಡು ಮಕ್ಕಳು ಅಂಗನವಾಡಿ ಶಾಲೆಯಲ್ಲಿ ದಾಖಾಲಾಗಿದ್ದು, ಹೆಣ್ಣು ಮಕ್ಕಳು ಶೇ.೪೩.೩೮ರಷ್ಟು ಅಂಗನವಾಡಿ ಶಾಲೆಯಲ್ಲಿ ದಾಖಲಾಗಿರುವ ಅಂಶ ಕಂಡು ಬರುತ್ತದೆ. ಸಂಡೂರು ತಾಲ್ಲೂಕಿನ ೯೦ ಕುಟುಂಬಗಳ ಲಿಂಗದ ಪ್ರಮಾಣವನ್ನು ಗಮನಿಸಿದಾಗ ಗಂಡು ಮಕ್ಕಳ ದಾಖಲಾತಿಯ ಪ್ರಮಾಣಕ್ಕಿಂತ ಹೆಣ್ಣು ಮಕ್ಕಳ ದಾಖಲಾತಿಯು ಶೇ.೧೩ರಷ್ಟು ಕಡಿಮೆಯಾಗಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ಅಂಗನವಾಡಿ ಶಾಲೆಯಲ್ಲಿ ದಾಖಲಾದ ಮಕ್ಕಳು ೧೦೩ ಆಗಿದೆ. ಇದರಲ್ಲಿ ಗಂಡು ಮಕ್ಕಳ ದಾಖಲಾತಿಯ ಪ್ರಮಾಣ ೬೦ರಷ್ಟು ಹೆಣ್ಣು ಮಕ್ಕಳು ೩೦ ರಷ್ಟು, ದಾಖಲಾಗಿರುತ್ತರೆ. ಪ್ರತಿಶತವಾಗಿ ಈ ತಾಲ್ಲೂಕಿನಲ್ಲಿ ಗಂಡು ಮಕ್ಕಳ ದಾಖಲಾತಿ ಶೇ.೫೮.೨೮ರಷ್ಟು, ಹೆಣ್ಣು ಮಕ್ಕಳ ದಾಖಲಾತಿ ಶೇ.೪೧.೭೨ರಷ್ಟಿದೆ. ಈ ವಲಯದ ಅಂಗನವಾಡಿ ಶಾಲೆಯಲ್ಲಿ ದಾಖಲಾಗಿರುವ ಪ್ರಮಾಣವು ಗಂಡು ಮಕ್ಕಳ ದಾಖಲಾತಿಗಿಂತಲೂ ಶೇ.೧೬.೦೫ರಷ್ಟು ಹೆಣ್ಣು ಮಕ್ಕಳ ದಾಖಲಾತಿಯ ಪ್ರಮಾಣ ಕಡಿಮೆ ಇರುವುದು ಗಮನಿಸಬಹುದಾಗಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ಈ ಅಂನವಾಡಿ ಶಾಲೆಯಲ್ಲಿ ೯೦ ಕುಟುಂಬಗಳಲ್ಲಿ ದಾಖಲಾಗಿರುವ ಒಟ್ಟು ಮಕ್ಕಳ ಸಂಖ್ಯೆ ೧೦೫ ರಷ್ಟಿದೆ. ಇದರಲ್ಲಿ ಗಂಡು ಮಕ್ಕಳು ೫೩ ಸಂಖ್ಯೆಯಲ್ಲಿದ್ದರೇ ಹೆಣ್ಣು ಮಕ್ಕಳ ಸಂಖ್ಯೆಯಲ್ಲಿದ್ದಾರೆ. ಪ್ರತಿಶತ ಶೇ.೫೦.೪೭ ರಷ್ಟು ಗಂಡು ಮಕ್ಕಳು ಅಂಗನವಾಡಿ ಶಾಲೆಗೆ ದಾಖಲಾಗಿದ್ದರೆ, ಶೇ.೪೦.೫೨ರಷ್ಟು ಹೆಣ್ಣು ಮಕ್ಕಳು ಅಂಗನವಾಡಿ ಶಾಲೆಯಲ್ಲಿ ದಾಖಲಾಗಿರುತ್ತಾರೆ. ಒಟ್ಟಾರೆಯಾಗಿ ಮೂರು ವಲಯದ ತಾಲ್ಲೂಕುಗಳ ಅಂಗನವಾಡಿ ಶಾಲೆಗೆ ದಾಖಲಾಗಿರುವ ಹೆಣ್ಣು ಮಕ್ಕಳ ಪ್ರಮಾಣ ಕಡಿಮೆ ಇರುವುದು ಕೋಷ್ಟಕದಲ್ಲಿ ಕಾಣಸಿಗುತ್ತದೆ. ಹೆಣ್ಣು ಮಕ್ಕಳ ಪ್ರಮಾಣ ಕಡಿಮೆ ಇರುವುದು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಪರಿಸ್ಥಿತಿ ಶೋಚನಿಯವಾಗಿದೆ ಎಂದು ಹೇಳಬಹುದು.

### ೩.೩.೨ ಶಿಕ್ಷಣದ ಪರಿಣಾಮ

ಬಳ್ಳಾರಿ ಜಿಲ್ಲೆ ರಾಜ್ಯದ ಸಾಕ್ಷರತೆಯ ಸರಾಸರಿ ಮಟ್ಟಕ್ಕಿಂತ ಹಿಂದುಳಿದ ಜಿಲ್ಲೆಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಗಣಿಗಾಕೆಯಿಂದಾಗಿ ಶಿಕ್ಷಣದ ಮೇಲೆ ಪರಿಣಾಮಗಳು ಬೀರಿವೆ. ಈ ಗಣಿಕೇಂದ್ರಿತ ಪ್ರದೇಶದಲ್ಲಿರುವ ಕುಟುಂಬಗಳು ನೀಡಿರುವ ಮಾಹಿತಿಯ ಅಧಾರದ ಮೇಲೆ ಅಂಗನವಾಡಿ ಶಾಲೆ, ಶಾಲಾಬಿಟ್ಟ ಮಕ್ಕಳ ಪ್ರಮಾಣ, ಶಾಲಾ ದಾಖಲೆ ಪ್ರಮಾಣ, ವರ್ಗಾವಣೆಯ ಪ್ರಮಾಣ ಮತ್ತು ಅನಕ್ಷರಸ್ಥರ ಅಂಕಿ ಅಂಶಗಳನ್ನು ದಾಖಲಿಸಲಾಗಿದೆ. ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳಲ್ಲಿ ಸಂಗ್ರಹಿಸಿದ ದತ್ತಾಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಗಣಿ ಗ್ರಾಮೀಣ ಪ್ರದೇಶದ ೨೭೦ ಕುಟುಂಬಗಳಲ್ಲಿ ೮೨೭ ಕುಟುಂಬದ ಸದಸ್ಯರು ಅನಕ್ಷರಸ್ಥರಾಗಿದ್ದು, ಪ್ರತಿಶತ ಶೇ ೫೧.೧೮ರಷ್ಟು ಮತ್ತು ೭೮೯ ಸಾಕ್ಷರಸ್ಥರಿದ್ದು, ಶೇ.೪೮.೮೨ರಷ್ಟಿರುವುದು ಕಂಡುಬಂದಿದೆ. ಒಟ್ಟಾರೆಯಾಗಿ ೨೭೦ ಕುಟುಂಬಗಳಲ್ಲಿ ಶೇ.೫೧.೧೮ರಷ್ಟು ಅನಕ್ಷರಸ್ಥರಿದ್ದು, ಶೇ.೪೮.೮೨ರಷ್ಟು ಸಾಕ್ಷರಸ್ಥರು ಇರುವುದು ಕಂಡುಬಂದಿದೆ. ಸಾಕ್ಷರಸ್ಥರಲ್ಲಿ ೪೬೬ ಪುರುಷರು ಮತ್ತು ೩೨೩ ಮಹಿಳೆಯರಿದ್ದಾರೆ. ಒಟ್ಟು ಪ್ರತಿಶತ ಸಾಕ್ಷರಸ್ಥ ಪುರುಷರ ಪ್ರಮಾಣ ಶೇ.೫೯.೦೬ರಷ್ಟಿದರೆ, ಮಹಿಳೆಯರು ಶೇ.೪೦.೯೪ರಷ್ಟರುವುದು ಕಂಡು ಬಂದಿದೆ. ಸಾಕ್ಷರತೆಯಲ್ಲಿ ಪುರುಷರ ಸಾಕ್ಷರತೆಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೧೯ರಷ್ಟು ಕಡಿಮೆ ಇರುವುದು ಶೋಚನಿಯವಾಗಿದೆ. ಹಾಗೆಯೇ ಅನಕ್ಷರಸ್ಥರು ಒಟ್ಟು ೮೨೭ ಕುಟುಂಬ ಸದಸ್ಯರಿದ್ದಾರೆ. ಇದರಲ್ಲಿ ೩೭೮ ಪುರುಷ ಸಂಖ್ಯೆ ಇದ್ದರೆ, ೪೪೯ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಪ್ರತಿಶತ ಅನಕ್ಷರಸ್ಥ ಪುರುಷರ ಪ್ರಮಾಣ ಶೇ.೪೫.೭೧ರಷ್ಟಿದರೆ,ಮಹಿಳೆಯರು ಶೇ.೫೪.೨೯ರಷ್ಟಿರುವುದು ಗಮನಿಸಬೇಕಾದ ಅಂಶವಾಗಿದೆ.

### ೩.೩.೩ ಶಾಲಾ ವಂಚಿತ ಮಕ್ಕಳ ಪ್ರಮಾಣ

ಶಾಲೆಯನ್ನು ಮಧ್ಯದಲ್ಲೇ ಬಿಡುವ ಮಕ್ಕಳನ್ನು ಅಭಿವೃದ್ಧಿಯಿಂದ ವಂಚಿತರಾದವರೆಂದು ಪರಿಗಣಿಸಲಾಗುತ್ತದೆ. ಇದು ಬಡತನದ ಮತ್ತೊಂದು ಮುಖವಾಗಿದೆ. ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ಸಾಕಷ್ಟು ಅನುಕೂಲಗಳನ್ನು ಒದಗಿಸಲಾಗಿದ್ದರೂ ಶಿಕ್ಷಣದಲ್ಲಿ ಅಭೂತ ಪೂರ್ವವಾದ ಸುಧಾರಣೆಗಳು ನಡೆದಿವೆ. ಅದರೂ ಶಾಲೆಯನ್ನು ಮಧ್ಯದಲ್ಲೇ ಬಿಟ್ಟ ಮಕ್ಕಳ ಪ್ರಮಾಣ ಅಧಿಕವಾಗಿ ವರಮಾನಕ್ಕೆ ಭಿನ್ನವಾದ ಸಮಸ್ಯೆಗಳು ಇಲ್ಲಿ ನಾವು ಪೂರೈಕೆ ನೆಲೆಯಿಂದ ಸಮಸ್ಯೆಯನ್ನು ನಿರ್ವಹಿಸುವಂತೆ ಕಾಣುತ್ತದೆ. ಶಾಲಾ ಶಿಕ್ಷಣಕ್ಕೆ ಬೇಕಾಗಿರುವ ಕಟ್ಟಡ ನಿರ್ಮಾಣ, ಶಿಕ್ಷಕ ನೇಮಕಾತಿ, ಪಠ್ಯ ಪುಸ್ತಕಗಳು, ಸಮವಸ್ತ್ರಗಳು, ಮಧ್ಯಾಹ್ನದ ಬಿಸಿಯೂಟ ಮುಂತಾದವುಗಳು ಉಚಿತವಾಗಿ ನೀಡಲಾಗುತ್ತಿದ್ದರೂ, ಮಕ್ಕಳು ಶಾಲೆಗೆ ಬರುತ್ತಿಲ್ಲ ಎಂಬ ಸಮಸ್ಯೆಯು ನಮ್ಮ ನಿಮ್ಮ ಮುಂದಿರುವ ಪ್ರಶ್ನೆಯೇ ಆಗಿದೆ. ಆದರೂ ಒದಗಿಸಿದ ಸವಲತ್ತು, ಸೌಲಭ್ಯ ಧಾರಣೆ ಮಾಡಿಕೊಳ್ಳುವ, ಧಕ್ಕಿಸಿಕೊಳ್ಳುವ ಸಾಮರ್ಥ್ಯ ಪಾಲಕರಿಗೆ ಇದೆಯೇ ಎಂಬ ಪ್ರಶ್ನೆ ಇಲ್ಲಿ ಮುಖ್ಯಾವಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ ಅಗತ್ಯಾವಾದ ಸೌಲಭ್ಯಗಳನ್ನು ಒದಗಿಸಿರುವುದು ಸರಿ. ಆದರೆ ಪಾಲಕರು ತಮ್ಮ ಮಕ್ಕಳನ್ನು ತಮ್ಮಷ್ಟಕ್ಕೆ ತಾವು ಶಿಕ್ಷಣವನ್ನು ಒದಗಿಸುವ ಸ್ವಾತಂತ್ರ್ಯವನ್ನು ಪಡೆಯುವಂತೆ ಮಾಡುವುದು ಅಗತ್ಯವಾಗಿದೆ. ಎಲ್ಲಿಯವರೆಗೆ ಬಡ ಕುಟುಂಬಗಳ ಪಾಲಕರು ಶಿಕ್ಷಣವನ್ನು ಅಗ್ರಹ ಮಾಡಿ ಪಡೆಯಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳ ಸಂಖ್ಯೆ ಸಮಸ್ಯೆಗಳು ಹಾಗೂ ಶಾಲೆ ಸೇರಿದ ಮಕ್ಕಳ ಸಮಸ್ಯೆ ಮುಂದುವರಿಯುತ್ತಾ ಇರುತ್ತದೆ. ಎಲ್ಲಾ ಶಾಲೆಯಲ್ಲಿ ಮಕ್ಕಳು ಪಡೆಯುವ ದಾಖಲಾತಿ ಹಾಗೂ ಪ್ರವೇಶದಿಂದ ಕಲಿಕೆಯನ್ನು ದೃಡಪಡಿಸಿಕೊಳ್ಳಲು ಆಗುವುದಿಲ್ಲ. ಶಾಲೆಗಳಲ್ಲಿ ಮಕ್ಕಳ ನಿಯಮಿತ ಹಾಜರಾತಿಯು ಮುಖ್ಯವಾಗಿದೆ. ಮಕ್ಕಳು ಶಾಲೆಯನ್ನು ಮಧ್ಯದಲ್ಲೆ ಬಿಡಬಾರದು ಮತ್ತು ಮುಂದಿನ

ಶ್ರೇಣಿಗೆ ಹೋಗುವಂತಿರಬೇಕು. ಈ ಸಂದರ್ಭದಲ್ಲಿ ಶಾಲೆ ಬಿಟ್ಟ ಮತ್ತು ಶಾಲೆಯಿಂದ ಹೊರಗುಳಿವ ಮಕ್ಕಳ ಪ್ರಮಾಣವನ್ನು ಸರಿಯಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಅಂತಹ ಮಕ್ಕಳ ಗುರುತಿಸಿ ಶಾಲೆಯಲ್ಲಿ ಉಳಿಸಿಕೊಳ್ಳುವ ಸೂಕ್ತವಾದ ನೀತಿಯನ್ನು ರಚಿಸಲು ಸಹಾಯ ಮಾಡುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಶಾಲೆಯಿಂದ ಹೊರಗಿರುವ ಮಕ್ಕಳ ಪ್ರಮಾಣ ಮತ್ತು ಶಾಲೆಯಿಂದ ಹೊರಗಿರುವ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳುವ ದತ್ತಾಂಶವನ್ನು ಕೋಷ್ಟಕ ೩.೯ರಲ್ಲಿ ನೀಡಲಾಗಿದೆ.

**ಕೋಷ್ಟಕ ೩.೯ ಪ್ರಾಥಮಿಕ ಮತ್ತು ಪೌಢ ಶಿಕ್ಷಣದಲ್ಲಿ ಮಧ್ಯದಲ್ಲೇ ಶಾಲಾ ಬಿಟ್ಟ ಮಕ್ಕಳ ವಿವರ (೨೦೧೧-೧೨)**

| ತಾಲ್ಲೂಕು | ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಯನ್ನು ಮದ್ಯದಲ್ಲೆ ಬಿಟ್ಟ ಮಕ್ಕಳ ದರ | ಪ್ರೌಢ ಶಿಕ್ಷಣದಲ್ಲಿ ಶಾಲೆಯನ್ನು ಮಧ್ಯದಲ್ಲೇ ಬಿಟ್ಟ ಮಕ್ಕಳ ದರ | ಶಾಲೆಗೆ ತರಲ್ಪಟ್ಟು, ಶಾಲೆ ಬಿಟ್ಟ ಮಕ್ಕಳ ಶೇಕಡವಾರು ಪ್ರಾಥಮಿಕ/ಪ್ರೌಢ |
|---|---|---|---|
| ಬಳ್ಳಾರಿ | ೧.೭೧ | ೨೬.೦೩ | ೭೯.೩೧ |
| ಹೊಸಪೇಟೆ | ೫.೮೪ | ೨೯.೩೧ | ೭೫.೬೬ |
| ಸಂಡೂರು | ೨.೦೦ | ೩೧.೪೧ | ೫೭.೨೭ |
| ಹಡಗಲಿ | ೨.೫ | ೧೮.೧೯ | ೬೧.೫೪ |
| ಹೆಚ್.ಬಿ.ಹಳ್ಳಿ | ೫.೭೪ | ೩೦.೦೮ | ೮೫.೫೪ |
| ಕೂಡ್ಲಿಗಿ | ೨.೮೯ | ೨೧.೬೪ | ೮೧.೨೭ |
| ಸಿರುಗುಪ್ಪ | ೭.೩೯ | ೪೯.೬೬ | ೭೬.೪೭ |
| ಜಿಲ್ಲಾ ಒಟ್ಟು | **೩.೩೯** | **೨೯.೫೭** | **೭೩.೬೮** |

**ಮೂಲ : ಜಿಲ್ಲಾ ಮಾನವ ಅಭಿವೃದ್ಧಿ ವರದಿ ೨೦೧೪**

ಕೋಷ್ಟಕ ೩.೯ರಲ್ಲಿ ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಟ್ಟವರ ಪ್ರಮಾಣ ಶೇ ೩.೩೯ರಷ್ಟಿರುವುದು ಗಮನಿಸಬಹುದು. ಆದಾಗ್ಯೂ ತಾಲ್ಲೂಕುಗಳಲ್ಲಿ ದೊಡ್ಡ ಪ್ರಮಾಣದ ಏರಿಳಿತವಿದೆ. ಪ್ರಾಥಮಿಕ ಹಂತದಲ್ಲಿ ಅತಿ ಹೆಚ್ಚಿನ ಪ್ರಮಾಣದ ಶಾಲೆ ಬಿಟ್ಟವರು ಶೇ.೭.೩ ರೊಂದಿಗೆ ಸಿರುಗುಪ್ಪ ತಾಲ್ಲೂಕಿನಲ್ಲಿ ಕಂಡು ಬರುತ್ತಾರೆ. ನಂತರದ ಸ್ಥಾನದಲ್ಲಿ ಕ್ರಮವಾಗಿ ಹೊಸಪೇಟೆ ಶೇ.೫.೮೪ರಷ್ಟು ಹಾಗೂ ಎಚ್.ಬಿ. ಹಳ್ಳಿ ಶೇ.೫.೭೪ರಷ್ಟು ಕಂಡುಬರುತ್ತದೆ. ಶೇ.೧.೧೭ ರೊಂದಿಗೆ ಬಳ್ಳಾರಿ ತಾಲ್ಲೂಕು ಕೊನೆಯ ಸ್ಥಾನದಲ್ಲಿರುವುದು ಗೋಚರಿಸುತದೆ. ಫ್ರೌಡ ಶಾಲಾ ಬಿಟ್ಟ ಮಕ್ಕಳ ಪ್ರಮಾಣ ಬಳ್ಳಾರಿ ಜಿಲ್ಲೆಯಲ್ಲಿ ಶೇ ೨೯.೫೭ ರೊಂದಿಗೆ ಅತಿ ಹೆಚ್ಚಿನ ಪ್ರಮಾಣವಿದೆ. ಅದೇ ರೀತಿ ಫ್ರೌಡ ಶಾಲಾ ಹಂತದಲ್ಲಿ ಶೇ.೪೯.೬೬ರಷ್ಟು ಸಿರುಗುಪ್ಪ ತಾಲ್ಲೂಕಿನಲ್ಲಿ ಅಧಿಕ ಪ್ರಮಾಣದ ಮಕ್ಕಳು ಶಾಲೆಯನ್ನು ಮಧ್ಯದಲೇ ಬಿಟ್ಟಿದ್ದಾರೆ. ಹಡಗಲಿ ತಾಲ್ಲೂಕಿನಲ್ಲಿ ಶೇ.೧೮.೧೯ರಷ್ಟು ಕಡಿಮೆ ಪ್ರಮಾಣದ ಮಕ್ಕಳು ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿರುವುದು ಗಮನಿಸಬಹುದಾಗಿದೆ. ಜಿಲ್ಲೆಯಲ್ಲಿ ಶಾಲೆಗೆ ಸೇರಿಸಲ್ಪಟ್ಟ ಮಕ್ಕಳ ಶೇಕಡವಾರು ಪ್ರಾಥಾಮಿಕ, ಫ್ರೌಡ ಶಾಲೆಯಲ್ಲಿ ಶೇ.೭೩.೬೮ರಷ್ಟು ಕಂಡು ಬರುತ್ತದೆ. ಈ ಪ್ರಮಾಣವು ಜಿಲ್ಲೆಯ ೭ ತಾಲ್ಲೂಕುಗಳಲ್ಲಿ ಶಾಲೆಗೆ ತರಲ್ಪಟ್ಟ ಮಕ್ಕಳ ದರ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಶೇ.೮೫.೮೪ರಷ್ಟು ಅಧಿಕ ಪ್ರಮಾಣದಲ್ಲಿದ್ದರೇ, ಅತ್ಯಂತ ಕಡಿಮೆ ಪ್ರಮಾಣದ ಶಾಲೆಗೆ ತರಲ್ಪಟ್ಟ ಮಕ್ಕಳು ಶೇ.೧೭.೨೭ರಷ್ಟು ಸಂಡೂರು ತಾಲ್ಲೂಕಿನಲ್ಲಿರುವುದು ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಲೆಯನ್ನು ಬಿಟ್ಟ ಮಕ್ಕಳ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡು ಬಳ್ಳಾರಿ ಜಿಲ್ಲೆಯ ಗಣಿ ವಲಯವಾದ ಸಂಡೂರು, ಹೊಸಪೇಟೆ, ಬಳ್ಳಾರಿ ಗ್ರಾಮೀಣ ಪ್ರದೇಶದ ಪ್ರಾಥಾಮಿಕ ಶಿಕ್ಷಣದಿಂದ ಹಿಡಿದು ಪದವಿಯವರೆಗೆ ಮಧ್ಯದಲ್ಲೇ ಶಾಲೆ ಬಿಟ್ಟ ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ಗಂಡು-ಹೆಣ್ಣುಗಳ ಲಿಂಗ ಆಧಾರಿತವಾಗಿ ಕಂಡು ಬಂದಿರುವ ಅಂಕಿ-ಅಂಶಗಳನ್ನು ದಾಖಲಿಸಿ ಫಲಿತಾಂಶವನ್ನು ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಸಲಾಗಿದೆ. ೨೭೦ ಕುಟುಂಬಗಳ ಮಾಹಿತಿ ಅಧಾರದ ಮೇಲೆ ನಿಮ್ಮ ಮನೆಯಲ್ಲಿ ಮಕ್ಕಳು ಮಧ್ಯದಲ್ಲೇ ಶಾಲೆ

ಬಿಟ್ಟಿದ್ದಾರೆಯೇ? ಎಂಬ ಪ್ರಶ್ನೆ ಕೇಳಿದಾಗ ೨೭೦ ಕುಟುಂಬಗಳ ಪೈಕಿ ೧೮೫ ಕುಟುಂಬಗಳಲ್ಲಿ ಮಧ್ಯದಲ್ಲೇ ಶಾಲೆ ಬಿಟ್ಟ ಮಕ್ಕಳಿದ್ದು, ಪ್ರತಿಶತವಾಗಿ ಶೇ.೬೮.೫೧ರಷ್ಟಿದ್ದಾರೆ. ಇನ್ನೂಳಿದ ೮೫ ಕುಟುಂಬಗಳಲ್ಲಿ ಮಕ್ಕಳು ಮಧ್ಯದಲೇ ಶಾಲೆಯನ್ನು ಬಿಟ್ಟಿಲ್ಲ ಎಂದು ಹೇಳಿದ್ದು, ಶೇ ೩೧.೮೪ರಷ್ಟಿರುವುದು ಕಂಡು ಬರುತ್ತದೆ. ಹೌದಾದರೇ ಮಧ್ಯದಲೇ ಶಾಲೆ ಬಿಟ್ಟ ಮಕ್ಕಳ ೧೮೫ ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ಪ್ರಾಥಮಿಕ ಶಿಕ್ಷಣದಿಂದ ಪದವಿ ಶಿಕ್ಷಣದವರೆಗೆ ಶಾಲಾ ಬಿಟ್ಟ ಮಕ್ಕಳ ವಿವರವನ್ನು ಪಡೆಯಲು ಮುಖ್ಯವಾಗಿ ೨ ವರ್ಗಗಳಾಗಿ ವಿಂಗಡಿಸಿಲಾಗಿದೆ. ಕುಟುಂಬಗಳ ಶೇಕಡ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೩.೧೦ ಕುಟುಂಬಗಳಲ್ಲಿ ಶಾಲೆ ಬಿಟ್ಟವರ ಪ್ರಮಾಣ**

| ಕ್ರಸಂ. | ಶಾಲಾ /ಕಾಲೇಜ್ | ಸಂಡೂರು ತಾಲ್ಲೂಕು | | ಹೊಸಪೇಟೆ ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಪ್ರಾಥಮಿಕ ಶಾಲೆ | ೦೫ | ೦೯.೯೪ | ೦೮ | ೧೧.೭೭ | ೧೪ | ೨೧.೮೭ |
| ೦೨ | ಹಿ.ಪ್ರಾಥಮಿಕ ಶಾಲೆ | ೦೮ | ೧೫.೦೯ | ೧೪ | ೨೦.೫೮ | ೧೩ | ೨೦.೩೧ |
| ೦೩ | ಪ್ರೌಢ ಶಾಲೆ | ೧೪ | ೨೬.೪೧ | ೧೨ | ೧೭.೬೫ | ೦೮ | ೧೨.೫೦ |
| ೦೪ | ಪದವಿಪೂರ್ವ ಕಾಲೇಜು | ೦೭ | ೧೩.೨೦ | ೧೫ | ೨೨.೦೫ | ೧೨ | ೧೮.೭೫ |
| ೦೫ | ಪದವಿ ಕಾಲೇಜು | ೦೬ | ೧೧.೩೨ | ೦೭ | ೧೦.೨೯ | ೦೭ | ೧೦.೯೩ |
| ೦೬ | ಇತರೆ | ೧೩ | ೨೪.೫೩ | ೧೨ | ೧೭.೬೫ | ೧೦ | ೧೫.೬೩ |
| ೦೭ | ಒಟ್ಟು | ೫೩ | ೧೦೦ | ೬೮ | ೧೦೦ | ೬೪ | ೧೦೦ |

**ಮೂಲ : ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯಗಳಾದ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕುಗಳ ಒಟ್ಟು ೨೭೦ ಕುಟುಂಬಗಳ ಮಾಹಿತಿದಾರರ ಮೇಲೆ ಅಂಕಿ-ಅಂಶ ದಾಖಲಿಸಲಾಗಿದೆ. ೨೭೦ ಕುಟುಂಬಗಳ ಪೈಕಿ ೧೮೫ ಕುಟುಂಬಗಳಲ್ಲಿ ಶಾಲೆ ಬಿಟ್ಟವರ ಪ್ರಮಾಣವಿರುವುದು ಮಾಹಿತಿದಾರರು ತಿಳಿಸಿದ್ದಾರೆ. ಈ ೧೮೫ ಕುಟುಂಬಗಳಲ್ಲಿ ಸಂಡೂರು ತಾಲ್ಲೂಕಿನ ೫೩ ಕುಟುಂಬಗಳು, ಹೊಸಪೇಟೆ ತಾಲ್ಲೂಕಿನ ೬೮ ಕುಟುಂಬಗಳು, ಬಳ್ಳಾರಿ ತಾಲ್ಲೂಕಿನ ೬೪ ಕುಟುಂಬಗಳಲ್ಲಿ ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿರುವ ಮಾಹಿತಿಯನ್ನು ನೀಡಿದ್ದಾರೆ. ಈ ಕುಟುಂಬಗಳಲ್ಲಿ ಪ್ರಾಥಾಮಿಕ ಹಂತದಿಂದ ಪದವಿ ಹಂತದವರೆಗೆ ಎಷ್ಟು ಪ್ರಮಾಣದ ಕುಟುಂಬಗಳಲ್ಲಿ ಶಾಲೆ ಬಿಟ್ಟಾ ಮಕ್ಕಳ ಪ್ರಮಾಣವಿದೆ ಎಂಬುವುದು ವಿಶ್ಲೇಷಣೆಗೆ ಒಳಡಿಸಲಾಗಿದೆ. ಗಣಿ ಗ್ರಾಮೀಣ ಪ್ರದೇಶದಲ್ಲಿ ಶಾಲಾ ಬಿಟ್ಟವರ ಪ್ರಮಾಣವೂ ಸಂಡೂರು ತಾಲ್ಲೂಕಿನ ೫೩ ಕುಟುಂಬಗಳಲ್ಲಿ ಪ್ರಾಥಾಮಿಕ ಶಾಲೆ ಬಿಟ್ಟವರು ೦೫ ಕುಟುಂಬಗಳು ಕಂಡು ಬಂದಿದ್ದು, ಶೇ.೦೯.೯೪ರಷ್ಟು, ಮಾಧ್ಯಮಿಕ ಶಾಲೆ ಬಿಟ್ಟವರು ೮ ಕುಟುಂಬಗಳಲ್ಲಿ ಶೇ.೧೫.೦೯ರಷ್ಟು, ಪ್ರೌಢ ಶಾಲೆಯಲ್ಲಿ ೧೪ ಕುಟುಂಬಗಳ ಮಕ್ಕಳು ಶಾಲೆ ಬಿಟ್ಟವರು ಪ್ರಮಾಣ ಶೇ.೨೬.೪೧ರಷ್ಟು, ಪದವಿ ಪೂರ್ವ ಕಾಲೇಜನ್ನು ಮಧ್ಯದಲ್ಲೇ ಬಿಟ್ಟವರು ೦೭ ಕುಟುಂಬಗಳಲ್ಲಿ ಶೇ.೧೩.೨೦ರಷ್ಟು, ಪದವಿ ಕಾಲೇಜುಗಳಲ್ಲಿ ೦೬ ಕುಟುಂಬಗಳಲ್ಲಿ ಕಾಲೇಜ್ ಬಿಟ್ಟವರ ಪ್ರಮಾಣ ಶೇ.೧೧.೩೨ರಷ್ಟು ಹಾಗೂ ಇತರೆ ಕಾಲೇಜುಗಳಲ್ಲಿ ೧೩ ಕುಟುಂಬದವರು ಮಧ್ಯದಲ್ಲೇ ಶಾಲಾ-ಕಾಲೇಜು ಬಿಟ್ಟವರು ಪ್ರಮಾಣ ಶೇ.೪೨.೫೩ರಷ್ಟಿದೆ. ಸಂಡೂರು ವಲಯದ ಗ್ರಾಮೀಣ ಕುಟುಂಬಗಳಲ್ಲಿ ಶಾಲಾ-ಕಾಲೇಜ್ ಮಧ್ಯದಲ್ಲೇ ಬಿಟ್ಟವರು ಪ್ರೌಡ ಶಾಲೆಯಲ್ಲಿ ಶೇ.೨೬.೪೧ರಷ್ಟು ಅಧಿಕವಾಗಿ ಕಂಡು ಬಂದಿದ್ದು, ಪ್ರಾಥಾಮಿಕ ಶಾಲೆಗಳಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಮಕ್ಕಳು ಮಧ್ಯದಲ್ಲೇ ಶಾಲೆ ಬಿಟ್ಟವರು ಶೇ.೦೯.೯೪ರಷ್ಟು ಇರುವುದು ಗಮನಿಸಬಹುದಾಗಿದೆ. ಹೊಸಪೇಟೆ ತಾಲ್ಲೂಕಿನಲ್ಲಿಯೂ ಸಹ ಮಧ್ಯದಲ್ಲೇ ಶಾಲೆ ಬಿಟ್ಟ ಮಕ್ಕಳ ಪ್ರಮಾಣವನ್ನು ಗಮನಿಸಿದಾಗ ಪ್ರಾಥಾಮಿಕ ಶಾಲಾ ಹಂತದಲ್ಲಿ ೮ ಕುಟುಂಬಗಳಲ್ಲಿ ಮಧ್ಯದಲ್ಲೇ ಶಾಲೆ ಬಿಟ್ಟವರು ಶೇ.೧೧.೭೭ರಷ್ಟಿದ್ದಾರೆ. ಮಾಧ್ಯಮಿಕ ಶಾಲಾ ಹಂತದಲ್ಲಿ ೧೪ ಕುಟಂಬಗಳ ಮಕ್ಕಳು ಶೇ.೨೦.೫೮ರಷ್ಟು ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿದ್ದರೇ, ಪ್ರೌಡ ಶಾಲೆಯಲ್ಲಿ ೧೨ ಕುಟುಂಬಗಳಲ್ಲಿ

ಮಧ್ಯದಲ್ಲೇ ಶಾಲೆಯನ್ನು ಬಿಟ್ಟದ್ದು, ಶೇ.೧೭.೬೫ರಷ್ಟು ೧೫ ಕುಟುಂಬಗಳಲ್ಲಿ ಪದವಿ ಪೂರ್ವ ಕಾಲೇಜನ್ನು ಮಧ್ಯದಲ್ಲೇ ಬಿಟ್ಟವರು ಶೇ.೨೨.೦೫ರಷ್ಟು ಪ್ರಮಾಣದಲ್ಲಿದ್ದಾರೆ.೦೭ ಕುಟುಂಬದವರು ಪದವಿ ಕಾಲೇಜ್‌ನ್ನು ಮಧ್ಯದಲ್ಲೇ ಬಿಟ್ಟಿದ್ದು, ಶೇ.೧೦.೨೯ರಷ್ಟು, ಇತರೆ ಕಾಲೇಜನ್ನು ಮಧ್ಯದಲ್ಲೇ ಬಿಟ್ಟವರು ೧೨ ಕುಟುಂಬಗಳಲ್ಲಿ ಇದ್ದು, ಪ್ರತಿಶತ, ಶೇ.೧೭.೬೫ರಷ್ಟಿರುವುದು ಕಾಣಬಹುದು.

ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೧೪ ಕುಟುಂಬಗಳಲ್ಲಿ ಪ್ರಾಥಾಮಿಕ ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿದ್ದು, ಪ್ರತಿಶತ ಶೇ.೨೧.೮೭ರಷ್ಟಿದ್ದಾರೆ. ೧೩ ಕುಟುಂಬಗಳಲ್ಲಿ ಮಾಧ್ಯಮಿಕ ಶಾಲೆಯನ್ನು ಬಿಟ್ಟಿದ್ದು, ಮಾಧ್ಯಮಿಕ ಶಾಲೆಯ ಮಧ್ಯದಲ್ಲೇ ಬಿಟ್ಟಿರುವ ಪ್ರಮಾಣ ಶೇ.೨೦.೩೧ರಷ್ಟಿದೆ. ಪ್ರೌಢ ಶಾಲೆಯಲ್ಲಿ ೮ ಕುಟುಂಬಗಳ ಮಕ್ಕಳು ಮಧ್ಯದಲ್ಲೇ ಶಾಲೆಯನ್ನು ಬಿಟ್ಟಿದ್ದು ಶೇ೨೧.೫೦ರಷ್ಟು, ಪದವಿ ಪೂರ್ವ ಕಾಲೇಜ್‌ನ್ನು ೧೨ ಕುಟುಂಬಗಳಲ್ಲಿ ಮಧ್ಯದಲ್ಲೇ ಬಿಟ್ಟವರ ಪ್ರಮಾಣ ಶೇ.೧೮.೭೫ ರಷ್ಟಿದೆ. ಪದವಿ ಕಾಲೇಜ್ ಮದ್ಯದಲೆ ಬಿಟ್ಟವರು ೦೭ ಕುಟುಂಬಗಳಲ್ಲಿ ಕಂಡು ಬಂದಿದ್ದು, ಪ್ರತಿಶತ ಶೇ ೧೦.೯೩ರಷ್ಟಿದೆ. ಇತರೆಯಲ್ಲಿ ೧೦ ಕುಟುಂಬಗಳ ಮಕ್ಕಳು ಶಾಲಾ–ಕಾಲೇಜ್ ಮಧ್ಯದಲ್ಲೇ ಬಿಟ್ಟವರ ಪ್ರಮಾಣ ಶೇ೧೫.೬೩ರಷ್ಟು ಇರುವುದು ಕಾಣಬಹುದು. ಬಳ್ಳಾರಿ ತಾಲ್ಲೂಕಿನಲ್ಲಿ ಹೆಚ್ಚಾಗಿ ಮಧ್ಯದಲ್ಲೇ ಶಾಲೆ ಬಿಟ್ಟವರು ಶೇ೨೧.೮೭ರಷ್ಟು ಪ್ರಾಥಾಮಿಕ ಶಾಲಾ ಹಂತದಲ್ಲಿದ್ದು, ಕಡಿಮೆ ಮಟ್ಟದ ಕಾಲೇಜನ್ನು ಬಿಟ್ಟವರು ಶೇ.೧೦.೯೩ರಷ್ಟು ಪದವಿ ಕಾಲೇಜು ಹಂತದಲ್ಲಿ ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ಮೂರು ತಾಲ್ಲೂಕಿನ ೧೮೫ ಕುಟುಂಬಗಳಲ್ಲಿ ಲಿಂಗವಾರು ಶಾಲಾ–ಕಾಲೇಜು ಮಧ್ಯದಲ್ಲೇ ಬಿಟ್ಟವರ ಬಗ್ಗೆ ಕುಟುಂಬಗಳಲ್ಲಿ ಪ್ರಶ್ನೆ ಕೇಳಿದಾಗ ಲಿಂಗವಾರು ಪ್ರಮಾಣವನ್ನು ವಿವರಿಸಲಾಗಿದೆ. ಗಣಿ ವಲಯವಾದ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕಿನಲ್ಲಿ ಒಟ್ಟು ೨೬೦ ಪ್ರಮಾಣದ ಸಂಖ್ಯೆಯಲ್ಲಿ ಕುಟುಂಬದ ಸದಸ್ಯರು ಮಧ್ಯದಲ್ಲೇ ಶಾಲೆಯನ್ನು ಬಿಟ್ಟಿದ್ದಾರೆ. ಇದರಲ್ಲಿ ೧೬೩ ಗಂಡು ಮಕ್ಕಳ ಸಂಖ್ಯೆಯಿದ್ದು, ಪ್ರತಿಶತ ಶೇ.೬೨ರಷ್ಟು ಗಂಡು ಮಕ್ಕಳು ಮಧ್ಯದಲ್ಲೇ ಶಾಲೆಯನ್ನು ಬಿಟ್ಟಿದ್ದಾರೆ. ಇನ್ನು ಹೆಣ್ಣು ಮಕ್ಕಳು ಮಧ್ಯದಲ್ಲೇ ಶಾಲಾ–ಕಾಲೇಜನ್ನು ಬಿಟ್ಟಿದ್ದು, ಶೇ೨೩.೩೦ರಷ್ಟು ಇರುವುದು ಕಂಡು ಬಂದಿದೆ. ಈ ಕುಟುಂಬಗಳಲ್ಲಿ ಮಧ್ಯದಲ್ಲೇ ಶಾಲಾ–ಕಾಲೇಜನ್ನು ಬಿಡಲು ಕಾರಣವನ್ನು ತಿಳಿದುಕೊಳ್ಳಲು ೦೬ ವರ್ಗಗಳಲ್ಲಿ ಕಾರಣಗಳನ್ನು ವಿಂಗಡಿಸಿ, ಕುಟುಂಬಗಳಿಂದ ಪಡೆದ ಮಾಹಿತಿಯ ಅಧಾರದ ಮೇಲೆ ಅಂಕಿ–ಅಂಶಗಳನ್ನು ದಾಖಲಿಸಲಾಗಿದೆ. ಅಂದರೆ ಮಕ್ಕಳು ಮದ್ಯದಲ್ಲೇ ಶಾಲೆ ಬೀಡಲು ಗಣಿಗಾರಿಕೆ, ಬಡತನ, ಅರ್ಥಿಕ ತೊಂದರೆ, ಜಾತಿ ಅವಮಾನ, ಶಾಲಾ ಅಂತರ, ಭಾಷೆ ಮತ್ತು ಇತರೆ ಕಾರಣಗಳಿಂದ ಬಿಟ್ಟಿದ್ದಾರೆ. ಎಷ್ಟು ಕುಟುಂಬದವರು ಯಾವ ಕಾರಣ ತಿಳಿಸಿದ್ದಾರೆ ಎಂದು ತಿಳಿದುಕೊಳ್ಳುವ ಅಗತ್ಯವಿದೆ. ಗಣಿ ಕೇಂದ್ರಿತ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶಾಲಾ ಕಾಲೇಜು ಮಧ್ಯದಲ್ಲೇ ಬಿಡಲು ಕಾರಣವೇನು? ಎಂಬ ಪ್ರಶ್ನೆಯನ್ನು ಕೇಳಿದಾಗ ಕುಟುಂಬಗಳು ನೀಡಿರುವ ಮಾಹಿತಿಯ ಅಂಕಿ–ಅಂಶವನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

**ಕೊಷ್ಟಕ ೩.೧೧ ಕುಟುಂಬಗಳಲ್ಲಿ ಮಕ್ಕಳು ಮಧ್ಯದಲ್ಲೇ ಶಾಲಾ ಬಿಡಲು ಕಾರಣಗಳ ಪ್ರಮಾಣ**

| ಕ್ರ ಸಂ | ಕಾರಣಗಳು | ಕುಟುಂಬಗಳು | ಶೇ |
|---|---|---|---|
| ೦೧ | ಗಣಿಗಾರಿಕೆ | ೪೬ | ೨೪.೮೬ |
| ೦೨ | ಬಡತನ | ೫೬ | ೩೦.೨೭ |
| ೦೩ | ಅರ್ಥಿಕ ತೊಂದರೆ | ೪೨ | ೨೨.೭೦ |
| ೦೪ | ಜಾತಿ ಅವಮಾನ | ೦೬ | ೦೩.೨೪ |
| ೦೫ | ಶಾಲಾ ಅಂತರ | ೨೧ | ೧೧.೩೫ |
| ೦೬ | ಭಾಷೆ | ೧೪ | ೦೭.೨೭ |
| ೦೭ | ಇತರೆ | – | – |
| ಒಟ್ಟು | | ೧೮೫ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೩.೧೧ರಲ್ಲಿ ಗಣಿ ವಲಯಗಳಾದ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ೨೭೦ ಕುಟುಂಬಗಳಲ್ಲಿ ಶಾಲಾ ಕಾಲೇಜನ್ನು ಬಿಟ್ಟವರ ಪ್ರಮಾಣ (೧೮೫) ಕುಟುಂಬಗಳಲ್ಲಿ ಕಂಡು ಬಂದಿರುವುದರಿಂದ ೧೮೫ ಕುಟುಂಬಗಳಿಗೆ ಮಾತ್ರ ಶಾಲಾ–ಕಾಲೇಜನ್ನು ಬಿಡಲು ಕಾರಣವೇನು ಎಂಬ ಪ್ರಶ್ನೆ ಕೇಳಿದಾಗ  ಕುಟುಂಬಗಳು ನೀಡಿದ ಉತ್ತರವನ್ನು ವಿಶ್ಲೇಷಿಸಲಾಗಿದೆ. ೧೮೫ ಕುಟುಂಬಗಳಲ್ಲಿ ಶಾಲಾ–ಕಾಲೇಜು ಬಿಡಲು ಕಾರಣವನ್ನು ಕೇಳಿದಾಗ, ೧೮೫ ಕುಟುಂಬಗಳಲ್ಲಿ ೪೬ ಕುಟುಂಬಗಳು ಗಣಿಗಾರಿಕೆ ಶೇ.೨೪.೮೬ರಷ್ಟು, ೫೬ ಕುಟುಂಬಗಳು ಬಡತನ ಶೇ.೩೦.೨೭ರಷ್ಟು, ೪೨ ಕುಟುಂಬಗಳು ಅರ್ಥಿಕ ತೊಂದರೆ ಶೇ.೨೨.೭೦ರಷ್ಟು, ೦೬ ಕುಟುಂಬಗಳು ಜಾತಿಯ ಅವಮಾನ ಶೇ.೦೩.೨೪ರಷ್ಟು, ೨೧ ಕುಟುಂಬಗಳು ಶಾಲಾ ಅಂತರ ಶೇ.೧೧.೩೫ರಷ್ಟು, ೧೪ ಕುಟುಂಬಗಳು ಭಾಷೆಯು ಶೇ.೦೭.೨೭ರಷ್ಟು ಮಕ್ಕಳು  ಮಧ್ಯದಲ್ಲೇ ಶಾಲೆ ಬಿಡಲು ಕಾರಣವಾಗಿದೆ ಎಂಬ ಅಂಶವನ್ನು ಗಮನಿಸಬೇಕಾಗಿದೆ. ಈ ಗಣಿ ಕೇಂದ್ರಿಕೃತ ಗ್ರಾಮೀಣ ಪ್ರದೇಶದಲ್ಲಿ ಶಾಲೆ ಬಿಡಲು ಕಾರಣ ಗಣಿಗಾರಿಕೆ, ಬಡತನ, ಆರ್ಥಿಕ ತೊಂದರೆ, ಜಾತಿ ಅವಮಾನ, ಶಾಲಾ ಅಂತರ, ಭಾಷೆ ಇವೆಲ್ಲಾ ಕಾರಣಗಳಾಗಿದ್ದು, ಮಕ್ಕಳು ಮಧ್ಯದಲ್ಲೇ ಶಾಲಾ–ಕಾಲೇಜು ಬೀಡಲು ಬಡತನವೇ ಹೆಚ್ಚು ಪ್ರಭಾವಿತ ಕಾರಣವೆಂದು ತಿಳಿಸಿದ್ದು, ಅದರ ಪ್ರಮಾಣ ಹೆಚ್ಚಾಗಿರುವುದು ಈ ಭಾಗದ ಕುಟಂಬಗಳಲ್ಲಿ ಕಂಡುಬಂದಿದೆ. ಅಂದರೆ ಕಾರಣಗಳನ್ನು ತಿಳಿಸುವಲ್ಲಿ ಅತಿ ಹೆಚ್ಚು ೫೬ ಕುಟುಂಬಗಳು ಬಡತನ ಕಾರಣವನ್ನು ಸೂಚಿಸಿದ್ದು ಶೇ.೩೦.೨೭ರಷ್ಟಿದೆ. ಅತಿ ಕಡಿಮೆ ಶೇಕಡವಾರು ಹೊಂದಿರುವ ಕಾರಣ ಜಾತಿಯ ಅವಮಾನವಾಗಿದೆ. ಬಹುತೇಕವಾಗಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಈ ಕಾರಣಗಳೇ ಶಾಲಾ–ಕಾಲೇಜಿನ ಮಕ್ಕಳು ಮಧ್ಯದಲ್ಲೇ ಬಿಟ್ಟರುವುದು ದುಸ್ಥಿತಿಯೇ ಆಗಿದೆ ಎಂದು ಹೇಳಬಹುದು.

**೩.೩.೪ ಶಾಲಾ ದಾಖಲಾತಿ**

ದಾಖಲಾತಿ ಎಂದರೆ ಅಪೇಕ್ಷಿತ ವಯೋಸಮೂಹದಿಂದ ಶಾಲೆಗಳಲ್ಲಿ ಪ್ರವೇಶಾತಿ ಪಡೆದುಕೋಳ್ಳುವ ಮಕ್ಕಳ ಪ್ರಮಾಣವು ಸಾಕ್ಷರತೆ ಹಾಗೂ ಶಿಕ್ಷಣದ ಪ್ರಗತಿಯು ಶಾಲೆಗಳಲ್ಲಿ ದಾಖಲಾಗಿರುವ ಮಕ್ಕಳ ಮಟ್ಟವನ್ನು ಹೆಚ್ಚಾಗಿ ಅವಲಂಬನೆಗೊಂಡಿರುತ್ತದೆ. ಸ್ವಾತಂತ್ರ್ಯ ಬಂದಾಗಿನಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸಲು ಅನೇಕ ಯೋಜನೆ ಕೈಗೆತ್ತಿಗೊಂಡಿದೆ. ಆದರೆ ಇತ್ತಿಚೀನ ವರ್ಷಗಳಲ್ಲಿ ಕೇಂದ್ರ ಮತ್ತು ರಾಜ್ಯಗಳೆರಡೂ ಶಾಲೆಗೆ ಮಕ್ಕಳನ್ನು ಸೆಳೆಯುವ ಹಾಗೂ ಉಳಿಸಿಕೊಳ್ಳುವ ನಿಟ್ಟಿನಲ್ಲಿ ಆನೇಕ ಯೋಜನೆಗಳನ್ನು ಜಾರಿಗೊಳಿಸಿವೆ. ಆದಾಗ್ಯೂ ಸಹ ಶಿಕ್ಷಣದ ದಾಖಲಾತಿಯ ಫಲಿತಾಂಶಗಳು ಉತ್ತೇಜಕವಾಗಿಲ್ಲ. ಈ ದಾಖಲಾತಿಯ ಪ್ರಮಾಣವು ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಮತ್ತು ಫ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿಯ ಮಟ್ಟವನ್ನು ಅರಿತುಕೊಳ್ಳುವ ಅಗತ್ಯತೆ ಇದೆ.

**ಕೋಷ್ಟಕ  ೩.೧೨ ತಾಲ್ಲೂಕುವಾರು ಒಟ್ಟು ಹಾಗೂ ನಿವ್ವಳ ದಾಖಲಾತಿ ಪ್ರಾಥಮಿಕ ಶಾಲೆ ಮತ್ತು ಒಟ್ಟು ದಾಖಲಾತಿ ಫ್ರೌಢಶಾಲೆ :೨೦೧೧–೧೨**

| ಕ್ರಸಂ. | ತಾಲ್ಲೂಕು | ಒಟ್ಟು ದಾಖಲಾತಿ ದರ ಪ್ರಾಥಮಿಕ ಶಾಲೆ | ನಿವ್ವಳ ದಾಖಲಾತಿ ದರ–ಪ್ರಾಥಮಿಕ ಶಾಲೆ | ಒಟ್ಟು ದಾಖಲಾತಿ ದರ ಫ್ರೌಡ ಶಾಲೆ (೧೫–೧೬ ವರ್ಷ) |
|---|---|---|---|---|
| ೦೧ | ಬಳ್ಳಾರಿ | ೧೧೯.೯೫ | ೮೬.೬೬ | ೬೦.೬೧ |
| ೦೨ | ಹಡಗಲಿ | ೧೦೮.೧೩ | ೮೮.೧೩ | ೬೫.೧೬ |
| ೦೩ | ಹೆಚ್.ಬಿ.ಹಳ್ಳಿ | ೧೧೯.೯೯ | ೮೭.೦೦ | ೭೦.೮೨ |
| ೦೪ | ಕೂಡ್ಲಿಗಿ | ೧೧೭.೩೮ | ೮೯.೯೯ | ೭೨.೦೬ |
| ೦೫ | ಸಂಡೂರು | ೧೦೮.೦೨ | ೮೬.೮೫ | ೫೫.೪೭ |
| ೦೬ | ಸಿರುಗುಪ್ಪ | ೧೧೩.೯೮ | ೭೫.೦೬ | ೪೮.೫೬ |
| ೦೭ | ಹೊಸಪೇಟೆ | ೧೦೨.೨೬ | ೭೪.೬೮ | ೬೭.೪೭ |
| | ಜಿಲ್ಲಾ ಒಟ್ಟು | ೧೦೭.೫೧ | ೮೩.೭೮ | ೬೨.೯೯ |

ಮೂಲ: ಜಿಲ್ಲಾ ಮಾನವ ಅಭಿವೃದ್ಧಿ ಸೂಚ್ಯಂಕ ೨೦೧೪ರ ವರದಿ

ಕೋಷ್ಟಕ ೩.೧೨ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಮತ್ತು ಎಲ್ಲಾ ತಾಲ್ಲೂಕುಗಳಲ್ಲಿ ಪ್ರಾಥಮಿಕ ಶಾಲಾ ಒಟ್ಟು ದಾಖಲಾತಿಯ ದರವು ಶೇ.೧೦೦ಕ್ಕಿಂತ ಹೆಚ್ಚಾಗಿದೆ. ಒಟ್ಟು ದಾಖಲಾತಿ ಶೇ.೧೦೦ಕ್ಕಿಂತ ಹೆಚ್ಚು ಕಾರಣ ಬಹುಶಃ ಬೇರೆ ಬೇರೆ ಪ್ರದೇಶಗಳ ಮಕ್ಕಳು ಈ ಪ್ರದೇಶಗಳಲ್ಲಿ ಹಾಜರಾಗಿರಬಹುದು. ಪುನರವರ್ತಿತರು ಹಾಗೂ ಶಾಲೆ ಬಿಟ್ಟ ಮಕ್ಕಳು ದಾಖಲಾತಿಯಲ್ಲಿ ಒಳಗಾಗಿದ್ದರ ಪರಿಣಾಮಗಳಾಗಿರಬಹುದು. ಕೂಡ್ಲಿಗಿ ಶೇ ೧೧೭.೩೮ ತಾಲ್ಲೂಕು ಎಲ್ಲಾ ತಾಲ್ಲೂಕುಗಿಂತಲ್ಲೂ ಶಾಲಾ ಶಿಕ್ಷಣ ದಾಖಲಾತಿಯಲ್ಲಿ ಮುಂದಿದ್ದು, ಅತ್ಯಂತ ಕಡಿಮೆ ಶೇ.೧೦೨.೨೬ ರಷ್ಟು ಹೊಸಪೇಟೆ ತಾಲ್ಲೂಕಿನಲ್ಲಿರುವುದು ಕಂಡುಬರುತ್ತದೆ. ಈ ಶಾಲಾ ದಾಖಲಾತಿಗೆ ಸಂಬಂದಿಸಿದಂತೆ ಗಣಿ ವಲಯಗಳಾದ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕಗಳ ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿ, ಪ್ರಾಥಮಿಕ ಮಾಹಿತಿಯ ಮೂಲಗಳಿಂದ ಮಾಹಿತಿ ಸಂಗ್ರಹಿಸಿರುವ ಅಂಕಿ–ಅಂಶಗಳು ಈ ಕೆಳಗಿನಂತಿವೆ. ಬಳ್ಳಾರಿ ಜಿಲ್ಲೆಯಲ್ಲಿ ಸಮೀಕ್ಷೆಗೆ ಒಳಪಡಿಸಲಾಗಿರುವ ಕುಟುಂಬಗಳಿಗೆ ನಿಮ್ಮ ಮಕ್ಕಳು ಶಾಲಾ–ಕಾಲೇಜಿಗೆ ಹೋಗುತ್ತಾರೆಯೇ? ಎಂಬ ಪ್ರಶ್ನೆಗೆ ಮಾಹಿತಿದಾರರ ಉತ್ತರವನ್ನು ಇಲ್ಲಿ ದಾಖಲಿಸಲಾಗಿದೆ. ಒಟ್ಟು ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳಿಗೆ ಅನ್ವಯಿಸುವಂತೆ ೨೭೦ ಕುಟುಂಬಗಳಲ್ಲಿ ೧೬೩ ಕುಟುಂಬಗಳ ಮಕ್ಕಳು ಶಾಲಾ ಕಾಲೇಜಿಗೆ ಹೋಗುತ್ತಿದ್ದು, ಇನ್ನು ೭೩ ಕುಟುಂಬಗಳ ಮಕ್ಕಳು ಶಾಲಾ ಕಾಲೇಜಿಗೆ ಹೋಗದಿರುವುದು ಕಂಡುಬಂದಿದೆ. ಅಂದರೆ ಜಿಲ್ಲೆಯ ೨೭೦ ಕುಟುಂಬಗಳಲ್ಲಿ ಶೇ.೭೨.೬೯ರಷ್ಟು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಶೇ.೨೭.೩೧ರಷ್ಟು ಮಕ್ಕಳು ಶಾಲೆಗೆ ಹೋಗದಿರುವ ಮಕ್ಕಳಾಗಿದ್ದಾರೆ. ಗಣಿ ವಲಯಗಳಾದ ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೭೩.೩೪ರಷ್ಟು ಶಾಲಾ ಕಾಲೇಜಿಗೆ ಹೋಗುವ ಮಕ್ಕಳು ೬೬ ಕುಟುಂಬಗಳಲ್ಲಿ ಕಂಡುಬಂದಿದೆ. ಇನ್ನು ೨೪ ಕುಟುಂಬಗಳಲ್ಲಿ ಶಾಲಾ–ಕಾಲೇಜಿಗೆ ಹೋಗದ ಮಕ್ಕಳ್ಳಿದ್ದು. ಶೇ೨೬.೬೬ ರಷ್ಟಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ ೯೦ ಕುಟುಂಬಗಳಲ್ಲಿ ೫೯ ಕುಟುಂಬಗಳ ಮಕ್ಕಳು ಶಾಲಾ–ಕಾಲೇಜಿಗೆ ಹೋಗುತ್ತಿದ್ದು, ಶೇ.೬೫.೫೬ರಷ್ಟಿದ್ದಾರೆ. ಇನ್ನು ೩೧ ಕುಟುಂಬಗಳ ಮಕ್ಕಳು ಶಾಲಾ–ಕಾಲೇಜಿಗೆ ಹೋಗದಿರುವ ಪ್ರಮಾಣ ಶೇ.೩೪.೪೪ರಷ್ಟಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ೯೦ ಕುಟುಂಬಗಳಲ್ಲಿ ೭೨ ಕುಟುಂಬಗಳ ಮಕ್ಕಳು ಶಾಲೆ–ಕಾಲೇಜಿಗೆ ತೆರಳುತ್ತದ್ದಾರೆ. ಇನ್ನುಳಿದ ೧೮ ಕುಟುಂಬಗಳ ಶಾಲಾ–ಕಾಲೇಜುಗಳಿಗೆ ಹೋಗದಿರುವ ಮಕ್ಕಳಿರುವುದು ಕಂಡು ಬಂದಿದೆ. ಪ್ರತಿಶತ ಈ ತಾಲ್ಲೂಕಿನಲ್ಲಿ ಶೇ.೮೦ರಷ್ಟು ಕುಟುಂಬಗಳಲ್ಲಿ ಶಾಲಾ–ಕಾಲೇಜಿಗೆ ಹೋಗುವ ಮಕ್ಕಳಿದ್ದಾರೆ. ಇನ್ನು ಶೇ.೨೦ರಷ್ಟು ಮಕ್ಕಳು ಶಾಲಾ–ಕಾಲೇಜಿಗೆ ದೂರ ಉಳಿದ ಮಕ್ಕಳಾಗಿದ್ದಾರೆ. ಒಟ್ಟಾರೆ ಬಳ್ಳಾರಿ ಜಿಲ್ಲೆಯ ಗಣಿ ಗ್ರಾಮೀಣ ಪ್ರದೇಶದ ಮೂರು ತಾಲ್ಲೂಕಿನಲ್ಲೂ ಗಮನಿಸಿದಾಗ ಬಳ್ಳಾರಿ ತಾಲ್ಲೂಕಿನಲ್ಲಿ ಶೇ.೮೦ರಷ್ಟು ಮಕ್ಕಳು ಶಾಲಾ–ಕಾಲೇಜಿಗೆ ಹೋಗುವ ಕುಟುಂಬಗಳು ಮುಂದಿದ್ದು, ಅತ್ಯಂತ ಕಡಿಮೆ ಪ್ರಮಾಣದಲ್ಲಿ ಶಾಲಾ–ಕಾಲೇಜಿಗೆ ಹೋಗುವ ಮಕ್ಕಳ ಪ್ರಮಾಣ ಶೇ.೬೫.೫೬ರಷ್ಟು ಸಂಡೂರು ತಾಲ್ಲೂಕಿನಲ್ಲಿರುವುದು ಕಂಡು ಬರುತ್ತದೆ ಕೋಷ್ಟಕ ೩.೧೩ರಲ್ಲಿ ಗಮನಿಸಿ.

**ಕೋಷ್ಟಕ ೩.೧೩ ಶಾಲಾ ಕಾಲೇಜಿಗೆ ಹೋಗುವ ಮಕ್ಕಳ ಕುಟುಂಬಗಳ ವಿವರ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬ ಗಳು | ಶೇ | ಕುಟುಂಬಗಳು | ಶೇ |
| ೦೧ | ಮಕ್ಕಳು ಶಾಲಾ/ಕಾಲೇಜಿಗೆ ಹೋಗ್ತಾರೆಯೇ | | | | | | |
| | ಹೌದು | ೬೬ | ೭೩.೩೪ | ೫೯ | ೬೫.೫೬ | ೭೨ | ೮೦ |
| | ಇಲ್ಲ | ೨೪ | ೨೬.೬೬ | ೩೧ | ೩೪.೪೪ | ೧೮ | ೨೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಯಾವ ಶಾಲಾ/ಕಾಲೇಜಿಗೆ ಹೋಗುತ್ತಾರೆ | | | | | | |
| | ಸರ್ಕಾರಿ | ೫೧ | ೭೭.೨೮ | ೪೦ | ೬೪.೭೪ | ೫೩ | ೭೩.೬೨ |
| | ಖಾಸಗಿ | ೧೫ | ೨೭.೨೭ | ೧೯ | ೧೫.೨೬ | ೧೯ | ೨೬.೩೮ |
| | ಒಟ್ಟು | ೬೬ | ೧೦೦ | ೫೯ | ೧೦೦ | ೭೨ | ೧೦೦ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ

ಈ ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ೬೬ ಕುಟುಂಬಗಳಲ್ಲಿ ಶೇ.೭೩.೩೪ರಷ್ಟು ಶಾಲಾ-ಕಾಲೇಜಿಗೆ ಹೋಗುವ ಮಕ್ಕಳಿದ್ದು, ಅದರಲ್ಲಿ ಸರ್ಕಾರಿ ಶಾಲಾ-ಕಾಲೇಜಿಗೆ ಹೋಗುವ ಮಕ್ಕಳ ಪ್ರಮಾಣ ಶೇ.೭೭.೭೮ರಷ್ಟಿದೆ. ಇನ್ನುಳಿದ ೧೫ ಕುಟುಂಬಗಳಲ್ಲಿ ಖಾಸಾಗಿ ಶಾಲಾ-ಕಾಲೇಜಿಗೆ ಹೋಗುವ ಮಕ್ಕಳಿದ್ದು ಶೇ.೨೭.೨೭ರಷ್ಟು ಇರುವುದು ಕಾಣಬಹುದಾಗಿದೆ. ಸಂಡೂರು ತಾಲ್ಲೂಕಿನಲ್ಲಿ ಒಟ್ಟು ೫೯ ಕುಟುಂಬಗಳಲ್ಲಿ ಸರ್ಕಾರಿ ಶಾಲಾ-ಕಾಲೇಜಿಗೆ ಹೋಗುವವರು ೫೦ ಕುಟುಂಬಗಳಲ್ಲಿ ಶೇ.೮೪.೭೪ರಷ್ಟು ಮಕ್ಕಳು ಶಾಲಾ ಕಾಲೇಜಿಗೆ ಹೋಗುತ್ತಿದ್ದಾರೆ. ೦೯ ಕುಟುಂಬಗಳಲ್ಲಿ ಖಾಸಗಿ ಶಾಲಾ-ಕಾಲೇಜಿಗೆ ಹೋಗುವ ಮಕ್ಕಳು ಶೇ.೧೫.೨೫ರಷ್ಟು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ೭೨ ಕುಟುಂಬಗಳ ಮಕ್ಕಳು ಶಾಲಾ ಕಾಲೇಜಿಗೆ ಶೇ ೮೦ರಷ್ಟು ಹೋಗುತ್ತಿದ್ದಾರೆ. ಈ ೭೨ ಕುಟುಂಬಗಳ ಪೈಕಿ ೫೩ ಕುಟುಂಬಗಳ ಮಕ್ಕಳು ಶೇ.೭೩.೬೨ರಷ್ಟು ಸರ್ಕಾರಿ ಶಾಲಾ ಕಾಲೇಜಿಗೆ ತೆರಳಿದ್ದರೇ, ಇನ್ನುಳಿದ ೧೯ ಕುಟುಂಬಗಳ ಮಕ್ಕಳು ಶೇ.೨೬.೩೮ರಷ್ಟು ಖಾಸಗಿ ಶಾಲಾ ಕಾಲೇಜಿಗೆ ಹೋಗುತ್ತಿರುವ ಅಂಶ ಕಂಡುಬರುತ್ತದೆ. ಈ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮಕ್ಕಳು ಸರ್ಕಾರಿ ಶಾಲಾ ಕಾಲೇಜಿಗೆ ಹೋಗುವ ಪ್ರಮಾಣ ಅಧಿಕವಾಗಿದೆ. ಒಟ್ಟಾರೆಯಾಗಿ ಈ ಮೂರು ಗಣಿ ವಲಯದಲ್ಲಿ ಸರ್ಕಾರಿ ಶಾಲಾ-ಕಾಲೇಜಿಗೆ ಹೋಗುವಲ್ಲಿ ಪ್ರತಿಶತ ಶೇ.೮೪.೭೪ರಷ್ಟು ಮಕ್ಕಳು ಸಂಡೂರು ತಾಲ್ಲೂಕಿನಲ್ಲಿ ಅಧಿವಾಗಿರುವುದು ಕಂಡು ಬಂದರೇ, ಬಳ್ಳಾರಿ ತಾಲ್ಲೂಕಿನಲ್ಲಿ ಸರ್ಕಾರಿ ಶಾಲೆಗೆ ಹೋಗುವ ಮಕ್ಕಳು ಶೇ.೭೩.೬೧ರಷ್ಟು ಕಡಿಮೆ ಪ್ರಮಾಣದಲ್ಲಿ ಇರುವುದು ಕಂಡುಬರುತ್ತದೆ. ಖಾಸಗಿ ಶಾಲಾ ಕಾಲೇಜಿಗೆ ಹೋಗುವ ಕುಟುಂಬಗಳಲ್ಲಿ ಸಂಡೂರು ತಾಲ್ಲೂಕು ಶೇ.೧೫.೨೫ರಷ್ಟು ಅಂದರೆ ಕಡಿಮೆ ಮಟ್ಟದಲ್ಲಿದ್ದು, ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೨೭.೨೭ರಷ್ಟು ಶಾಲಾ-ಕಾಲೇಜಿಗೆ ಹೋಗುವ ಕುಟುಂಬಗಳು ಹೆಚ್ಚಾಗಿರುವುದು ಕಂಡು ಬಂದಿದೆ.

ಶಾಲಾ ದಾಖಲಾತಿಗೆ ಸಂಬಂಧಿಸಿದಂತೆ ಗಣಿ ವಲಯವಾದ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದ್ದಾಗ ಬಂದಂತಹ ಅಂಕಿ-ಅಂಶಗಳನ್ನು ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಸಮೀಕ್ಷೆಯಲ್ಲಿ ಪ್ರಾಥಮಿಕ ಶಾಲಾ, ಹಿರಿಯ ಪ್ರಾಥಮಿಕ ಶಾಲಾ, ಪ್ರೌಢ ಶಾಲಾ, ಪದವಿ ಪೂರ್ವ, ಪದವಿ, ಸ್ನಾತಕೋತರ ಪದವಿ, ಇತರೆ ವರ್ಗಗಳಲ್ಲಿರುವ ವಿದ್ಯಾರ್ಥಿಗಳ ಪ್ರಮಾಣವನ್ನು ಸಂಗ್ರಹಿಸಿ, ವಿಶ್ಲೇಷಣೆಗೆ ಒಳಪಡಿಸುವ ಮಾಹಿತಿಯನ್ನು ನೀಡಲಾಗಿದೆ.

**ಕೋಷ್ಟಕ ೩.೧೪ ಜಿಲ್ಲೆಯ ಸಂಡೂರು, ಬಳ್ಳಾರಿ ,ಹೊಸಪೇಟೆ ತಾಲ್ಲೂಕುಗಳಲ್ಲಿರುವ ವಿದ್ಯಾರ್ಥಿಗಳ ವಿವರ.**

| ಪ್ರಶ್ನೆ | ಶಾಲಾ/ಕಾಲೇಜು | ಸಂಡೂರು ತಾಲ್ಲೂಕು | | | | ಬಳ್ಳಾರಿ ತಾಲ್ಲೂಕು | | | | ಹೊಸಪೇಟೆ ತಾಲ್ಲೂಕು | | | |
|---|---|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಶೇ | ಗಂಡು | ಹೆಣ್ಣು | ಒಟ್ಟು | ಶೇ | ಗಂಡು | ಹೆಣ್ಣು | ಒಟ್ಟು | ಶೇ |
| ನಿಮ್ಮ ಮನೆಯಲ್ಲಿ ಮಕ್ಕಳು ಓದುತ್ತಿರುವ ತರಗತಿ ಯಾವುದು? | ಪ್ರಾಥಮಿಕ ಶಾಲೆ | ೨೧ | ೦೮ | ೨೮ | ೧೫.೩೪ | ೮ | ೪ | ೧೨ | ೧೩.೦೪ | ೧೧ | ೧೨ | ೨೩ | ೧೭.೧೬ |
| | ಹಿರಿಯ ಪ್ರಾಥಮಿಕ ಶಾಲೆ | ೧೯ | ೦೯ | ೨೮ | ೧೪.೮೧ | ೯ | ೬ | ೧೫ | ೧೬.೩೪ | ೧೫ | ೧೦ | ೨೫ | ೧೮.೬೫ |
| | ಪ್ರೌಢ ಶಾಲೆ | ೩೧ | ೧೪ | ೪೫ | ೨೩.೮೩ | ೧೪ | ೮ | ೨೨ | ೨೩.೯೧ | ೧೭ | ೧೨ | ೨೯ | ೨೧.೬೪ |
| | ಪದವಿ ಪೂರ್ವ ಕಾಲೇಜ್ | ೨೦ | ೧೨ | ೩೨ | ೧೬.೯೩ | ೦೮ | ೧೧ | ೧೯ | ೨೦.೬೫ | ೧೧ | ೧೧ | ೨೨ | ೧೬.೪೪ |
| | ಪದವಿ ಕಾಲೇಜ್ | ೧೪ | ೦೭ | ೨೧ | ೧೧.೧೧ | ೦೬ | ೦೪ | ೧೦ | ೧೦೮೬ | ೦೭ | ೦೮ | ೧೫ | ೧೧.೧೯ |
| | ಸ್ನಾತಕೋತ್ತರ ಪದವಿ | ೦೬ | ೦೪ | ೧೦ | ೦೫.೨೯ | ೦೨ | ೦೨ | ೦೪ | ೦೪.೩೪ | – | – | – | – |
| | ಇತರೆ | ೨೪ | – | ೨೪ | ೧೨.೬೯ | ೧೦ | – | ೧೦ | ೧೦.೮೬ | ೨೦ | – | ೨೦ | ೧೪.೯೨ |
| | ಒಟ್ಟು | ೧೩೫ | ೫೪ | ೧೮೯ | ೧೦೦ | ೫೭ | ೩೫ | ೯೨ | ೧೦೦ | ೮೧ | ೫೩ | ೧೩೪ | ೧೦೦ |
| | ಮೂಲ : ಕ್ಷೇತ್ರ ಕಾರ್ಯ ಮಾಹಿತಿ, (ಗಣಿ ವಲಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕುಗಳ ೯ ಗ್ರಾಮಗಳನ್ನು ಪರಿಗಣಿಸಿ) | | | | | | | | | | | | |

ಮೇಲಿನ ಕೋಷ್ಟಕದಲ್ಲಿ ಗಮನಿಸಿದಂತೆ ಈ ಮೂರು ತಾಲ್ಲೂಕುಗಳಲ್ಲಿ ಯಾವ ತರಗತಿಯಲ್ಲಿ ಪ್ರತಿಶತವಾಗಿ ಅತ್ಯಂತ ಕಡಿಮೆ ಮತ್ತು ಹೆಚ್ಚು ಇದೆ ಎಂಬುವುದನ್ನು ಗುರುತಿಸುವುದು ಅವಶ್ಯಕತೆಯಿದೆ. ಸಂಡೂರು ತಾಲ್ಲೂಕಿನಲ್ಲಿ ಫ್ರೌಡಶಾಲೆಗೆ ಹೋಗುವವರ ಪ್ರಮಾಣ ಪ್ರತಿಶತ ಶೇ.೨೩.೮೪ರಷ್ಟಿದ್ದು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅತ್ಯಂತ ಕಡಿಮೆ ಪ್ರಮಾಣದಲ್ಲಿ ಸ್ನಾತಕೋತ್ತರ ಪದವಿಯಲ್ಲಿ ತೊಡಗಿರುವವರು ಪ್ರತಿಶತ ಶೇ.೦೫.೨೯ರಷ್ಟಿರುವುದು ಗಮನಿಸಬಹುದಾಗಿದೆ. ಬಳ್ಳಾರಿ ತಾಲ್ಲೂಕಿನಲ್ಲಿಯೂ ಫ್ರೌಡಶಾಲಾ ಶಿಕ್ಷಣದಲ್ಲಿ ಹೆಚ್ಚಿನ ಮಟ್ಟದಲ್ಲಿ ಅಂದರೇ ಶೇ.೨೩.೯೧ರಷ್ಟು, ಕಡಿಮೆ ಮಟ್ಟದ ಶಿಕ್ಷಣದಲ್ಲಿ ತೊಡಗಿರುವುದು ಸ್ನಾತಕೋತ್ತರ ಪದವಿಯಲ್ಲಿ ಶೇ೦೪.೩೪ರಷ್ಟಿರುವುದು ಕಂಡು ಬಂದಿದೆ. ಹಾಗೆಯೆ ಹೊಸಪೇಟೆ ತಾಲ್ಲೂಕಿನಲ್ಲಿಯು ಸಹ ಫ್ರೌಡಶಾಲಾ ಶಿಕ್ಷಣದಲ್ಲಿ ತೊಡಗಿರುವವರು ಶೇ.೨೧.೬೪ರಷ್ಟಿದ್ದು ಹೆಚ್ಚಿನ ಸಂಖ್ಯೆಯಲ್ಲಿದ್ದರೇ, ಪದವಿ ಶಿಕ್ಷಣದಲ್ಲಿ ತೊಡಗಿರುವವವ ಪ್ರಮಾಣ ಶೇ.೧೧.೧೯ರಷ್ಟು ಕಡಿಮೆ ಇರುವುದು ಕಾಣಬಹುದು. ಒಟ್ಟಾರೆಯಾಗಿ ಗಣಿ ಗ್ರಾಮೀಣ ಪ್ರದೇಶದ ತಾಲ್ಲೂಕುಗಳಲ್ಲಿ ಫ್ರೌಡ ಶಾಲಾ ಶಿಕ್ಷಣದಲ್ಲಿ ಹೆಚ್ಚಿನ ಸಂಖ್ಯೆಯ ವಿದ್ಯಾಬ್ಯಾಸದಲ್ಲಿ ತೊಡಗಿರುವುದು ಕಂಡರೆ ಮುಂದುವರೆದು ಪದವಿ, ಸ್ನಾತಕೋತ್ತರ ಪದವಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರು ಸಂಖ್ಯೆಯು ಕಡಿಮೆಯಾಗುತ್ತಾ ಹೋಗುತ್ತದೆ. ಹಾಗೂ ಗಣಿ ವಲಯದ ಮೂರು ತಾಲ್ಲೂಕಗಳ ಶಿಕ್ಷಣದ ಸ್ಥಿತಿಯನ್ನು ಲಿಂಗವಾರು ಗಮನಿಸಿದಾಗ ಹೆಣ್ಣು ಮಕ್ಕಳು ಶಿಕ್ಷಣದಲ್ಲಿ ತೋಡಗಿರುವ ಪ್ರಮಾಣ ಕಡಿಮೆಯಾಗಿರುವುದು ಗ್ರಾಸವಾಗುತ್ತದೆ. ಅಂದರೆ ಈ ಭಾಗದ ಮಹಿಳೆಯರು ಶಿಕ್ಷಣವನ್ನು ತೊಡಗಿಸಿಕೊಳ್ಳುವ ಪ್ರಮಾಣ ಕಡಿಮೆಯಾಗುತ್ತಿರುವುದು ಶೋಚನಿಯ ಸಂಗತಿಯಾಗಿದೆ. ಗಣಿ ಗ್ರಾಮೀಣ ಪ್ರದೇಶದ ಮಹಿಳೆಯರು ಶೈಕ್ಷಣಿಕವಾಗಿ ಸುಧಾರಣೆ ಆಗಬೇಕಾಗಿರುವ ಅಗತ್ಯತೆಯಿದೆ.

### ೩.೪ ಕುಟುಂಬಗಳ ಅನಕ್ಷರಸ್ಥ ಮಕ್ಕಳ ಪ್ರಮಾಣ

ಯಾವುದೇ ಒಂದು ಪ್ರದೇಶದ ಶೈಕ್ಷಣಿಕ ಗುಣಮಟ್ಟವನ್ನು ಅರಿಯುವಲ್ಲಿ ಅನಕ್ಷರಸ್ಥರ ಪ್ರಮಾಣವು ಅತಿ ಮುಖ್ಯವಾಗಿರುವ ಅಂಶವಾಗಿದೆ. ಅನಕ್ಷರಸ್ಥರು ಗ್ರಾಮ– ನಗರ– ದೇಶಗಳಲ್ಲಿ ಹೆಚ್ಚಾಗಿದ್ದು, ಆ ಪ್ರದೇಶವು ಶೈಕ್ಷಣಿಕ ಮಟ್ಟದ ಸಾಧನೆಯಿಂದಾಗಿ ಹಿಂದುಳಿದಿದೆ ಎಂಬ ಅಂಶವನ್ನು ಗ್ರಹಿಸಬಹುದು. ಗಣಿ ಕೇಂದ್ರಿಕೃತ ಗ್ರಾಮೀಣ ಪ್ರದೇಶಗಳಲ್ಲಿ ಅನಕ್ಷರಸ್ಥರ ಪ್ರಮಾಣವನ್ನು ಅರಿತುಕೊಳ್ಳುವ ಮೂಲಕ ಗ್ರಾಮೀಣ ಮಟ್ಟದ ಶೈಕ್ಷಣಿಕ ಸಾಧನೆ ಆಗಿದೆಯೇ ಇಲ್ಲವೋ ಅನಕ್ಷರಸ್ಥರಾಗಲು ಕಾರಣಗಳೇನು? ಎಂಬ ಮಾಹಿತಿಯನ್ನು ಕುಟುಂಬಗಳಿಂದ ಸಂಗ್ರಹಿಸಿದ ಅಂಕಿ–ಅಂಶಗಳನ್ನು ಈ ಕೆಳಗಿನ ಕೋಷ್ಟಕದ ಮೂಲಕ ದಾಖಲಿಸಿ ಮಾಹಿತಿ ವಿಶ್ಲೇಷಣೆ ಮಾಡಲಾಗಿದೆ.

**ಕೊಷ್ಟಕ ೩.೧೫ ಕುಟುಂಬಗಳ ಅನಕ್ಷರಸ್ಥ ಮಕ್ಕಳ ಪ್ರಮಾಣದ ವಿವರ (೬–೧೨ ವರ್ಷದೊಳಗೆ)**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಬಳ್ಳಾರಿ ತಾಲ್ಲೂಕು | | ಸಂಡೂರು ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕುಟುಂಬದಲ್ಲಿ ಅನಕ್ಷರಸ್ಥ ಮಕ್ಕಳಿದ್ದಾರಾ? | | | | | | |
| | ಹೌದು | ೮೬ | ೯೫.೫೫ | ೭೫ | ೮೩.೩೩ | ೭೬ | ೮೪.೪೪ |
| | ಇಲ್ಲ | ೦೪ | ೦೪.೪೫ | ೧೫ | ೧೬.೬೭ | ೧೪ | ೧೫.೫೬ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |
| ೦೨ | ಹೌದಾದರೆ ಕುಟುಂಬದಲ್ಲಿರುವ ಗಂಡು ಹೆಣ್ಣು ಮಕ್ಕಳ ಪ್ರಮಾಣ | | | | | | |
| | ಗಂಡು | ೫೬ | ೫೯.೫೭ | ೪೨ | ೪೦.೭೭ | ೩೮ | ೪೬.೯೧ |
| | ಹೆಣ್ಣು | ೩೮ | ೪೦.೪೩ | ೬೧ | ೫೯.೨೩ | ೪೩ | ೫೩.೦೯ |
| | **ಒಟ್ಟು** | **೯೪** | **೧೦೦** | **೧೦೩** | **೧೦೦** | **೮೧** | **೧೦೦** |
| ೦೩ | ಕುಟುಂಬದಲ್ಲಿರುವ ಮಕ್ಕಳು ಅನಕ್ಷರಸ್ಥರಾಗಲೂ ಕಾರಣ | | | | | | |
| | ಗಣಿಗಾರಿಕೆ | ೧೯ | ೨೨.೦೯ | ೨೫ | ೩೩.೩೩ | ೨೭ | ೩೫.೫೨ |
| | ಬಡತನ | ೩೩ | ೩೮.೩೭ | ೨೦ | ೨೬.೬೭ | ೨೩ | ೩೦.೨೬ |
| | ಆರ್ಥಿಕ ತೊಂದರೆ | ೧೭ | ೧೯.೭೬ | ೧೨ | ೧೬.೦೦ | ೧೯ | ೨೫.೦೦ |
| | ಶಾಲಾ ಅಂತರ | ೧೨ | ೧೩.೯೫ | ೦೯ | ೧೨.೦೦ | ೦೪ | ೦೫.೨೬ |
| | ಭಾಷೆ | ೦೫ | ೦೫.೮೩ | ೦೯ | ೧೨.೦೦ | ೦೩ | ೦೩.೯೬ |
| | **ಒಟ್ಟು** | **೮೬** | **೧೦೦** | **೭೫** | **೧೦೦** | **೭೬** | **೧೦೦** |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೩.೧೫ರಲ್ಲಿ ಅವಲೋಕಿಸಿದಾಗ ಗಣಿ ವಲಯಗಳಾಗಿರುವ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಕುಟುಂಗಳಲ್ಲಿ ಇರುವ ಅನಕ್ಷರಸ್ಥ ಮಕ್ಕಳ ಪ್ರಮಾಣವನ್ನು ತಿಳಿದುಕೊಳ್ಳುವ ಅವಶ್ಯಕತೆ ಇದೆ. ಅನಕ್ಷರಸ್ಥ ಮಕ್ಕಳನ್ನು ಹೊಂದಿರುವ ಕುಟುಂಬಗಳಲ್ಲಿ ಲಿಂಗವಾರು ಅನಕ್ಷರಸ್ಥರ ಪ್ರಮಾಣ ಎಷ್ಟಿದೆ? ಈ ಕುಟುಂಬಗಳಲ್ಲಿ ಮಕ್ಕಳು ಅನಕ್ಷರಸ್ಥರಾಗಲು ಯಾವ ಯಾವ ಅಂಶಗಳು ಕಾರಣವಾಗಿವೆ ಎಂಬ ಮಾಹಿತಿಯನ್ನು ಅಂಕಿ–ಅಂಶಗಳ ಮೂಲಕ ಗ್ರಹಿಸಬೇಕಾದ ಅಗತ್ಯತೆ ಗ್ರಾಮೀಣ ಪ್ರದೇಶಗಳಲ್ಲಿ ಪ್ರಮುಖವಾಗಿವೆ. ಗಣಿ ಗ್ರಾಮೀಣ ಪ್ರದೇಶದಲ್ಲಿ ಅನಕ್ಷರಸ್ಥರಿಗೆ ಸಂಬಂದಿಸಿದಂತೆ ಕುಟಂಬಗಳಲ್ಲಿ ಅನಕ್ಷರಸ್ಥ ಮಕ್ಕಳಿದ್ದಾರಾ? ಇದ್ದರೆ ಪುರುಷ ಮತ್ತು ಮಹಿಳೆ ಅನಕ್ಷರಸ್ಥರ ಪ್ರಮಾಣವೆಷ್ಟಿದೆ? ಈ ಅನಕ್ಷರಸ್ಥತೆಗೆ ಕಾರಣಗಳೇನು? ಎಂಬ ಮೂರು ವರ್ಗಗಳಾಗಿ ವಿಂಗಡಿಸಿ ಪ್ರತಿ ತಾಲ್ಲೂಕಿನಲ್ಲಿ ೯೦ ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕಿನಲ್ಲಿ ಅನಕ್ಷರಸ್ಥ ಮಕ್ಕಳ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ. ಮೊದಲನೆಯದಾಗಿ ನಿಮ್ಮ ಕುಟುಂಬದಲ್ಲಿ ಅನಕ್ಷರಸ್ಥ ಮಕ್ಕಳಿದ್ದಾರಾ? ಎಂಬ ಪ್ರಶ್ನೆಗೆ ಕುಟುಂಬಗಳು ನೀಡಿರುವ ಮಾಹಿತಿಯ ಪ್ರಕಾರ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೮೬ ಕುಟುಂಬಗಳ ಮಕ್ಕಳು ಶೇ.೯೫.೫೫ರಷ್ಟು ಅನಕ್ಷರಸ್ಥರಾಗಿದ್ದಾರೆ. ಇನ್ನು ೦೪ ಕುಟುಂಬಗಳಲ್ಲಿ ಮಕ್ಕಳು ಅನಕ್ಷರಸ್ಥರು ಇಲ್ಲ ಎಂಬ ಮಾಹಿತಿ ಲಭ್ಯವಿದ್ದು, ಶೇ.೦೪.೪೪ರಷ್ಟಿದ್ದಾರೆ. ನಿಮ್ಮ ಕುಟುಂಬದಲ್ಲಿ ಅನಕ್ಷರಸ್ಥ ಮಕ್ಕಳು ಇದೆಯಾದರೆ, ಈ ೮೬ ಕುಟುಂಬದಲ್ಲಿ ಅನಕ್ಷರಸ್ಥರನ್ನು ಲಿಂಗವಾರು ಪ್ರಮಾಣ ಎಷ್ಟಿದೆ ಎಂಬ ಪ್ರಶ್ನೆಗೆ ಈ ತಾಲ್ಲೂಕಿನಲ್ಲಿ ಅನಕ್ಷರಸ್ಥ ಗಂಡು ಮಕ್ಕಳು ೫೬ ಸಂಖ್ಯೆಯಲ್ಲಿದ್ದು, ಶೇ.೫೯.೫೭ರಷ್ಟಿದರೆ, ೩೮ ಹೆಣ್ಣು ಮಕ್ಕಳು ಅಂದರೆ ಶೇ.೪೦.೪೩ರಷ್ಟು ಅನಕ್ಷರಸ್ಥರಿದ್ದಾರೆ. ಬಳ್ಳಾರಿ ತಾಲ್ಲೂಕಿನಲ್ಲಿ ಅನಕ್ಷರಸ್ಥರು ಹೊಂದಿರುವ ಮಕ್ಕಳು ೭೫ ಕುಟುಂಬಗಳಲ್ಲಿದ್ದು ಶೇ.೮೩.೩೩ರಷ್ಟಿದರೆ ಇನ್ನುಳಿದ ೧೫ ಕುಟುಂಬಗಳಲ್ಲಿ ಅನಕ್ಷರಸ್ಥ ಹೊಂದಿರದ ಮಕ್ಕಳಿದ್ದು, ಪ್ರತಿಶತ ಶೇ೧೬.೬೬ರಷ್ಟಿದ್ದಾರೆ. ಈ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಲಿಂಗವಾರು ಅನಕ್ಷರಸ್ಥ ಮಕ್ಕಳ ಪ್ರಮಾಣವನ್ನು ಗಣನೆಗೆ ತೆಗೆದುಕೊಳ್ಳುವುದಾದರೆ, ೭೫ ಕುಟುಂಬಗಳಲ್ಲಿ ೧೦೩ ಅನಕ್ಷರಸ್ಥ ಮಕ್ಕಳಿದ್ದು, ಇದರಲ್ಲಿ ೪೨ ಗಂಡು ಮಕ್ಕಳಿದ್ದು ಪ್ರತಿಶತ ಶೇ.೪೦.೭೭ರಷ್ಟಿದ್ದಾರೆ. ಅನಕ್ಷರಸ್ಥ ಹೆಣ್ಣು ಮಕ್ಕಳು ೬೧ ಸಂಖ್ಯೆಯಲ್ಲಿದ್ದು, ಪ್ರತಶತವಾಗಿ ಶೇ.೫೯.೨೩ರಷ್ಟಿರುವುದು ಗಮನಿಸಬಹುದಾಗಿದೆ. ಹಾಗೆಯೇ ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಒಟ್ಟು ೯೦ ಕುಟುಂಬಗಳಲ್ಲಿ ೭೬ ಕುಟುಂಬಗಳು ಅನಕ್ಷರಸ್ಥ ಮಕ್ಕಳು ಇರುವ ಪ್ರಮಾಣವಿದ್ದು, ಶೇ.೮೪.೪೪ರಷ್ಟಿದರೆ, ಇನ್ನು ೧೪ ಕುಟುಂಬಗಳಲ್ಲಿ ಅನಕ್ಷರಸ್ಥರಲ್ಲದ ಮಕ್ಕಳ ಪ್ರಮಾಣ ಶೇ.೧೫.೫೬ರಷ್ಟಿದ್ದಾರೆ. ಈ ಕುಟುಂಬಗಳಲ್ಲಿ ಅನಕ್ಷರಸ್ಥ ಮಕ್ಕಳನ್ನು ಹೊಂದಿರುವ (೭೬)ಕುಟುಂಬಗಳಲ್ಲಿ ಒಟ್ಟು ೮೧ ಅನಕ್ಷರಸ್ಥರು ಮಕ್ಕಳಿದ್ದಾರೆ. ಇದರಲ್ಲಿ ೩೮ ಗಂಡು ಮಕ್ಕಳು ಶೇ.೪೬.೯೧ರಷ್ಟಿದರೆ, ೪೩ ಹೆಣ್ಣು ಮಕ್ಕಳು ಶೇ.೫೩.೦೯ರಷ್ಟು ಅನಕ್ಷರಸ್ಥರಿದ್ದಾರೆ. ಒಟ್ಟಾರೆಯಾಗಿ ಗಣಿ ಗಾಮೀಣ ವಲಯದ ತಾಲ್ಲೂಕುಗಳಲ್ಲಿ ಹೆಚ್ಚು ಅನಕ್ಷರಸ್ಥ ಮಕ್ಕಳನ್ನು ಹೊಂದಿರುವ ಕುಟುಂಬಗಳು ಹೊಸಪೇಟೆ ತಾಲ್ಲೂಕಿನಲ್ಲಿದ್ದು, ಶೇ.೯೫.೫೫ರಷ್ಟಿದೆ. ಕಡಿಮೆ ಅನಕ್ಷರಸ್ಥ ಮಕ್ಕಳನ್ನು ಹೊಂದಿರುವ ಕುಟುಂಬಗಳು ಶೇ.೮೩.೩೩ರಷ್ಟು ಬಳ್ಳಾರಿ ತಾಲ್ಲೂಕಿನಲ್ಲಿರುವುದು ಕಂಡುಬಂದಿದೆ. ಲಿಂಗವಾರು ಅನಕ್ಷರಸ್ಥ ಮಕ್ಕಳಿರುವ ಕುಟುಂಬಗಳಲ್ಲಿ ಗಂಡು ಮಕ್ಕಳ ಶೇ.೫೯.೫೭ರಷ್ಟು ಅನಕ್ಷರಸ್ಥ ಪ್ರಮಾಣ ಈ ಮೂರು ತಾಲ್ಲೂಕುಗಳಲ್ಲಿ ಹೊಸಪೇಟೆ ತಾಲ್ಲೂಕಿನಲ್ಲಿ ಅಧಿಕವಾಗಿದೆ. ಅತ್ಯಂತ ಕಡಿಮೆ ಅನಕ್ಷರಸ್ಥ ಗಂಡು ಮಕ್ಕಳನ್ನು ಶೇ.೪೦.೭೭ರಷ್ಟಿರುವುದು ಸಂಡೂರು ತಾಲ್ಲೂಕಿನಲ್ಲಿದೆ. ಹೆಣ್ಣು ಮಕ್ಕಳ ಅನಕ್ಷರಸ್ಥರು ಹೆಚ್ಚು ಬಳ್ಳಾರಿ ತಾಲ್ಲೂಕಿನಲ್ಲಿ ಶೇ.೫೯.೨೩ರಷ್ಟಿದರೆ, ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೪೦.೪೨ರಷ್ಟು ಕಡಿಮೆ ಇದೆ. ಹೀಗೆ ಗಣಿ ವಲಯದ ಗ್ರಾಮೀಣ ಕುಟುಂಬಗಳಲ್ಲಿ ಅನಕ್ಷರಸ್ಥ ಮಕ್ಕಳು ಇರಲು ಗಣಿಗಾರಿಕೆ, ಬಡತನ, ಆರ್ಥಿಕ ತೊಂದರೆ, ಶಾಲಾ ಅಂತರ, ಭಾಷೆ, ಇತ್ಯಾದಿ ಕಾರಣಗಳಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಗಣಿಗಾರಿಕೆ ಪ್ರಕ್ರಿಯೆ ಪ್ರರಾಂಭವಾಗಿರುವ ಕಾರಣವೇ ಅನಕ್ಷರಸ್ಥರಾಗಲು ಪ್ರಮುಖವಾದ ಅಂಶವಾಗಿರಬಹುದು. ಈ ಕಾರಣಗಳು ಯಾವ ಯಾವ ತಾಲ್ಲೂಕಿನಲ್ಲಿ

ಪ್ರಭಾವಿತವಾಗಿವೆ ಎಂಬ ಮಾಹಿತಿಯನ್ನು ಕುಟುಂಬಗಳ ಮಾಹಿತಿದಾರರಿಂದ ಸಂಗ್ರಹಿಸಿದ ಅಂಕಿ-ಅಂಶಗಳ ಆಧಾರದ ಮೇಲೆ ವಿಶ್ಲೇಷಣೆ ಮಾಡುವ ಅಗತ್ಯವಿದೆ. ಗಣಿ ಕೇಂದ್ರಿಕೃತ ಗ್ರಾಮೀಣ ಪ್ರದೇಶಗಳಲ್ಲಿ ಏಕೆ ಅನಕ್ಷರಸ್ಥ ಮಕ್ಕಳ ಪ್ರಮಾಣ ಹೆಚ್ಚಾಗಿರಲು ಕಾರಣವೇನು? ಎಂಬ ಪ್ರಶ್ನೆಗೆ ಕುಟುಂಬಗಳು ನೀಡಿರುವ ಮಾಹಿತಿಯ ಪ್ರಕಾರ ಹೊಸಪೇಟೆ ತಾಲ್ಲೂಕಿನ ೮೬ ಕುಟುಂಬಗಳಲ್ಲಿ ೧೯ ಕುಟುಂಬಗಳು ಗಣಿಗಾರಿಕೆ ಶೇ.೨೨.೦೯ರಷ್ಟು, ೩೩ ಕುಟುಂಬಗಳು ಬಡತನ ಶೇ.೩೮.೩೭ರಷ್ಟು, ೧೭ ಕುಟುಂಬಗಳು ಅರ್ಥಿಕ ತೊಂದರೆ ಶೆ.೧೯.೩೭ರಷ್ಟು, ೧೨ ಕುಟುಂಬಗಳು ಶಾಲಾ ಅಂತರ ಶೆ೧೩.೯೫ರಷ್ಟು, ೦೫ ಕುಟುಂಬಗಳು ಶೇ.೦೫.೮೩ರಷ್ಟು ಭಾಷೆಯ ಅಂಶಗಳು ಕಾರಣಗಳಾಗಿವೆ. ಕ್ರಮವಾಗಿ ಪ್ರತಿಶತ ಶೇ.೨೨.೦೯, ಶೇ.೩೮.೩೭, ಶೇ.೧೯.೭೬, ಶೇ೧೩.೯೫, ಶೇ.೦೫.೮೧ರಷ್ಟಿದೆ. ಹಾಗೂ ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು ೭೮ ಕುಟುಂಬಗಳಲ್ಲಿ ೨೫ ಕುಟುಂಬಗಳು ಗಣಿಗಾರಿಕೆ ಶೇ.೩೩.೩೩ರಷ್ಟು, ೨೦ ಕುಟುಂಬಗಳು ಬಡತನ ಶೇ.೨೬.೬೭ರಷ್ಟು, ಆರ್ಥಿಕ ತೊಂದರೆ ೧೨ ಕುಟುಂಬಗಳು ಶೇ.೧೬.೦೦ರಷ್ಟು, ೦೯ ಕುಟುಂಬಗಳು ಶಾಲಾ ಅಂತರ ಶೇ.೧೨.೦೦ರಷ್ಟು, ಭಾಷಾ ಸಮಸ್ಯೆ ಶೇ.೧೨.೦೦ರಷ್ಟು ೦೯ ಕುಟುಂಬಗಳಲ್ಲಿ ಅನಕ್ಷರಸ್ಥ ಮಕ್ಕಳು ಇರಲು ಕಾರಣವಾಗಿದೆ ಎಂಬ ಅಂಶ ಗಮನಕ್ಕೆ ಬಂದಿದೆ. ಹಾಗೆಯೇ ಸಂಡೂರು ಗಣಿ ಗ್ರಾಮೀಣ ಪ್ರದೇಶದ ಒಟ್ಟು ೭೬ ಕುಟುಂಬಗಳಲ್ಲಿ ಅನಕ್ಷರಸ್ಥ ಮಕ್ಕಳಿದ್ದಾರೆ. ಈ ಮಕ್ಕಳು ಅನಕ್ಷರಸ್ಥರಾಗಲು ಕಾರಣವೇನು ಎಂಬುವುದನ್ನು ತಿಳಿಸಿದ್ದಾರೆ. ೨೭ ಕುಟುಂಬಗಳು ಗಣಿಗಾರಿಕೆ ಶೇ.೩೫.೫೩ರಷ್ಟು, ೨೩ ಕುಟುಂಬಗಳು ಬಡತನ ಶೇ.೩೦.೨೬ರಷ್ಟು, ೧೯ ಕುಟುಂಬಗಳು ಆರ್ಥಿಕ ತೊಂದರೆ ಶೇ.೨೫.೦೦ರಷ್ಟು, ೦೪ ಕುಟುಂಬಗಳು ಶಾಲಾ ಅಂತರ ಶೇ.೦೫.೨೬ರಷ್ಟು, ೦೩ ಕುಟುಂಬಗಳು ಭಾಷಾ ಸಮಸ್ಯೆ ಶೇ.೦೩.೯೬ರಷ್ಟು ಕುಟುಂಬಗಳಲ್ಲಿ ಮಕ್ಕಳು ಅನಕ್ಷಸ್ಥರಾಗಲು ಕಾರಣಗಳಾಗಿವೆ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಒಟ್ಟಾರೆಯಾಗಿ ಈ ಮೂರು ಗಣಿ ಗ್ರಾಮೀಣ ತಾಲ್ಲೂಕುಗಳ ಕುಟುಂಬಗಳು ಸೂಚಿಸಿರುವಂತೆ ಗಾಮೀಣ ಭಾಗದ ಪ್ರದೇಶಗಳಲ್ಲಿ ಕುಟುಂಬಗಳ ಮಕ್ಕಳು ಅನಕ್ಷರಸ್ಥರಾಗಲು ಗಣಿಗಾರಿಕೆಯೇ ಪ್ರಬಲವಾದ ಕಾರಣವಾಗಿದೆ ಎಂದು ಸಂಡೂರು ಮತ್ತು ಬಳ್ಳಾರಿ ತಾಲ್ಲೂಕುಗಳಲ್ಲಿ ಕಂಡುಬಂದರೆ, ಮತ್ತೊಂದೆಡೆ ಕುಟುಂಬಗಳಲ್ಲಿ ಮಕ್ಕಳು ಅನಕ್ಷರಸ್ಥಾಗಲು ಭಾಷೆಯ ಸಮಸ್ಯೆಯು ಕಡಿಮೆ ಪ್ರಮಾಣದ ಕಾರಣಗಳಾಗಿದೆ ಎಂದು ಗ್ರಹಿಸಬಹುದಾಗಿದೆ.

**೩.೫ ಶೈಕ್ಷಣಿಕ ಪ್ರಭಾವಿತ ಅಂಶಗಳು**

ಶೈಕ್ಷಣಿಕ ಸಾಧನೆಯನ್ನು ಅಳೆಯಲು ವರ್ಗಾವಣೆಯಾದ ಮಕ್ಕಳ ಪ್ರಮಾಣದಿಂದ ಅಳೆಯಲು ಸಾದ್ಯ. ಮಕ್ಕಳ ವರ್ಗಾವಣೆಯಾದ ಪ್ರಮಾಣಗಳ ಆಧಾರದ ಮೇಲೆ ಮಕ್ಕಳ ಕಲಿಕೆಯಲ್ಲಿ ಸಾಧಿಸಿರುವ ಅಥವಾ ಕಂಡು ಬರುವ ಏರಿಳಿತವನ್ನು ಸೂಚಿಸಬಹುದಾಗಿದೆ. ಯಾವುದೇ ಒಂದು ಪ್ರದೇಶದಲ್ಲಿ ಶಾಲೆಯನ್ನು ಪೂರ್ಣಗೊಳಿಸುವ ಅನುಪಾತವು ಕೂಡ ಶಾಲಾ ವ್ಯವಸ್ಥೆಯ ಸಾಧನೆಯನ್ನು ಪ್ರತಿಫಲಿಸುತ್ತದೆ. ಕೋಷ್ಟಕ ೩.೧೬ರಲ್ಲಿ ಜಿಲ್ಲೆಯಲ್ಲಿರುವ ಹಿರಿಯ ಪ್ರಾಥಮಿಕ ಮತ್ತು ಫ್ರೌಡ ಶಾಲೆಯಲ್ಲಿ ಶಿಕ್ಷಣವನ್ನು ಪೂರ್ಣಗೊಳಿಸಿರುವ ಮಕ್ಕಳ ಅನುಪಾತ ಕುರಿತ ಮಾಹಿತಿಯನ್ನು ನೀಡಲಾಗಿದೆ. ಈ ಸೂಚ್ಯಂಕವು ಒಂದು ನಿರ್ದಿಷ್ಟ ತರಗತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಮಕ್ಕಳ ಶೇಕಾಡ ಪ್ರಮಾಣವನ್ನು ಈ ಕೋಷ್ಟಕ ೩.೧೬ರಲ್ಲಿ ತಿಳಿಸಿಲಾಗಿದೆ.

**ಕೋಷ್ಟಕ ೩.೧೬ ಒಂದು ವರ್ಷದಲ್ಲಿ ೫ನೇ ತರಗತಿಯಿಂದ ೬ನೇ ತರಗತಿಗೆ ಮತ್ತು ೭ನೇ ತರಗತಿಯಿಂದ ೮ನೇ ತರಗತಿಗೆ ದಾಖಲಾದ ಮಕ್ಕಳ ಪರಿವರ್ತನಾ ಅನುಪಾತದ ವಿವರ**

| ತಾಲ್ಲೂಕುಗಳು | ೫ನೇ ತರಗತಿಯಿಂದ ೬ನೇ ತರಗತಿಗೆ ದಾಖಲಾದ ಮಕ್ಕಳ ಪರಿವರ್ತನಾ ಅನುಪಾತ | | ೭ನೇ ತರಗತಿಯಿಂದ ೮ನೇ ತರಗತಿಗೆ ದಾಖಲಾದ ಮಕ್ಕಳ ಪರಿವರ್ತನಾ ಅನುಪಾತ | |
|---|---|---|---|---|
| | ಹುಡುಗರು | ಹುಡುಗಿಯರು | ಹುಡುಗರು | ಹುಡುಗಿಯರು |
| ಬಳ್ಳಾರಿ | ೯೧.೭೬ | ೯೦.೪೦ | ೯೧.೦೬ | ೮೦.೪೫ |
| ಹಡಗಲಿ | ೮೪.೦೩ | ೯೨.೧೪ | ೮೧.೦೭ | ೮೧.೯೪ |
| ಹೆಚ್.ಬಿ.ಹಳ್ಳಿ | ೯೩.೬೮ | ೯೦.೨೨ | ೮೭.೨೭ | ೮೫.೫೯ |
| ಹೊಸಪೇಟೆ | ೯೦.೪೫ | ೮೭.೩೦ | ೯೧.೫೨ | ೭೯.೦೪ |
| ಕೂಡ್ಲಿಗಿ | ೮೮.೩೭ | ೯೬.೮೮ | ೭೮.೬೫ | ೮೨.೮೭ |
| ಸಂಡೂರು | ೮೭.೪೨ | ೮೬.೬೮ | ೯೨.೩೦ | ೭೮.೪೫ |
| ಸಿರುಗುಪ್ಪ | ೮೧.೪೧ | ೭೮.೬೮ | ೭೮.೬೫ | ೭೯.೦೪ |
| **ಜಿಲ್ಲಾ ಒಟ್ಟು** | **೮೮.೮೩** | **೮೯.೧೫** | **೯೨.೩೦** | **೮೨.೮೭** |

**ಮೂಲ : ಜಿಲ್ಲಾ ಮಾನವ ಅಭಿವೃದ್ಧಿ ವರದಿ ೨೦೧೪**

ಮೇಲಿನ ಕೋಷ್ಟಕವು ಜಿಲ್ಲೆಯ ಹಿರಿಯ ಪ್ರಾಥಾಮಿಕ ಹಂತದಲ್ಲಿ ಹುಡಗಿಯರು ಶೇ.೮೯.೧೫ರಷ್ಟು ಶಾಲೆಯನ್ನು ಸ್ವಲ್ಪಮಟ್ಟಿಗೆ ಪೂರ್ಣಗೊಳಿಸಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಒಟ್ಟಾರೆಯಾಗಿ ಜಿಲ್ಲೆಯಲ್ಲಿ ಹುಡುಗರ ಪ್ರಮಾಣವು ಶೇ.೮೮.೮೩ರಷ್ಟಿದ್ದು ಕೆಳಮಟ್ಟದಲ್ಲಿರುವುದು ಗಮನಿಸಿಸಬಹುದಾಗಿದೆ. ಜಿಲ್ಲೆಯ ಎಲ್ಲಾ ತಾಲ್ಲೂಕುಗಳನ್ನು ಹೋಲಿಸಿದಾಗ, ಹೆಚ್.ಬಿ.ಹಳ್ಳಿಯು ಶೇ.೯೩.೬೮ರೊಂದಿಗೆ ಹುಡುಗರ ಪ್ರಮಾಣ ಅತ್ಯತ್ತಮ ಸಾಧನೆಯನ್ನು ತೊರಿಸಿದರೆ, ಕೂಡ್ಲಿಗಿಯು ಶೇ.೯೬.೫೬ರಷ್ಟು ಹುಡುಗರ ಪ್ರಮಾಣ ಅತ್ಯತ್ತಮ ಸಾಧನೆ ಮಾಡಿರುವುದನ್ನು ತೊರಿಸುತ್ತದೆ. ಆದರೆ ಪ್ರೌಡಶಾಲಾ ಹಂತದ ಕಡೆ ನೋಡಿದಾಗ, ಹುಡಗರು ಶೇ.೮೬.೯೪ರಷ್ಟು ಉತ್ತಮ ಸಾಧನೆ ತೋರಿದರೆ, ಹುಡುಗಿಯರ ಪ್ರಮಾಣ ಶೇ ೮೦.೬೧ರಷ್ಟಿದೆ. ಸಿರುಗುಪ್ಪ ತಾಲ್ಲೂಕಿನಲ್ಲಿ ಶಾಲಾಯನ್ನು ಪೂರ್ಣಗೊಳಿಸುವ ಅನುಪಾತ ಹುಡುಗರು ಮತ್ತು ಹುಡುಗಿಯರ ಪ್ರಮಾಣದಲ್ಲೂ ಕಡಿಮೆ ಇದ್ದು, ಕ್ರಮವಾಗಿ ಶೇ.೮೧.೪೧ ಮತ್ತು ಶೇ.೭೮.೬೮ರಷ್ಟಿದೆ. ಜಿಲ್ಲೆಯಲ್ಲಿ ಫ್ರೌಡಶಾಲೆಯನ್ನು ಪೂರ್ಣಗೊಳಿಸುವ ಅನುಪಾತವು ಹಿರಿಯ ಪ್ರಾಥಮಿಕ ಶಾಲಾ ಹಂತದ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಾಣಸಿಗುತ್ತದೆ. ಕೂಡ್ಲಿಗಿ ಮತ್ತು ಸಿರುಗುಪ್ಪ ತಾಲ್ಲೂಕುಗಳು ಅತೀ ಕಡಿಮೆ ಸಾಧನೆ ಮಾಡಿರುವುದರಿಂದ ಈ ತಾಲ್ಲೂಕುಗಳಲ್ಲಿ ಪರಿವರ್ತನಾ ಸೂಚ್ಯಂಕಗಳನ್ನು ಒಳಪಡಿಸುವ ಅವಶ್ಯಕತೆ ಇದೆ. ಗಣಿ ವಲಯಗಳಾದ ಬಳ್ಳಾರಿ, ಹೊಸಪೇಟೆ, ಸಂಡೂರು, ತಾಲ್ಲೂಕುಗಳಲ್ಲಿ ಈ ಪರಿವರ್ತನಾ ಸೂಚ್ಯಂಕವನ್ನು ಗಮನಿಸುವುದಾದರೆ, ಹಿರಿಯ ಪ್ರಾಥಮಿಕ ಶಾಲಾ ಹಂತದಲ್ಲಿ ಬಳ್ಳಾರಿ ತಾಲ್ಲೂಕಿನ ಹುಡಗಿಯರು ಶೇ.೯೦.೪೦ರಷ್ಟು ಇದ್ದು, ಹುಡುಗರ ಪ್ರಮಾಣ ಶೇ.೯೧.೯೬ರಷ್ಟಿದೆ, ಸಂಡೂರು ತಾಲ್ಲೂಕಿನಲ್ಲಿ ಹುಡಗರ ಪ್ರಮಾಣ ಶೇ.೮೭.೪೨ರಷ್ಟಿದರೆ, ಶೇ.೮೭.೩೦ರಷ್ಟು ಹುಡುಗಿಯರು ಶಾಲೆಯನ್ನು ಪೂರ್ಣಗೊಳಿಸಿರುವುದು ಗೋಚರಿಸುವ ಪ್ರಮುಖ ಅಂಶವಾಗಿದೆ. ಈ ವಲಯದ ಮೂರು ತಾಲ್ಲೂಕುಗಳಲ್ಲಿ ಸಂಡೂರು ತಾಲ್ಲೂಕಿನ ಮಕ್ಕಳು ಪ್ರಾಥಾಮಿಕ ಶಾಲೆಯನ್ನು ಪೂರ್ಣಗೊಳಿಸಿರುವುದು ಸ್ವಲ್ಪ ಮಟ್ಟಿಗೆ ಕೆಳ ಮಟ್ಟದಾಗಿದೆ. ಅದರೆ ಫ್ರೌಡಶಾಲಾ ಹಂತದಲ್ಲಿ ಶಾಲಾಯನ್ನು ಪೂರ್ಣಗೊಳಿಸಿರುವ ಪ್ರಮಾಣವು ಬಳ್ಳಾರಿ ತಾಲ್ಲೂಕಿನ ಹುಡಗರು ಶೇ.೯೧.೦೬ರೊಂದಿಗೆ ಸಾಧನೆಯನ್ನು ತೋರಿದರೆ, ಹುಡುಗಿರಯರು ಶೇ.೮೦.೪೫ರಷ್ಟರ ಪ್ರಮಾಣದಲ್ಲಿ ಶಾಲೆಯನ್ನು ಪೂರ್ಣಗೊಳಿಸಿದ್ದಾರೆ. ಈ ತಾಲ್ಲೂಕಿನಲ್ಲಿ ಹುಡುಗರ

ಪ್ರಮಾಣಕ್ಕಿಂತಲೂ ಹುಡುಗಿಯರು ಶಾಲೆಯನ್ನು ಪೂರ್ಣಗೊಳಿಸುವಲ್ಲಿ ಹಿಂದುಳಿದಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ ಫ್ರೌಡಶಾಲಾ ಹಂತವನ್ನು ಪೂರ್ಣಗೊಳಿಸುವಲ್ಲಿ ಹುಡುಗರು ಶೇ.೯೨.೩೦ರಷ್ಟಿದ್ದರೇ, ಹುಡುಗಿಯರ ಪ್ರಮಾಣ ಶೇ.೮೨.೮೭ರಷ್ಟಿದೆ. ಫ್ರೌಡ ಶಾಲಾ ಹಂತವನ್ನು ಪೂರ್ಣಗೊಳಿಸುವಲ್ಲಿ ಈ ತಾಲ್ಲೂಕಿನಲ್ಲಿಯೂ ಹುಡುಗರ ಪ್ರಮಾಣಕ್ಕಿಂತಲೂ ಹುಡುಗಿಯರ ಪ್ರಮಾಣ ಕಡಿಮೆಯಿದ್ದು, ಫ್ರೌಡ ಶಾಲಾ ಹಂತದಲ್ಲಿ ಶಾಲೆಯನ್ನು ಪೂರ್ಣಗೊಳಿಸುವಲ್ಲಿ ಹಿಂದುಳಿದ್ದಾರೆ. ಹೊಸಪೇಟೆ ತಾಲ್ಲೂಕಿನಲ್ಲಿ ಫ್ರೌಡಶಾಲಾ ಹಂತದಲ್ಲಿ ಶಾಲೆಯನ್ನು ಪೂರ್ಣಗೊಳಿಸಿರುವ ಹುಡುಗರ ಪ್ರಮಾಣ ಶೇ.೯೧.೫೨ರಷ್ಟಿದರೇ, ಹುಡುಗಿಯರ ಪ್ರಮಾಣವು ಶೇ.೭೯.೦೪ರಷ್ಟಿದೆ. ಇದರಲ್ಲಿ ಹುಡುಗರ ಪ್ರಮಾಣಕ್ಕಿಂತಲೂ ಹುಡುಗಿಯರ ಪ್ರಮಾಣವು ಈ ಹಂತದಲ್ಲಿ ಹಿಂದುಳಿದಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಗಣಿ ವಲಯಗಳ ಈ ಮೂರು ತಾಲ್ಲೂಕಿನ ಪ್ರಾಥಾಮಿಕ ಶಾಲಾ ಹಂತದಲ್ಲಿ ಶಾಲೆಯನ್ನು ಪೂರ್ಣಗೊಳಿಸುವುದರಲ್ಲಿ ಸ್ವಲ್ಪ ಮಟ್ಟಿಗೆ ಅತ್ಯುತ್ತಮವಾಗಿ ಕಂಡು ಬಂದರೂ, ಫ್ರೌಡ ಶಾಲಾ ಹಂತದಲ್ಲಿ ಶಾಲೆಯನ್ನು ಪೂರ್ಣಗೊಳಿಸುವಲ್ಲಿ ಅತ್ಯಂತ ಕೆಳಮಟ್ಟದಾಗಿದೆ. ಈ ಗಣಿ ವಲಯಗಳಲ್ಲಿ ಹುಡುಗರ ಪ್ರಮಾಣಕ್ಕಿಂತಲೂ ಹುಡುಗಿಯರ ಪ್ರಮಾಣವು ಫ್ರೌಡಶಾಲಾ ಹಂತದಲ್ಲಿ ಶಾಲೆಯನ್ನು ಪೂರ್ಣಗೊಳಿಸುವಲ್ಲಿ ಕೆಳಮಟ್ಟದ ಸಾಧನೆಯನ್ನು ಮಾಡಿರುವುದು ತೋರುತ್ತದೆ. ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯಗಳಲ್ಲಿ ಶಾಲಾ ಪರಿವರ್ತನಾ ಸೂಚಿಗೆ ಸಂಬಂಧಿಸಿದಂತೆ ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ, ನಿಮ್ಮ ಕುಟುಂಬದಲ್ಲಿ ಒಂದು ತರಗತಿಯಿಂದ ಇನ್ನೊಂದು ತರಗತಿಗೆ ವರ್ಗಾವಣೆಯಾಗಿರುವ ಮಕ್ಕಳಿದ್ದಾರೆಯೇ? ಎಂಬ ಪ್ರಶ್ನೆ ಕೇಳಿದಾಗ ಕುಟುಂಬಗಳು ನೀಡಿರುವ ಮಾಹಿತಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಗಣಿ ವಲಯದ ಗ್ರಾಮೀಣ ಪ್ರದೇಶಗಳನ್ನು ಸಮೀಕ್ಷೆಗೆ ಒಳಪಡಿಸಿರುವ ೨೭೦ ಕುಟುಂಬಗಳ ಪೈಕಿ ೧೪೮ ಕುಟುಂಬಗಳಲ್ಲಿ ವರ್ಗಾವಣೆಯಾಗಿರುವ ಮಕ್ಕಳಿದ್ದಾರೆ. ಇನ್ನುಳಿದ ೧೨೨ ಕುಟುಂಬಗಳಲ್ಲಿ ಮಕ್ಕಳು ಶಾಲಾ–ಕಾಲೇಜಿನ ಹಂತವನ್ನು ಪೂರ್ಣಗೊಳಿಸಿರದ ಮಕ್ಕಳ ಪ್ರಮಾಣ ಇರುವುದು ಕಂಡುಬಂದಿದೆ. ಕ್ರಮವಾಗಿ ಜಿಲ್ಲೆಯಲ್ಲಿ ಶೇ.೫೪.೮೧ರಷ್ಟು ಕುಟುಂಬಗಳಲ್ಲಿ ಮಕ್ಕಳು ಶಾಲಾ–ಕಾಲೇಜು ಹಂತವನ್ನು ಪೂರ್ಣಗೊಳಿಸದಿರುವುದು ಗುರುತಿಸಬಹುದಾಗಿದೆ. ಈ ೨೭೦ ಕುಟುಂಬಗಳ ಮಾಹಿತಿಯನ್ನು ತಾಲ್ಲೂಕುವಾರು ವಿಂಗಡಿಸಲಾಗಿದೆ. ಅಂದರೆ ಶಾಲಾ ಮಕ್ಕಳ ಪರಿವರ್ತನಾ ಸೂಚ್ಯಂಕವು ಗಣಿ ವಲಯಗಳಾದ ಬಳ್ಳಾರಿ, ಹೊಸಪೇಟೆ, ಸಂಡೂರು, ತಾಲ್ಲೂಕುಗಳಲ್ಲಿ ಯಾವ ಪ್ರಮಾಣದಲ್ಲಿದೆ ಎಂಬ ಮಾಹಿತಿಯನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದಿರುವ ಫಲಿತಾಂಶವನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೩.೧೭ ಕುಟುಂಬಗಳ ಮಕ್ಕಳು ಶಾಲೆಯಲ್ಲಿ ವರ್ಗಾವಣೆ ಆಗಿರುವ ವಿವರ.**

| ಕ್ರ.ಸಂ. | ಪ್ರಶ್ನೆ | ಹೊಸಪೇಟೆ ತಾಲೂಕು | | ಸಂಡೂರು ತಾಲೂಕು | | ಬಳ್ಳಾರಿ ತಾಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಮನೆಯಲ್ಲಿ ವರ್ಗಾವಣೆಯಾದ ಮಕ್ಕಳು ಇದ್ದಾರೆಯೇ? | | | | | | |
| | ಹೌದು | ೪೦ | ೪೪.೪೪ | ೪೫ | ೫೦ | ೬೩ | ೭೦ |
| | ಇಲ್ಲ | ೫೦ | ೫೫.೫೬ | ೪೫ | ೫೦ | ೨೭ | ೩೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ

ಕೋಷ್ಟಕ ೩.೧೭ರಲ್ಲಿ ಕುಟುಂಬಗಳಲ್ಲಿ ಶಾಲೆಯನ್ನು ಪೂರ್ಣಗೊಳಿಸಿದ್ದು ಅಥವಾ ವರ್ಗಾವಣೆ ಆಗಿರುವ ಮಕ್ಕಳ ಪ್ರಮಾಣದ ಮಾಹಿತಿಯನ್ನು ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಒಟ್ಟು ೯ ಗ್ರಾಮಗಳನ್ನು ಅಯ್ಕೆ ಮಾಡಿಕೊಂಡಿರುವ ೨೭೦ ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ಪ್ರತಿ ತಾಲ್ಲೂಕಿನ ೯೦ ಕುಟುಂಬಗಳ ಮಾಹಿತಿಯನ್ನು ದಾಖಲಿಸಲಾಗಿದೆ. ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕಿನ ಕುಟುಂಬಗಳ ಮಕ್ಕಳು ಶಾಲೆಯಲ್ಲಿ ವರ್ಗಾವಣೆಯಾದ್ದಾರೆಯೇ? ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ಹೊಸಪೇಟೆ ತಾಲ್ಲೂಕಿನ ೯೦ ಕುಟುಂಬಗಳಲ್ಲಿ ವರ್ಗಾವಣೆ ಆಗಿರುವ ಮಕ್ಕಳು ೪೦ ಕುಟುಂಬಗಳಲ್ಲಿದ್ದು ಪ್ರತಿಶತ ಶೇ.೪೪.೪೪ರಷ್ಟಿದ್ದರೆ, ವರ್ಗಾವಣೆ ಆಗದೆ ಇರುವವರು ೫೦ ಕುಟುಂಬಗಳಲ್ಲಿದ್ದು, ಪ್ರತಿಶತ ಶೇ.೫೫.೫೬ರಷ್ಟು ಇದ್ದಾರೆ. ಸಂಡೂರು ತಾಲ್ಲೂಕಿನ ೯೦ ಕುಟುಂಬಗಳ ಪೈಕಿ ೪೫ ಕುಟುಂಬಗಳಲ್ಲಿ ಶಾಲಾ ವರ್ಗಾವಣೆಯಾಗಿರುವ ಮಕ್ಕಳಿದ್ದು, ಪ್ರತಿಶತ ಶೇ.೫೦ರಷ್ಟಿದರೆ ಶಾಲಾ ವರ್ಗಾವಣೆಯಾಗದೆ ಇರುವವರು ೪೫ ಕುಟುಂಬಗಳಿದ್ದು, ಶೇ.೫೦ರಷ್ಟು ಮಕ್ಕಳು ವರ್ಗವಣೆಯಾಗದೆ ಇರುವುದು ಕಂಡುಬಂದಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ೯೦ ಕುಟುಂಬಗಳ ಪೈಕಿ ೬೩ ಕುಟುಂಬಗಳ ಮಕ್ಕಳು ಶೇ.೭೦ರಷ್ಟು ವರ್ಗವಣೆಯಾಗಿದ್ದು, ಇನ್ನುಳಿದ ೨೭ ಕುಟುಂಬಗಳಲ್ಲಿ ಶೇ.೩೦ರಷ್ಟು ಶಾಲಾ ಮಕ್ಕಳು ವರ್ಗವಣೆ ಆಗಿರುವುದಿಲ್ಲ. ಈ ಕುಟುಂಬಗಳ ಮಾಹಿತಿಯು ತಾಲ್ಲೂಕುಗಳ ಒಟ್ಟು ೯ ಗ್ರಾಮಗಳ ಕುಟುಂಬಗಳಿಗೆ ಮಾತ್ರ ಅನ್ವಯವಾಗಿರುತ್ತದೆ. ಹಾಗಾದರೆ ಗಣಿ ವಲಯ ತಾಲ್ಲೂಕುಗಳ ಕುಟುಂಬಗಳಲ್ಲಿ ಶಾಲಾ ಪರಿವರ್ತನಾ ಸೂಚಿಯು ಕುಟುಂಬಗಳ ಮಕ್ಕಳ ಪ್ರಮಾಣವನ್ನು ಪ್ರಾಥಾಮಿಕ ಮೂಲಗಳಿಂದ ಮಾಹಿತಿ ಸಂಗ್ರಹಿಸಿದಾಗ ಕಂಡು ಬಂದಿರುವ ಫಲಿತಾಂಶವನ್ನು ಈ ಕೆಳಗಿನಂತೆ ತಾಲ್ಲೂಕುವಾರು ದಾಖಲಿಸಲಾಗಿದೆ.

**ಕೋಷ್ಟಕ ೩.೧೮ ತಾಲ್ಲೂಕುವಾರು ಕುಟುಂಬಗಳಲ್ಲಿ ವರ್ಗಾವಣೆಯಾದ ಮಕ್ಕಳ ಪ್ರಮಾಣಗಳ ವಿವರ**

| ಕ್ರ.ಸಂ. | ಶಾಲಾ/ಕಾಲೇಜು | ಹೊಸಪೇಟೆ ತಾಲ್ಲೂಕು | | | | ಸಂಡೂರು ತಾಲ್ಲೂಕು | | | | ಬಳ್ಳಾರಿ ತಾಲ್ಲೂಕು | | | |
|---|---|---|---|---|---|---|---|---|---|---|---|---|---|
| | | ಹುಡುಗರು | ಹುಡುಗಿಯರು | ಒಟ್ಟು | ಶೇ | ಹುಡುಗರು | ಹುಡುಗಿಯರು | ಒಟ್ಟು | ಶೇ | ಹುಡುಗರು | ಹುಡುಗಿಯರು | ಒಟ್ಟು | ಶೇ |
| ೦೧ | ಪ್ರಾಥಮಿಕ ಶಾಲೆಯಿಂದ ಹಿರಿಯ ಪ್ರಾಥಮಿಕ ಶಾಲೆಗೆ | ೦೯ | ೦೪ | ೧೩ | ೨೫.೦೦ | ೦೭ | ೦೯ | ೧೬ | ೨೭.೫೮ | ೧೧ | ೦೮ | ೧೯ | ೨೮.೭೮ |
| ೦೨ | ಹಿರಿಯ ಪ್ರಾಥಮಿಕ ಶಾಲೆಯಿಂದ ಪ್ರೌಢ ಶಾಲೆಗೆ | ೦೭ | ೦೪ | ೧೧ | ೨೧.೧೬ | ೦೫ | ೦೬ | ೧೧ | ೧೮.೯೭ | ೦೯ | ೦೫ | ೧೪ | ೨೧.೨೨ |
| ೦೩ | ಪ್ರೌಢ ಶಾಲೆಯಿಂದ ಪದವಿ ಪೂರ್ವ ಕಾಲೇಜಿಗೆ | ೦೭ | ೦೬ | ೧೩ | ೨೫.೦೦ | ೦೯ | ೧೧ | ೨೦ | ೩೪.೪೯ | ೦೮ | ೦೬ | ೧೪ | ೨೧.೨೨ |
| ೦೪ | ಪದವಿ ಪೂರ್ವ ಕಾಲೇಜ್‌ನಿಂದ ಪದವಿ ಕಾಲೇಜ್‌ಗೆ | ೦೪ | ೦೪ | ೦೮ | ೧೫.೩೮ | ೦೭ | ೦೪ | ೧೧ | ೧೮.೯೬ | ೦೭ | ೦೬ | ೧೩ | ೧೯.೬೯ |
| ೦೫ | ಪದವಿ ಕಾಲೇಜ್‌ನಿಂದ ಸ್ನಾತಕೋತ್ತರ ಕಾಲೇಜ್ | ೦೪ | ೦೩ | ೦೭ | ೧೩.೪೬ | – | – | – | – | ೦೩ | ೦೩ | ೦೬ | ೦೯.೦೯ |
| | ಒಟ್ಟು | ೩೩ | ೧೯ | ೫೨ | ೧೦೦ | ೨೮ | ೩೦ | ೫೮ | ೧೦೦ | ೩೮ | ೨೮ | ೬೬ | ೧೦೦ |

ಮೂಲ : ಕ್ಷೇತ್ರಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ

ಮೇಲಿನ ಕೋಷ್ಟಕವನ್ನು ಅವಲೋಕಿಸುವುದಾದರೆ, ತಾಲ್ಲೂಕುವಾರು ಕುಟುಂಬಗಳಲ್ಲಿ ಮಕ್ಕಳು ವರ್ಗಾವಣೆಯಾಗಿರುವ ಪ್ರಮಾಣವನ್ನು ಸೂಚಿಸುತ್ತದೆ. ತಾಲ್ಲೂಕುವಾರುಗಳಲ್ಲಿ ಪ್ರಾಥಾಮಿಕ ಶಾಲಾ ಹಂತದಿಂದ ಸ್ನಾತಕೋತ್ತರ ಕಾಲೇಜು ಹಂತದವರೆಗೆ ಹುಡುಗರು ಮತ್ತು ಹುಡುಗಿಯರ ಪ್ರಮಾಣವನ್ನು ಒಟ್ಟು ಮತ್ತು ಶೇಕಡವಾರುಗಳ ಅಂಕಿ-ಅಂಶಗಳನ್ನು ದಾಖಲಿಸಲಾಗಿದೆ. ಈ ಮಾಹಿತಿಯು ತಾಲ್ಲೂಕುವಾರು ಸಮೀಕ್ಷೆಗೆ ಆಯ್ಕೆ ಮಾಡಿಕೊಂಡಿರುವ ಕುಟುಂಬಗಳಲ್ಲಿ ಶಾಲಾ ಮಕ್ಕಳು ವರ್ಗವಣೆಯಾಗಿರುವ ಅಂಕಿ-ಅಂಶಗಳನ್ನು ಆಯಾ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳ ಕುಟುಂಬಗಳಿಗೆ ಸೀಮಿತಗೊಳಿಸಲಾದ ಮಾಹಿತಿಯಾಗಿದೆ. ಕೋಷ್ಟಕದಲ್ಲಿ ಹೊಸಪೇಟೆ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಪ್ರಾಥಾಮಿಕ ಶಾಲಾ ಹಂತದಿಂದ ಹಿರಿಯ ಪ್ರಾಥಾಮಿಕ ಶಾಲೆಗೆ ಹಾಗೂ ಪ್ರೌಢಶಾಲಾ ಹಂತದಿಂದ ಪದವಿ ಪೂರ್ವ ಹಂತದವರೆಗೆ ಶಾಲಾ ಮಕ್ಕಳ ವರ್ಗಾವಣೆಯನ್ನು ಹೊಂದಿರುವ ಪ್ರಮಾಣ ಶೇ.೨೫.೦೦ರಷ್ಟಿದ್ದು, ಈ ಹಂತಗಳಲ್ಲಿ ವರ್ಗಾವಣೆ ಅಗಿರುವ ಮಕ್ಕಳ ಪ್ರಮಾಣ ಹೆಚ್ಚಾಗಿದ್ದು, ಅತ್ಯಂತ ಕಡಿಮೆ ವರ್ಗಾವಣೆಯನ್ನು ಹೊಂದಿರುವ ಮಕ್ಕಳು ಪದವಿ ಕಾಲೇಜು ಹಂತದಿಂದ ಸ್ನಾತಕೋತ್ತರ ಹಂತದಲ್ಲಿ ಶೇ.೧೩.೪೬ರಷ್ಟು ಇರುವುದು

ಗಮನಾರ್ಹ ಹಂತವಾಗಿದೆ. ಈ ತಾಲ್ಲೂಕಿನ ಕುಟುಂಬಗಳಲ್ಲಿ ಲಿಂಗವಾರು ವರ್ಗಾವಣೆಯ ಪ್ರಮಾಣವನ್ನು ವಿವರಿಸುವುದಾದರೆ, ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಹಂತದವರೆಗೆ ವರ್ಗಾವಣೆಯಾದ ಹುಡುಗರು ೩೩ ಸಂಖ್ಯೆಯಲ್ಲಿದ್ದು, ಪ್ರತಿಶತ ಶೇ.೬೩.೪೬ರಷ್ಟು ಹುಡುಗರು ವರ್ಗವಣೆಯಾಗಿರುವುದು ಈ ತಾಲ್ಲೂಕುಗಳ ಕುಟುಂಬಗಳಿದ್ದು, ಹುಡುಗಿಯರು ವರ್ಗಾವಣೆಯ ಸಂಖ್ಯೆ ೧೯ರಷ್ಟಿದ್ದು, ಪ್ರತಿಶತ ಶೇ.೩೬.೫೩ರಷ್ಟು ಇರುವುದು ಕಂಡುಬಂದಿದೆ. ಒಟ್ಟಾರೆಯಾಗಿ ಈ ತಾಲ್ಲೂಕಿನ ಕುಟುಂಬಗಳ ಮಕ್ಕಳು ಶಾಲಾ ಕಾಲೇಜು ಹಂತಗಳಲ್ಲಿ ವರ್ಗವಣೆಯಾಗಿರುವ ಪ್ರಮಾಣವು ಹುಡುಗರಿಗಿಂತ ಹುಡುಗಿಯರ ವರ್ಗಾವಣೆಯ ಪ್ರಮಾಣ ಕಡಿಮೆಯಿದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಹುಡುಗಿಯರ ಪರಿವರ್ತನಾ ಸೂಚ್ಯಂಕವು ಕೆಳ ಮಟ್ಟದಲ್ಲಿರುವುದು ಗಮನಿಸಬೇಕಾದ ಅಂಶವಾಗಿದೆ. ಸಂಡೂರು ತಾಲ್ಲೂಕಿನ ಕುಟುಂಬಗಳಲ್ಲಿ ವರ್ಗಾವಣೆಯ ಸೂಚ್ಯಂಕವನ್ನು ಗಮನಿಸುವುದಾದರೆ, ಈ ತಾಲ್ಲೂಕಿನಲ್ಲಿ ಫ್ರೌಡ ಶಾಲೆಯಿಂದ ಪದವಿ ಪೂರ್ವ ಕಾಲೇಜು ಹಂತದವರೆಗೆ ಕುಟುಂಬಗಳಲ್ಲಿ ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಶೇ.೩೪.೪೮ರಷ್ಟಿದ್ದು, ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಅಧಿಕವಾಗಿ ಕಂಡುಬಂದರೆ, ಹಿರಿಯ ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲಾ ಹಂತದವರೆಗೆ ವರ್ಗಾವಣೆಯಾದ ಮಕ್ಕಳ ಪ್ರಮಾಣ ಶೇ.೧೮.೯೬ರಷ್ಟು ಕುಟುಂಬಗಳಿದ್ದು, ಈ ಹಂತಗಳಲ್ಲಿ ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಕಡಿಮೆಯಿದೆ. ಸಂಡೂರು ತಾಲ್ಲೂಕಿನಲ್ಲಿ ಒಟ್ಟು ವರ್ಗಾವಣೆಯಾದ ೫೮ ಮಕ್ಕಳ ಸಂಖ್ಯೆಯಿದ್ದು, ಅದರಲ್ಲಿ ಹುಡುಗರು ೨೮ ಸಂಖ್ಯೆಯಲ್ಲಿದ್ದರೆ ಶೇ.೪೮.೨೭ರಷ್ಟು, ಹುಡುಗಿಯರು ೩೦ ಸಂಖ್ಯೆಯಲ್ಲಿ ಶೇ.೫೧.೭೨ರಷ್ಟು ವರ್ಗಾವಣೆಯಾಗಿರುವ ಮಕ್ಕಳಿದ್ದಾರೆ. ಈ ತಾಲ್ಲೂಕಿನಲ್ಲಿ ೪೫ ಕುಟುಂಬಗಳಲ್ಲಿ ಶಾಲಾ-ಕಾಲೇಜಿಗೆ ವರ್ಗಾವಣೆಯಾಗಿರುವ ಮಕ್ಕಳಿದ್ದು, ಹುಡುಗಿಯರು ವರ್ಗಾವಣೆಯ ಪ್ರಮಾಣಕ್ಕಿಂತ ಹುಡುಗರ ವರ್ಗಾವಣೆ ಪ್ರಮಾಣವು ಕೆಳಮಟ್ಟದಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಶಾಲಾ-ಕಾಲೇಜು ಹಂತದಲ್ಲಿ ಶೈಕ್ಷಣಿಕ ಸಾಧನೆ ಹುಡುಗರ ವರ್ಗಾವಣೆಯ ಪ್ರಮಾಣ ಅತ್ಯಂತ ಕಡಿಮೆ ಇರುವುದು ಗಣಿ ಗ್ರಾಮೀಣ ಪ್ರದೇಶದ ದುಸ್ಥಿತಿಯಾಗಿದೆ.

ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೬೩ ಕುಟುಂಬಗಳಲ್ಲಿ ಶಾಲಾ-ಕಾಲೇಜು ಹಂತದವರೆಗೆ ವರ್ಗವಣೆಯಾಗಿರುವ ಮಾಹಿತಿಯ ಆಧಾರದ ಮೇಲೆ ಪ್ರಾಥಾಮಿಕ ಹಂತದಿಂದ ಹಿರಿಯ ಪ್ರಾಥಾಮಿಕ ಹಂತದವರೆಗೆ ಮಕ್ಕಳ ವರ್ಗಾವಣೆಯಾಗಿರುವ ಪ್ರಮಾಣವು ಹೆಚ್ಚಾಗಿದ್ದು, ಶೇ.೨೮.೭೫ರಷ್ಟಿದರೆ, ಪದವಿ ಕಾಲೇಜು ಹಂತದಿಂದ ಸ್ನಾತಕೋತ್ತರ ಪದವಿ ಹಂತದಲ್ಲಿ ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಕಡಿಮೆಯಿದೆ. ಅಂದರೆ ಶೇ.೦೬.೯೯ರಷ್ಟು ಈ ಹಂತದಲ್ಲಿ ವರ್ಗವಣೆಯಾಗಿರುವ ಪ್ರಮಾಣವಿದೆ. ಈ ತಾಲ್ಲೂಕಿನಲ್ಲಿ ವರ್ಗಾವಣೆಯಾದ ಮಕ್ಕಳ ಸಂಖ್ಯೆ ೬೬ರಷ್ಟಿದ್ದು, ಅದರಲ್ಲಿ ಹುಡಗರ ಸಂಖ್ಯೆ ೩೮ರಷ್ಟಿದ್ದು, ಶೇ.೫೭.೫೭ರಷ್ಟು ವರ್ಗಾವಣೆಯಾದರೆ, ಹುಡುಗಿಯರು ೨೮ ಸಂಖ್ಯೆಯಲ್ಲಿದ್ದು, ಶೇ.೪೨.೪೨ರಷ್ಟು ವರ್ಗಾವಣೆಯಾದ ಶಾಲಾ ಮಕ್ಕಳಿದ್ದಾರೆ. ಹುಡುಗರ ವರ್ಗವಣೆಯ ಪ್ರಮಾಣವನ್ನು ಹುಡುಗಿಯರ ವರ್ಗಾವಣೆಯ ಪ್ರಮಾಣಕ್ಕೆ ಹೋಲಿಸಿದಾಗ ಹುಡುಗರ ವರ್ಗಾವಣೆಯು ಹೆಚ್ಚಾಗಿದ್ದು, ಹುಡುಗಿಯರ ವರ್ಗಾವಣೆಯ ಪ್ರಮಾಣವು ಕಡಿಮೆ ಆಗಿರುವುದು ಗಮನಿಸಬೇಕಾದ ಅಂಶವಾಗಿದೆ. ಒಟ್ಟಾರೆಯಾಗಿ ಈ ಮೂರು ಗಣಿ ವಲಯ ತಾಲ್ಲೂಕುಗಳ ಪೈಕಿ ಹೊಸಪೇಟೆ ತಾಲ್ಲೂಕಿನ ಕುಟುಂಬಗಳಲ್ಲಿ ಪ್ರಾಥಾಮಿಕ ಹಂತದಿಂದ ಸ್ನಾತಕೋತರ ಹಂತದ ಶಾಲಾ-ಕಾಲೇಜುವರೆಗೆ ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಶೇ.೨೯.೫೪ರಷ್ಟು, ಸಂಡೂರು ತಾಲ್ಲೂಕಿನ ಕುಟುಂಬಗಳಲ್ಲಿ ಶಾಲಾ-ಕಾಲೇಜು ಹಂತದವರೆಗೆ ವರ್ಗಾವಣೆಯಾಗಿರುವ ಮಕ್ಕಳ ಪ್ರಮಾಣ ಶೇ.೩೨.೯೫ರಷ್ಟು ಹಾಗೂ ಬಳ್ಳಾರಿ ತಾಲ್ಲೂಕಿನಲ್ಲಿ ಶಾಲಾ-ಕಾಲೇಜ್ ಹಂತಗಳ ವರ್ಗವಣೆಯಾಗಿರುವ ಮಕ್ಕಳ ಪ್ರಮಾಣ ಶೇ.೩೭.೫೦ ರಷ್ಟಿದೆ. ಈ ಮೂರು ತಾಲ್ಲೂಕುಗಳ ಗ್ರಾಮೀಣ ಪ್ರದೇಶಗಳಲ್ಲಿ ಹೊಸಪೇಟೆ ತಾಲ್ಲೂಕು ಅತ್ಯಂತ ಕಡಿಮೆ ಪ್ರಮಾಣದ ವರ್ಗಾವಣೆ ಅಗಿರುವ ಮಕ್ಕಳಿದ್ದು ಶೇ.೨೯.೫೪ರಷ್ಟಿದಾರೆ. ಆದರೆ ಬಳ್ಳಾರಿ ತಾಲ್ಲೂಕಿನಲ್ಲಿ ವರ್ಗಾವಣೆಯಾಗಿರುವ ಶಾಲಾ ಮಕ್ಕಳು

ಹೆಚ್ಚಾಗಿದ್ದು, ವರ್ಗಾವಣೆ ಪ್ರಮಾಣ ಶೇ.೩೭.೫೧೦ರಷ್ಟಿದೆ. ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶಗಳಲ್ಲಿ ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಮಾತ್ರ ವರ್ಗಾವಣೆ ಆಗಿರುವ ಹುಡುಗಿಯರ ಪ್ರಮಾಣವು ಹುಡುಗರ ವರ್ಗಾವಣೆಯ (ಶೇ.೫೧.೭೨) ಪ್ರಮಾಣಕ್ಕಿಂತ ಹೆಚ್ಚಾಗಿದೆ. ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲಿ ಹುಡುಗರ ವರ್ಗಾವಣೆಯ ಪ್ರಮಾಣಕ್ಕಿಂತ ಹುಡುಗಿಯರ ಪರಿವರ್ತನಾ ಸೂಚ್ಯಂಕ ಕೆಳಮಟ್ಟದಾಗಿರುವುದು ಕಂಡುಬಂದಿದೆ.

**೩.೬ ಆಹಾರ ಮತ್ತು ಆರೋಗ್ಯ ಭದ್ರತೆಯ ಮೇಲಿನ ಮೇಲಾಗುವ ಪರಿಣಾಮಗಳು**

ಒಂದು ದೇಶದ ಮಾನವ ಅಭಿವೃದ್ಧಿಯನ್ನು ನಿರ್ಧರಿಸಬೇಕಾದರೆ ಶಿಕ್ಷಣದ ಜೊತೆಗೆ ಆರೋಗ್ಯವೂ ಸಹ ಮಹತ್ವದ ಪಾತ್ರವಹಿಸುತ್ತದೆ. ದೇಶದಲ್ಲಿ ಸದೃಡ ದೇಹ ಹಾಗೂ ಉತ್ತಮ ಆರೋಗ್ಯವಿದ್ದರೆ ಜೀವಿತಾವಧಿ ಹೆಚ್ಚಾಗಿ, ಕೆಲಸದಲ್ಲಿ ಪಾಲ್ಗೊಳ್ಳುವಿಕೆಯ ಪ್ರಮಾಣವು ಹೆಚ್ಚುತ್ತದೆ. ದೇಶದಲ್ಲಿರುವ ಜನರ ಆರೋಗ್ಯ ಉತ್ತಮವಾಗಿದರೆ ಉತ್ಪಾದಕತೆಯ ಪ್ರಮಾಣ ಹೆಚ್ಚುತ್ತದೆ. ವಿಶ್ವ ಸಂಸ್ಥೆಯ ಪ್ರಕಾರ ಅರೋಗ್ಯವೆಂದರೆ ರೋಗ ಇಲ್ಲದಿರುವ ಸ್ಥಿತಿಯಾಗಿರದ ಸಂಪೂರ್ಣ ದೈಹಿಕವಾಗಿ ಮಾನಸಿಕವಾಗಿ ಮತ್ತು ಸಾಮಾಜಿಕ ಯೋಗಕ್ಷೇಮವನ್ನು ಹೊಂದಿರುವುದಾಗಿದೆ. ಆರೋಗ್ಯವೇ ಭಾಗ್ಯ ಆರೋಗ್ಯವನ್ನು ಕಳೆದುಕೊಂಡರೇ ಎಲ್ಲವನ್ನು ಕಳೆದುಕೊಂಡಂತೆ ಎಂಬ ನಾಣ್ಣುಡಿಯಂತೆ ನಾವು ಸ್ಮರಿಸಿಕೊಳ್ಳುವ ಸಂದರ್ಭವಾಗಿದೆ. ಯಾವುದೆ ಪ್ರದೇಶದ ಜನಸಂಖ್ಯೆಯ ಆರೋಗ್ಯದ ಸ್ಥಿತಿಯನ್ನು ಅಳೆಯಲು ಜನನ ಕಾಲದಲ್ಲಿನ ಜೀವನಾಯಷ್ಯ ನೀರಿಕ್ಷೆ, ಅಪರಿಷ್ಕೃತ ಮರಣ ಮತ್ತು ಅಪರಿಷ್ಕೃತ ಜನನ ಪ್ರಮಾಣಗಳನ್ನು ಮಾನದಂಡಗಳಾಗಿ ಬಳಸಲಾಗುತ್ತಿದೆ. ವಿಶೇಷವಾಗಿ ಜನರು ಅದರಲ್ಲೂ ಬಡ ಜನರು ಅನಾರೋಗ್ಯಕ್ಕೆ ತುತ್ತಾದರೆ ಅವರ ಚಿಕಿತ್ಸೆಗೆ ವೆಚ್ಚವನ್ನು ಭರಿಸಲು ಕೂಡ ಸಾಧ್ಯವಾಗುತ್ತಿಲ್ಲ. ಇಂತಹ ಶೋಚನಿಯ ಸ್ಥಿತಿಯನ್ನು ಮನಗಂಡ ಸರ್ಕಾರಗಳು ವಿವಿಧ ಹಂತಗಳಲ್ಲಿ ಜನರಿಗೆ ಅಗತ್ಯವಿರುವ ಆರೋಗ್ಯ ಸೌಲಭ್ಯಗಳನ್ನು ಒದಗಿಸಲು ಹಲವು ಸೂಕ್ತ ಕ್ರಮಗಳನ್ನು ಕೈಗೆತ್ತಿಗೊಂಡಿದೆ. ಎಲ್ಲರಿಗೂ ಆರೋಗ್ಯ ಸೌಲಭ್ಯ ದೋರಕುವಂತೆ ನಿಗವಹಿಸಲಾಗುತ್ತಿದೆ. ಇದರ ಹೊರತಾಗಿಯೇ ಕೆಲವು ನಿರ್ಧಿಷ್ಟ ಸಮೂಹಕ್ಕೆ ಸೇರಿದ ಬಡವರು, ಮಹಿಳೆಯರು, ಮಕ್ಕಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ಅನಾರೋಗ್ಯಕ್ಕೆ ತುತ್ತಾಗಿ ಅಪಾಯಕ್ಕೆ ಸಿಲುಕುವ ಸಂಭವವಿದೆ.

ಭಾರತ ದೇಶವು ಎಲ್ಲರಿಗೂ ಆರೋಗ್ಯ ಎಂಬ ಧ್ಯೇಯವನ್ನು ಕ್ರಿ.ಶ. ೨೦೦೦ರ ವೇಳೆಗೆ ಅಳವಡಿಸಿಕೊಂಡಿತ್ತು. ಪ್ರಸ್ತುತ ಭಾರತವು ೨೦೨೦ರ ವೇಳೆಗೆ ಆರೋಗ್ಯಕ್ಕೆ ಸಂಬಂಧಿಸಿದಂತೆ ಸಹಸ್ರಮಾನ ಅಭಿವೃದ್ಧಿ ಗುರಿಗಳನ್ನು ಸಾಧಿಸುವ ಅಶಯವನ್ನು ಹೊಂದಿದೆ. ಈ ಗುರಿಗಳನ್ನು ಭಾರತದ ಸಂಸತ್ತಿನಿಂದ ಅಂಗಿಕರಿಸಲ್ಪಟ್ಟ ೨೦೦೨ರ ರಾಷ್ಟ್ರೀಯ ಆರೋಗ್ಯ ನೀತಿಯಲ್ಲಿ ಹೆಚ್ಚು ಮಹತ್ವ ಕೊಟ್ಟಿದನ್ನು ಉಲ್ಲೇಖಿಸಲಾಗಿದೆ. ದೇಶದ ಜನರ ಉತ್ತಮ ಆರೋಗ್ಯದ ದೃಷ್ಟಿಯಿಂದ ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳ ಮೇಲೆ ಸೌಲಭ್ಯಗಳಲ್ಲಿನ ಸಮಾನತೆಯ ಪ್ರವೇಶ ಹಾಗೂ ಕಡಿಮೆ ವೆಚ್ಚದಲ್ಲಿ ಅಪಾಯ ಸಂಭವಿಸುವ ಕಾರ್ಯ ವಿಧಾನಗಳ ಅನುಪಸ್ಥಿತಿಯಿಂದಾಗಿ ಬೇಡಿಕೆ ಮತ್ತು ಪೂರೈಕೆಯಲ್ಲಿ ಬೃಹತ್ ಪ್ರಮಾಣದ ಅಂತರವು ಕಂಡು ಬರುತ್ತಿರುವುದು ಗಮನಿಸಬಹುದಾಗಿದೆ. ಈ ಹಿನ್ನಲೆಯಲ್ಲಿ ಬಳ್ಳಾರಿ ಜಿಲ್ಲೆಯ ಆರೋಗ್ಯದ ಪರಿಣಾಮಗಳ ಸವಾಲುಗಳನ್ನು ತಳಮಟ್ಟದಿಂದ ಅವಲೋಕಿಸಿದಾಗ ಅವುಗಳು ಮಾನವ ಅಭಿವೃದ್ಧಿಗೆ ಹೇಗೆ ಸಂಬಂಧವನ್ನು ಕಲ್ಪಿಸುತ್ತದೆ ಎಂಬುವುದು ಅರಿತುಕೊಳ್ಳುವ ಅಗತ್ಯವಿದೆ. ಹಾಗೆಯೇ ಗಣಿಗಾರಿಕೆಗೂ ಮತ್ತು ಆರೋಗ್ಯಕ್ಕೆ ಇರುವ ಸಂಬಂಧ ಪೂರಕವಾದದ್ದು, ಗಣಿಗಾರಿಕೆಯಲ್ಲಿ ಸಿಡಿಸುವ ರಾಸಾಯನಿಕ ಸ್ಪೋಟವು ನೂರರು ಕಿಲೋಮೀಟರ್‌ನಷ್ಟು ದೂರದವರೆಗೆ ನೆಲವನ್ನು ಕಂಪಿಸುತ್ತದೆ. ಆಗ ಗಟ್ಟಿಯ ನೆಲವೂ ಕೂಡ ಕಂಪನವಾಗಿ ಟೊಳ್ಳಾಗಿ ಮಾರ್ಪಡುತ್ತಿದೆ. ಅತಿಯಾದ ಶಬ್ದ ಮಾಲಿನ್ಯವು ಉಂಟಾಗಿ ಗಣಿಯ ಸುತ್ತಮುತ್ತಲಿರುವ ಗ್ರಾಮೀಣ ಪ್ರದೇಶದ ಪರಿಸರ ಮತ್ತು ಜನ

ಸಮುದಾಯಗಳ ಮೇಲೆ ಪ್ರತಿಕೂಲ ಪರಿಣಾಮಗಳನ್ನು ಉಂಟು ಮಾಡಿ, ಜಲಮಾಲಿನ್ಯ, ವಾಯುಮಾಲಿನ್ಯ ಉಂಟಾಗಿ ಗ್ರಾಮೀಣ ಪ್ರದೇಶದ ಜನರ ಆರೋಗ್ಯದ ಮೇಲೆ ದುಷ್ಪರಿಣಾಮಗಳು ಬೀರಿವೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು ಹಾಗೂ ಬಳ್ಳಾರಿ ತಾಲ್ಲೂಕುಗಳ ಗಣಿ ಧೂಳಿನಿಂದ ಗ್ರಾಮೀಣ ಪ್ರದೇಶದ ಜನರಿಗೆ ಅಸ್ತಮಾ, ಕ್ಷಯ, ಜ್ವರ, ತಲೆನೊವು, ಕೂದಲು ಉದುರುವುದು, ಕಣ್ಣು ಉರಿ, ಎದೆ ನೋವು, ಶ್ವಾಸಕೋಶ, ಡಸ್ಟ್ ಅಲರ್ಜಿ, ಹಸಿವಿನ ತೊಂದರೆ, ಮಾನಸಿಕ ಒತ್ತಡ, ಪಿಟ್ಸ್, ಕಿವುಡು, ಕಿಡ್ನಿ ಸಮಸ್ಯೆ ಮುಂತಾದ ಕಾಯಿಲೆಗಳು ಹರಡಿಕೊಂಡಿವೆ. ಇಂತಹ ಅನಾರೋಗ್ಯಕ್ಕೆ ಗಣಿಗಾರಿಕೆ ಚಟುವಟಿಕೆಯೇ ಮಾರಕವಾಗಿ ಪರಿಣಮಿಸಿದೆ. ಪ್ರಸ್ತುತ ಅಧ್ಯಯನದಲ್ಲಿ ಆರೋಗ್ಯಕ್ಕೆ ಸಂಬಂಧಿಸಿದಂತೆ ಗಣಿಗಾರಿಕೆಯಿಂದಾಗಿ ಬೀರಿರುವ ಆರೋಗ್ಯದ ಪರಿಣಾಮವನ್ನು ತಿಳಿಯಲು ಅಹಾರ, ಅಪೌಷ್ಟಿಕತೆ, ಹೆರಿಗೆ ಪ್ರಮಾಣ, ಆಸ್ಪತ್ರೆಯ ವ್ಯವಸ್ಥೆ, ಪಡಿತರ ಚೀಟಿ ವ್ಯವಸ್ಥೆ ಇತ್ಯಾದಿ ಅಂಶಗಳನ್ನು ಅಳೆಯುವ ಮಾನದಂಡಗಳನ್ನಾಗಿ ಬಳಸಲಾಗಿದೆ. ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿರುವ ಕುಟುಂಬಗಳ ಕ್ಷೇತ್ರಕಾರ್ಯದಿಂದ ಮಾಹಿತಿಯನ್ನು ಸಂಗ್ರಹಿಸಿ, ದತ್ತಾಂಶಗಳನ್ನು ವಿಶ್ಲೇಷಣೆಗೆ ಒಳಪಡಸಲಾಗಿದೆ.

**೩.೬.೧ ಆಹಾರ ಭದ್ರತೆ**

ಗಣಿ ವಲಯಗಳಾದ ಸಂಡೂರು–ಹೊಸಪೇಟೆ–ಬಳ್ಳಾರಿ ತಾಲ್ಲೂಕುಗಳಲ್ಲಿ ಆಯ್ಕೆ ಮಾಡಿಕೊಂಡ ಕುಟುಂಬಗಳ ಪಡಿತರ ಚೀಟಿಗೆ ಸಂಬಂಧಿಸಿದಂತೆ ಪೂರ್ವಭಾವಿಯಾಗಿರುವ ಮಾಹಿತಿಯನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಅಂಕಿ–ಅಂಶಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ. ಪಡಿತರ ಚೀಟಿಗೆ ಸಂಬಂಧಿಸಿದಂತೆ ಪಡಿತರ ಚೀಟಿ ಇದೆಯೇ? ಎಂಬ ಪ್ರಶ್ನೆಯನ್ನು ಕೇಳಿದಾಗ ಕುಟುಂಬಗಳ ಮಾಹಿತಿದಾರರು ನೀಡಿರುವ ಹೇಳಿಕೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ : ೩.೧೯ ಮಾಹಿತಿದಾರರ ಕುಟುಂಬದಲ್ಲಿರುವ ಪಡಿತರ ಚೀಟಿಯ ಪ್ರಮಾಣ.**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಪಡಿತರ ಚೀಟಿ ಇದೆಯಾ? | | | | | | |
| | ಹೌದು | ೮೦ | ೮೮.೮೮ | ೮೦ | ೮೮.೮೮ | ೭೩ | ೮೧.೧೨ |
| | ಇಲ್ಲ | ೧೦ | ೧೧.೧೨ | ೧೦ | ೧೧.೧೨ | ೧೭ | ೧೮.೮೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಯಾವ ಪಡಿತರ ಚೀಟಿ ಇದೆ | | | | | | |
| | ಎಪಿಎಲ್ | ೧೮ | ೨೨.೫೦ | ೧೩ | ೧೬.೨೫ | ೧೬ | ೨೧.೯೧ |
| | ಬಿಪಿಎಲ್ | ೨೪ | ೩೦.೦೦ | ೨೩ | ೨೮.೭೫ | ೨೦ | ೨೭.೦೨ |
| | ಅಂತ್ಯೋದಯ | ೨೧ | ೨೬.೨೫ | ೨೫ | ೩೧.೨೫ | ೧೯ | ೨೬.೦೩ |
| | ಅಕ್ಷಯ | ೧೭ | ೨೧.೨೫ | ೧೯ | ೨೩.೭೫ | ೧೮ | ೨೪.೬೭ |
| | ಒಟ್ಟು | ೮೦ | ೧೦೦ | ೮೦ | ೧೦೦ | ೭೩ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಬಳ್ಳಾರಿ ಜಿಲ್ಲೆಯ ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಪಡಿತರ ಚೀಟಿಯ ಪ್ರಮಾಣವನ್ನು ಈ ಕೋಷ್ಟಕ ವಿವರಿಸುತ್ತದೆ. ಕೋಷ್ಟಕ

೪.೧೯ರಲ್ಲಿ ಕುಟುಂಬಗಳಲ್ಲಿ ಪಡಿತರ ಚೀಟಿ ಇದೆಯೇ? ಎಂಬ ಪ್ರಶ್ನೆಗೆ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೮೦ ಕುಟುಂಬದವರು ಪಡಿತರ ಚೀಟಿಯನ್ನು ಹೊಂದಿದ್ದು ಶೇ.೮೮.೮೮ರಷ್ಟಿದೆ. ಇನ್ನುಳಿದ ೧೦ ಕುಟುಂಬಗಳಲ್ಲಿ ಪಡಿತರ ಚೀಟಿಯು ಇಲ್ಲದಿರುವುದು ಶೇ ೧೧.೧೨ರಷ್ಟಿದೆ. ಈ ೮೦ ಕುಟುಂಬಗಳಲ್ಲಿ ಎ.ಪಿ.ಎಲ್ ಕಾರ್ಡನ್ನು ೧೮ ಕುಟುಂಬಗಳಲ್ಲಿ ಕಂಡು ಬಂದಿದ್ದು, ಪ್ರತಿಶತವಾಗಿ ಶೇ.೨೨.೫೦ರಷ್ಟು ಎ.ಪಿ.ಎಲ್ ಕಾರ್ಡ್‌ನ್ನು ಹೊಂದಿದ್ದ ಕುಟುಂಬಗಳಾಗಿವೆ. ಬಿ.ಪಿ.ಎಲ್ ಕಾರ್ಡನ್ನು ೨೪ ಕುಟುಂಬದವರಲ್ಲಿದ್ದು ಶೇ.೩೦.೦೦ರಷ್ಟಿದೆ, ಅಂತ್ಯೋದಯ ಪಡಿತರ ಚೀಟಿಯು ೨೧ ಕುಟುಂಬಗಳಲ್ಲಿದ್ದು ಶೇ.೨೬.೨೫ರಷ್ಟಿದೆ ಮತ್ತು ಅಕ್ಷಯ ಕಾರ್ಡು ೧೭ ಕುಟುಂಬಗಳಿದ್ದು ಶೇ.೨೧.೨೫ರಷ್ಟಿರುವುದು ಕಂಡು ಬಂದಿದೆ. ಈ ತಾಲ್ಲೂಕಿನಲ್ಲಿ ಅಕ್ಷಯ ಕಾರ್ಡ್‌ನ್ನು ಹೊಂದಿದವರು ಶೇ.೨೧.೨೫ರಷ್ಟಿದ್ದು ಕಡಿಮೆ ಪ್ರಮಾಣದಲ್ಲಿದರೇ, ಶೇ.೩೦ರಷ್ಟು ಬಿ.ಪಿ.ಎಲ್ ಕಾರ್ಡ್‌ನ್ನು ಹೊಂದಿದ ಕುಟುಂಬಗಳು ಹೆಚ್ಚಾಗಿರುವುದು ಕಂಡು ಬಂದಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಒಟ್ಟು ೯೦ ಕುಟುಂಬಗಳಲ್ಲಿ ೮೦ ಕುಟುಂಬಗಳು ಪಡಿತರ ಚೀಟಿ ಇದೆ. ಇನ್ನು ೧೦ ಕುಟುಂಬಗಳಲ್ಲಿ ಪಡಿತರ ಚೀಟಿ ಇಲ್ಲದಿರುವುದು ಕಂಡುಬಂದಿದೆ. ಈ ತಾಲ್ಲೂಕಿನಲ್ಲಿ ಪಡಿತರ ಚೀಟಿಯನ್ನು ಪ್ರತಿಶತವಾಗಿ ಶೇ.೮೮.೮೮ರಷ್ಟು ಹೊಂದಿದ್ದಾರೆ. ಪಡಿತರ ಚೀಟಿ ಇಲ್ಲದ ಕುಟುಂಬಗಳು ಶೇ.೧೧.೧೨ರಷ್ಟಿರುವುದಾಗಿದೆ. ಪಡಿತರ ಚೀಟಿಯನ್ನು ಹೊಂದಿರುವ ೮೦ ಕುಟುಂಬಗಳಲ್ಲಿ ೧೩ ಕುಟುಂಬದವರು ಎ.ಪಿ.ಎಲ್ ಕಾರ್ಡ್ ಹೊಂದಿದ್ದು ಶೇ.೧೬.೨೫ರಷ್ಟಿದೆ, ಬಿ.ಪಿ.ಎಲ್ ಕಾರ್ಡು ೨೩ ಕುಟುಂಬಗಳಲ್ಲಿ ಶೇ.೨೮.೭೫ರಷ್ಟು, ಅಂತ್ಯೋದಯ ಕಾರ್ಡು ೨೫ ಕುಟುಂಬಗಳಲ್ಲಿ ಶೇ.೩೧.೨೫ರಷ್ಟು ಹಾಗೂ ೧೯ಕುಟುಂಬಗಳಲ್ಲಿ ಅಕ್ಷಯ ಕಾರ್ಡನ್ನು ಹೊಂದಿದ್ದು ಶೇ.೨೩.೭೫ರಷ್ಟು ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಗಳಾಗಿವೆ. ಈ ವಲಯದಲ್ಲಿ ಪಡಿತರ ಚೀಟಿಯು ಅಂತ್ಯೋದಯ ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಗಳು (ಶೇ.೩೧.೨೫) ಹೆಚ್ಚಾಗಿದ್ದು, ಎಪಿ.ಎಲ್ ಕಾರ್ಡನ್ನು ಹೊಂದಿದ ಕುಟುಂಬಗಳು ಕಡಿಮೆ ಪ್ರಮಾಣದಲ್ಲಿ (ಶೇ.೧೬.೨೫) ಇರುವುದು ಕಂಡುಬಂದಿದೆ. ಹಾಗೆಯೇ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಒಟ್ಟು ೯೦ ಕುಟುಂಬಗಳ ಪೈಕಿ ೭೩ಕುಟುಂಬಗಳು ಪಡಿತರ ಚೀಟಿ ವ್ಯವಸ್ಥೆಯನ್ನು ಪಡೆದುಕೊಂಡರೆ, ಇನ್ನು ೧೭ ಕುಟುಂಬಗಳು ಪಡಿತರ ಚೀಟಿಯನ್ನು ಪಡೆದುಕೊಂಡಿರುವುದಿಲ್ಲ. ಪ್ರತಿಶತವಾಗಿ ಪಡಿತರ ಚೀಟಿಯನ್ನು ಶೇ.೮೧.೧೨ರಷ್ಟು ಕುಟಂಬಗಳು ಪಡೆದುಕೊಂಡರೆ, ಶೇ.೧೮.೮೮ರಷ್ಟು ಕುಟುಂಬಗಳಲ್ಲಿ ಪಡಿತರ ಚೀಟಿ ಇಲ್ಲದಿರುವುದು ಕಂಡುಬಂದಿದೆ. ಈ ವಲಯದಲ್ಲಿ ಪಡಿತರ ಚೀಟಿಯನ್ನು ಹೊಂದಿರುವ ೮೦ ಕುಟುಂಬಗಳಲ್ಲಿ ಎ.ಪಿ.ಎಲ್ ಕಾರ್ಡು ಹೊಂದಿರುವ ೧೬ ಕುಟುಂಬಗಳಿದ್ದು ಶೇ೨೧.೯೧ರಷ್ಟು, ಬಿ.ಪಿ.ಎಲ್ ಕಾರ್ಡನ್ನು ಹೊಂದಿರುವ ಕುಟುಂಬಗಳು ಶೇ.೨೭.೦೨ರಷ್ಟು, ಅಂತ್ಯೋದಯ ಕಾರ್ಡನ್ನು ಹೊಂದಿರುವ ಕುಟುಂಬಗಳು ಶೇ.೨೬.೦೩ರಷ್ಟು, ಅಕ್ಷಯ ಕಾರ್ಡನ್ನು ಹೊಂದಿದ ಕುಟುಂಬಗಳು ಶೇ.೨೪.೬೭ರಷ್ಟಿದೆ. ಪಡಿತರ ಚೀಟಿಯಲ್ಲಿಯೇ ಬಿ.ಪಿ.ಎಲ್ ಕಾರ್ಡು ಹೊಂದಿರುವ ಕುಟುಂಬಗಳು (ಶೇ.೨೭.೦೨) ಹೆಚ್ಚಾಗಿದ್ದು, ಎ.ಪಿ.ಎಲ್ ಪಡಿತರ ಚೀಟಿ ಹೊಂದಿರುವ ಕುಟುಂಬಗಳು (ಶೇ.೨೧.೯೧) ಕಡಿಮೆಯಿದೆ. ಒಟ್ಟಾರೆಯಾಗಿ ಗಣಿ ವಲಯ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಕುಟುಂಬಗಳು ಪಡೆದಿರುವ ಪಡಿತರ ಚೀಟಿಯ ಕುರಿತು ಮಾಹಿತಿಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಪಡಿತರ ಚೀಟಿಯ ಮೂಲಕ ದೊರೆಯುವ ಆಹಾರ ಪ್ರಮಾಣಕ್ಕೆ ಸಂಬಂಧಿಸಿದಂತೆ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಪಡಿತರ ಚೀಟಿಯ ಆಧಾರದ ಮೇಲೆ ಆಹಾರ ಪದಾರ್ಥಗಳನ್ನು ವಿತರಿಸಲಾಗುತ್ತದೆ. ಅದರಲ್ಲಿ ಮುಖ್ಯವಾಗಿ ಅಕ್ಕಿ, ಗೋಧಿ, ಸಕ್ಕರೆ, ಎಣ್ಣೆ, ಬೆಳೆ, ಉಪ್ಪು ಇತ್ಯಾದಿ ನ್ಯಾಯ ಬೆಲೆ ಅಂಗಡಿಯಲ್ಲಿ

ವಿತರಿಸಲಾಗುವುದು ಎಂದು ಕುಟುಂಬಗಳ ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬರುತ್ತದೆ. ಈ ಕುಟುಂಬದವರು ಪಡೆಯುವ ಆಹಾರ ಪ್ರಮಾಣ ಎಷ್ಟು? ಎನ್ನುವ ಮಾಹಿತಿಯನ್ನು ಈ ಕೆಳಗಿನ ಕೋಷ್ಟಕದ ಮೂಲಕ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೊಷ್ಟಕ ೩.೨೦ ಪಡಿತರ ಚೀಟಿಯ ಮೂಲಕ ಆಹಾರ ದೊರೆಯುವ ಪ್ರಮಾಣ.**

| ಕ್ರಸಂ. | ಆಹಾರ ಪ್ರಮಾಣ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | ಅಕ್ಕಿ (ಕೆ.ಜಿಗಳಲ್ಲಿ) | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ೧೦-೧೫ ಕೆ.ಜಿ | ೧೧ | ೧೩.೭೫ | ೦೪ | ೦೫.೦೦ | ೧೪ | ೧೯.೧೭ |
| | ೧೫-೨೦ ಕೆ.ಜಿ | ೧೪ | ೧೭.೭೫ | ೧೪ | ೧೭.೫೦ | ೨೧ | ೨೮.೭೬ |
| | ೨೦-೨೫ ಕೆ.ಜಿ | ೨೦ | ೨೫.೦೦ | ೨೩ | ೪೧.೨೫ | ೧೫ | ೨೦.೫೪ |
| | ೨೫-೩೦ ಕೆ.ಜಿ | ೩೫ | ೪೩.೭೫ | ೨೯ | ೨೬.೨೫ | ೨೩ | ೩೧.೫೫ |
| | ಒಟ್ಟು | ೮೦ | ೧೦೦ | ೮೦ | ೧೦೦ | ೭೩ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ಗಣಿ ವಲಯ ಹೊಸಪೇಟೆ-ಸಂಡೂರು-ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಗಳು ಪಡೆಯುವ ಆಹಾರ ಪ್ರಮಾಣವನ್ನು ವಿವರಿಸಲಾಗಿದೆ. ಪಡಿತರ ಚೀಟಿಯ ಮೂಲಕ ಈ ಕುಟುಂಬಗಳು ಸಕ್ಕರೆ, ಎಣ್ಣೆ, ಬೆಳೆ, ಉಪ್ಪು ತಲಾ ಒಂದು ಕೆ.ಜಿಯನ್ನು ನೀಡಲಾಗುತ್ತದೆ. ಅಕ್ಕಿ ಮತ್ತು ಗೋಧಿಯನ್ನು ಕುಟುಂಬದ ಸದಸ್ಯರ ಆಧಾರದ ಮೇಲೆ ವಿತರಿಸಲಾಗುತ್ತದೆ ಎಂದು ಕುಟುಂಬಗಳ ಮಾಹಿತಿದಾರರು ಹೇಳಿದ್ದಾರೆ. ಹಾಗಿದಾಗ ಆಕ್ಕಿಯನ್ನು ನೀಡುವ ಪ್ರಮಾಣವನ್ನು ತಾಲ್ಲೂಕುವಾರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ನೀಡಿರುವ ಮಾಹಿತಿಯ ಪ್ರಕಾರ ದಾಖಲಿಸಲಾಗಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ೧೦-೧೫ ಕೆ.ಜಿ.ವರೆಗೆ ಶೇ.೧೩.೭೫ರಷ್ಟು, ೧೫-೨೦ ಕೆ.ಜಿ.ಯವರೆಗೆ ಶೇ.೧೭.೭೫ರಷ್ಟು, ೨೦-೨೫ ಕೆ.ಜಿ ವರೆಗೆ ಶೇ ೪೩.೩೫ರಷ್ಟು ಆಹಾರ ಧಾನ್ಯವನ್ನು ಪಡೆಯುವ ಕುಟುಂಬಗಳಾಗಿವೆ. ಆಹಾರ ಪದಾರ್ಥವನ್ನು ೨೫-೩೦ ಕೆ.ಜಿ.ವರೆಗೆ ಪಡೆಯುವ ಕುಟುಂಬಗಳು ಅಧಿಕವಾಗಿ ಕಂಡು ಬರುತ್ತದೆ. ಸಂಡೂರು ತಾಲ್ಲೂಕಿನಲ್ಲಿ ೪ ಕುಟುಂಬದವರು ೧೦-೧೫ ಕೆ.ಜಿ.ಯವರೆಗೆ ಶೇ.೦೫.೦೦ರಷ್ಟು, ೧೪ ಕುಟುಂಬಗಳು ೧೫-೨೦ ಕೆ.ಜಿ.ಯವರೆಗೆ ಶೇ.೧೭.೫೦ರಷ್ಟು, ೩೩ ಕುಟುಂಬದವರು ೨೦-೨೫ ಕೆ.ಜಿ. ಶೇ.೪೧.೨೫ರಷ್ಟು, ೨೯ ಕುಟುಂಬಗಳು ೨೫-೩೦ ಕೆ.ಜಿ.ಯವರೆಗೆ ಶೇ.೩೬.೨೫ರಷ್ಟು ಅಕ್ಕಿಯನ್ನು ಪಡೆಯುತ್ತಾರೆ. ಈ ತಾಲ್ಲೂಕಿನಲ್ಲಿ ೩೩ ಕುಟುಂಬದವರು ಶೇ.೪೧.೨೫ರಷ್ಟು ೨೦-೨೫ ಕೆ.ಜಿ.ಯವರೆಗೆ ಅಕ್ಕಿಯನ್ನು ಪಡೆಯುವ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿದೆ. ಹಾಗೆಯೇ ಬಳ್ಳಾರಿ ಗ್ರಾಮೀಣ ಪ್ರದೇಶದ ೮೦ ಕುಟುಂಬಗಳಲ್ಲಿ ೧೪ ಕುಟುಂಬದವರು ೧೦-೧೫ ಕೆ.ಜಿ.ಯವರೆಗೆ ಶೇ.೧೯.೧೭ರಷ್ಟು, ೨೧ ಕುಟುಂಬಗಳು ೧೫-೨೦ ಕೆ.ಜಿ.ಯವರೆಗೆ ಶೇ.೨೮.೭೬ರಷ್ಟು, ೧೫ ಕುಟುಂಬದವರು ೨೦-೨೫ ಕೆ.ಜಿ. ಶೇ.೨೦.೫೪ರಷ್ಟು, ೨೩ ಕುಟುಂಬಗಳು ೨೫-೩೦ ಕೆ.ಜಿ.ಯವರೆಗೆ ಶೇ.೩೧.೫೩ರಷ್ಟು ಅಕ್ಕಿಯನ್ನು ಪಡೆಯುತ್ತಾರೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ೧೫-೨೦ ಕೆ.ಜಿವರೆಗೆ ಅಕ್ಕಿಯನ್ನು ಪಡೆಯುವ ಕುಟುಂಬ ಹೆಚ್ಚಾಗಿ ಕಂಡುಬಂದಿದೆ. ಅಂದರೆ ೨೧ ಕುಟುಂಬದವರು ಶೇ.೨೮.೭೬ರಷ್ಟು ಆಹಾರ ಪದಾರ್ಥವನ್ನು ಹೆಚ್ಚಾಗಿ ಪಡೆಯುವುದು ಕಂಡು ಬಂದಿದೆ. ಸಮೀಕ್ಷೆಗೆ ಒಳಪಡಿಸಿರುವ ಕುಟುಂಬದವರಿಗೆ ಪಡಿತರ ಚೀಟಿಯಿಂದ ಲಭಿಸುವ ಆಹಾರ ಪದಾರ್ಥಗಳು ಸಾಕಾಗುವುದಿಲ್ಲ. ಹಾಗಾಗಿ

ಅವರು ಬಹುತೇಕವಾಗಿ ಅಂಗಡಿಯಲ್ಲಿ ತಮ್ಮಗೆ ಬೇಕಾಗಿರುವ ಅಗತ್ಯ ಆಹಾರವನ್ನು ಕೊಂಡುಕೊಳ್ಳುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಕುಟುಂಬಗಳಲ್ಲಿ ಪಡಿತರ ಚೀಟಿಯಿಂದ ಪಡೆಯುವ ಆಹಾರ ಪದಾರ್ಥದ ಪ್ರಮಾಣ ಸಾಕಾಗುತ್ತಾ? ಎಂಬ ಪ್ರಶ್ನೆಯನ್ನು ಕೇಳಿದಾಗ ಈ ಮೂರು ತಾಲ್ಲೂಕುಗಳಲ್ಲಿ ೨೩೩ ಕುಟುಂಬಗಳು ಆಹಾರ ಪದಾರ್ಥ ಸಾಕಾಗುವುದಿಲ್ಲ ಎನ್ನುವ ಉತ್ತರವನ್ನು ನೀಡಿದ್ದಾರೆ. ಹಾಗಾಗಿ ಅವರು ಆಹಾರ ಪದಾರ್ಥವನ್ನು ಅಂಗಡಿಯಲ್ಲಿ ಕೊಂಡುಕೊಳ್ಳುತ್ತಾರೆ. ಹೀಗೆ ಪಡಿತರ ಚೀಟಿಯಿಂದ ಪಡೆಯುವ ಆಹಾರ ಕುಟುಂಬಗಳಿಗೆ ಸಾಕಾಗದೆ ಇರುವುದರಿಂದ ಆಹಾರ ಅಭದ್ರತೆ ಇರುವುದು ತಿಳಿದುಬರುತ್ತದೆ.

**ಆಹಾರವನ್ನು ಖರೀದಿಸುವ ವೆಚ್ಚ**

ಹೊಸಪೇಟೆ-ಬಳ್ಳಾರಿ-ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಆಹಾರದ ಪ್ರಮಾಣ ಸಾಕಾಗದಿದ್ದಲ್ಲಿ ಅವರು ಅಂಗಡಿ ಅಥವಾ ಕೃಷಿಯ ಮೂಲಕ ತಿಂಗಳಿಗೆ ಸಾಕಾಗುವಷ್ಟು ಅಗತ್ಯ ಆಹಾರಗಳನ್ನು ಕೊಂಡುಕೊಳ್ಳುತ್ತಾರೆ. ಹೀಗೆ ಆಹಾರ ಪಾದರ್ಥವನ್ನು ಕೊಳ್ಳಲು ಕುಟುಂಬಗಳು ಮಾಡುವ ತಿಂಗಳ ವೆಚ್ಚ ಎಷ್ಟು? ಎಂದು ಅರಿತುಕೊಳ್ಳುವ ಅಗತ್ಯತೆ ಇದೆ. ಹಾಗಾಗಿ ಗಣಿ ವಲಯಗಳ ಹೆ.ಬಿ.ಎಸ್. ಗ್ರಾಮೀಣ ಪ್ರದೇಶಗಳಲ್ಲಿ ಅಯ್ಕೆ ಮಾಡಿಕೊಂಡು ೨೭೦ ಕುಟುಂಬಗಳ ತಿಂಗಳಿಗೆ ಆಹಾರ ಕೊಳ್ಳಲು ಮಾಡುವ ಖರ್ಚೆ ಎಷ್ಟು? ಎಂದು ಕೇಳಿದಾಗ ಬಂದ ಫಲಿತಾಂಶವನ್ನು ತಾಲ್ಲೂಕುವಾರು ಈ ಕೆಳಗಿನಂತೆ ದಾಖಲಿಸಲಾಗಿದೆ.

**ಕೊಷ್ಟಕ ೩.೨೧ ಕುಟುಂಬಗಳು ಆಹಾರವನ್ನು ಖರೀದಿಸಲು ತಿಂಗಳಿಗೆ ಮಾಡುವ ವೆಚ್ಚದ ಪ್ರಮಾಣ**

| ಕ್ರಸಂ | ತಿಂಗಳ ವೆಚ್ಚ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ೧೦೦೦-೨೦೦೦ | ೧೯ | ೨೧.೧೨ | ೨೬ | ೨೮.೮೮ | ೨೦ | ೨೨.೨೨ |
| ೦೨ | ೨೦೦೦-೪೦೦೦ | ೨೭ | ೩೦.೦೦ | ೩೬ | ೪೦.೦೨ | ೩೦ | ೩೩.೩೪ |
| ೦೩ | ೪೦೦೦-೬೦೦೦ | ೩೫ | ೩೮.೮೮ | ೧೫ | ೧೬.೬೬ | ೨೫ | ೨೭.೨೭ |
| ೦೪ | ೬೦೦೦ಕ್ಕಿಂತ ಹೆಚ್ಚು | ೦೯ | ೧೦.೦೦ | ೧೩ | ೧೪.೦೪ | ೧೫ | ೧೬.೬೬ |
| ೦೫ | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ಕುಟುಂಬಗಳು ಆಹಾರ ಕೊಳ್ಳಲು ತಿಂಗಳಿಗೆ ಮಾಡುವ ವೆಚ್ಚವನ್ನು ಅಂದರೆ ೧೦೦೦-೨೦೦೦, ೨೦೦೦-೪೦೦೦, ೪೦೦೦-೬೦೦೦, ೬೦೦೦ಕ್ಕಿಂತ ಹೆಚ್ಚು ಎಂದು ೪ ವರ್ಗವಾಗಿ ವಿಂಗಡಿಸಿ ತಾಲ್ಲೂಕುವಾರು ಕುಟುಂಬಗಳು ತಿಂಗಳಿಗೆ ಎಷ್ಟು ರೂಪಾಯಿ ಆಹಾರ ಕೊಳ್ಳಲು ವೆಚ್ಚ ಮಾಡಿವೆಂದು ತಿಳಿದುಕೊಳ್ಳಲು ಸಹಾಯಕವಾಗಿದೆ. ಗಣಿ ವಲಯ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ತಿಂಗಳಿಗೆ ಆಹಾರ ಪದಾರ್ಥಗಳನ್ನು ಕೊಳ್ಳಲು ೧೦೦೦ರಿಂದ೨೦೦೦ರವರೆಗೆ ೧೯ ಕುಟುಂಬಗಳು ಶೇ೨೧.೧೨ರಷ್ಟು, ೨೦೦೦ರಿಂದ೪೦೦೦ವರೆಗೆ ೨೭ ಕುಟುಂಬಗಳು ಶೇ.೩೦ರಷ್ಟು, ೪೦೦೦-೬೦೦೦ವರೆಗೆ ೩೫ ಕುಟುಂಬಗಳು ಶೇ.೩೮.೮೮ರಷ್ಟು,

೬೦೦೦ಕ್ಕಿಂತ ಹೆಚ್ಚು ೦೯ ಕುಟುಂಬಗಳು ಶೇ.೧೦.೦೦ರಷ್ಟು ವೆಚ್ಚವನ್ನು ಮಾಡುತ್ತದೆ. ಇದರಲ್ಲಿ ಶೇ.೩೮.೮೮ರಷ್ಟು ತಿಂಗಳಿಗೆ ೪೦೦೦-೬೦೦೦೦ರವರೆಗೆ ವೆಚ್ಚ ಮಾಡುವ ಕುಟುಂಬದವರು ಹೆಚ್ಚಾಗಿದ್ದು, ಶೇ.೧೦ರಷ್ಟು ಕುಟುಂಬಗಳು ೬೦೦೦ಕ್ಕಿಂತ ಹೆಚ್ಚು ವೆಚ್ಚ ಮಾಡುವ ಪ್ರಮಾಣ ಕಡಿಮೆ ಇರುವುದು ಕಂಡುಬಂದಿದೆ. ಗಣಿ ವಲಯ ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ತಿಂಗಳಿಗೆ ಆಹಾರ ಪದಾರ್ಥವನ್ನು ಕೊಳ್ಳಲು ೧೦೦೦ರಿಂದ೨೦೦೦ರ ವರೆಗೆ ೨೬ ಕುಟುಂಬಗಳು ಶೇ.೨೮.೮೮ರಷ್ಟು, ೨೦೦೦ರಿಂದ೪೦೦೦ವರೆಗೆ ೩೬ ಕುಟುಂಬಗಳು ಶೇ.೪೦.೦೨ರಷ್ಟು, ೪೦೦೦-೬೦೦೦ವರೆಗೆ ೧೫ ಕುಟುಂಬಗಳು ಶೇ.೧೬.೬೬ರಷ್ಟು, ೬೦೦೦ಕ್ಕಿಂತ ಹೆಚ್ಚು ೧೩ ಕುಟುಂಬಗಳು ಶೇ.೧೪.೦೪ರಷ್ಟು ವೆಚ್ಚವನ್ನು ಮಾಡುತ್ತವೆ. ಸಂಡೂರು ತಾಲ್ಲೂಕಿನ ೩೬ ಕುಟುಂಬಗಳು ೨೦೦೦ರಿಂದ೪೦೦೦ರೂ.ವರೆಗೆ ತಿಂಗಳಿಗೆ ಆಧಿಕವಾಗಿ ವೆಚ್ಚ ಮಾಡುವ ಕುಟುಂಬಗಳಾಗಿದ್ದು ಶೇ.೪೦.೦೨ರಷ್ಟು ಇರುವುದು ಕಂಡುಬಂದರೆ, ೬೦೦೦ಕ್ಕಿಂತ ಹೆಚ್ಚು ಆಹಾರ ಪದಾರ್ಥವನ್ನು ಕೊಳ್ಳಲು ತಿಂಗಳಿಗೆ ಕಡಿಮೆ ಮಟ್ಟದಲ್ಲಿ ವೆಚ್ಚ ಮಾಡಲು ೧೩ ಕುಟುಂಬಗಳಲ್ಲಿ ಶೇ.೧೩.೦೪ರಷ್ಟಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನಲ್ಲಿಯೂ ೨೦೦೦-೪೦೦೦ ರೂಪಾಯಿಗಳನ್ನು ತಿಂಗಳಿಗೆ ಆಹಾರ ಪದಾರ್ಥವನ್ನು ಕೊಳ್ಳಲು ಶೇ.೩೩.೩೪ರಷ್ಟು ಕುಟುಂಬಗಳು ಹೆಚ್ಚಾಗಿ ವೆಚ್ಚ ಮಾಡಿದ್ದು, ೬೦೦೦ಕ್ಕಿಂತ ಹೆಚ್ಚು ರೂಪಾಯಿಗಳನ್ನು ತಿಂಗಳಿಗೆ ಶೇ.೧೬.೬೬ರಷ್ಟು ಕುಟುಂಬದವರು ಆಹಾರ ಪದಾರ್ಥವನ್ನು ಕೊಳ್ಳಲು ಮಾಡಿರುವ ವೆಚ್ಚ ೧೫ ಕುಟುಂಬಗಳಲ್ಲಿ ಕಂಡು ಬಂದಿದ್ದು, ತಿಂಗಳಿಗೆ ಕಡಿಮೆ ಪ್ರಮಾಣದ ವೆಚ್ಚ ಮಾಡುವ ಕುಟುಂಬಗಳಾಗಿವೆ. ಹೀಗೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಆಹಾರ ಪದಾರ್ಥಗಳನ್ನು ಕೊಳ್ಳುಲು ತಿಂಗಳಿಗೆ ಮಾಡುವ ವೆಚ್ಚವಾಗಿವೆ.

**೩.೬.೨ ಆರೋಗ್ಯ ಭದ್ರತೆ ಮತ್ತು ಪೌಷ್ಟಿಕತೆ**

ಬಳ್ಳಾರಿ ಜಿಲ್ಲೆಯ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಅಪೌಷ್ಠಿಕತೆಯ ಸ್ಥಿತಿಗತಿಯನ್ನು ಅರಿಯುವ ಅಗತ್ಯತೆ ಇದೆ. ಜನರು ಅನುಬೋಗ ಮತ್ತು ಹೂಡಿಕೆಯ ಗುಣ ಲಕ್ಷಣಗಳನ್ನು ಹೊಂದಿರುವ ಪೋಷಣೆಯುಕ್ತ ವಸ್ತುಗಳಿಗೆ ಬೇಡಿಕೆ ಇಡುತ್ತಾರೆ. ಏಕೆಂದರೆ ಉತ್ತಮ ಪೋಷಣೆಯು ಒಂದು ಅಮೂಲ್ಯವಾದ ಸ್ವತ್ತು. ಪ್ರತಿಯೊಬ್ಬರು ರೋಗರುಜ್ಜಿನೆ, ಅಸಮರ್ಥತತೆ ಹಾಗೂ ಅಕಾಲಿಕ ಮರಣದಿಂದ ದೂರವಿರಲು ಬಯಸುತ್ತಾರೆ. ರೋಗರುಜ್ಜಿನೆ, ಅಸಮರ್ಥತತೆ ಹಾಗೂ ಅಕಾಲಿಕ ಮರಣವು ಪೌಷ್ಠಿಕತೆಯುಕ್ತ ಆಹಾರ ಧಾನ್ಯಗಳ ಆರೋಗ್ಯವನ್ನು ಅಳೆಯುವ ಮಾಪನವಾಗಿದೆ. ಗ್ರಾಮೀಣ ಪ್ದರೇಶದ ಮಹಿಳೆಯರು, ಪುರುಷರು, ಮಕ್ಕಳು ಪೌಷ್ಠಿಕಾಂಶ ಕೊರತೆಯಿಂದ ಬಳಲುತ್ತಿರುವುದು ಕಾಣಸಿಗುತ್ತದೆ. ಅಪೌಷ್ಟಿಕತೆಗೆ ಸಂಬಂಧಿಸಿಂದಂತೆ ಕುಟುಂಬಗಳಿಗೆ ನೀವು ಸೇವಿಸುವ ಆಹಾರದ ಗುಣಮಟ್ಟ ಪೌಷ್ಟಿಕ ಅಥವಾ ಅಪೌಷ್ಟಿಕವಾಗಿದೆಯಾ? ಎಂಬ ಪ್ರಶ್ನೆಗೆ ಅವರು ನೀಡಿರುವ ಉತ್ತರ ೨೭೦ ಕುಟುಂಬಗಳಿಗೆ ಪ್ರಶ್ನೆಯನ್ನು ಕೇಳಿದಾಗ ೬೭ ಕುಟುಂಬಗಳು ಪೌಷ್ಟಿಕ ಆಹಾರವಿದೆ, ಇನ್ನೂಳಿದ ೨೦೩ ಕುಟುಂಬಗಳು ಆಹಾರ ಪೌಷ್ಟಿಕತೆ ಕೊರತೆಯಿಂದ ಇರುವುದನ್ನು ಸೂಚಿಸುತ್ತಾರೆ. ಅಂದರೆ ಶೇ.೨೪.೧೮ರಷ್ಟು ಕುಟುಂಬಗಳು ಆಹಾರ ಪೌಷ್ಟಿಕವಾಗಿದೆ ಎಂದೂ, ಶೇ.೭೫.೧೮ರಷ್ಟು ಕುಟುಂಬಗಳು ಆಹಾರ ಪಾದರ್ಥಗಳು ಅಪೌಷ್ಟಿಕವಾಗಿವೆಂದು ತಿಳಿಸಿದ್ದಾರೆ. ಈ ರೀತಿಯ ಅಪೌಷ್ಟಿಕತೆಗೆ ಗಣಿಗಾರಿಕೆಯು ಒಂದು ಕಾರಣವಾಗಿದೆಂದು ತಿಳಿಸಿದ್ದಾರೆ. ಅಪೌಷ್ಟಿಕತೆಗೆ ಸಂಬಂಧಿಸಿದಂತೆ ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದ ಪಲಿತಾಂಶವನ್ನು ತಾಲ್ಲೂಕುವಾರು ಅಂಕಿ-ಅಂಶಗಳನ್ನು ಕೋಷ್ಟಕ ೩.೨೨ರಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೩.೨೨ ಅಪೌಷ್ಟಿಕ ಆಹಾರ ಪದಾರ್ಥಗಳಿಂದ ಬಳಲುತ್ತಿರುವ ಕುಟುಂಬಗಳ ಪ್ರಮಾಣ.**

| ಕ್ರ.ಸಂ. | ವಿವರಣೆ ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ನಿಮ್ಮ ಕುಟುಂಬದಲ್ಲಿ ಪೌಷ್ಟಿಕ ಆಹಾರದ ಕೊರತೆಯಿಂದ ಬಳಲುತ್ತಿದ್ದಾರಾ | | | | | | |
| | ಹೌದು | ೫೦ | ೫೫.೫೬ | ೬೬ | ೭೩.೧೨ | ೬೨ | ೬೮.೬೯ |
| | ಇಲ್ಲ | ೪೦ | ೪೪.೪೪ | ೨೪ | ೨೬.೯೯ | ೨೮ | ೩೧.೧೧ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |
| ೦೨ | ಹೌದಾದರೆ ಯಾರು ಬಳಲುತ್ತಿದ್ದಾರೆ | | | | | | |
| | ಮಕ್ಕಳು | ೧೭ | ೩೪ | ೧೯ | ೨೮.೭೮ | ೧೯ | ೩೦.೬೪ |
| | ಮಹಿಳೆ | ೨೨ | ೪೪ | ೩೫ | ೫೩.೦೪ | ೨೬ | ೪೧.೯೩ |
| | ಪುರುಷ | ೧೧ | ೨೨ | ೧೨ | ೧೮.೧೮ | ೧೭ | ೨೭.೪೩ |
| | **ಒಟ್ಟು** | **೫೦** | **೧೦೦** | **೬೬** | **೧೦೦** | **೬೨** | **೧೦೦** |
| ೦೩ | ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ | | | | | | |
| | ಹೌದು | ೨೫ | ೨೭.೨೮ | ೨೪ | ೨೬.೬೭ | ೪೯ | ೫೪.೪೪ |
| | ಇಲ್ಲ | ೬೫ | ೭೨.೭೨ | ೬೬ | ೭೩.೩೩ | ೪೧ | ೪೫.೫೬ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |
| ೦೪ | ಹೌದಾದರೇ ಯಾರು ಮರಣಿಸಿದ್ದಾರೆ | | | | | | |
| | ಮಕ್ಕಳು | ೦೭ | ೨೮ | ೦೯ | ೩೭.೫೧ | ೧೧ | ೩೨.೬೫ |
| | ಮಹಿಳೆ | ೧೩ | ೫೨ | ೧೧ | ೪೫.೮೩ | ೨೨ | ೪೪.೮೯ |
| | ಪುರುಷ | ೦೫ | ೨೦ | ೦೪ | ೧೬.೬೬ | ೧೧ | ೨೨.೪೬ |
| | **ಒಟ್ಟು** | **೨೫** | **೧೦೦** | **೨೪** | **೧೦೦** | **೪೯** | **೧೦೦** |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ, ಅಪೌಷ್ಟಿಕ ಆಹಾರ ಪದಾರ್ಥಗಳಿಂದ ಬಳಲುತ್ತಿರುವ ಕುಟುಂಬಗಳ ಪ್ರಮಾಣವನ್ನು ಅಂಕಿ-ಅಂಶಗಳಲ್ಲಿ ದಾಖಲಿಸಲಾಗಿದೆ. ಅಪೌಷ್ಟಿಕತೆಗೆ ಸಂಬಂಧಿಸಿದಂತೆ ನಿಮ್ಮ ಕುಟುಂಬಗಳಲ್ಲಿ ಅಪೌಷ್ಟಿಕ ಅಹಾರ ಸೇವನೆಯಿಂದ ಯಾರಾದಾರೂ ಬಳಲುತ್ತಿದ್ದರಾ? ಎಂಬ ಪ್ರಶ್ನೆಗೆ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೫೦ ಕುಟುಂಬಗಳು ಶೇ.೫೫.೫೬ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದರೆ, ೪೦ ಕುಟುಂಬಗಳು ಶೇ.೪೪.೪೪ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿಲ್ಲ ಎಂಬ ಅಂಶ ಕಂಡುಬರುತ್ತದೆ. ೫೦ ಕುಟುಂಬಗಳಲ್ಲಿ ೧೭ ಕುಟುಂಬಗಳ ಮಕ್ಕಳು ಶೇ.೩೪ರಷ್ಟು, ೨೨ ಕುಟುಂಬಗಳ ಮಹಿಳೆಯರು ಶೇ.೪೪ರಷ್ಟು, ೧೧ ಕುಟುಂಬಗಳ ಪರುಷರು ಶೇ.೨೨ರಷ್ಟು ಅಪೌಷ್ಟಿಕತೆಯಿಂದ ಈ ವಲಯದ ಗ್ರಾಮೀಣ ಪ್ರದೇಶದಲ್ಲಿ ಬಳಲುತ್ತಿದಾರೆ. ಇದರಲ್ಲಿ ಮಹಿಳೆಯರು (ಶೇ.೪೪) ಅಧಿಕವಾಗಿ ಅಪೌಷ್ಟಿಕತೆಯಿಂದ ಬಳಲುತ್ತಿರುವುದು ಕಾಣಸಿಗುತ್ತದೆ. ಒಟ್ಟಾರೆ ೯೦ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಿದವರು ೨೫ ಕುಟುಂಬಗಳಲ್ಲಿ ಶೇ.೨೭.೨೮ರಷ್ಟು ಇನ್ನೂಳಿದ ೬೫ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸದೆ

ಇರುವವರ ಪ್ರಮಾಣ ಶೇ.೭೨.೭೨ರಷ್ಟಿರುವುದು ಕಂಡುಬಂದಿದೆ. ಈ ತಾಲ್ಲೂಕಿನ ಗ್ರಾಮಾಂತರ ಗಣಿಗಾರಿಕಾ ಪ್ರದೇಶಗಳಲ್ಲಿ ಶೇ.೨೭.೨೮ರಷ್ಟು ಕುಟುಂಬಗಳು ಅಪೌಷ್ಟಿಕತೆಯಿಂದ ಮರಣಿಸಿದವರಿದ್ದಾರೆ. ಇದರಲ್ಲಿ ಮಕ್ಕಳು ಶೇ.೨೮ರಷ್ಟು, ಮಹಿಳೆಯರು ಶೇ.೫೨ರಷ್ಟು, ಪುರುಷರು ಶೇ.೨೦ರಷ್ಟು ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಮುಖ್ಯವಾಗಿ ಅಪೌಷ್ಟಿಕತೆಯಿಂದ (ಶೇ.೫೨) ಮಹಿಳೆಯರು ಅಧಿಕ ಪ್ರಮಾಣದಲ್ಲಿ ಮರಣಿಸಿದರೆ, ಪುರುಷರು ಶೇ.೨೦ರಷ್ಟು ಕಡಿಮೆ ಪ್ರಮಾಣದಲ್ಲಿ ಅಪೌಷ್ಟಿಕತೆಯಿಂದ ಮರಣಿಸಿರುವುದು ಗ್ರಹಿಸಬೇಕಾದ ಅಂಶವಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ೯೦ ಕುಟುಂಬಗಳಲ್ಲಿ ೬೬ ಕುಟುಂಬಗಳು ಶೇ.೭೩.೧೨ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಇನ್ನುಳಿದ ೨೨ ಕುಟುಂಬಗಳು ಶೇ.೨೬.೮೯ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿಲ್ಲ. ಅಪೌಷ್ಟಿಕತೆಯಿಂದ ಬಳಲುತ್ತಿರುವ ೬೬ ಕುಟುಂಬಗಳಲ್ಲಿ ಮಕ್ಕಳು ಶೇ.೨೮.೭೮ರಷ್ಟು, ಮಹಿಳೆಯರು ಶೇ.೫೩.೦೪ರಷ್ಟು, ಪುರುಷರು ಶೇ.೧೮.೧೮ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಇದರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ಅಪೌಷ್ಠಿಕತೆಯಿಂದ ಬಳಲುತ್ತಿರುವುದು ಕಾಣಬಹುದು. ಅಪೌಷ್ಟಿಕತೆಯಿಂದ ಮರಣಿಸಿದ್ದಾರ ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ತಾಲ್ಲೂಕಿನ ಗ್ರಾಮೀಣ ಭಾಗಗಳಲ್ಲಿ ಆಯ್ದುಕೊಂಡ ೯೦ ಕುಟುಂಬಗಳ ಪೈಕಿ ೨೪ ಕುಟುಂಬಗಳಲ್ಲಿ ಅಂದರೆ ಶೇ.೨೬.೬೭ರಷ್ಟು ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಇನ್ನುಳಿದ ೬೬ ಕುಟುಂಬಗಳಲ್ಲಿ ಶೇ.೭೩.೩೩ರಷ್ಟು ಅಪೌಷ್ಠಿಕತೆಯಿಂದ ಮರಣಿಸಿಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಅಪೌಷ್ಠಿಕತೆಯಿಂದ ಮರಣಿಸಿದ್ದ ಕುಟುಂಬಗಳಲ್ಲಿ ಮಕ್ಕಳು ಶೇ.೩೭.೫೧ರಷ್ಟು, ಮಹಿಳೆಯರು ಶೇ.೪೫.೮೩ರಷ್ಟು, ಪುರುಷರು ಶೇ.೧೬.೬೬ರಷ್ಟು, ಅಪೌಷ್ಠಿಕತೆಯಿಂದ ಮರಣಿಸಿದ್ದಾರೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ.

ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಅಪೌಷ್ಟಿಕತೆಗೆ ಸಂಬಂಧಿಸಿದಂತೆ ೯೦ ಕುಟುಂಬಗಳ ಪೈಕಿ ೬೨ ಕುಟುಂಬಗಳು ಶೇ.೬೮.೮೯ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದರೆ, ಇನ್ನುಳಿದ ೨೮ ಕುಟುಂಬಗಳು ಶೇ.೩೧.೧೧ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿರುವುದು ಕಂಡುಬರುವುದಿಲ್ಲ. ಅಪೌಷ್ಟಿಕತೆಯಿಂದ ಬಳಲುತ್ತಿರುವ ಕುಟುಂಬಗಳಲ್ಲಿ ಮಕ್ಕಳು, ಪುರುಷರು, ಮಹಿಳೆಯರು ಯಾವ ಪ್ರಮಾಣದಲ್ಲಿ ಬಳಲುತ್ತಿದ್ದಾರೆ ಎಂಬುದನ್ನು ನೋಡುವುದಾದರೆ, ಮಕ್ಕಳು ಶೇ.೩೦.೬೪ರಷ್ಟು, ಮಹಿಳೆಯರು ಶೇ.೪೧.೯೩ರಷ್ಟು, ಪುರುಷರು ಶೇ.೨೭.೪೩ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಈ ಅಪೌಷ್ಟಿಕತೆಯಿಂದ ಕುಟುಂಬಗಳಲ್ಲಿ ಯಾರಾದರೂ ಮರಣಿಸಿದ್ದಾರೆ ಎಂಬುದನ್ನು ಸಮೀಕ್ಷೆಗೆ ಒಳಪಡಿಸಿದಾಗ ೯೦ ಕುಟುಂಬಗಳಲ್ಲಿ ೪೯ ಕುಟುಂಬದವರು ಶೇ.೫೪.೪೪ರಷ್ಟು ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಇನ್ನೂಳಿದ ೪೧ ಕುಟುಂಬಗಳಲ್ಲಿ ಅಂದರೆ ಶೇ.೪೫.೫೬ರಷ್ಟು ಅಪೌಷ್ಟಿತೆಯಿಂದ ಮರಣಿಸಿಲ್ಲ ಎಂದು ತಿಳಿದುಬರುತ್ತದೆ. ಈ ೪೯ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಯಾರು ಮರಣಿಸಿದ್ದಾರೆ ಎಂಬುದು ಬಹು ಮುಖ್ಯವಾದ ಪ್ರಶ್ನೆಯಾಗಿದೆ. ಈ ಕುಟುಂಬಗಳಲ್ಲಿ ಮಕ್ಕಳು ಶೇ.೩೨.೬೫ರಷ್ಟು, ಮಹಿಳೆಯರು ಶೇ.೪೪.೮೯ರಷ್ಟು, ಪುರುಷರು ಶೇ.೨೨.೪೫ರಷ್ಟು ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಇದರಲ್ಲಿ ಅಪೌಷ್ಟಿಕತೆಯಿಂದ ಶೇ.೪೪.೮೯ರಷ್ಟು ಮಹಿಳೆಯರು ಮರಣದ ಪ್ರಮಾಣ ಅಧಿಕವಾಗಿದೆ. ಒಟ್ಟಾರೆಯಾಗಿ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳಲ್ಲಿ ಅಪೌಷ್ಟಿಕತೆಯಿಂದ (ಶೇ.೬೮.೧೧) ಹೆಚ್ಚಾಗಿ ಬಳ್ಳಾರಿ ತಾಲ್ಲೂಕಿನಲ್ಲಿ ಬಳಲುತ್ತಿದ್ದು, ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೫೫.೫೫ರಷ್ಟು ಕಡಿಮೆ ಪ್ರಮಾಣದಲ್ಲಿ ಬಳಲುತ್ತಿರುವುದು ಕಾಣಗುತ್ತದೆ. ಈ ಮೂರು ತಾಲ್ಲೂಕುಗಳಲ್ಲಿ ಮಹಿಳೆಯರೇ ಅಧಿಕ ಪ್ರಮಾಣದಲ್ಲಿ ಅಪೌಷ್ಟಿಕತೆಗೆ ತುತ್ತಾಗಿದ್ದು, ಸಂಡೂರು ತಾಲ್ಲೂಕು ಹೊಸಪೇಟೆ ಮತ್ತು ಬಳ್ಳಾರಿ ತಾಲ್ಲೂಕ್ಕಿಂತ ಶೇ.೫೩.೦೩ರಷ್ಟು ಅಧಿಕ ಪ್ರಮಾಣದ ಮಹಿಳೆಯರು ಅಪೌಷ್ಟಿಕತೆಯಿಂದ ಬಳಲುತ್ತಿರುವುದು ಗಮನಿಸಬಹುದಾಗಿದೆ. ಹಾಗೆಯೇ ಅಪೌಷ್ಟಿಕತೆಯಿಂದ ಈ ತಾಲ್ಲೂಕುಗಳಲ್ಲಿ ಬಳ್ಳಾರಿ ತಾಲ್ಲೂಕಿನಲ್ಲಿ ಅಪೌಷ್ಟಿಕತೆಯಿಂದ ಕುಟುಂಬಗಳು ಹೆಚ್ಚಾಗಿ (ಶೇ.೫೪.೪೪)

ಮರಣಿಸಿದ್ದಾರೆ. ಇದರಲ್ಲಿ ಗ್ರಾಮೀಣ ಪ್ರದೇಶದ ಮಹಿಳೆಯರು ಅಧಿಕವಾಗಿ ಮರಣಿಸಿದವರ ಪ್ರಮಾಣವಾಗಿದೆ. ಈ ಅಪೌಷ್ಟಿಕತೆಯಿಂದ ಮರಣಿಸಿದ ಮಹಿಳೆಯರ ಪ್ರಮಾಣ ಹೊಸಪೇಟೆ ತಾಲ್ಲೂಕಿನಲ್ಲಿ (ಶೇ.೫೨) ಹೆಚ್ಚಾಗಿದೆ. ಅಪೌಷ್ಟಿಕತೆಯಿಂದ ಮರಣಿಸಿದವರ ವಯೋಮಾನಕ್ಕೆ ಸಂಬಂಧಿತ ಪ್ರಶ್ನೆಗೆ ಕುಟುಂಬದವರು ನೀಡಿರುವ ಮಾಹಿತಿ ಆಧಾರದ ಮೇಲೆ ಈ ಕೆಳಗಿನ ಕೋಷ್ಟಕದಲ್ಲಿ ಕುಟುಂಬಗಳು ಅಪೌಷ್ಟಿಕತೆಯಿಂದ ಮರಣಿಸಿದ್ದವರ ವಯೋಮಾನದ ವಿವರವನ್ನು ತೋರಿಸುತ್ತದೆ.

**ಕೋಷ್ಟಕ ೩.೨೩ ಅಪೌಷ್ಟಿಕತೆಯಿಂದ ಮರಣಿಸಿದ್ದವರ ವಯೋಮಾನದ ವಿವರ**

| ಕ್ರಸಂ. | ವಯಸ್ಸು | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ೦-೦೧ | - | - | - | - | ೦೫ | ೧೦.೨೦ |
| ೦೨ | ೦೧-೦೬ | ೦೪ | ೧೬ | ೦೫ | ೨೦.೮೫ | ೦೬ | ೧೨.೨೪ |
| ೦೩ | ೦೬-೧೨ | ೦೩ | ೧೨ | ೦೪ | ೧೬.೬೬ | ೦೫ | ೨೦.೩೦ |
| ೦೪ | ೧೨-೧೮ | - | - | - | - | ೦೨ | ೦೪.೪೦ |
| ೦೫ | ೧೮-೨೫ | ೦೬ | ೨೪ | ೦೭ | ೨೯.೧೬ | ೧೬ | ೩೨.೬೫ |
| ೦೬ | ೨೫ಕ್ಕಿಂತ ಹೆಚ್ಚು | ೧೨ | ೪೮ | ೦೮ | ೩೩.೩೩ | ೧೫ | ೩೦.೬೧ |
| | ಒಟ್ಟು | ೨೫ | ೧೦೦ | ೨೪ | ೧೦೦ | ೪೯ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ.**

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಅಪೌಷ್ಟಿಕತೆಯಿಂದ ಮರಣಿಸಿದ್ದವರ ವಯಸ್ಸಿನ ಪ್ರಮಾಣವನ್ನು ಗಣಿ ವಲಯದ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ತಾಲ್ಲೂಕುವಾರು ತೋರಿಸಲಾಗಿದೆ. ಸಂಡೂರು, ಹೊಸಪೇಟೆ, ಬಳ್ಳಾರಿ ಗ್ರಾಮೀಣ ಪ್ರದೇಶದ ತಾಲ್ಲೂಕುಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಿದ್ದವರ ವಯೋಮಾನವನ್ನು ೬ ವರ್ಗಗಳಲ್ಲಿ ವಿಂಗಡಿಸಿ ಕುಟುಂಬಗಳ ಶೇಕಡವಾರು ದಾಖಲಿಸಲಾಗಿದೆ. ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ೨೫ ಕ್ಕಿಂತ ಹೆಚ್ಚಿನ ವಯಸ್ಸಿನವರು ಶೇ.೪೮ರಷ್ಟು ಅಧಿಕ ಪ್ರಮಾಣದಲ್ಲಿ ಅಪೌಷ್ಟಿಕತೆಯಿಂದ ಮರಣಿಸಿದರೆ, ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ೦೬-೧೨ ವಯೋಮಾನದವರು ಶೇ.೦೪.೪೦ರಷ್ಟು ಅಂದರೆ ಅಪೌಷ್ಟಿಕತೆಯಿಂದ ಕಡಿಮೆ ಪ್ರಮಾಣದಲ್ಲಿ ಮರಣ ಹೊಂದಿರುವುದು ಗಮನಿಸಬಹುದಾಗಿದೆ.

ಅಪೌಷ್ಟಿಕತೆಯಿಂದ ಮರಣಿಸಲು ಕಾರಣವೇನು? ಎಂಬ ಪ್ರಶ್ನೆಗೆ ಸಮೀಕ್ಷೆಗೆ ಒಳಪಡಿಸಲಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕಿನ ಕುಟುಂಬಗಳು ನೀಡಿರುವ ಮಾಹಿತಿಯನ್ನು ಅಂಕಿ-ಅಂಶಗಳಲ್ಲಿ ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೨೪ ಅಪೌಷ್ಟಿಕತೆಯಿಂದ ಮರಣಿಸಲು ಕಾರಣಗಳ ಪ್ರಮಾಣ**

| ಕ್ರಸಂ. | ಅಪೌಷ್ಟಿಕತೆಗೆ ಕಾರಣ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕಳಪೆ ಆಹಾರ | ೧೦ | ೪೦ | ೦೯ | ೩೭.೫೦ | ೨೦ | ೪೦.೮೧ |
| ೦೨ | ರಕ್ತ ಹಿನತೆ | ೦೯ | ೩೬ | ೦೭ | ೨೯.೧೬ | ೧೫ | ೩೦.೬೨ |
| ೦೩ | ಗಣಿಗಾರಿಕೆ | ೦೬ | ೨೪ | ೦೮ | ೩೩.೩೪ | ೧೪ | ೨೮.೫೭ |
| ೦೪ | ಇತರೆ | - | - | - | - | - | - |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಲು ಕಾರಣಗಳೇನು? ಎಂದು ಈ ಪ್ರಶ್ನೆಯನ್ನು ಕೇಳಿದಾಗ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೨೫ ಕುಟುಂಬಗಳಲ್ಲಿ ೧೦ ಕುಟುಂಬದವರು ಕಳಪೆ ಆಹಾರದಿಂದ ಶೇ.೪೦ರಷ್ಟು, ೦೯ ಕುಟುಂಬದವರು ರಕ್ತಹೀನತೆಯಿಂದ ಶೇ.೩೬ರಷ್ಟು, ೦೬ ಕುಟುಂಬಗಳು ಗಣಿಗಾರಿಕೆಯು ಶೇ.೨೪ರಷ್ಟು ಗ್ರಾಮೀಣ ಪ್ರದೇಶದ ಜನರು ಅಪೌಷ್ಟಿಕತೆಯಿಂದ ಮರಣಿಸಲು ಕಾರಣವಾಗಿದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಲು ಆಹಾರದ ಕಳಪೆಯು (ಶೇ.೪೦) ಕಾರಣವಾಗಿರುವುದು ಅಧಿಕವಾಗಿ ಕಂಡುಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಅಪೌಷ್ಟಿಕತೆಯಿಂದ ಮರಣಿಸಲು ೨೪ ಕುಟುಂಬಗಳಲ್ಲಿ ಕಳಪೆ ಆಹಾರ, ರಕ್ತ ಹೀನತೆ ಮತ್ತು ಗಣಿಗಾರಿಕೆಯೇ ಪ್ರಮುಖವಾದ ಕಾರಣಗಳಾಗಿವೆ. ಈ ೨೪ ಕುಟುಂಬಗಳಲ್ಲಿ ೦೯ ಕುಟುಂಬಗಳು ಕಳಪೆ ಆಹಾರದಿಂದ ಶೇ.೩೭.೫೦ರಷ್ಟು, ರಕ್ತ ಹೀನತೆಯಿಂದ ಶೇ.೨೯.೨೬ರಷ್ಟು, ಗಣಿಗಾರಿಕೆಯಿಂದ ಶೇ.೩೩.೩೪ರಷ್ಟು, ಅಪೌಷ್ಟಿಕತೆಯಿಂದ ಮರಣಿಸಲು ಕಾರಣಗಳಾಗಿವೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಲು ಆಹಾರದ ಕಳಪೆಯು (ಶೇ.೩೭.೫೦) ಕಾರಣವಾಗಿರುವುದು ಅಧಿಕವಾಗಿ ಕಂಡು ಬರುತ್ತದೆ. ಹಾಗೂ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೪೯ ಕುಟುಂಬಗಳಲ್ಲಿ ಕಳಪೆ ಆಹಾರದಿಂದ ಶೇ.೪೦.೮೧ರಷ್ಟು, ರಕ್ತ ಹೀನತೆಯಿಂದ ಶೇ.೩೦.೬೨ರಷ್ಟು ಗಣಿಗಾರಿಕೆಯಿಂದ ಶೇ.೨೮.೫೭ರಷ್ಟು ಅಪೌಷ್ಟಿಕತೆಯಿಂದ ಮರಣಿಸಲು ಕಾರಣಗಳಾಗಿದೆ. ಇದರಲ್ಲಿಯೂ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಮರಣಿಸಲು ಆಹಾರದ ಕಳಪೆಯು (ಶೇ.೪೦.೮೧) ಕಾರಣವಾಗಿರುವುದು ಅಧಿಕವಾಗಿ ಕಂಡು ಬರುತ್ತದೆ ಎಂಬ ಅಂಶವನ್ನು ಗ್ರಹಿಸಬೇಕಾಗಿದೆ.

**೩.೬.೩ ಅಸ್ಪತ್ರೆ ದೊರೆಯುವಿಕೆಯ ಪ್ರಮಾಣ**

ಪ್ರಾಥಾಮಿಕ ಆರೋಗ್ಯ ಕೇಂದ್ರಗಳು ಗ್ರಾಮೀಣ ಭಾಗದ ವೈದ್ಯಕೀಯ ವ್ಯವಸ್ಥೆಯ ಅಡಿಗಲ್ಲಾಗಿದೆ. ಸಾರ್ವಜನಿಕ ಕ್ಷೇತ್ರದಲ್ಲಿ ನುರಿತ ವೈದ್ಯರನ್ನು ಹೊಂದಿರುವ ಪ್ರಥಮ ಹಂತವಾಗಿದ್ದು, ಪ್ರತಿ ಬಂಧಕ ಹಾಗೂ ಪರಿಹಾರಾತ್ಮಕ ಆರೋಗ್ಯ ಸೇವೆಗಳೆರಡನ್ನು ಒದಗಿಸುವ ಸಂಸ್ಥೆಯಾಗಿದೆ. ಗುಡ್ಡಗಾಡು ಹಾಗೂ ಬುಡಕಟ್ಟು ಪ್ರದೇಶಗಳಲ್ಲಿ ಪ್ರತಿ ೨೦,೦೦೦ ಜನರಿಗೆ ಒಂದು ಪ್ರಾಥಾಮಿಕ ಆರೋಗ್ಯ ಕೇಂದ್ರ ಮತ್ತು ಸಾಮಾನ್ಯ ಪ್ರದೇಶಗಳಲ್ಲಿ ೩೦,೦೦೦ ಜನರಿಗೆ ಒಂದರಂತೆ ಪ್ರಾಥಾಮಿಕ ಆರೋಗ್ಯ ಕೇಂದ್ರವನ್ನು ೪–೬ ಹಾಸಿಗೆಗಳೊಂದಿಗೆ ಸ್ಥಾಪಿಸಲಾಗುತ್ತದೆ. ಅದು ೬ ಉಪ ಕೇಂದ್ರಗಳಿಗೆ ರೆಫರಲ್ ಘಟಕವಾಗಿ ಕೆಲಸವನ್ನು ಮಾಡುವುದರ ಜೊತೆಗೆ ಸಮುದಾಯ ಆರೋಗ್ಯ ಕೇಂದ್ರಕ್ಕೆ ಮತ್ತು ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗಳಿಗೆ ರೋಗಿಗಳನ್ನು ಕಳುಹಿಸುವ ಘಟಕವಾಗಿ ಕೆಲಸ ಮಾಡುತ್ತದೆ. ಈ ಪ್ರಾಥಾಮಿಕ ಆರೋಗ್ಯ ಕೇಂದ್ರಗಳು ಆರೋಗ್ಯದ ಸೂಚಿಯಾಗಿ ಬಳಸಲಾಗುತ್ತದೆ. ಹಾಗಾಗಿ ಸಮೀಕ್ಷೆ ಒಳಪಡಿಸಿರುವ ಕುಟುಂಬಗಳಿಗೆ ಆಸ್ಪತ್ರೆಗೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೊಳ್ಳುವುದರ ಮೂಲಕ ಗ್ರಾಮೀಣ ಭಾಗದಲ್ಲಿ ಆಸ್ಪತ್ರೆ–ಜನರ ನಡುವೆ ಇರುವ ಅಂತರವನ್ನು ತಿಳಿದುಕೊಳ್ಳುವ ಅವಶ್ಯಕತೆ ಇದೆ. ಆಸ್ಪತ್ರೆಗೆ ಸಂಬಂಧಿಸಿದಂತೆ ಗಣಿ ವಲಯ ತಾಲ್ಲೂಕಗಳ ಗ್ರಾಮೀಣ ಪ್ರದೇಶದಲ್ಲಿ ಆಸ್ಪತ್ರೆ ಇದೆಯೊ/ಇಲ್ಲ? ಎಂಬ ಪ್ರಶ್ನೆ ಕೇಳಿದಾಗ ಕುಟುಂಬಗಳು ನೀಡಿರುವ ಮಾಹಿತಿಯನ್ನು ಕೋಷ್ಟಕ ೩.೨೫ರಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೨೫ ಗಣಿ ವಲಯದಲ್ಲಿ ಆಸ್ಪತ್ರೆ ದೊರೆಯುವಿಕೆಯ ವಿವರ**

| ಕ್ರಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ನಿಮ್ಮ ಊರಲ್ಲಿ ಆಸ್ಪತ್ರೆ ಇದೆಯಾ? | | | | | | |
| | ಹೌದು | – | – | – | – | – | – |
| | ಇಲ್ಲ | ೯೦ | ೧೦೦ | ೯೦ | ೧೦೦ | ೯೦ | ೧೦೦ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಇಲ್ಲವಾದರೆ ಇರುವ ದೂರವೆಷ್ಟು | | | | | | |
| | ೧ರಿಂದ ೫ ಕಿ.ಮೀ. | ೩೦ | ೩೩.೩೩ | ೩೦ | ೩೩.೩೩ | – | – |
| | ೫ರಿಂದ ೧೦ಕಿ.ಮೀ. | ೬೦ | ೬೬.೬೭ | ೩೦ | ೩೩.೩೩ | ೩೦ | ೩೩.೩೩ |
| | ೧೦ರಿಂದ ೧೫ ಕಿ.ಮೀ. | – | – | ೩೦ | ೩೩.೩೪ | ೩೦ | ೩೩.೩೩ |
| | ೧೫ಕ್ಕಿಂತ ಹೆಚ್ಚು ಕಿ.ಮೀ. | – | – | – | – | ೩೦ | ೩೩.೩೪ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಸಮೀಕ್ಷೆಗೆ ಒಳಪಡಿಸಿರುವ ಕುಟುಂಬಗಳ ಗ್ರಾಮದಲ್ಲಿ ಆಸ್ಪತ್ರೆ ಇದೆಯಾ/ಇಲ್ಲ, ಇಲ್ಲವಾದರೇ ಆಸ್ಪತ್ರೆಗೆ ಇರುವ ದೂರವನ್ನು ತಿಳಿಸಲಾಗಿದೆ. ಗಣಿ ವಲಯ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಆಸ್ಪತ್ರೆ ಇಲ್ಲದಿರುವುದು ಕಂಡು ಬರುತ್ತದೆ. ಈ ಮೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಗ್ರಾಮದಿಂದ ಆಸ್ಪತ್ರೆಗೆ ಇರುವ ದೂರವನ್ನು ತಾಲ್ಲೂಕುವಾರು ದಾಖಲಿಸಲಾಗಿದೆ. ಗ್ರಾಮಗಳಲ್ಲಿ ಆಸ್ಪತ್ರೆಯು ಗಣಿ ವಲಯ ಗ್ರಾಮೀಣ ಪ್ರದೇಶಗಳಲ್ಲಿ ಶೇ.೧೦೦ರಷ್ಟು ಆಸ್ಪತ್ರೆಯು ಇಲ್ಲದಿರುವುದು ಕಂಡು ಬಂದಿದೆ. ಆಸ್ಪತ್ರೆಗೆ ಮತ್ತು ಗ್ರಾಮೀಣ ಪ್ರದೇಶಗಳ ಅಂತರವನ್ನು ನೋಡುವುದಾದರೇ, ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಿಂದ ಅಥವಾ ಕುಟುಂಬಗಳಿಂದ ಆಸ್ಪತ್ರೆಗೆ ೧ರಿಂದ೫ ಕೀ.ಮಿ. ದೂರದ ವ್ಯಾಪ್ತಿಗೆ ಶೇ.೩೩.೩೩ರಷ್ಟು ಕುಟುಂಬಗಳಿದ್ದು, ೫ರಿಂದ೧೦ ಕಿ. ಮೀ ವ್ಯಾಪ್ತಿಗೆ ಶೇ.೬೬.೬೭ರಷ್ಟು ಕುಟುಂಬಗಳು ಆಸ್ಪತ್ರೆಯಿಂದ ದೂರವಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಿಂದ ಆಸ್ಪತ್ರೆಗೆ ಇರುವ ದೂರ, ೧ರಿಂದ೫. ಕಿ.ಮೀ ವ್ಯಾಪ್ತಿಗೆ ಶೇ ೩೩.೩೩ ರಷ್ಟು, ೫ರಿಂದ೧೦ ಕಿ.ಮೀ ವ್ಯಾಪ್ತಿಗೆ ಶೇ ೩೩.೩೩ರಷ್ಟು, ೧೦ರಿಂದ೧೫ ಕಿ.ಮೀ ವ್ಯಾಪ್ತಿಗೆ ಶೇ ೩೩.೩೪ರಷ್ಟಿದೆ. ಹಾಗೂ ಬಳ್ಳಾರಿ ತಾಲ್ಲೂಕಿನಲ್ಲಿಯೂ ೧ ರಿಂದ ೫ ಕಿ.ಮೀ. ಶೇ.೩೩.೩೩ರಷ್ಟು, ೫ರಿಂದ ೧೦ ಶೇ.೩೩.೩೪ ಕಿ.ಮೀ. ಶೇ ೩೩.೩೩ರಷ್ಟು ೧೦ ರಿಂದ ೧೫ ಕಿ.ಮೀ ಶೇ ೩೩.೩೪ರಷ್ಟು, ಕುಟುಂಬಗಳಿಂದ ಆಸ್ಪತ್ರೆಗೆ ದೂರವಿದೆ. ಈ ರೀತಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಲ್ಲಳ್ಳಿ, ಪಾಪಿನಾಯಕನ ಹಳ್ಳಿ, ರಾಜಾಪುರ, ಸಂಡೂರು ತಾಲ್ಲೂಕಿನ ಸುಶೀಲ ನಗರ, ತುಮಟಿ, ಜೈಸಿಂಗ್‌ಪುರ, ಹಾಗೂ ಬಳ್ಳಾರಿ ತಾಲ್ಲೂಕಿನ ಬೆಳಗಲ್, ಜಾನೆಕುಂಟೆ, ಹನ್ನೊಳ್ಳಿ,

ಗ್ರಾಮಗಳಿಂದ ಆಸ್ಪತ್ರೆಯು ಇಲ್ಲದಿರುವುದು ಕಂಡು ಬಂದಿದ್ದು, ಆಸ್ಪತ್ರೆಗೆ ಗ್ರಾಮೀಣ ಪ್ರದೇಶಗಳಲ್ಲಿ ಇರುವ ಅಂತರವನ್ನು ಅಂಕಿ-ಅಂಶಗಳ ಮೂಲಕ ವಿಶ್ಲೇಷಿಸಲಾಗಿದೆ.

**೩.೬.೪ ತಾಯಿ ಮತ್ತು ಮಕ್ಕಳ ಆರೋಗ್ಯ**

ಆರೋಗ್ಯದ ಗುಣಮಟ್ಟವನ್ನು ತಿಳಿಯುವಲ್ಲಿ ಗರ್ಭಿಣಿ ಮಹಿಳೆಯರು ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆ. ಕುಟುಂಬಗಳಲ್ಲಿ ಇರುವ ಗರ್ಭಿಣಿ ಮಹಿಳೆಯರ ಪ್ರಮಾಣ, ಸಾಂಸ್ಥಿಕ ಹೆರಿಗೆ, ಪೂರ್ಣ ಪ್ರಮಾಣದ ಪ್ರಸ್ತವ, ಪೂರ್ವ ಆರೈಕೆ ಪಡೆಯುತ್ತಿರುವ ಗರ್ಭಿಣಿಯರ ಕುಟುಂಬಗಳ ಪ್ರಮಾಣ ಹಾಗೂ ತಾಯಂದಿರ ಮರಣ ಪ್ರಮಾಣವನ್ನು ಈ ಕೆಳಗಿನಂತೆ ವಿವರಿಸಲಾಗಿದೆ. ಗಣಿ ಗ್ರಾಮೀಣ ಪ್ರದೇಶದಲ್ಲಿ ಗರ್ಭಿಣಿ ಮಹಿಳೆಯರಿಗೆ ಸಂಬಂಧಿಸಿದಂತೆ ನಿಮ್ಮ ಕುಟುಂಬದಲ್ಲಿ ಗರ್ಭಿಣಿ ಮಹಿಳೆಯರಿದ್ದಾರಾ? ಎಂಬ ಪ್ರಶ್ನೆಗೆ ನೀಡಿರುವ ಫಲಿತಾಂಶವನ್ನು ಈ ಕೆಳಗಿನಂತೆ ಕೋಷ್ಟದಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೩.೨೬ ಕುಟುಂಬಗಳಲ್ಲಿರುವ ಗರ್ಭಿಣಿ ಮಹಿಳೆಯರ ಪ್ರಮಾಣ.**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲೂಕು | | ಸಂಡೂರು ತಾಲೂಕು | | ಬಳ್ಳಾರಿ ತಾಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ನಿಮ್ಮ ಕುಟುಂಬದಲ್ಲಿ ಗರ್ಭಿಣಿ ಹೆಂಗಸಿದ್ದಾರಾ | | | | | | |
| | ಹೌದು | ೪೪ | ೪೮.೮೮ | ೩೭ | ೪೧.೧೨ | ೪೦ | ೪೪.೪೪ |
| | ಇಲ್ಲ | ೪೬ | ೫೧.೧೨ | ೫೩ | ೫೮.೮೮ | ೫೦ | ೫೫.೫೬ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಹೆರಿಗೆಯನ್ನು ಎಲ್ಲಿ ಮಾಡಿಸಿದ್ದಿರಾ | | | | | | |
| | ಆಸ್ಪತ್ರೆ | ೩೨ | ೭೨.೭೨ | ೩೦ | ೮೧.೦೮ | ೩೨ | ೮೦ |
| | ಮನೆ | ೧೨ | ೨೭.೨೮ | ೦೭ | ೧೮.೯೨ | ೦೮ | ೨೦ |
| | ಒಟ್ಟು | ೪೪ | ೧೦೦ | ೩೭ | ೧೦೦ | ೪೦ | ೧೦೦ |
| ೦೩ | ಆಸ್ಪತ್ರೆಯಾದರೆ ಯಾವ ಅಸ್ಪತ್ರೆ | | | | | | |
| | ಖಾಸಗಿ | ೦೮ | ೨೫ | ೦೯ | ೩೦ | ೦೯ | ೨೮.೧೩ |
| | ಸರ್ಕಾರಿ | ೨೪ | ೭೫ | ೨೧ | ೭೦ | ೨೩ | ೭೧.೮೭ |
| | ಒಟ್ಟು | ೩೨ | ೧೦೦ | ೩೦ | ೧೦೦ | ೩೨ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯ ಹೊಸಪೇಟೆ, ಸಂಡೂರು ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಗರ್ಭಿಣಿಯರ ಪ್ರಮಾಣ, ಸಾಂಸ್ಥಿಕ ಹೆರಿಗೆಯ ಕುರಿತು ವಿವರಿಣೆ ನೀಡಲಾಗಿದೆ. ಹೊಸಪೇಟೆ ತಾಲ್ಲೂಕಿನ ಸಮೀಕ್ಷೆ ಒಳಪಡಿಸಲಾದ ೯೦ ಕುಟುಂಬಗಳಲ್ಲಿ ೪೪ ಕುಟುಂಬಗಳು ಶೇ ೪೮.೮೮ರಷ್ಟು ಗರ್ಭಿಣಿ ಮಹಿಳೆಯರಿದ್ದಾರೆ. ಇನ್ನುಳಿದ ೪೬ ಕುಟುಂಬಗಳು ಶೇ.೫೧.೧೨ರಷ್ಟು ಗರ್ಭಿಣಿ ಮಹಿಳೆಯರು ಇಲ್ಲದಿರುವುದು ಕಂಡು ಬಂದಿದೆ. ಗರ್ಭಿಣಿ ಮಹಿಳೆಯರು ಇರುವ ಕುಟುಂಬಗಳಲ್ಲಿ ೩೨ ಕುಟುಂಬಗಳು ಶೇ.೭೨.೭೨ರಷ್ಟು ಆಸ್ಪತ್ರೆಯಲ್ಲಿ ಹೆರಿಗೆಯನ್ನು ಮಾಡಿಸಿದ್ದು, ೧೨ ಕುಟುಂಬಗಳು ಶೇ.೨೭.೨೮ರಷ್ಟು ಗರ್ಭಿಣಿ ಮಹಿಳೆಯರು ಮನೆಯಲ್ಲಿಯೇ ಹೆರಿಗೆಯಾಗಿರುತ್ತದೆ. ಆಸ್ಪತ್ರೆಯಲ್ಲಿ ಅಂದರೆ ೩೨ ಕುಟುಂಬಗಳ ಗರ್ಭಿಣಿ ಮಹಿಳೆಯರು ಹೆರಿಗೆಯನ್ನು ಮಾಡಿಸಿದ್ದು, ಅದರಲ್ಲಿ ಸರ್ಕಾರಿ ಆಸ್ಪತ್ರೆಯಲ್ಲಿ ೨೪ ಕುಟುಂಬಗಳ ಗರ್ಭಿಣಿ ಮಹಿಳೆಯರು ಶೇ.೭೫ರಷ್ಟು ಹೇರಿಗೆ ಆಗಿವೆ. ಇನ್ನು ೧೨ ಕುಟುಂಬದ ಗರ್ಭಿಣಿ ಮಹಿಳೆಯರು ಖಾಸಗಿ ಆಸ್ಪತ್ರೆಯಲ್ಲಿ ಶೇ೨೫ರಷ್ಟು ಹೆರಿಗೆಗಳಾಗಿವೆ.

ಈ ತಾಲ್ಲೂಕಿನಲ್ಲಿ ಗರ್ಭಿಣಿ ಮಹಿಳೆಯರು ಸರ್ಕಾರಿ ಆಸ್ಪತ್ರೆಯಲ್ಲೇ ಹೆರಿಗೆಯನ್ನು ಮಾಡಿಸಿರುವ ಪ್ರಮಾಣ (ಶೇ.೭೫) ಹೆಚ್ಚಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ೩೭ ಕುಟುಂಬಗಳ ಗರ್ಭಿಣಿ ಮಹಿಳೆಯರು ಶೇ.೪೧.೧೨ರಷ್ಟಿದ್ದರೆ, ಈ ಕುಟುಂಬದ ಗರ್ಭಿಣಿ ಮಹಿಳೆಯರು ಹೆರಿಗೆಯನ್ನು ಶೇ.೮೧.೦೯ರಷ್ಟು ಆಸ್ಪತ್ರೆಯಲ್ಲಾದರೆ, ಶೇ.೧೮.೯೨ರಷ್ಟು ಗರ್ಭಿಣಿಯರ ಹೆರಿಗೆ ಮನೆಯಲ್ಲಿ ಆಗಿವೆ. ಆಸ್ಪತ್ರೆಯಲ್ಲಿ ಒಟ್ಟು ೩೦ ಕುಟುಂಬದ ಗರ್ಭಿಣಿ ಮಹಿಳೆಯರ ಹೆರಿಗೆ ಆಗಿದ್ದು, ಸರ್ಕಾರಿ ಆಸ್ಪತ್ರೆಯಲ್ಲಿ ಶೇ.೭೦ರಷ್ಟು, ಖಾಸಾಗಿ ಆಸ್ಪತ್ರೆಯಲ್ಲಿ ಶೇ.೩೦ರಷ್ಟು ಹೆರಿಗೆಯಾಗಿರುವುದು ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬಂದಿದೆ. ಹಾಗಯೇ ಬಳ್ಳಾರಿ ತಾಲ್ಲೂಕಿನಲ್ಲಿ ಗ್ರಾಮೀಣ ಪ್ರದೇಶಗಳ ೪೦ ಕುಟುಂಬದ ಗರ್ಭಿಣಿ ಮಹಿಳೆಯರಿದ್ದು, ಶೇ.೪೪.೪೪ರಷ್ಟಿದ್ದಾರೆ. ಈ ೪೦ ಕುಟುಂಬಗಳಲ್ಲಿ ಹೆರಿಗೆಯನ್ನು ೩೨ ಕುಟುಂಬಗಳ ಗರ್ಭಿಣಿ ಹೆಂಗಸರು ಶೇ.೮೦ರಷ್ಟು ಆಸ್ಪತ್ರೆಯಲ್ಲಿ ಹೆರಿಗೆಯಾದರೆ, ಶೇ.೨೦ರಷ್ಟು ಗರ್ಭಿಣಿ ಮಹಿಳೆಯರು ಮನೆಯಲ್ಲಿ ಹೆರಿಗೆಗಳಾಗಿವೆ. ಆಸ್ಪತ್ರೆಯಲ್ಲಾದರೆ ಹೆರಿಗೆಯು, ಸರ್ಕಾರಿ ಆಸ್ಪತ್ರೆಯಲ್ಲಿ ಶೇ೭೧.೮೭ರಷ್ಟು ಹಾಗೂ ಖಾಸಗಿ ಆಸ್ಪತ್ರೆಯಲ್ಲಿ ಶೇ.೨೮.೧೩ರಷ್ಟು ಗರ್ಭಿಣಿ ಮಹಿಳೆಯರ ಹೆರಿಗೆಗಳಾಗಿವೆ. ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಗರ್ಭಿಣಿ ಮಹಿಳೆಯರ ಪ್ರಮಾಣವು ಹೊಸಪೇಟೆ ತಾಲ್ಲೂಕಿನಲ್ಲಿ ಹೆಚ್ಚಾಗಿರುವುದು ಕಂಡುಬಂದಿದೆ.

**ಪೂರ್ಣ ಪ್ರಸವ ಆರೈಕೆ**

ಗರ್ಭಿಣಿ ಮಹಿಳೆಯರು ಪಡೆಯುವ ಪೂರ್ಣ ಪ್ರಸವ ಆರೈಕೆಯು ಒಂದು ಆರೋಗ್ಯ ಸೂಚಿಯಾಗಿದೆ. ಇದು ತಾಯಿ ಮತ್ತು ಮಗುವಿನ ಆರೋಗ್ಯ ಸ್ಥಿತಿಯನ್ನು ಅಳೆಯಲು ಸಹಾಯವಾಗುತ್ತದೆ. ಪೂರ್ಣ ಪ್ರಸ್ತವ ಆರೈಕೆಗೆ ಸಂಬಂಧಿಸಿದಂತೆ ಗಣಿ ವಲಯ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಹೆರಿಗೆಯಾದ ನಂತರ ಗರ್ಭಿಣಿ ಮಹಿಳೆಯರು ಪಡೆಯುವ ಆರೈಕೆ ಕುರಿತು ಪ್ರಶ್ನೆಗಳನ್ನು ಕೇಳಿದಾಗ ಕುಟುಂಬಗಳ ಮಾಹಿತಿದಾರರು ನೀಡಿರುವ ಫಲಿತಾಂಶಗಳನ್ನು ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೨೭ ಕುಟುಂಬಗಳ ಪೂರ್ಣ ಪ್ರಮಾಣದ ಪ್ರಸ್ತವ ಪೂರ್ವ ಆರೈಕೆ ಪಡೆಯುತ್ತಿರುವ ಗರ್ಭಿಣಿಯರ ಶೇಕಾಡವಾರು**

| ಕ್ರ.ಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಗರ್ಭಿಣಿಯರು ಹೆರಿಗೆಯಾದ ನಂತರ ಅರೈಕೆ ಪಡೆಯುತ್ತಿದಿರಾ | | | | | | |
| | ಹೌದು | ೮೦ | ೮೮.೮೮ | ೬೯ | ೭೬.೬೬ | ೩೮ | ೪೨.೨೨ |
| | ಇಲ್ಲ | ೧೦ | ೧೧.೧೨ | ೨೧ | ೨೩.೩೪ | ೫೨ | ೫೭.೭೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಕುಟುಂಬಗಳಲ್ಲಿರುವ ಗರ್ಭಿಣಿಯರು ಹೇರಿಗೆಯ ನಂತರದಲ್ಲಿ ಪಡೆದಿರುವ ಆರೈಕೆಯ ತಾಲ್ಲೂಕುವಾರು ಶೇಕಾಡವಾರುಗಳನ್ನು ತಿಳಿಸಲಾಗಿದೆ. ಗಣಿ ವಲಯ ಗ್ರಾಮೀಣ ಪ್ರದೇಶದ ಹೊಸಪೇಟೆ ತಾಲ್ಲೂಕಿನ ಶೇ.೮೮.೮೮ರಷ್ಟು ಕುಟುಂಬಗಳ ಗರ್ಭಿಣಿಯರು ಪೂರ್ಣ ಪ್ರಮಾಣದ ಪ್ರಸವ ಪೂರ್ವ ಆರೈಕೆ ಪಡೆದಿದ್ದಾರೆ. ಸಂಡೂರು ತಾಲ್ಲೂಕಿನ ಶೇ.೭೬.೬೬ರಷ್ಟು ಗರ್ಭಿಣಿ ಮಹಿಳೆಯರು

ಪೂರ್ಣ ಪ್ರಮಾಣ ಪ್ರಸವ ಪೂರ್ವ ಆರೈಕೆ ಪಡೆದಿರುತ್ತಾರೆ. ಬಳ್ಳಾರಿ ತಾಲ್ಲೂಕಿನ ಶೇ.೪೨.೨೨ರಷ್ಟು ಗರ್ಭಿಣಿ ಮಹಿಳೆಯರು ಪೂರ್ಣ ಪ್ರಮಾಣ ಪ್ರಸ್ತವ ಪೂರ್ವ ಆರೈಕೆ ಪಡೆದಿರುತ್ತಾರೆ.

ಒಟ್ಟಾರೆಯಾಗಿ ಗಣಿ ವಲಯವಾದ ಈ ಮೂರು ತಾಲ್ಲೂಕುಗಳಲ್ಲಿ ಹೊಸಪೇಟೆ ತಾಲ್ಲೂಕಿನ ಕುಟುಂಬಗಳ ಗರ್ಭಿಣಿ ಮಹಿಳೆಯರು ಹೆಚ್ಚಾಗಿ ಪ್ರಸ್ತವ ಆರೈಕೆಯು (ಶೇ.೮೮.೮೮) ಪಡೆದಿದ್ದು, ಬಳ್ಳಾರಿ ತಾಲ್ಲೂಕಿನ ಕಡಿಮೆ ಪ್ರಮಾಣದಲ್ಲಿ ಗರ್ಭಿಣಿಯರು ಪ್ರಸ್ತವ ಆರೈಕೆಯನ್ನು (ಶೇ೪೨.೨೨) ಪಡೆಯುತ್ತಿದ್ದಾರೆ. ಈ ಗಣಿ ವಲಯಗಳಲ್ಲಿ ಪ್ರಸ್ತವ ಪಡೆಯುವಲ್ಲಿ ಗಣಿಯಿಂದ ತೊಂದರೆಗಳಾಗಿವೆಯಾ? ಎನ್ನುವ ಪ್ರಶ್ನೆಗೆ ೨೭೦ ಕುಟುಂಬಗಳಿಗೆ ಪ್ರಶ್ನೆಯನ್ನು ಕೇಳಿದಾಗ ಅವರು ನೀಡಿರುವ ಉತ್ತರ ೧೫೪ ಕುಟುಂಬದ ಗರ್ಭಿಣಿ ಮಹಿಳೆಯರಿಗೆ ಶೇ.೫೫.೯೨ರಷ್ಟು ತೊಂದರೆಗಳಾಗಿದೆ. ಇನ್ನುಳಿದ ೧೧೬ ಕುಟುಂಬಗಳಿಗೆ ಶೇ.೪೪.೦೮ರಷ್ಟು ತೊಂದರೆಗಳೇನು ಆಗಿಲ್ಲ. ತೊಂದರೆಯಾಗಿರುವ ಕುಟುಂಬಗಳಿಗೆ ಗಣಿಯಿಂದ ಹೇಗೆ ತೊಂದರೆಯಾಗಿದೆ ಎಂದು ಕೇಳಿದಾಗ ೧೫೪ ಕುಟುಂಬಗಳಲ್ಲಿ ಗರ್ಭಿಣಿ ಮಹಿಳೆಯರಿಗೆ ಆರೈಕೆ ಪಡೆಯುವ ಸಂದರ್ಭದಲ್ಲಿ ಗಣಿ ಧೂಳು, ಗಣಿ ಸ್ಫೋಟ, ಗಣಿ ಶಬ್ದಗಳಿಂದ ತೊಂದರೆಗಳಾಗಿವೆ. ಈ ತೊಂದರೆಗಳು ಎಷ್ಟು ಪ್ರಮಾಣದಲ್ಲಿ ಅಗಿವೆ ಎಂಬುದನ್ನು ಕುಟುಂಬದ ಮಾಹಿತಿದಾರರು ನೀಡಿರುವ ಹೇಳಿಕೆ ಪ್ರಕಾರ, ಗಣಿ ಧೂಳು ಶೇ.೧೮.೮೩ರಷ್ಟು, ಗಣಿ ಸ್ಫೋಟ ಶೇ ೩೭.೦೨ರಷ್ಟು, ಗಣಿ ಶಬ್ದ ಶೇ.೪೪.೧೫ರಷ್ಟು ಗರ್ಭಿಣಿ ಮಹಿಳೆಯರ ಆರೈಕೆಯ ಮೇಲೆ ಪರಿಣಾಮಗಳು ಬೀರಿದೆ ಎಂಬ ಮಾಹಿತಿಯನ್ನು ಕ್ಷೇತ್ರಕಾರ್ಯದ ಮಾಹಿತಿಯಿಂದ ಗ್ರಹಿಸಬಹುದಾಗಿದೆ.

**೩.೬.೫ ತಾಯಂದಿರ ಮರಣ ಪ್ರಮಾಣ ಮತ್ತು ಶಿಶುಮರಣ ದರ**

ಆರೋಗ್ಯದ ಸ್ಥಿತಿಯನ್ನು ಅಳೆಯಲು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಜನನ ಕಾಲದಲ್ಲಿನ ಆಯುಷ್ಯವನ್ನು ಮಾನದಂಡವಾಗಿ ಬಳಸಲಾಗುತ್ತದೆ. ಆದರೆ ತಳಮಟ್ಟದಲ್ಲಿ ಅದನ್ನು ಅಂದಾಜಿಸುವುದು ಸುಲಭವಲ್ಲ. ಆದ್ದರಿಂದ ವಿವಿಧ ಮರಣ ಪ್ರಮಾಣಗಳನ್ನು ಬಳಸುವುದರ ಮೂಲಕ ಆರೋಗ್ಯ ಸ್ಥಿತಿಯನ್ನು ಅಳೆಯಬಹುದು. ಶಿಶು ಮರಣ ದರ ಎಂದರೆ, ಪ್ರತಿ ಸಾವಿರ ಜನನಗಳಿಗೆ ಜನಿಸಿದ ಒಂದು ವರ್ಷದ ಅವಧಿಯಲ್ಲಿ ಮರಣ ಹೊಂದುವ ಮಕ್ಕಳ ಸಂಖ್ಯೆಯಾಗಿದೆ. ಹಾಗೂ ತಾಯಂದಿರ ಮರಣ ಪ್ರಮಾಣ ಎಂದರೆ ಪ್ರತಿ ೧ ಲಕ್ಷ ಸಜೀವ ಜನನಗಳಿಗೆ ಮರಣ ಹೊಂದಿದ ತಾಯಂದಿರ ಸಂಖ್ಯೆಯಾಗಿದೆ. ೨೦೧೪ ಬಳ್ಳಾರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆಯು ಒಟ್ಟಾರೆ ಶಿಶು ಮರಣ ಪ್ರಮಾಣ ಹೆಚ್ಚಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ೦-೧ ವರ್ಷದ ಅವಧಿಯಲ್ಲಿ ಮರಣ ಹೊಂದಿದ ಮಕ್ಕಳ ಸಂಖ್ಯೆ ೧,೦೦೦ ಜನನಗಳಿಗೆ ೫೫ ಎಂದು ದಾಖಲಿಸಲಾಗಿದೆ. ಗಣಿ ವಲಯಗಳಾಗಿರುವ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕುಗಳಲ್ಲಿ ಶಿಶು ಮರಣದರವನ್ನು ನೋಡುವುದಾದರೆ, ಬಳ್ಳಾರಿ ತಾಲ್ಲೂಕು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಶಿಶು ಮರಣ (ಶೇ.೪೦) ಪ್ರಮಾಣವನ್ನು ಹೊಂದಿದೆ. ಹೊಸಪೇಟೆ ತಾಲ್ಲೂಕು ೬೨ರಷ್ಟು ಮತ್ತು ಸಂಡೂರು ತಾಲ್ಲೂಕಿನಲ್ಲಿ ೫೪ರಷ್ಟು ಶಿಶು ಮರಣ ಹೊಂದಿದ ತಾಲ್ಲೂಕುಗಳಾಗಿವೆ. ಈ ಗಣಿ ವಲಯಗಳ ಮೂರು ತಾಲ್ಲೂಕಿನಲ್ಲಿ ಬಳ್ಳಾರಿ ತಾಲ್ಲೂಕು ಅತಿ ಕಡಿಮೆ ಶಿಶು ಮರಣ ಹೊಂದಿದ (ಶೇ.೪೦) ತಾಲ್ಲೂಕಾಗಿದೆ. ತಾಯಂದಿರ ಮರಣ ಜಿಲ್ಲೆಯಲ್ಲಿ ಪ್ರತಿ ಒಂದು ಲಕ್ಷ ಜನನಗಳಿಗೆ ೨೨೬ ತಾಯಂದಿರು ಮರಣ ಹೊಂದುತ್ತಿದ್ದು, ಗರಿಷ್ಟ ಮಟ್ಟದಾಗಿದೆ. ಗಣಿ ವಲಯಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು, ತಾಲ್ಲೂಕಿನಲ್ಲಿ ತಾಯಂದಿರ ಮರಣ ಪ್ರಮಾಣವು ಅನುಕ್ರವಾಗಿ ೩೯೪, ೧೫೦, ೪೨೫ರಷ್ಟಿದೆ. ಈ ಗಣಿ ವಲಯ ಸಂಡೂರು ತಾಲ್ಲೂಕಿನಲ್ಲಿ ತಾಯಂದಿರ ಮರಣ ಪ್ರಮಾಣ (೪೨೫) ಅಧಿಕವಾಗಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ತಾಯಂದಿರ ಮರಣ ಪ್ರಮಾಣ (೧೫೦) ಕಡಿಮೆ ಮಟ್ಟದಲ್ಲಿದೆ. ತಾಯಂದಿರ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಗಣಿ ವಲಯಗಳಾದ ತಾಲ್ಲೂಕುಗಳಲ್ಲಿ ಗ್ರಾಮೀಣ ಭಾಗದ ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಗರ್ಭಿಣಿ ಮಹಿಳೆಯರನ್ನು ಹೊಂದಿರುವ ಕುಟುಂಬಗಳ

ಪ್ರಮಾಣ ಮತ್ತು ಗರ್ಭಿಣಿ ಮಹಿಳೆಯರ ಮರಣ ಪ್ರಮಾಣವನ್ನು ಕುಟುಂಬಗಳ ಮಾಹಿತಿ ಆಧಾರದ ಮೂಲಕ ಸಂಗ್ರಹಿಸಿದ ಅಂಕಿ-ಅಂಶಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೨೮ ಕುಟುಂಬಗಳಲ್ಲಿರುವ ಗರ್ಭಿಣಿ ಮಹಿಳೆಯರ ಮರಣದ ಪ್ರಮಾಣ**

| ಕ್ರ.ಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ನಿಮ್ಮ ಕುಟುಂಬದಲ್ಲಿ ಗರ್ಭಿಣಿ ಮಹಿಳೆಯರು ಮರಣಿಸಿದ್ದಾರಾ | | | | | | |
| | ಹೌದು | ೨೦ | ೨೨.೨೨ | ೧೧ | ೧೨.೧೨ | ೧೪ | ೧೫.೫೬ |
| | ಇಲ್ಲ | ೭೦ | ೭೭.೭೮ | ೭೯ | ೮೭.೭೮ | ೬೬ | ೮೪.೪೪ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಮರಣಿಸಲು ಕಾರಣಗಳು | | | | | | |
| | ಗಣಿಗಾರಿಕೆ | ೦೫ | ೨೫ | ೦೨ | ೧೮.೧೮ | ೦೩ | ೨೧.೪೩ |
| | ಅಪೌಷ್ಟಿಕತೆ | ೦೬ | ೩೦ | ೦೨ | ೧೮.೧೮ | ೦೭ | ೫೦.೦೦ |
| | ರಕ್ತಹೀನತೆ | ೦೯ | ೪೫ | ೦೭ | ೬೩.೬೪ | ೦೪ | ೨೮.೫೭ |
| | ಒಟ್ಟು | ೨೦ | ೧೦೦ | ೧೧ | ೧೦೦ | ೧೪ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕದಲ್ಲಿ ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬಗಳ ಗರ್ಭಿಣಿ ಮಹಿಳೆಯರು ಮರಣಿಸಿರುವ ಪ್ರಮಾಣ ಮತ್ತು ಮರಣಸಲು ಕಾರಣಗಳ ಪ್ರಮಾಣವನ್ನು ವಿವರಿಸಲಾಗಿದೆ. ಕುಟುಂಬಗಳ ಗರ್ಭಿಣಿ ಮಹಿಳೆಯರು ಮರಣ ಹೊಂದಿರುವ ಪ್ರಮಾಣಕ್ಕೆ ಸಂಬಂಧಿಸಿದಂತೆ ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೨೦ ಕುಟುಂಬಗಳ ಗರ್ಭಿಣಿ ಮಹಿಳೆಯರು ಶೇ.೨೨.೨೨ರಷ್ಟು ಮರಣ ಹೊಂದಿದ್ದು, ಈ ೨೦ ಕುಟುಂಬಗಳ ಗರ್ಭಿಣಿಯರು ಮರಣಿಸಲು ಶೇ.೨೫ರಷ್ಟು, ಗಣಿಗಾರಿಕೆ, ಶೇ.೩೦ರಷ್ಟು ಆಪೌಷ್ಟಿಕತೆ ಮತ್ತು ಶೇ.೪೫ರಷ್ಟು ರಕ್ತ ಹೀನತೆಯಿಂದ ಗರ್ಭಿಣಿ ಮಹಿಳೆಯರು ಮರಣ ಹೊಂದಿದ್ದಾರೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬಗಳ ಗರ್ಭಿಣಿ ಮಹಿಳೆಯರು ಶೇ.೨೧.೨೧ರಷ್ಟು ಮರಣ ಹೊಂದಿದ್ದು, ಇವರು ಮರಣ ಹೊಂದಲು ಗಣಿಗಾರಿಕೆಯು ಶೇ.೧೮.೧೮ರಷ್ಟು, ಆಪೌಷ್ಟಿಕತೆ ಶೇ.೧೮.೧೮ರಷ್ಟು ರಕ್ತ ಹೀನತೆಯು ಶೇ.೬೩.೬೩ರಷ್ಟು ಕಾರಣವಾಗಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೧೫.೫೬ರಷ್ಟು ಗರ್ಭಿಣಿ ಮಹಿಳೆಯರು ಮರಣವನ್ನು ಹೊಂದಿದ್ದು, ಗರ್ಭಿಣಿ ಮರಣಿಸಲು ಗಣಿಗಾರಿಕೆ ಶೇ.೨೧.೪೩ರಷ್ಟು, ಅಪೌಷ್ಟಿಕತೆ ಶೇ.೫೦ರಷ್ಟು, ರಕ್ತ ಹೀನತೆ ಶೇ.೨೫.೫೭ರಷ್ಟು ಕಾರಣವಾಗಿದೆಂದು ತಿಳಿದುಬರುತ್ತದೆ. ಗರ್ಭಿಣಿ ಮಹಿಳೆಯರ ಮರಣ ಪ್ರಮಾಣವು ಈ ಮೂರು ತಾಲ್ಲೂಕುಗಳಲ್ಲಿ ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೨೨.೨೨ರಷ್ಟು ಅಂದರೆ ಹೆಚ್ಚಾಗಿ ತಾಯಂದಿರ ಮರಣ ಪ್ರಮಾಣ ಇರುವುದು ಕಂಡುಬರುತ್ತದೆ. ಮುಖ್ಯವಾಗಿ ಈ ಗಣಿ ವಲಯಗಳಲ್ಲಿ ಕುಟುಂಬಗಳಲ್ಲಿ ಗರ್ಭಿಣಿ ಮಹಿಳೆಯರು ಮರಣಿಸಲು ಗಣಿಗಾರಿಕೆಯು ಕಾರಣವಾಗಿದೆ. ಹಾಗೆಯೇ ಹೆಚ್ಚಾಗಿ ಗರ್ಭಿಣಿ ಮಹಿಳೆಯರು ರಕ್ತ ಹೀನತೆಯಿಂದಾಗಿಯೇ ಮರಣ ಹೊಂದಲು ಪ್ರಮುಖವಾದ ಕಾರಣವಾಗಿ ಪರಿಣಮಿಸುತ್ತದೆ.

### ೩.೬.೬ ಸಾಂಕ್ರಾಮಿಕ ರೋಗಗಳು

ಸಾಮಾನ್ಯವಾಗಿ ಸಾಂಕ್ರಾಮಿಕ ರೋಗಗಳು ಗ್ರಾಮೀಣ ಪ್ರದೇಶದ ಸಮುದಾಯಗಳ ಮೇಲೆ ಹೆಚ್ಚಿನ ಹೊರೆಯನ್ನು ಹೇರುತ್ತದೆ. ಇಂತಹ ಸಾಂಕ್ರಾಮಿಕ ರೋಗಗಳಿಂದ ಜನರು ದೂರ ಇರಬೇಕೆಂದರೆ ಅವರಿಗೆ ಶುದ್ದವಾದ ನೀರನ್ನು ಹಾಗೂ ಉತ್ತಮವಾದ ನೈರ್ಮಲೀಕರಣದ ಸೌಲಭ್ಯಗಳನ್ನು ಒದಗಿಸುವುದು ಅವಶ್ಯಕವಾಗಿದೆ. ಹೀಗಾಗಿ ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಗಣಿಯಿಂದ ಸಂಕ್ರಾಮಿಕ ರೋಗರುಜ್ಜಿನೆಗಳು ಹರಿಡಿದೆಯಾ, ಈ ರೋಗಗಳು ಹರಡಲು ಕಾರಣ ಮತ್ತು ಈ ರೋಗಗಳಿಂದ ಕುಟುಂಬಗಳಲ್ಲಿ ಮರಣಿಸಿದ್ದಾರೆಯೇ ಎಂಬುವುದನ್ನು ಅರಿತುಕೊಳ್ಳುವುದು ಅವಶ್ಯಕವಾಗಿದೆ. ಸಮೀಕ್ಷೆಗೆ ಒಳಪಡಿಸಲಾದ ಗಣಿ ವಲಯ ತಾಲ್ಲೂಕುಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶಗಳಲ್ಲಿ ರೋಗಗಳು ಹರಡಿಕೊಂಡ ಕುಟುಂಬಗಳ ಪ್ರಮಾಣ, ಹರಡುವಿಕೆಗೆ ಕಾರಣ ಮತ್ತು ರೋಗದಿಂದಾಗಿ ಮರಣಿಸಿದ ಕುಟುಂಬಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೨೯ ಕುಟುಂಬಗಳಲ್ಲಿ ಬಳಲುತ್ತಿರುವ ರೋಗಿ ಮತ್ತು ರೋಗಗಳ ಪ್ರಮಾಣ**

| ಕ್ರ.ಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ನಿಮ್ಮ ಕುಟುಂಬದಲ್ಲಿ ಯಾರಿಗಾದರೂ ಖಾಯಿಲೆ ಹರಡಿದೆಯೆ? | | | | | | |
| | ಹೌದು | ೫೨ | ೫೭.೭೮ | ೪೮ | ೫೩.೩೪ | ೬೨ | ೮೮.೫೮ |
| | ಇಲ್ಲ | ೩೮ | ೪೨.೨೨ | ೪೨ | ೪೬.೬೬ | ೦೮ | ೧೧.೪೨ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಯಾವ ಖಾಯಿಲೆ ಹರಡಿದೆ | | | | | | |
| | ಅಸ್ತಮಾ | ೧೨ | ೦೭.೬೯ | ೧೦ | ೦೪.೧೬ | ೧೭ | ೨೭.೪೪ |
| | ಉಸಿರಾಟ ತೊಂದರೆ | ೧೩ | ೨೫.೦೦ | ೧೬ | ೨೫.೦೦ | ೧೩ | ೨೦.೯೬ |
| | ಶ್ವಾಸಕೋಶದತೊಂದರೆ | ೧೧ | ೨೧.೧೬ | ೧೬ | ೩೭.೫೦ | ೧೬ | ೨೫.೮೦ |
| | ಟಿ.ವಿ. | ೧೬ | ೩೦.೭೫ | ೦೬ | ೩೩.೩೪ | ೧೬ | ೨೫.೮೦ |
| | ಒಟ್ಟು | ೫೨ | ೧೦೦ | ೪೮ | ೧೦೦ | ೬೨ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿಯಿಂದಾಗಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಹರಡಿರುವ ರೋಗಗಳ ಪ್ರಮಾಣ, ಹಾಗೂ ಯಾವ ರೋಗಗಳಿಂದ ಕುಟುಂಬಗಳು ಬಳಲುತ್ತಿದ್ದಾರೆಂಬ ಅಂಕಿ–ಅಂಶವನ್ನು ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುವಾರು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕುಟುಂಬದಲ್ಲಿ ಹರಡಿರುವ ಖಾಯಿಲೆಗೆ ಸಂಬಂಧಿಸಿದಂತೆ ಹೊಸಪೇಟೆ ತಾಲ್ಲೂಕಿನ ಗಣಿ ಕೇಂದ್ರಿಕೃತ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೫೨ ಕುಟುಂಬಗಳು ಸಾಂಕ್ರಾಮಿಕ ರೋಗಗಳಿಂದ ಹಾನಿಗೊಳಗಾದವರು ಶೇ.೫೭.೭೮ರಷ್ಟು ಇದ್ದು, ಈ ಕುಟುಂಬಗಳಲ್ಲಿ ಅಸ್ತಮಾ ರೋಗಕ್ಕೆ ಶೇ೦೭.೬೯ರಷ್ಟು, ಉಸಿರಾಟ ತೊಂದರೆಗೆ ಶೇ.೨೫ರಷ್ಟು, ಶ್ವಾಸಕೋಶ ತೊಂದರೆಗೆ ಶೇ ೨೧ರಷ್ಟು, ಟಿ.ಬಿ ರೋಗಕ್ಕೆ ಶೇ.೩೦.೭೫ರಷ್ಟು ತುತ್ತಾಗಿದ್ದಾರೆ. ಈ ಸಂಕ್ರಾಮಿಕ ರೋಗಗಳಲ್ಲಿ ಶೇ.೩೦.೭೬ರಷ್ಟು ಅಂದರೆ ಟಿ.ಬಿ ರೋಗಕ್ಕೆ ಹಾನಿಗೊಳಗಾದ ಕುಟುಂಬದವರು ಈ ವಲಯದ ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಸಮೀಕ್ಷೆಗೆ ಒಳಪಡಿಸಲಾದ ೯೦ ಕುಟುಂಬಗಳಲ್ಲಿ ೪೮ ಕುಟುಂಬಗಳು ಶೇ.೫೩.೩೪ರಷ್ಟು ರೋಗಗಳ ಹಾನಿಗೆ ಒಳಾಗಾಗಿದೆ. ಈ

ಕುಟುಂಬಗಳಲ್ಲಿ ಹರಡಿರುವ ರೋಗಗಳು ಅಸ್ತಮಾ ಶೇ.೦೪.೧೬ರಷ್ಟು, ಉಸಿರಾಟದ ತೊಂದರೆ ಶೇ.೨೫ರಷ್ಟು, ಶ್ವಾಸಕೋಶದ ತೊಂದರೆ ಶೇ.೩೭.೫೦ ರಷ್ಟು, ಟಿ.ವಿ ರೋಗವು ಶೇ ೩೩.೩೪ರಷ್ಟು ಹರಡಿವೆ. ಶಾಸ್ವಕೋಶದ ತೊಂದರೆಗೆ ಬಳಲುತ್ತಿರುವ ಕುಟುಂಬಗಳು (ಶೇ.೩೭.೫೦) ಹೆಚ್ಚಾಗಿವೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ೯೦ ಕುಟುಂಬಗಳಲ್ಲಿ ೬೨ ಕುಟುಂಬಗಳು ಸಾಂಕ್ರಾಮಿಕ ರೋಗಗಳು ಹರಡಿಕೊಂಡಿದ್ದು, ಶೇ.೮೮.೫೭ರಷ್ಟು ಕಂಡುಬಂದಿದೆ. ಈ ಕುಟುಂಬಗಳಲ್ಲಿ ಪ್ರಮುಖವಾಗಿ ಆಸ್ತಮಾ ರೋಗವು ಶೇ.೨೭.೪೩ರಷ್ಟು, ಉಸಿರಾಟದ ತೊಂದರೆ ಶೇ.೨೦.೯೬ರಷ್ಟು, ಶ್ವಾಸಕೋಶದ ತೊಂದರೆ ಶೇ ೨೫.೮೦ರಷ್ಟು, ಟಿ.ವಿ ರೋಗವು ಶೇ.೨೫.೮೦ರಷ್ಟು ಸಂಕ್ರಾಮಿಕ ರೋಗಗಳಿಂದ ಹಾನಿಗೆ ಒಳಗಾದ ಕುಟುಂಬಗಳಾಗಿವೆ. ಗಣಿ ವಲಯ ಬಳ್ಳಾರಿ, ಹೊಸಪೇಟೆ, ಸಂಡೂರು ಗ್ರಾಮೀಣ ಕುಟುಂಬಗಳಲ್ಲಿ ಸಾಂಕ್ರಾಮಿಕ ರೋಗಗಳು (ಶೇ.೮೮.೫೭) ಬಳ್ಳಾರಿ ಗಣಿ ವಲಯದಲ್ಲಿ ಹೆಚ್ಚಾಗಿದೆ. ಟಿ.ವಿ ರೋಗಕ್ಕೆ ಹಾನಿಗೊಳಗಾದ ಕುಟುಂಬಗಳು (ಶೇ.೩೦.೭೬) ಹೊಸಪೇಟೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿರುವುದು ಕಂಡುಬಂದಿದೆ. ಸಂಡೂರು ಗಣಿ ವಲಯಗಳಲ್ಲಿ ಶ್ವಾಸಕೋಶದ ತೊಂದರೆಗೆ ಒಳಗಾದ ರೋಗಿಗಳು ಶೇ.೩೭.೫೦ರಷ್ಟು ಹೆಚ್ಚಾಗಿದೆ. ಹಾಗೆಯೆ ಬಳ್ಳಾರಿ ಗಣಿ ವಲಯದಲ್ಲಿ ಅಸ್ತಮಾ ರೋಗಕ್ಕೆ ತುತ್ತಾದವರು ಹೆಚ್ಚಿನ ಕುಟುಂಬಗಳು (ಶೇ.೨೭.೪೩) ಇರುವುದು ಕಾಣಸಿಗುತ್ತದೆ.

ಈ ಗಣಿ ವಲಯಗಳಲ್ಲಿ ಅಸ್ತಮಾ, ಶ್ವಾಸಕೋಶದ ತೊಂದರೆ, ಉಸಿರಾಟದ ತೊಂದರೆ, ಟಿ.ಬಿ ರೋಗಗಳಿಗೆ ತುತ್ತಾದವರು ಮರಣ ಹೊಂದಿದ್ದಾರೆಯೇ? ಮರಣ ಹೊಂದಿದ್ದರೆ ಯಾವ ಖಾಯಿಲೆಗೆ ತುತ್ತಾಗಿ ಮರಣವನ್ನು ಹೊಂದಿದ್ದಾರೆ ಹಾಗೂ ಮರಣ ಹೊಂದಲು ಕಾರಣಗಳೇನು? ಎಂಬ ಪ್ರಶ್ನೆಗೆ ಕುಟುಂಬಗಳು ನೀಡಿರುವ ಫಲಿತಾಂಶಗಳ ಅಂಕಿ-ಅಂಶಗಳನ್ನು ಈ ಕೆಳಗಿನಂತೆ ಕೋಷ್ಟಕದಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೦ ಖಾಯಿಲೆಯಿಂದ ಮರಣಿಸಿದ ಕುಟುಂಬಗಳ ಪ್ರಮಾಣ ಮತ್ತು ಕಾರಣಗಳು**

| ಕ್ರ.ಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಹರಡಿರುವ ಖಾಯಿಲೆಯಿಂದ ಯಾರಾದರು ನಿಮ್ಮ ಕುಟುಂಬದಲ್ಲಿ ಮರಣಿಸಿದ್ದಾರಾ? | | | | | | |
| | ಹೌದು | ೨೨ | ೨೪.೪೪ | ೨೫ | ೨೭.೨೭ | ೨೭ | ೩೦ |
| | ಇಲ್ಲ | ೬೮ | ೭೫.೫೬ | ೬೫ | ೭೨.೨೩ | ೬೩ | ೭೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಯಾವ ಕಾಯಿಲೆಯಿಂದ ಮರಣಿಸಿದ್ದಾರೆ? | | | | | | |
| | ಅಸ್ತಮಾ | ೦೪ | ೧೮.೧೮ | ೦೫ | ೨೦ | ೧೦ | ೩೭.೦೮ |
| | ಉಸಿರಾಟದ ತೊಂದರೆ | ೦೭ | ೩೧.೮೩ | ೦೭ | ೨೮ | ೦೨ | ೦೭.೪೨ |
| | ಶ್ವಾಸಕೋಶದ ತೊಂದರೆ | ೦೫ | ೨೨.೭೨ | ೦೮ | ೩೨ | ೦೮ | ೨೯.೬೬ |
| | ಟಿ.ಬಿ. | ೦೬ | ೨೭.೨೭ | ೦೫ | ೨೦ | ೦೭ | ೨೫.೯೪ |
| | ಒಟ್ಟು | ೨೨ | ೧೦೦ | ೨೫ | ೧೦೦ | ೨೭ | ೧೦೦ |
| ೦೩ | ಮರಣಿಸಲು ಕಾರಣಗಳು ಕುಟುಂಬದಲ್ಲಿ ಸದಸ್ಯರು | | | | | | |
| | ಗಣಿಗಾರಿಕೆ | ೩೨ | ೩೫.೫೫ | ೩೦ | ೩೩.೩೩ | ೨೭ | ೩೦.೦೦ |
| | ವಾಹನ ಅಪಘಾತ | ೧೮ | ೨೦.೦೧ | ೨೨ | ೨೪.೪೪ | ೨೧ | ೨೩.೩೩ |
| | ಅನಾರೋಗ್ಯ | ೪೦ | ೪೪.೪೪ | ೩೮ | ೪೨.೨೩ | ೨೪ | ೨೬.೬೬ |
| | ಇತರೆ | - | - | - | - | ೧೮ | ೨೦.೦೧ |
| | | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ.**

ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದಲ್ಲಿ ಹರಡಿರುವ ರೋಗಗಳಿಂದ ಮರಣ ಹೊಂದಿದ ಕುಟುಂಬಗಳ ಪ್ರಮಾಣ, ಯಾವ ಕಾಯಿಲೆಯಿಂದ ಮರಣ ಹೊಂದಿದ್ದಾರೆ ಹಾಗೂ ಕುಟುಂಬಗಳ ಸದಸ್ಯರು ಮರಣಿಸಲು ಕಾರಣಗಳೇನು? ಪ್ರಶ್ನೆಯ ಮೇರೆಗೆ ಈ ಮೇಲಿನ ಕೋಷ್ಟಕವನ್ನು ರಚಿಸಲಾಗಿದೆ. ಗಣಿ ವಲಯ ಹೊಸಪೇಟೆ ತಾಲ್ಲೂಕಿನ ಗ್ರಾಮೀಣದ ೯೦ ಕುಟುಂಬಗಳಲ್ಲಿ ೨೨ ಕುಟುಂಬಗಳು ಶೇ೨೪.೪೪ರಷ್ಟು ಖಾಯಿಲೆಗಳಿಂದ ಮರಣಿಸಿದ್ದಾರೆ. ಇದರಲ್ಲಿ ಅಸ್ತಮಾ ರೋಗವು ಶೇ ೧೮.೧೮ರಷ್ಟು, ಉಸಿರಾಟದ ತೊಂದರೆ ಶೇ.೩೧.೮೩ರಷ್ಟು, ಶ್ವಾಸಕೋಶದ ತೊಂದರೆ ಶೇ.೨೨.೭೨ರಷ್ಟು, ಟಿ.ಬಿ ಖಾಯಿಲೆಯಿಂದ ಶೇ.೨೭.೨೭ರಷ್ಟು ಕುಟುಂಬಗಳಲ್ಲಿ ಮರಣ ಹೊಂದಿರುವ ಪ್ರಮಾಣವಿದೆ. ಈ ವಲಯದ ೯೦ ಕಟುಂಬಗಳಲ್ಲಿ ಕುಟುಂಬ ಸದಸ್ಯರು ಮರಣ ಹೊಂದಲು ಕಾರಣವನ್ನು ಕೇಳಿದಾಗ, ಕುಟುಂಬಗಳ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯು ಶೇ.೩೨ರಷ್ಟು, ವಾಹನ ಅಪಘಾತದಿಂದ ಶೇ.೧೮ರಷ್ಟು ಹಾಗೂ ಅನಾರೋಗ್ಯ ಕಾರಣಗಳಿಂದಾಗಿ ಶೇ.೪೦ರಷ್ಟು ಮರಣ ಹೊಂದಲು ಕಾರಣಗಳು ತಿಳಿದುಬರುತ್ತದೆ. ಸಂಡೂರು ಗಣಿ ಗ್ರಾಮೀಣ ಕುಟುಂಬಗಳಲ್ಲಿ ಶೇ.೨೭.೨೭ರಷ್ಟು ಖಾಯಿಲೆಯಿಂದ ಮರಣಿಸಿದ್ದು, ಅಸ್ತಮಾ ಶೇ.೨೦ರಷ್ಟು, ಉಸಿರಾಟದ ತೊಂದರೆ ಶೇ.೨೮ರಷ್ಟು, ಶ್ವಾಸಕೋಶದ ತೊಂದರೆ ಶೇ.೩೨ರಷ್ಟು, ಟಿ.ಬಿ ಖಾಯಿಲೆಯಿಂದ ಶೇ.೨೦ರಷ್ಟು ೨೫ ಕುಟುಂಬಗಳಲ್ಲಿ ಮರಣ ಹೊಂದಿದ್ದಾರೆ. ಮರಣಿಸಲು ಕಾರಣವೇನು? ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ಈ ಗಣಿವಲಯದ ೯೦ ಕುಟುಂಬಗಳಲ್ಲಿ ಗಣಿಗಾರಿಕೆಯಿಂದ ಶೇ.೩೩.೩೩ರಷ್ಟು, ವಾಹನ ಅಪಘಾತಗಳಿಂದ ಶೇ.೪.೪೪ರಷ್ಟು ಅನಾರೋಗ್ಯದ ಕಾರಣಗಳಿಂದಾಗಿ ಶೇ.೪೨.೨೨ರಷ್ಟು ಮರಣ ಹೊಂದಿದ್ದಾರೆ. ಹಾಗೆಯೇ ಬಳ್ಳಾರಿ ಗಣಿ ವಲಯದ ಕುಟುಂಬಗಳಲ್ಲಿ ಖಾಯಿಲೆಯಿಂದ ಮರಣ ಹೊಂದಿದವರ ಪ್ರಮಾಣ ಶೇ.೩೦ರಷ್ಟಿದ್ದು, ಅಸ್ತಮಾ ಖಾಯಿಲೆಯಿಂದ ಶೇ.೩೭.೦೩ರಷ್ಟು, ಉಸಿರಾಟದ ತೊಂದರೆಯಿಂದ ಶೇ.೦೭.೪೦ರಷ್ಟು, ಶ್ವಾಸಕೋಶದ ತೊಂದರೆಗಳಿಂದ ಶೇ.೨೯.೬೨ರಷ್ಟು, ಟಿ.ಬಿ ಖಾಯಿಲೆಯಿಂದ ಶೇ.೨೫.೯೪ರಷ್ಟು ಮರಣ ಹೊಂದಿದ್ದವರ ಪ್ರಮಾಣ ಈ ಕುಟುಂಬಗಳಲ್ಲಿ ಕಂಡು ಬರುತ್ತದೆ. ಈ ಕಾಯಿಲೆಯಿಂದ ಮರಣ ಹೊಂದಲು ಕಾರಣವೇನು? ಎಂಬ ಪ್ರಶ್ನೆಗೆ ಕುಟುಂಬಗಳು ನೀಡಿರುವ ಉತ್ತರ ಹೀಗಿವೆ, ಗಣಿಗಾರಿಕೆಯಿಂದ ಶೇ.೩೦.೦೦ರಷ್ಟು, ವಾಹನ ಅಪಘಾತಗಳಿಂದ ಶೇ.೨೩.೩೩ರಷ್ಟು, ಅನಾರೋಗ್ಯದಿಂದ ಶೇ.೨೬.೬೬ರಷ್ಟು, ಇತ್ಯಾದಿ ಕಾರಣಗಳಿಂದ ಶೇ.೨೦ರಷ್ಟು ಕುಟುಂಬಗಳಲ್ಲಿ ಮರಣಿಸಲು ಕಾರಣಗಳಾಗಿವೆ. ಒಟ್ಟಾರೆಯಾಗಿ ಈ ಮೂರು ವಲಯದಲ್ಲಿ ಖಾಯಿಲೆಯಿಂದ ಮರಣಿಸಲು ಗಣಿಗಾರಿಕೆಯೇ ಪ್ರಮುಖವಾದ ಕಾರಣವಾಗಿದೆ. ಗಣಿಗಾರಿಕೆಯ ಪರಿಣಾಮವಾಗಿಯೇ ಗಣಿ ಗ್ರಾಮೀಣ ಪ್ರದೇಶದ ಬಳ್ಳಾರಿಯಲ್ಲಿ ಶೇ.೩೦ರಷ್ಟು, ಸಂಡೂರುನಲ್ಲಿ ಶೇ.೩೩.೩೩ರಷ್ಟು, ಹೊಸಪೇಟೆಯಲ್ಲಿ ಶೇ.೩೫.೫೫ರಷ್ಟು ಈ ಗ್ರಾಮೀಣ ಕುಟುಂಬಗಳಲ್ಲಿ ಮರಣಿಸಿದ್ದಾರೆ ಎಂಬ ಅಂಶ ಗೋಚರಿಸುತ್ತದೆ.

**೩.೭ ಪ್ರತಿ ಕುಟುಂಬಗಳ ಆರೋಗ್ಯದ ಮೇಲಿನ ವೆಚ್ಚ**

ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಆರೋಗ್ಯಕ್ಕಾಗಿ ಮಾಡಿರುವ ವೆಚ್ಚದ ಪ್ರಮಾಣವು ಜನರ ಆರೋಗ್ಯದ ಮೇಲೆ ವ್ಯಯಿಸಲಾಗುವ ತಲಾ ವೆಚ್ಚವನ್ನು ತಿಳಿಯುವ ಅವಶ್ಯಕತೆಯಿದೆ. ಗ್ರಾಮೀಣ ಗಣಿ ಪ್ರದೇಶದ ಕುಟುಂಬಗಳು ವರ್ಷಕ್ಕೆ ಅನಾರೋಗ್ಯಗಳಿಗಾಗಿ ಮಾಡಿರುವ ವೆಚ್ಚದ ಪ್ರಮಾಣವನ್ನು ಸಮೀಕ್ಷೆಗೆ ಒಳಪಡಿಸಿದಾಗ ಕುಟುಂಬಗಳು ಮಾಡಿರುವ ವೆಚ್ಚದ ಪ್ರಮಾಣವನ್ನು ತಾಲ್ಲೂಕುವಾರು ಅಂಕಿ-ಅಂಶಗಳಿಂದ ದಾಖಲಿಸಿ, ಕೋಷ್ಟಕ ೩.೩೧ರಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೧ ಕುಟುಂಬಗಳು ಆರೋಗ್ಯಕ್ಕಾಗಿ ವರ್ಷಕ್ಕೆ ಮಾಡುವ ವೆಚ್ಚದ ಪ್ರಮಾಣ.**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಅನಾರೋಗ್ಯಕ್ಕಾಗಿ ಮಾಡಿರುವ ವೆಚ್ಚದ ಪ್ರಮಾಣ (ವಾರ್ಷಿಕ) | | | | | | |
| | ೫೦೦೦-೧೦೦೦೦ | ೧೧ | ೧೨.೧೨ | - | - | ೦೬ | ೦೬.೬೬ |
| | ೧೦೦೦೦-೨೦,೦೦೦ | ೨೫ | ೨೭.೭೭ | ೨೮ | ೩೧.೧೧ | ೨೯ | ೩೨.೨೨ |
| | ೨೦,೦೦೦-೩೦,೦೦೦ | ೨೮ | ೩೧.೧೧ | ೨೫ | ೨೭.೭೭ | ೩೦ | ೩೩.೩೩ |
| | ೩೦,೦೦೦-೪೦,೦೦೦ | ೨೨ | ೨೪.೪೪ | ೩೭ | ೪೧.೧೨ | ೨೨ | ೨೪.೪೪ |
| | ೪೦,೦೦೦ಕ್ಕಿಂತ ಹೆಚ್ಚು | ೦೪ | ೦೪.೪೬ | - | - | ೦೩ | ೦೩.೩೫ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕು ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ವರ್ಷಕ್ಕೆ ಅನಾರೋಗ್ಯಕ್ಕಾಗಿ ಮಾಡುವ ವೆಚ್ಚವನ್ನು ತೋರಿಸುತ್ತದೆ. ವೆಚ್ಚದ ಪ್ರಮಾಣವನ್ನು ೫೦೦೦ರಿಂದ೧೦,೦೦೦ವರೆಗೆ, ೧೦,೦೦೦ರಿಂದ೨೦,೦೦೦ವರೆಗೆ, ೨೦,೦೦೦ರಿಂದ ೩೦,೦೦೦ವರೆಗೆ, ೩೦,೦೦೦-೪೦,೦೦೦ವರೆಗೆ, ೪೦,೦೦೦ ಸಾವಿರಕ್ಕಿಂತಲ್ಲೂ ಹೆಚ್ಚು ವೆಚ್ಚ ಮಾಡಿರುವ ಕುಟುಂಬಗಳ ಶೇಕಡವಾರು ನೀಡಲಾಗಿದೆ. ಈ ವಲಯಗಳಲ್ಲಿ ಅನಾರೋಗ್ಯಕ್ಕಾಗಿ ವ್ಯಯ ಮಾಡಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ಗುರುತಿಸಲಾಗಿದೆ. ಗಣಿ ಗ್ರಾಮೀಣ ಪ್ರದೇಶದ ಹೊಸಪೇಟೆ ತಾಲ್ಲೂಕಿನ ೯೦ ಕುಟುಂಬಗಳ ಪೈಕಿ ೧೧ ಕುಟುಂಬಗಳು ೫,೦೦೦-೧೦,೦೦೦ದವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೧೨.೧೨ರಷ್ಟು, ೨೫ ಕುಟುಂಬಗಳು ೧೦,೦೦೦-೨೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೨೭.೭೭ರಷ್ಟು, ೨೮ ಕುಟುಂಬಗಳು ೨೦,೦೦೦-೩೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೩೧.೧೧ರಷ್ಟು, ೨೨ ಕುಟುಂಬಗಳು ೩೦,೦೦೦-೪೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೨೪.೪೪ರಷ್ಟು, ೦೪ಕುಟುಂಬಗಳು ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೦೪.೪೬ರಷ್ಟು ವೆಚ್ಚ ಮಾಡಿರುವುದು ಕಾಣಸಿಗುತ್ತದೆ. ಕುಟುಂಬಗಳು ೪೦,೦೦೦ಕ್ಕಿಂತಲ್ಲೂ ಹೆಚ್ಚು ಅನಾರೋಗ್ಯಕ್ಕೆ ಮಾಡಿರುವ ವೆಚ್ಚ (ಶೇ.೦೪.೪೬) ಕಡಿಮೆ ಪ್ರಮಾಣದಲ್ಲಿದ್ದು, ಕುಟುಂಬಗಳು ಶೇ.೩೧.೧೧ರಷ್ಟು ೨೦,೦೦೦ದಿಂದ ೩೦,೦೦೦ ವರೆಗೆ ವಾರ್ಷಿಕವಾಗಿ ಅನಾರೋಗ್ಯಕ್ಕೆ ಮಾಡಿರುವ ವೆಚ್ಚದ ಪ್ರಮಾಣ ಅಧಿಕವಾಗಿ ಕಂಡು ಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೨೮ ಕುಟುಂಬಗಳು ೧೦,೦೦೦-೨೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೩೧.೧೧ರಷ್ಟು, ೨೫ ಕುಟುಂಬಗಳು ೨೦,೦೦೦-೩೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೨೭.೨೭ರಷ್ಟು, ೩೭ ಕುಟುಂಬಗಳು ೩೦,೦೦೦-೪೦,೦೦೦ವರೆಗೆ ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೨೪.೪೪ರಷ್ಟು ಮಾಡಿರುವ ವೆಚ್ಚದ ಪ್ರಮಾಣವಾಗಿದೆ. ಇದರಲ್ಲಿ ಅನಾರೋಗ್ಯಕ್ಕಾಗಿ ವಾರ್ಷಿಕವಾಗಿ ಕಡಿಮೆ ವ್ಯಯ ಅಂದರೆ ೨೦,೦೦೦ದಿಂದ ೩೦,೦೦೦ ರವರೆಗೆ ವೆಚ್ಚ ಮಾಡಿರುವ ಕುಟುಂಬಗಳು ಶೇ.೨೭.೭೭ರಷ್ಟಿರೆ, ೩೦,೦೦೦ದಿಂದ ೪೦,೦೦೦ರ ವರೆಗೆ ಹೆಚ್ಚು ಅನಾರೊಗ್ಯಕ್ಕಾಗಿ ವೆಚ್ಚ ಮಾಡಿದ ಕುಟುಂಬಗಳು ಶೇ ೪೧.೧೨ರಷ್ಟಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೦೬ ಕುಟುಂಬಗಳು ೫,೦೦೦-೧೦,೦೦೦ದವರೆಗೆ ವರ್ಷಕ್ಕೆ ಶೇ.೦೬.೬೬ರಷ್ಟು, ೨೯ಕುಟುಂಬಗಳು ೧೦,೦೦೦-೨೦,೦೦೦ವರೆಗೆ ವರ್ಷಕ್ಕೆ ಶೇ.೩೨.೨೨ರಷ್ಟು, ೩೦ ಕುಟುಂಬಗಳು ೨೦,೦೦೦-೩೦,೦೦೦ವರೆಗೆ ವರ್ಷಕ್ಕೆ ಶೇ.೩೩.೩೩ರಷ್ಟು, ೨೨ ಕುಟುಂಬಗಳು ೩೦,೦೦೦-೪೦,೦೦೦ವರೆಗೆ ವರ್ಷಕ್ಕೆ ಶೇ.೨೪.೪೪ರಷ್ಟು, ೦೩ಕುಟುಂಬಗಳು ವರ್ಷಕ್ಕೆ ಅನಾರೋಗ್ಯಕ್ಕಾಗಿ ಶೇ.೦೩.೫ರಷ್ಟು ವೆಚ್ಚ

ಮಾಡಿರುವುದು ಗೋಚರಿಸುತ್ತದೆ. ೪೦,೦೦೦ಕ್ಕಿಂತಲೂ ಹೆಚ್ಚು ವ್ಯಯ ಮಾಡಿರುವ ಕುಟುಂಬಗಳು ಶೇ.೦೩.೩೩ರಷ್ಟಿದ್ದು ಕಡಿಮೆ ಪ್ರಮಾಣದ ವೆಚ್ಚವನ್ನು ಅನಾರೋಗ್ಯಕ್ಕಾಗಿ ಮಾಡಿದ್ದು, ೨೦ ರಿಂದ ೩೦, ಸಾವಿರ ವರೆಗೆ ವೆಚ್ಚ ಮಾಡಿದ್ದು ಶೇ.೩೩.೩೩ರಷ್ಟು ಹೆಚ್ಚು ವೆಚ್ಚ ಮಾಡಿರುವ ಕುಟುಂಬಗಳು ಕಂಡುಬಂದಿರುವುದು ಗಮನಿಸಬಹುದಾಗಿದೆ. ಗಣಿ ವಲಯದ ಗ್ರಾಮೀಣ ಪ್ರದೇಶಗಳಲ್ಲಿ ವಾರ್ಷಿಕವಾಗಿ ಆದಾಯಕ್ಕೆ ಹೋಲಿಸಿಕೊಂಡರೆ ಆನಾರೋಗ್ಯಕ್ಕಾಗಿ ಮಾಡಿರುವ ವೆಚ್ಚದ ಪ್ರಮಾಣ ಸ್ವಲ್ಪ ಮಟ್ಟಿಗೆ ಕೆಲವು ಕುಟುಂಬಗಳಲ್ಲಿ ಹೆಚ್ಚಾಗಿರುವುದು ಮತ್ತು ಕಡಿಮೆಯಾಗಿರುವುದು ಕ್ಷೇತ್ರಕಾರ್ಯದಿಂದ ಕಂಡು ಬಂದಿದೆ.

**೩.೮ ಗಣಿಗಾರಿಕೆ ಮತ್ತು ನೈರ್ಮಲ್ಯ**

ನೈರ್ಮಲ್ಯವು ಉತ್ತಮ ಆರೋಗ್ಯ ಮತ್ತು ಯೋಗಕ್ಷೇಮವನ್ನು ಒದಗಿಸುತ್ತದೆ. ನೈರ್ಮಲ್ಯವು ಒಳ ಚರಂಡಿ ಸೌಲಭ್ಯ, ಕುಡಿಯುವ ನೀರಿನ ಸೌಲಭ್ಯ, ಶೌಚಾಲಯದ ಸೌಲಭ್ಯ ಕುಟುಂಬಗಳ ಮಟ್ಟದಲ್ಲಿ ನಿರ್ಮಾಣವಾಗುವ ಅವಶ್ಯಕತೆ ಇದೆ. ಬಳ್ಳಾರಿ ಜಿಲ್ಲೆಯಲ್ಲಿ ೨೦೧೧-೧೨ ರಲ್ಲಿ ಕೇವಲ ಮೂರರ ಒಂದರಷ್ಟು ಕುಟುಂಬಗಳ ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿದೆ. ಹೆಚ್ಚು ಅಭಿವೃದ್ಧಿ ಹೊಂದಿದ ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲಿ ಕೇವಲ ಶೇ.೪೫ರಷ್ಟು ಕುಟುಂಬಗಳು ಶೌಚಾಲಯಗಳನ್ನು ಹೊಂದಿದ್ದು, ಉಳಿದ ತಾಲ್ಲೂಕುಗಳಲ್ಲಿ ಐದರಲ್ಲಿ ನಾಲ್ಕರಷ್ಟು ಕುಟುಂಬಗಳು ಶೌಚಾಲಯ ಹೊಂದಿರುವುದಿಲ್ಲ ಎಂದು ಉಲ್ಲೇಖಿಸಲಾಗಿದೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ನೈರ್ಮಲ್ಯವು ಸಾಮಾಜಿಕ ಸೂಚಿಗಳಲ್ಲಿ ಒಂದಾಗಿದ್ದು, ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಲಭ್ಯವಿರುವ ಕುಡಿಯುವ ನೀರು, ಶೌಚಾಲಯ, ಚರಂಡಿ ವ್ಯವಸ್ಥೆಯ ಮೇಲೆ ಗಣಿಗಾರಿಕೆ ಪೂರ್ವ, ನಂತರ ಹಾಗೂ ಸ್ಥಗಿತತೆ ನಂತರದಲ್ಲಿ ಯಾವ ಬದಲಾವಣೆಗಳಾಗಿವೆ ಎಂಬ ಅಂಶವನ್ನು ವಿಶ್ಲೇಷಣೆಗೆ ಒಳಪಡಿಸಲಾಗದೆ.

**೩.೮.೧ ಕುಡಿಯುವ ನೀರು**

ಬಳ್ಳಾರಿ ಜಿಲ್ಲೆಯು ತುಂಗಭದ್ರ ನದಿ ಸಂಪನ್ಮೂಲವನ್ನು ಹೊಂದಿದ್ದರೂ, ಅದು ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಹರಿಯುವುದರಿಂದ ಜಿಲ್ಲೆಯು ನೀರಿನ ಸಂಪನ್ಮೂಲದ ಕೊರತೆಯಿದೆ. ಜಿಲ್ಲೆಯು ಉತ್ತರ ಶುಷ್ಕವಲಯ (ಕೃಷಿ-ವಾಯುಗುಣ ವಲಯ)ದಲ್ಲಿದ್ದು, ವಾರ್ಷಿಕ ಮಳೆಯು ೪೬೫ ಮಿ.ಮೀ. ದಿಂದ ೭೮೫.೭ ಮಿ.ಮೀ ಇರುವುದರಿಂದ ಇದು ರಾಜ್ಯದ ಅತ್ಯಂತ ಕಡಿಮೆ ಮಳೆಯನ್ನು ಹೊಂದಿದ ಪ್ರದೇಶವಾಗಿದೆ. ಅದರಿಂದ ನೀರಿನ ಲಭ್ಯತೆಯ ಕೊರತೆ ಮತ್ತು ಅತ್ಯಲ್ಪ ಮಳೆಯಿಂದಾಗಿ, ಗಣಿಗಾರಿಕೆಯು ಹವಾಳಿಯ ಪರಿಣಾಮವಾಗಿ, ಅಂತರ್ಜಲದ ಕೊರತೆಯಿಂದಾಗಿ, ಜಿಲ್ಲೆಯಲ್ಲಿ ಸಾಮಾನ್ಯವಾಗಿ ಕುಡಿಯುವ ನೀರಿನ ಸಮಸ್ಯೆ ಕಾಣುತ್ತಿದೆ. ಈ ಕುಡಿಯುವ ನೀರಿನ ಸಮಸ್ಯೆ ನಗರ ಪ್ರದೇಶಗಳಿಗಿಂತ ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ತೀವ್ರವಾಗಿ ಕಂಡುಬರುತ್ತದೆ. ನೀರಿನ ಲಭ್ಯತೆಯ ಕೊರತೆ ಮತ್ತು ಲಭ್ಯವಿರುವ ನೀರಿನ ಗುಣಮಟ್ಟ ಕಡಿಮೆ ದರ್ಜೆಯದಾಗಿದೆ. ಇದರ ಪರಿಣಾಮ ಸಾಮಾನ್ಯ ಜನರ ಆರೋಗ್ಯದ ಮೇಲೆ ಮತ್ತು ಪ್ರತ್ಯೇಕವಾಗಿ ಅವರ ಯೋಗಕ್ಷಮತೆಯ ಮೇಲೆ ಪ್ರಭಾವ ಬೀರಿದೆ. ಪ್ರಸ್ತುತ ಅಧ್ಯಯನದಲ್ಲಿ ಕುಡಿಯುವ ನೀರಿಗೆ ಸಂಬಂಧಿಸಿದಂತೆ ಗಣಿ ವಲಯಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರಿನ ಗುಣಮಟ್ಟವನ್ನು ಅಳೆಯಲು ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿತ್ತು. ಕುಡಿಯುವ ನೀರಿಗೆ ಸಂಬಂಧಿಸಿದಂತೆ ಕುಟುಂಬಗಳಲ್ಲಿ ಕುಡಿಯುವ ನೀರಿನ ಮೂಲ, ಕುಡಿಯುವ ನೀರು ಸಿಗುವ ಆವರಣ ಹಾಗೂ ನೀರಿನ ಪ್ರಮಾಣದ ಬಗ್ಗೆ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಕುಡಿಯುವ ನೀರಿನ ಮೂಲಕ್ಕೆ ಸಂಬಂಧಿಸಿದಂತೆ ಕುಟುಂಬಗಳು ಸಾರ್ವಜನಿಕ ನಳ, ಬೋರ್‌ವೆಲ್, ಶುದ್ಧ ನೀರಿನ ಘಟಕಗಳಿಂದ ಕುಡಿಯುವ ನೀರನ್ನು ಪಡೆಯುವ ಮೂಲ ಆಧಾರಗಳಾಗಿವೆ. ಕುಡಿಯುವ ನೀರಿನ ಮೂಲಗಳಿಗೆ ಸಂಬಂಧಿಸಿದಂತೆ ಗಣಿ ಗ್ರಾಮೀಣ ಪ್ರದೇಶದ ೨೭೦ ಕುಟುಂಬಗಳನ್ನು ತಾಲ್ಲೂಕುವಾರು ೯೦ ಕುಟುಂಬಗಳಂತೆ ಸಮೀಕ್ಷೆಗೆ ಒಳಪಡಿಸಿದಾಗ ಬಂದ ಫಲಿತಾಂಶದ ಅಂಕಿ-ಅಂಶಗಳ ಮೂಲಕ ದಾಖಲಿಸಿ, ಕೋಷ್ಟಕ ೩.೩೭ರಲ್ಲಿ ನೀಡಲಾಗಿದೆ.

**ಕೋಷ್ಟಕ ೩.೩೨ ಗಣಿ ಗ್ರಾಮೀಣ ವಲಯದಲ್ಲಿ ಕುಡಿಯುವ ನೀರಿನ ಲಭ್ಯತೆಯ ಪ್ರಮಾಣ**

| ಕ್ರಸಂ. | ಕುಡಿಯುವ ನೀರಿನ ಮೂಲ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೧ | ಸಾರ್ವಜನಿಕ ನಳ | ೬೦ | ೬೬.೬೬ | ೫೬ | ೬೨.೨೪ | ೩೯ | ೪೩.೩೪ |
| ೦೨ | ಬೋರ್ವೆಲ್ ಎಚ್.ಪಿ. | ೦೯ | ೧೦.೦೦ | ೧೭ | ೧೮.೮೮ | ೧೮ | ೨೦.೦೦ |
| ೦೩ | ಶುದ್ಧ ನೀರಿನ ಘಟಕ | ೨೧ | ೨೩.೩೪ | ೧೭ | ೧೮.೮೮ | ೩೩ | ೩೬.೬೬ |
| ೦೪ | ಇತರೆ | – | – | – | – | – | |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದ ಹೊಸಪೇಟೆ, ಸಂಡೂರು, ಬಳ್ಳಾರಿ ವಲಯಗಳ ಕುಟುಂಬಗಳು ಸಾರ್ವಜನಿಕ ನಳ, ಬೋರ್ವೆಲ್, ಶುದ್ಧ ನೀರಿನ ಘಟಕಗಳ ಮೂಲಗಳಿಂದಾಗಿ ಪಡೆಯುವ ಕುಡಿಯುವ ನೀರಿನ ಪ್ರಮಾಣವನ್ನು ತೋರಿಸುತ್ತದೆ. ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ಸಾರ್ವಜನಿಕ ನಳ ಮೂಲಕ ೬೦ ಕುಟುಂಬಗಳು ಶೇ.೬೬.೬೬ರಷ್ಟು, ೦೯ ಕುಟುಂಬಗಳು ಬೋರ್ವೆಲ್ ಮೂಲಕ ಶೇ.೧೦.೦೦ರಷ್ಟು, ೨೧ ಕುಟುಂಬಗಳು ಶೇ.೨೩.೩೪ರಷ್ಟು ನೀರನ್ನು ಪಡೆಯುವ ಮೂಲಗಳ ಪ್ರಮಾಣವಾಗಿದೆ. ಈ ತಾಲ್ಲೂಕಿನಲ್ಲಿ ಸಾರ್ವಜನಿಕ ನಳದ ಮೂಲಗಳಿಂದ ಅಧಿಕವಾಗಿ ಕುಡಿಯುವ ನೀರನ್ನ ಪಡೆಯುವ ಪ್ರಮಾಣವಾಗಿದ್ದು, ಬೋರ್ವೆಲ್ ಮೂಲಗಳಿಂದ ಕಡಿಮೆ ಪ್ರಮಾಣದಲ್ಲಿ ಕುಡಿಯುವ ನೀರನ್ನು ಪಡೆಯುವ ಮೂಲಗಳಾಗಿವೆಂದು ಗಮನಿಸಬಹುದಾಗಿದೆ. ಸಂಡೂರು ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ಸಾರ್ವಜನಿಕ ನಳ ಶೇ ೬೨.೨೪ರಷ್ಟು, ಬೋರ್ವೆಲ್ ಮೂಲಕ ಶೇ.೧೮.೮೮ರಷ್ಟು, ಶುದ್ಧ ನೀರಿನ ಘಟಕ ಮೂಲಕ ಶೇ ೧೮.೮೮ರಷ್ಟು ಕುಡಿಯುವ ನೀರಿನ್ನು ಪಡೆಯುವ ಕುಟುಂಬಗಳಾಗಿದ್ದು, ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಸರ್ವಜನಿಕ ನಳದ ಮೂಲಗಳಿಂದ ಕುಡಿಯುವ ನೀರನ್ನು ಪಡೆಯುವ ಕುಟುಂಬಗಳು ಹೆಚ್ಚಾಗಿರುವುದು ಕಂಡುಬರುತ್ತದೆ. ಹಾಗೆಯೇ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಕುಟುಂಬಗಳು ಸಾರ್ವಜನಿಕ ನಳದ ಮೂಲಕ ಶೇ.೪೩.೩೪ರಷ್ಟು, ಬೋರ್ವೆಲ್ ಮೂಲಕ ಶೇ.೨೦.೦೦ರಷ್ಟು, ಶುದ್ಧ ನೀರಿನ ಘಟಕ ಮೂಲಕ ಶೇ.೩೬.೬೬ರಷ್ಟು ಕುಡಿಯುವ ನೀರಿನ್ನು ಪಡೆಯುವ ಕುಟುಂಬಗಳಾಗಿದ್ದು, ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಸರ್ವಜನಿಕ ನಳದ ಮೂಲಗಳಿಂದ ಕುಡಿಯುವ ನೀರನ್ನು ಪಡೆಯುವ ಕುಟುಂಬಗಳು ಹೆಚ್ಚಾಗಿವೆ. ಒಟ್ಟಾರೆಯಾಗಿ ಈ ಗಣಿ ವಲಯದ ಗ್ರಾಮೀಣ ಪ್ರದೇಶಗಳಲ್ಲಿ ಹೊಸಪೇಟೆ ತಾಲ್ಲೂಕಿನ ಕುಟುಂಬಗಳು ಸಾರ್ವಜನಿಕ ನಳದ ಮೂಲಗಳಿಂದ ಹೆಚ್ಚಾಗಿ (ಶೇ.೬೬.೬೬) ಕುಡಿಯುವ ನೀರನ್ನು ಪಡೆದರೆ, ಕಡಿಮೆ ಪ್ರಮಾಣದಲ್ಲಿ ಹೊಸಪೇಟೆ ತಾಲ್ಲೂಕಿನ ಬೋರ್ವೆಲ್ ಮೂಲಗಳಿಂದ ಕುಡಿಯುವ ನೀರನ್ನು ಪಡೆಯುವ ಕುಟುಂಬಗಳಿರುವುದು ಕಾಣಸಿಗುತ್ತದೆ.

**೩.೮.೨ ಕುಡಿಯುವ ನೀರು ಸಿಗುವ ಆವರಣ**

ಕುಡಿಯುವ ನೀರು ಸಿಗುವ ಆವರಣಕ್ಕೆ ಸಂಬಂಧಿಸಿದಂತೆ ಕುಟುಂಬಗಳಿಗೆ ಪ್ರಶ್ನೆಯನ್ನು ಕೇಳಿದಾಗ ಗಣಿ ವಲಯ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೧೦೦ರಷ್ಟು ಊರಿನ ಒಳಗೆ ಕುಡಿಯುವ ನೀರಿನ ಆವರಣವಿದೆ. ಊರಲ್ಲಾದರೆ ಮನೆಯ ಅವರಣವನ್ನು ನೋಡುವಾಗ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಮನೆಯ ಆವರಣದೊಳಗೆ ನೀರಿನ ಲಭ್ಯತೆಯ ಪ್ರಮಾಣವು ಶೇ.೪೧.೧೨ರಷ್ಟಿದ್ದು, ಮನೆಯ ಆವರಣದ ಹೊರಗೆ ಶೇ.೫೮.೮೮ರಷ್ಟು ಕುಡಿಯುವ ನೀರು ಸಿಗುವ ಸ್ಥಳದ ಪ್ರಮಾಣವಾಗಿದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಮನೆಯ ಅವರಣದ ಹೋರಗೆ ನೀರು ಸಿಗುವ ಸ್ಥಳದ ಪ್ರಮಾಣ ಶೇ.೧೭.೭೭ರಷ್ಟು

ಅಧಿಕವಾಗಿದೆ. ಸಂಡೂರು ತಾಲ್ಲೂಕಿನಲ್ಲಿ ಗ್ರಾಮೀಣ ಪ್ರದೇಶ ಕುಟುಂಬಗಳ ಕುಡಿಯುವ ನೀರು ಸಿಗುವ ಸ್ಥಳ ಮನೆಯ ಆವರಣದ ಒಳಗೆ ಶೇ.೨೫.೫೫ರಷ್ಟಿದರೆ, ಮನೆಯ ಆವರಣದ ಹೊರಗೆ ನೀರು ಸಿಗುವ ಕುಟುಂಬಗಳು ಶೇ.೭೪.೪೪ರಷ್ಟಿದೆ. ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ ೪೭.೭೭ರಷ್ಟು ಕುಡಿಯುವ ನೀರು ಮನೆಯ ಆವರಣದೊಳಗೆ ಲಭಿಸಿದರೆ, ಶೇ.೫೨.೨೨ರಷ್ಟು ಕುಡಿಯುವ ನೀರು ಕುಟುಂಬಗಳ ಮನೆಯ ಆವರಣದ ಹೊರಗೆ ಸಿಗುತ್ತದೆ. ಮನೆ ಆವರಣದೊಳಗೆ ಲಭಿಸುವ ಕುಟುಂಬಗಳ ಪ್ರಮಾಣಕ್ಕಿಂತ ಮನೆಯ ಅವರಣದ ಹೊರಗೆ ನೀರನ್ನು ಪಡೆಯುವ ಕುಟುಂಬಗಳ ಪ್ರಮಾಣ ಶೇ.೪.೪೫ರಷ್ಟು ಹೆಚ್ಚಾಗಿರುವುದು ಕಾಣಬಹುದು.

**೩.೮.೩ ಕುಡಿಯುವ ನೀರು ದೊರೆಯುವ ಪ್ರಮಾಣ**

ಹೊಸಪೇಟೆ-ಸಂಡೂರು-ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಕುಡಿಯುವ ನೀರಿನ ಪ್ರಮಾಣಕ್ಕೆ ಸಂಬಂಧಿಸಿದಂತೆ ಪ್ರಶ್ನೆಯನ್ನು ಕೇಳಿದಾಗ, ಕ್ಷೇತ್ರಕಾರ್ಯದ ಮಾಹಿತಿಯ ಆಧಾರದ ಮೇಲೆ ಕುಡಿಯುವ ನೀರಿನ ಪ್ರಮಾಣವನ್ನು ೫ ವರ್ಗಗಳಾಗಿ ವಿಂಗಡಿಸಿ ಕಂಡು ಬಂದಿರುವ ಪಲಿತಾಂಶವನ್ನು ಈ ಕೆಳಗಿನಂತೆ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೩ ಕುಟುಂಬಗಳು ದಿನ ನಿತ್ಯ ಕುಡಿಯುವ ನೀರಿನ ಪ್ರಮಾಣ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕುಡಿಯುವ ನೀರಿನ ಪ್ರಮಾಣ | | | | | | |
| | ೦೧ರಿಂದ ೧೦ಲೀಟರ್ | ೧೨ | ೧೩.೩೩ | ೦೫ | ೦೫.೫೨ | ೧೨ | ೧೩.೧೩ |
| | ೧೦ರಿಂದ ೨೦ಲೀಟರ್ | ೧೯ | ೨೧.೧೨ | ೧೭ | ೧೮.೮೮ | ೧೬ | ೧೨.೭೭ |
| | ೨೦ರಿಂದ ೩೦ಲೀಟರ್ | ೨೫ | ೨೭.೭೭ | ೨೬ | ೨೮.೮೧ | ೧೯ | ೨೧.೧೧ |
| | ೩೦ರಿಂದ ೪೦ಲೀಟರ್ | ೨೨ | ೨೪.೪೫ | ೧೭ | ೧೮.೮೧ | ೨೩ | ೨೫.೫೫ |
| | ೪೦ಲೀಟರ್‌ಕ್ಕಿಂತ ಹೆಚ್ಚು | ೧೨ | ೧೩.೩೩ | ೨೫ | ೨೭.೭೭ | ೨೦ | ೨೨.೨೪ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಕುಟುಂಬ ಘಟಕಗಳಲ್ಲಿ ದಿನ ನಿತ್ಯ ಲಭಿಸುವ ನೀರು ಕುಡಿಯಲು ಸಾಕಾಗತ್ತಾ? | | | | | | |
| | ಹೌದು | ೧೬ | ೧೭.೭೭ | ೧೯ | ೨೧.೧೨ | ೧೦ | ೧೧.೧೨ |
| | ಇಲ್ಲ | ೭೪ | ೮೨.೨೩ | ೭೧ | ೭೮.೮೮ | ೮೦ | ೮೮.೮೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೩ | ಇಲ್ಲವಾದರೆ ಕುಡಿಯಲು ನೀರು ಸಾಕಾಗದಿರಲು ಕಾರಣವೇನು | | | | | | |
| | ಗಣಿಗಾರಿಕೆಯ ಹಾವಳಿ | ೧೮ | ೨೪.೩೨ | ೧೬ | ೨೨.೫೩ | ೧೭ | ೨೧.೨೫ |
| | ಅಂತರ್ಜಲದ ಕೊರತೆ | ೨೨ | ೨೯.೭೨ | ೨೧ | ೨೯.೫೭ | ೧೬ | ೨೦.೦೦ |
| | ವಿದ್ಯುತ್‌ಕೊರತೆ | ೨೦ | ೨೭.೦೩ | ೨೨ | ೩೦.೯೮ | ೨೮ | ೩೫.೦೦ |
| | ನೀರಿನ ಲಭ್ಯತೆಯ ಕೊರತೆ | ೧೪ | ೧೮.೯೩ | ೧೨ | ೧೬.೯೨ | ೧೯ | ೨೩.೭೫ |
| | ಒಟ್ಟು | ೭೪ | ೧೦೦ | ೯೦ | ೧೦೦ | ೯೦ | ೧೦೦ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ

ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಕುಡಿಯುವ ನೀರು ದಿನ ನಿತ್ಯ ಲಭ್ಯತೆಯ ಪ್ರಮಾಣ, ಕುಟುಂಬಗಳಲ್ಲಿ ಲಭ್ಯವಿರುವ ನೀರು ದಿನ ನಿತ್ಯ ಕುಡಿಯಲು ಸಾಕಾಗುತ್ತಾ? ಕುಡಿಯಲು ನೀರು ದಿನ ನಿತ್ಯ ಕುಟುಂಬಗಳಿಗೆ ಕುಡಿಯಲು ಸಾಕಾಗುವುದಿಲ್ಲ ಎಂದರೆ ಅದಕ್ಕೆ ಕಾರಣಗಳನ್ನು ನೀಡಿರುವ ಫಲಿತಾಂಶಗಳ ಆಧಾರದ ಮೇಲೆ ಕುಟುಂಬಗಳ ಶೇಕಾಡವಾರುಗಳನ್ನು ತಾಲ್ಲೂಕುವಾರು ತೋರಿಸುತ್ತದೆ. ಕುಡಿಯುವ ನೀರಿನ ಪ್ರಮಾಣಕ್ಕೆ ಸಂಬಂಧಿಸಿದಂತೆ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ೨೦ ರಿಂದ ೩೦ ಲೀಟರ್ ಪ್ರಮಾಣದ ಕುಡಿಯುವ ನೀರು ದಿನ ನಿತ್ಯ ಶೇ.೨೭.೭೭ರಷ್ಟು ಅಧಿಕವಾಗಿದರೆ, ೦೧ ರಿಂದ ೧೦ ಲೀಟರ್ ಮತ್ತು ೪೦ ಕ್ಕಿಂತ ಹೆಚ್ಚು ಲೀಟರ್ ಕುಡಿಯುವ ನೀರು ದಿನ ನಿತ್ಯ ಬಳಸುವ ಕುಟುಂಬಗಳು ಕ್ರಮವಾಗಿ ಶೇ.೧೩.೩೩ ಮತ್ತು ೩೩ರಷ್ಟಿದ್ದು, ದಿನ ನಿತ್ಯ ಕುಡಿಯುವ ನೀರನ್ನು ಬಳಸುವ ಕುಟುಂಬಗಲು ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಕುಟುಂಬಗಳಿಗೆ ಈ ಪ್ರಮಾಣದ ನೀರು ದಿನ ನಿತ್ಯ ಕುಡಿಯಲು ಸಾಕಾಗುತ್ತಾ? ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ಶೇ.೮೨.೨ರಷ್ಟು ೧೬ ಕುಟುಂಬಗಳಿಗೆ ಕುಡಿಯುವ ನೀರಿನ ಪ್ರಮಾಣ ಸಾಕಾಗುವುದಿಲ್ಲ, ಶೇ.೧೭.೭೭ ರಷ್ಟು ೭೬ ಕುಟುಂಬಗಳಿಗೆ ದೊರೆಯುವ ನೀರಿನ ಪ್ರಮಾಣ ಕುಡಿಯಲು ಸಾಕಾಗುತ್ತದೆ ಎಂದು ತಿಳಿದಿದೆ. ಅಂದರೆ ಕುಟುಂಬಗಳಲ್ಲಿ ಕುಡಿಯುವ ನೀರಿನ ಪ್ರಮಾಣ ಸಾಕಾಗುವುದಿಲ್ಲವೆಂದು ಶೇ.೮೨.೨೩ರಷ್ಟು ಅಧಿಕವಾಗಿ ಕಂಡು ಬಂದಿರುವ ಕುಟುಂಬಗಳಾಗಿವೆ. ಈ ಕುಟುಂಬಗಳಲ್ಲಿ ದಿನ ನಿತ್ಯ ಕುಡಿಯಲು ನೀರು ಸಾಕಾಗುವುದಿಲ್ಲವೆಂದರೆ ಕಾರಣವೇನು? ಎಂದು ಕೇಳಿದಾಗ ಪ್ರತಿಶತವಾಗಿ ಗಣಿಗಾರಿಕೆಯ ಪ್ರಭಾವದಿಂದ ಶೇ.೨೪.೩೨ರಷ್ಟು, ಅಂತರ್‌ಜಲದ ಕೊರತೆಯಿಂದ ಶೇ.೨೯.೭೨ರಷ್ಟು, ವಿದ್ಯುತ್ ಕೊರತೆಯಿಂದ ಶೇ.೨೭.೦೩ರಷ್ಟು, ನೀರಿನ ಲಭ್ಯತೆಯ ಕೊರತೆಯಿಂದ ಶೇ.೧೮.೯೨ರಷ್ಟು ಕುಟುಂಬಗಳಿಗೆ ನೀರು ಲಭಿಸದಿರಲು ಕಾರಣವಾಗಿದೆ. ಈ ಕುಟುಂಬದಲ್ಲಿ ಕುಡಿಯುವ ನೀರು ಸಾಕಾಗದಿರಲು ಅಧಿಕ ಪ್ರಮಾಣದ ಕಾರಣ ಅಂತರ್‌ಜಲ ಕೊರತೆಯಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಗಣಿ ವಲಯ ಕುಟುಂಬಗಳಲ್ಲಿ ಕುಡಿಯುವ ನೀರಿನ ಪ್ರಮಾಣ ೨೦ ರಿಂದ ೩೦ ಲೀಟರ್‌ವರೆಗೆ ಶೇ.೨೮.೨೮ರಷ್ಟಿದ್ದು, ಅಧಿಕ ಪ್ರಮಾಣದ ಕುಡಿಯುವ ನೀರನ್ನು ಹೊಂದಿದ ಕುಟುಂಬಗಳಾಗಿವೆ. ಪ್ರತಿ ನಿತ್ಯ ಕುಡಿಯುವ ನೀರು ಲಭಿಸುವ ಕುಟುಂಬಗಳು ೦೧ರಿಂದ ೧೦ ಲೀಟರ್ ಪ್ರಮಾಣದ ಶೇ.೦೫.೫೨ರಷ್ಟಿರುವುದು ಕಡಿಮೆ ಪ್ರಮಾಣದಲ್ಲಿ ಕಂಡು ಬರುತ್ತದೆ. ಈ ಕುಡಿಯುವ ನೀರು ಕುಟುಂಬಗಳಿಗೆ ಸಾಕಾಗುತ್ತಾ? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೨೧.೧೨ರಷ್ಟು ಕುಟುಂಬಗಳಿಗೆ ಪ್ರತಿ ನಿತ್ಯ ದೊರೆಯುವ ನೀರಿನ ಪ್ರಮಾಣ ಸಾಕಾಗುತ್ತದೆ. ಆದರೆ ಶೇ.೭೮.೮೮ರಷ್ಟು ಕುಟುಂಬಗಳಿಗೆ ಪ್ರತಿನಿತ್ಯ ದೂರೆಯುವ ಕುಡಿಯುವ ನೀರಿನ ಪ್ರಮಾಣ ಸಾಕಾಗುವುದಿಲ್ಲ. ಹಾಗಾದರೆ ಈ ಪ್ರಮಾಣದ ಕುಡಿಯುವ ನೀರು ಸಾಕಾಗದಿರಲು ಕಾರಣವೇನಾದರೂ ಇದೆಯೆ? ಎಂಬ ಪ್ರಶ್ನೆಗೆ ಸಮೀಕ್ಷೆ ಒಳಪಡಿಸಿರುವ ಕುಟುಂಬಗಳು ಗಣಿಗಾರಿಕೆಯ ಪ್ರಭಾವದಿಂದ ಶೇ.೨೨.೫೩ರಷ್ಟು, ಅಂತರ್ಜಲದ ಕೊರತೆಯಿಂದ ಶೇ.೨೯.೨೭ರಷ್ಟು, ವಿದ್ಯಾತ್ ಕೋರತೆಯಿಂದ ಶೇ.೩೦.೯೮ರಷ್ಟು, ನೀರಿನ ಲಭ್ಯತೆಯ ಕೊರತೆ ಶೇ.೧೬.೯೨ರಷ್ಟು ಕುಡಿಯುವ ನೀರಿನ ಪ್ರಮಾಣ ಸಾಕಾಗದಿರಲು ಕಾರಣವಾಗಿದೆಂದು ಕಾಣಸಿಗುತ್ತದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ವಲಯದ ಗ್ರಾಮೀಣ ಭಾಗದ ಕುಟುಂಬಗಳಲ್ಲಿ ಕುಡಿಯುವ ನೀರಿನ ಪ್ರಮಾಣ ಪ್ರತಿನಿತ್ಯ ೩೦ ರಿಂದ ೪೦ ಲೀಟರ್ ಶೇ ೨೫.೫೫ರಷ್ಟು ಕುಡಿಯಲು ಬೇಕಾಗಿರುವ ಪ್ರಮಾಣವಾಗಿದ್ದು. ಈ ಪ್ರಮಾಣದ ಕುಟುಂಗಗಳು ಅಧಿಕ ಪ್ರಮಾಣದಲ್ಲಿದರೆ, ೧೦ ರಿಂದ ೨೦ ಲಿಟರ್ ಕುಡಿಯುವ ನೀರು

ಶೇ.೧೨.೭೭ರಷ್ಟು ಕುಟುಂಬಗಳಲ್ಲಿ ಕಂಡು ಬಂದಿದ್ದು, ಕಡಿಮೆ ಪ್ರಮಾಣದ ಕುಡಿಯುವ ನೀರನ್ನು ಕುಟುಂಬಗಳು ಸೇವಿಸುತ್ತಿದ್ದಾರೆ. ಈ ತಾಲ್ಲೂಕಿನಲ್ಲಿ ದೊರೆಯುವ ದಿನ ನಿತ್ಯ ಕುಡಿಯುವ ನೀರಿನ ಪ್ರಮಾಣ ಸಾಕಾಗುತ್ತಾ? ಎಂದು ಕೇಳಿದಾಗ ಶೇ.೧೧.೧೨ರಷ್ಟು ಕುಟುಂಬಗಳಿಗೆ ದಿನನಿತ್ಯ ಲಭ್ಯವಿರುವ ಕುಡಿಯುವ ನೀರಿನ ಪ್ರಮಾಣ ಸಾಕಾಗುವುದಿಲ್ಲ, ಇದಕ್ಕೆ ಗಣಿಗಾರಿಕೆಯ ಪ್ರಭಾವ, ಅಂತರ್ಜಲದ ಕೊರತೆ, ವಿದ್ಯುತ್ ಕೊರತೆ, ನೀರಿನ ಲಭ್ಯತೆಯ ಅಭಾವಗಳೆ ಕಾರಣವಾಗಿದೆ ಈ ಕಾರಣಗಳನ್ನು ತಿಳಿಸಿರುವ ಕುಟುಂಬಗಳ ಶೇಕಡಾವಾರು ಪ್ರಮಾಣ ಗಣಿಗಾರಿಕೆ ಪ್ರಭಾವದಿಂದ ಶೇ.೨೧.೨೫ರಷ್ಟು, ಅಂತರ್‌ಜಲದ ಕೊರತೆಯಿಂದ ಶೇ.೨೦ರಷ್ಟು, ವಿದ್ಯುತ್ ಕೊರತೆಯಿಂದ ಶೇ.೩೫ರಷ್ಟು, ನೀರಿನ ಅಭ್ಯತೆಯ ಅಭಾವದಿಂದ ಶೇ.೨೩.೭೫ರಷ್ಟು ಕುಡಿಯಲು ನೀರು ಸಾಕಾಗದಿರಲು ಕಾರಣವಾಗಿದೆ. ಹಿಗೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಕುಡಿಯುವ ನೀರಿನ ಪ್ರಮಾಣವು ಕಡಿಮೆಯಾಗಲು ಗಣಿಗಾರಿಕೆಯ ಪರಿಣಾಮಗಳೇ ಪರೋಕ್ಷದಾದ ಕಾರಣವಾಗಿರುವುದು ಗ್ರಹಿಸಬಾಕಾಗಿರುವ ಅಂಶವಾಗಿದೆ. ಗಣಿಗಾರಿಕೆಯಿಂದ ಗ್ರಾಮೀಣ ಪ್ರದೇಶದಲ್ಲಿ ಅಂತರ್ಜಲದ ಕೊರತೆ ಉಂಟಾಗಿದೆ. ಇದರ ಪರಿಣಾಮವಾಗಿಯೇ ಕುಡಿಯುವ ನೀರಿನ ಅಭಾವವು ಗ್ರಾಮೀಣ ಪ್ರದೇಶದ ದುಸ್ಥಿತಿಯಾಗಿದೆ.

**೩.೮.೪ ಕುಡಿಯುವ ನೀರಿನ ಗುಣಮಟ್ಟ**

ಕುಡಿಯುವ ನೀರಿನ ಗುಣಮಟ್ಟವು ಆರೋಗ್ಯದ ಸ್ಥಿತಿ ಉತ್ತಮವಾಗಿದೆಯಾ ಅಥವಾ ಉತ್ತಮವಾಗಿಲ್ಲ ಎಂದು ಸೂಚಿಸಲು ಸಹಾಯಕಾರಿಯಾಗಿದೆ. ಗಣಿ ಗ್ರಾಮೀಣ ಪ್ರದೇಶಗಳ ಕುಡಿಯುವ ನೀರಿನಲ್ಲಿ ಮಾಲಿನ್ಯತೆಯು ಹೆಚ್ಚಾಗಿದೆ. ಇದಕ್ಕೆ ಗಣಿಗಾರಿಕೆ, ಗಣಿ ಕೈಗಾರಿಕೆಗಳ ರಾಸಾಯನಿಕತೆಯು ನೀರಿನಲ್ಲಿ ವಿಲೀನಗೊಂಡು ನೀರು ಮಾಲಿನ್ಯವಾಗಿ ಪರಿವರ್ತನೆಗೊಂಡು ನೀರಿನ ಗುಣಮಟ್ಟ ಕಡಿಮೆಯಾಗಲು ಕಾರಣವಾಗಿರಬಹುದು. ಗಣಿ ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ಗುಣಮಟ್ಟ ಯಾವ ರೀತಿಯಾದಾಗಿದೆ? ಎಂಬ ಅಂಶವನ್ನು ಅರಿಯಲು ಕುಟುಂಬಗಳಿಗೆ ಪ್ರಶ್ನೆ ಕೇಳಿದಾಗ ಗಣಿ ವಲಯ ಸಂಡೂರು, ಬಳ್ಳಾರಿ, ಹೊಸಪೇಟೆ ಗ್ರಾಮೀಣ ಪ್ರದೇಶದ ೨೭೦ ಕುಟುಂಬಗಳಲ್ಲಿ ೧೦೪ ಕುಟುಂಬಗಳು ಶೇ.೩೧.೧೫ರಷ್ಟು ಕುಡಿಯುವ ನೀರು ಗುಣಮಟ್ಟದಾಗಿದ್ದು, ೧೬೬ ಕುಟುಂಬಗಳು ಶೇ.೬೧.೪೮ರಷ್ಟು ಕುಡಿಯುವ ನೀರು ಗುಣಮಟ್ಟದಾಗಿಲ್ಲ ಎಂಬ ಮಾಹಿತಿ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬದವರು ನೀರು ಗುಣಮಟ್ಟದಾಗಿರಲು ಶೇ.೬೧.೪೮ ಗಣಿಗಾರಿಕೆಯೆ ಪ್ರಮುಖವಾದ ಕಾರಣವಾಗಿದೆ. ಗಣಿಗಾರಿಕೆಯಿಂದ ಉಂಟಾಗುವ ಮಾಲಿನ್ಯ, ಗಣಿ ಧೂಳು, ಗಡಸು ನೀರು, ಗಣಿ ತಾಜ್ಯಗಳೇ ಕಾರಣಗಳಾಗಿವೆ. ಹೀಗೆ ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ಗುಣಮಟ್ಟದಾಗಿಲ್ಲದಿರುವುದು ಶೋಚನಿಯವಾಗಿದೆ

**೩.೮.೫ ಕುಟುಂಬಗಳು ಹೊಂದಿರುವ ಶೌಚಾಲಯ**

ಗಣಿ ಕೇಂದ್ರಿಕೃತ ಸುತ್ತ ಮುತ್ತಲ್ಲಿರುವ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಶೌಚಾಲಯ ಪ್ರಮಾಣವು ಉತ್ತಮ ನೈರ್ಮಲ್ಯೀಕರಣವನ್ನು ಪುಷ್ಠಿಕರಿಸುವ ಅಂಶವಾಗಿದೆ. ಶೌಚಾಲಯಕ್ಕೆ ಸಂಬಂಧಿಸಿದಂತೆ ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ವಲಯದಲ್ಲಿ ಶೌಚಾಲಯದ ನಿರ್ಮಾಣವನ್ನು ಹೊಂದಿರುವ ಗ್ರಾಮೀಣ ಭಾಗದ ಕುಟುಂಬಗಳನ್ನು ಸಮೀಕ್ಷೆ ಒಳಪಡಿಸಿದಾಗ ಕುಟುಂಬಗಳು ಹೊಂದಿರುವ ಶೌಚಾಲಯದ ಪ್ರಮಾಣ ಹಾಗೂ ಈ ಶೌಚಾಲಯವನ್ನು ಗಣಿಗಾರಿಕೆ ಪೂರ್ವದಲ್ಲಿ, ಗಣಿ ಅವಧಿಯಲ್ಲಿ, ಗಣಿಗಾರಿಕೆ ಸ್ಥಗಿತದ ನಂತರದಲ್ಲಿ ನಿರ್ಮಾಣ ಮಾಡಲಾಗಿದೆಯೇ ಎಂಬ ಅಂಶದ ಕುರಿತು ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದ ಪಲಿತಾಂಶದ ಅಂಕಿ–ಅಂಶಗಳನ್ನು ಕೋಷ್ಟಕ ೩.೩೪ರಲ್ಲಿ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ

**ಕೋಷ್ಟಕ ೩.೩೪ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೌಚಾಲಯ ಹೊಂದಿರುವ ಕುಟುಂಬಗಳ ಪ್ರಮಾಣ.**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಶೌಚಾಲಯ ಇದೆಯಾ | | | | | | |
| | ಹೌದು | ೬೯ | ೭೬.೬೬ | ೪೩ | ೪೭.೭೭ | ೪೮ | ೫೩.೩೪ |
| | ಇಲ್ಲ | ೨೧ | ೨೩.೩೪ | ೪೭ | ೫೨.೨೩ | ೪೨ | ೪೬.೬೬ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಶೌಚಾಲಯ ನಿರ್ಮಾಣವನ್ನು ಮಾಡಿದ್ದು | | | | | | |
| | ಸ್ವಂತ | ೩೩ | ೪೭.೮೩ | ೧೮ | ೪೧.೮೬ | ೨೬ | ೫೪.೧೬ |
| | ಸರ್ಕಾರದ ಅನುಧಾನ | ೩೬ | ೫೨.೧೭ | ೨೫ | ೫೮.೧೪ | ೨೨ | ೪೫.೮೪ |
| | ಒಟ್ಟು | ೬೯ | ೧೦೦ | ೪೩ | ೧೦೦ | ೪೮ | ೧೦೦ |
| ೦೩ | ಶೌಚಾಲಯ ಯಾವಾಗ ಕಟ್ಟಿಸಿದ್ದು | | | | | | |
| | ಗಣಿಗಾರಿಕೆಯ ಪೂರ್ವ | ೨೪ | ೩೪.೭೮ | ೧೪ | ೩೨.೫೫ | ೧೬ | ೩೩.೩೩ |
| | ಗಣಿಗಾರಿಕೆ ಅವಧಿಯಲ್ಲಿ | ೨೮ | ೪೦.೫೯ | ೧೭ | ೩೯.೫೩ | ೧೯ | ೩೯.೫೮ |
| | ಗಣಿಗಾರಿಕೆ ಸ್ಥಗಿತದ ನಂತರ | ೧೭ | ೨೪.೭೮ | ೧೨ | ೨೭.೯೨ | ೧೩ | ೨೭.೦೯ |
| | ಒಟ್ಟು | ೬೯ | ೧೦೦ | ೪೩ | ೧೦೦ | ೪೮ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದಲ್ಲಿ ತಾಲ್ಲೂಕುವಾರು ಶೌಚಾಲಯವನ್ನು ಹೊಂದಿರುವ ಕುಟುಂಬಗಳ ಪ್ರಮಾಣವನ್ನು ಕ್ರಸಂ. ಒಂದರಲ್ಲಿ ತೋರಿಸಲಾಗಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳು ಶೇ.೭೬.೬೬ರಷ್ಟು ಶೌಚಾಲಯವನ್ನು ಹೊಂದಿದ್ದರೆ, ಶೇ.೨೩.೩೪ರಷ್ಟು ಶೌಚಾಲಯವನ್ನು ಹೊಂದಿರದ ೨೧ ಕುಟುಂಬಗಳಾಗಿವೆ. ಶೌಚಾಲಯವನ್ನು ಹೊಂದಿರುವ ಕುಟುಂಬಗಳ ಶೇಕಾಡವಾರು ಹೆಚ್ಚಿನ ಪ್ರಮಾಣದಲ್ಲಿದ್ದು, ಕಡಿಮೆ ಶೌಚಾಲಯ ಹೊಂದಿರದ ಕುಟುಂಬಗಳಿಗಿಂತ ಅಧಿಕ ಪ್ರಮಾಣದಲ್ಲಿದೆ. ಶೌಚಾಲಯವನ್ನು ಸ್ವಂತ ಕಟ್ಟಿಸದ್ದ ಅಥವಾ ಸರ್ಕಾರದ ಅನುಧಾನ ಸಹಾಯದಿಂದ ಕಟ್ಟಿಸಿದ್ದಾರೆ ಎಂಬ ಪ್ರಶ್ನೆಗೆ ಈ ವಲಯಗಳಲ್ಲಿ ಪ್ರತಿಶತವಾಗಿ ಕುಟುಂಬಗಳ ಶೇ.೪೭.೮೩ರಷ್ಟು ಸ್ವಂತವಾಗಿ ಶೌಚಾಲಯವನ್ನು ನಿರ್ಮಾಣ ಮಾಡಿದರೆ, ಶೇ.೫೨.೧೭ರಷ್ಟು ಕುಟುಂಬಗಳು ಸರ್ಕಾರದ ಅನುಧಾನದ ಸಹಾಯದಿಂದ ಶೌಚಾಲಯಗಳನ್ನು ನಿರ್ಮಿಸಿರುವ ಕುಟುಂಬಗಳು ಕಂಡು ಬರುತ್ತದೆ. ಬಹುಮುಖ್ಯವಾಗಿ ಈ ಕುಟುಂಬಗಳು ಶೌಚಾಲಯ ನಿರ್ಮಾಣ ಮಾಡಿದ್ದು ಯಾವಾಗ? ಎಂಬ ಪ್ರಶ್ನೆಗೆ ಗಣಿ ವಲಯದ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲಿ ಶೇ.೩೪.೭೮ರಷ್ಟು, ಗಣಿಗಾರಿಕೆಯ ಅವಧಿಯಲ್ಲಿ ಶೇ.೪೦.೫೯ರಷ್ಟು, ಗಣಿಗಾರಿಕೆಯ ಸ್ಥಗಿತತೆಯ ನಂತರ ಶೇ.೨೪.೭೮ರಷ್ಟು ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿದೆ. ಇದರಲ್ಲಿ ಶೌಚಾಲಯ ನಿರ್ಮಾಣ ಮಾಡಿರುವುದು ಗಣಿಗಾರಿಕೆಯ ಅವಧಿಯಲ್ಲೇ ಹೆಚ್ಚು ಪ್ರಮಾಣದಲ್ಲಿ ಕಂಡು ಬರುತ್ತದೆ. ಇದು ಗಣಿಗಾರಿಕೆಯ ವರಮಾನದ ಏರಿಕೆಯಿಂದ ಉಂಟಾಗಿರಬಹುದಾಗಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೌಚಾಲಯವನ್ನು ಹೊಂದಿರುವ ಕುಟುಂಬಗಳ ಪ್ರಮಾಣ

ಶೇ.೪೭.೭೭ರಷ್ಟಿದ್ದರೇ, ಶೌಚಾಲಯವನ್ನು ಹೊಂದಿರದ ಕುಟುಂಬಗಳು ಶೇ.೫೨.೨೩ರಷ್ಟು ಇರುವುದು ಕಂಡು ಬರುತ್ತದೆ. ಈ ವಲಯಗಳಲ್ಲಿ ಶೌಚಾಲಯವನ್ನು ಹೊಂದಿರುವ ಕುಟುಂಬಗಳಿಗಿಂತ ಶೌಚಾಲಯವನ್ನು ಹೊಂದಿರದ ಕುಟುಂಬಗಳು ಶೇ.೨೨.೫೫ರಷ್ಟು ಅಧಿಕ ಪ್ರಮಾಣದಲ್ಲಿ ಇದ್ದಾರೆ. ಶೌಚಾಲಯವನ್ನು ಹೊಂದಿರುವ ಕುಟುಂಬಗಳಲ್ಲಿ ಶೇ.೪೧.೮೬ರಷ್ಟು ಶೌಚಾಲಯವನ್ನು ಸ್ವಂತ ವೆಚ್ಚದಿಂದ ನಿರ್ಮಾಣ ಮಾಡಿದರೇ, ಶೇ.೫೮.೧೪ರಷ್ಟು ಶೌಚಾಲಯವನ್ನು ಸರ್ಕಾರದ ಅನುಧಾನದ ಸಹಾಯದಿಂದ ನಿರ್ಮಾಣ ಮಾಡಿರುವ ಕುಟುಂಬಗಳಾಗಿದ್ದು, ಇದು ಹೆಚ್ಚಿನ ಪ್ರಮಾಣದಲ್ಲಿದೆ.ಈ ಕುಟುಂಬಗಳು ಶೌಚಾಲಯವನ್ನು ಗಣಿಗಾರಿಕೆಯ ಪೂರ್ವದಲ್ಲಿ ಶೇ.೩೨.೫೫ರಷ್ಟು, ಗಣಿಗಾರಿಕೆಯ ಅವದಿಯಲ್ಲಿ ಶೇ.೩೯.೫೩ರಷ್ಟು, ಗಣಿಗಾರಿಕೆಯ ಸ್ಥಗಿತತೆಯ ನಂತರದಲ್ಲಿ ಶೇ.೨೭.೯೨ರಷ್ಟು ಪ್ರಮಾಣದ ಶೌಚಾಲಯಗಳನ್ನು ನಿರ್ಮಾಣ ಮಾಡಿದ್ದಾರೆ. ಅಂದರೆ ಇಲ್ಲಿ ಗಣಿಗಾರಿಕೆಯ ಅವಧಿಯಲ್ಲೇ ಶೌಚಾಲಯ ನಿರ್ಮಾಣವಾಗಿರುವ ಕುಟುಂಬಗಳ ಪ್ರಮಾಣ ಹೆಚ್ಚಾಗಿದ್ದು, ಇದು ಗಣಿಗಾರಿಕೆಯ ವರಮಾನದಲಿನ ಏರಿಕೆಯಿಂದ ಉಂಟಾಗಿರಬಹುದಾಗಿದೆ. ಹಾಗೆಯೇ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೌಚಾಲಯ ಹೊಂದಿರುವ ಕುಟುಂಬಗಳು ಶೇ.೫೩.೩೪ರಷ್ಟಿದ್ದರೆ, ಶೌಚಾಲಯವನ್ನು ಹೊಂದಿರದೇ ಇರುವ ಕುಟುಂಬಗಳ ಶೇ.೪೬.೬೬ರಷ್ಟಿರುವುದು ಕಂಡುಬಂದಿದ್ದು, ಇದರ ಪ್ರಮಾಣ ಕಡಿಮೆಯಿದೆ. ಶೌಚಾಲಯವನ್ನು ಹೊಂದಿರುವ ಕುಟುಂಬಗಳು ಶೇ.೮೪.೧೬ರಷ್ಟು ಶೌಚಾಲಯವನ್ನು ಸ್ವಂತ ವೆಚ್ಚದಿಂದ ನಿರ್ಮಾಣ ಮಾಡಿದ್ದಾರೆ. ಇನ್ನುಳಿದ ಶೇ.೪೫.೮೪ರಷ್ಟು ಕುಟುಂಬಗಳು ಸರ್ಕಾರದ ಅನುದಾನ ಪಡೆದು ಶೌಚಾಲಯವನ್ನು ನಿರ್ಮಾಣ ಮಾಡಿದ್ದಾರೆ. ಸರ್ಕಾರದ ಅನುಧಾನ ಪಡೆದು ಶೌಚಾಲಯ ನಿರ್ಮಿಸಿದ ಕುಟುಂಬಗಳಿಗೆ ಸರ್ಕಾರದ ಅನುಧಾನ ಸಾಕಾಗದೇ ಇರುವುದು ಸಹ ಕಂಡು ಬಂದಿದೆ. ಹೀಗೆ ನಿರ್ಮಾಣ ಮಾಡಿರುವ ಶೌಚಾಲಯವನ್ನು ಈ ಕುಟುಂಬಗಳು ಗಣಿಗಾರಿಕೆಯ ಯಾವ ಅವಧಿಯಲ್ಲಿ ನಿರ್ಮಾಣ ಮಾಡಿದ್ದಾರೆ ಎಂಬ ಸಂಗತಿಯನ್ನು ತಿಳಿಯುವುದು ಅವಶ್ಯಕ. ಹಾಗಾಗಿ ಈ ವಲಯದ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲೇ ಶೇ.೩೩.೩೩ರಷ್ಟು, ಗಣಿಗಾರಿಕೆ ನಡೆದಾಗ ಶೇ ೩೯.೫೮ರಷ್ಟು, ಗಣಿಗಾರಿಕೆಯ ಸ್ಥಗಿತತೆಯ ನಂತರ ಶೇ.೨೭.೦೯ರಷ್ಟು ಶೌಚಾಲಯವನ್ನು ನಿರ್ಮಾಣ ಮಾಡಿದ್ದಾರೆ. ಒಟ್ಟಾರೆ ಗಣಿ ವಲಯದಲ್ಲಿ ಗಣಿಗಾರಿಕೆ ಅವಧಿಯಲ್ಲೇ ಹೆಚ್ಚಾಗಿ ಶೌಚಾಲಯ ನಿರ್ಮಾಣ ಮಾಡಿರುವುದು ಕಂಡು ಬರುತ್ತದೆ. ಇದು ಗಣಿಗಾರಿಕೆಯ ವರಮಾನದಿಂದ ಆಗಿರುವ ಬದಲಾವಣೆಯೇ ಹೊರೆತು ಸಹಜ ವರಮಾನದಿಂದ ಆಗಿರುವ ಬದಲಾವಣೆ ಅಲ್ಲ.

**೩.೯ ಕುಟುಂಬಗಳ ವಸತಿ ವ್ಯವಸ್ಥೆ ಮತ್ತು ಸೌಕರ್ಯ**

ಯೋಗ್ಯವಾಗಿರುವ ವಸತಿಯು, ವ್ಯಕ್ತಿಗಳಿಗೆ ನೈಸರ್ಗಿಕ ಮತ್ತು ಆರ್ಥಿಕ ಹೊಡೆತಗಳನ್ನು ತಡೆದುಕೊಳ್ಳುವ ಸಾಮರ್ಥ್ಯವಿದೆ. ಇದರ ಅರ್ಥ ಕೇವಲ ಕುಟುಂಬಗಳನ್ನು ನೈಸರ್ಗಿಕ ವಿಕೋಪಗಳಿಂದ ರಕ್ಷಿಸುವುದಲ್ಲ. ಆದರೆ ವಸತಿಯು ಜನರಿಗೆ ಒಂದು ಇರುವಿಕೆಯನ್ನು ಕೊಟ್ಟು, ಮಾನಸಿಕ ಶಕ್ತಿಯನ್ನು ನೀಡಿ, ವಿಕೋಪಗಳ ವಿರುದ್ಧ ಹೋರಾಡುವ ಮತ್ತು ಆಶಾವಾದಿಯಾಗಿ ಬದುಕುವ ತಳಪಾಯವನ್ನು ಒದಗಿಸುತ್ತದೆ. ವಸತಿಯು ವ್ಯಕ್ತಿಗಳಿಗೆ ಉನ್ನತ ಮಟ್ಟದ ಮೂಲ ಕಾರ್ಯನಿರ್ವಹಣೆಗೆ ಅವಕಾಶಗಳನ್ನು ನೀಡುತ್ತದೆ. ಇದನ್ನು ಅರ್ಮತ್ಯ ಸೇನ್ ಅವರ ಸಾಮರ್ಥ್ಯದೊಂದಿಗಿನ ವಿಧಾನವನ್ನು ಉಪಯೋಗಿಸಿ, ಇವಾಮಜೆಲಿಸ್ತಾ ಅವರು ಸಮರ್ಪಕವಾಗಿ ಹೀಗೆ ಸಾರವನ್ನು ನೀಡುತ್ತಾರೆ. ವಸತಿಯು ಆಶ್ರಯದ ಅಗತ್ಯತೆಯನ್ನು ಪೂರೈಸುವ ಕಾರಣ ಅದು ನಮ್ಮನ್ನು ಪ್ರಕ್ಷುಬ್ಧ ವಾತಾವರಣಗಳಂತಹ ಸನ್ನಿವೇಶಗಳಿಂದ ರಕ್ಷಿಸುತ್ತದೆ. ಆದರೆ, ಅದೇ ಸಮಯದಲ್ಲಿ ಅದು ನಮ್ಮಗೆ ವಿಶ್ರಾಂತಿ ಒದಗಿಸಿ ನಮ್ಮ ಸಾಮರ್ಥ್ಯಗಳನ್ನು ಹೆಚ್ಚಿಸುತ್ತದೆ. ನಮಗೆ ಸೇರಿದ ವಸ್ತುಗಳನ್ನು ಸಂಗ್ರಹಿಸಲು ಮತ್ತು ನಮ್ಮನ್ನು ನಾವು ಶುಚಿಯಾಗಿಡಲು ಅನುವು ಮಾಡಿಕೊಡುತ್ತದೆ. ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳಿಗೆ, ನಮ್ಮಲ್ಲಿನ ಸೃಜನಶೀಲತೆಗೆ, ನಮ್ಮನ್ನು ಉಲ್ಲೇಖಿಸಲು, ಕೆಲಸ ಕೈಗೊಳ್ಳಲು ಅಥವಾ ವಿಶ್ರಾಂತಿಗೆ ಕಾಲಾವಕಾಶವನ್ನು ಒದಗಿಸುತ್ತದೆ. ಮತ್ತು ಒಂದು ಸಮುದಾಯಕ್ಕೆ ಸೇರಿದ ಸಂಕೇತವನ್ನು ನೀಡುತ್ತದೆ. ಹಾಗೂ ರಾಜಕೀಯವಾಗಿ

ಭಾಗವಹಿಸಲು ಅನುವು ಮಾಡುತ್ತದೆ. ಆದ್ದರಿಂದ, ವಸತಿಯು ಕಾರ್ಯಗಳನ್ನು ಕೈಗೊಳ್ಳಲು ಅಥವಾ ಮನೆ ಎಂದು ಅರ್ಥೈಸುವ ಹಾಗೆ ಯೋಗಕ್ಷೇಮ ಒದಗಿಸುತ್ತದೆ. ವಸತಿಯನ್ನು ನಿರಾಕರಿಸುವುದರಿಂದ ಜನರ ಯೋಗ್ಯತೆಯನ್ನು ಕಡಿಮೆಗೊಳಿಸಿದಂತಾಗುತ್ತದೆ. ತತ್ಪರಿಣಾಮವಾಗಿ ಜನರ ಜೀವನ ಮಟ್ಟದ ಮೇಲೂ ಪರಿಣಾಮ ಬೀರುತ್ತದೆ.

ವಸತಿಗೆ ಸಂಬಂಧಿಸಿದಂತೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ವಸತಿ ರಹಿತ ಕುಟುಂಬಗಳಾಗಿವೆಯೋ ಅಥವಾ ವಸತಿ ಸಹಿತ ಕುಟುಂಬಗಳಾಗಿವೆಯಾ? ಎಂಬ ಅಂಶವನ್ನು ಅರಿಯುವ ಅಗತ್ಯತೆ ಇದೆ. ಗಣಿ ಗ್ರಾಮೀಣ ವಲಯದಲ್ಲಿ ಕುಟುಂಬಗಳಿಗೆ ವಾಸ ಮಾಡಲು ಮನೆ ಸೌಕಾರ್ಯ ಇದೆಯೇ, ಮನೆ ವಿಸ್ತೀರ್ಣ, ಮನೆಯಲ್ಲಿರುವ ಕೊಠಡಿಗಳ ಸಂಖ್ಯೆ, ಸ್ನಾನದ ಗೃಹ, ವಿದ್ಯುತ್ ಸೌಲಭ್ಯ, ಕುಟುಂಬಗಳು ಹೊಂದಿರುವ ಮನೆಯ ಶೈಲಿ, ಮನೆ ನಿರ್ಮಾಣ ಮಾಡಲು ವಸತಿ ಯೋಜನೆ ಸೌಕರ್ಯ ಸರ್ಕಾರದಿಂದ ಲಭಿಸಿದೆಯಾ, ಹಾಗೂ ಕುಟುಂಬಗಳು ಹೊಂದಿರುವ ನಿವೇಶನಗಳ ಕುರಿತಾದ ಮಾಹಿತಿಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಕುಟುಂಬಗಳು ಹೊಂದಿರುವ ವಸತಿಗೆ ಸಂಬಂಧಿಸಿದ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆ ಒಳಪಡಿಸಿದಾಗ ಬಂದಂತಹ ಫಲಿತಾಂಶವನ್ನು ಅಂಕಿ–ಅಂಶಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಿ ವಿಶ್ಲೇಷಣೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೫ ಕುಟುಂಬಗಳು ಹೊಂದಿರುವ ವಸತಿಯ ಪ್ರಮಾಣ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ವಾಸ ಮಾಡಲು ಮನೆ ಇದೆಯಾ? | | | | | | |
| | ಹೌದು | ೮೬ | ೯೫.೫೬ | ೮೪ | ೯೩.೩೪ | ೮೭ | ೯೬.೬೬ |
| | ಇಲ್ಲ | ೦೪ | ೦೪.೪೪ | ೦೬ | ೦೬.೬೬ | ೦೩ | ೦೩.೩೪ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಇದೆಯಾದರೆ | | | | | | |
| | ಸ್ವಂತ ಮನೆ | ೮೬ | ೯೫.೫೬ | ೮೪ | ೯೩.೩೪ | ೮೭ | ೯೬.೬೬ |
| | ಬಾಡಿಗೆ ಮನೆ | ೦೪ | ೦೪.೪೪ | ೦೬ | ೦೬.೬೬ | ೦೩ | ೦೩.೩೪ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೩ | ಮನೆಯ ವಿಸ್ತೀರ್ಣ | | | | | | |
| | ೧೦–೨೦ ಚ.ಮೀ. | – | – | ೦೪ | ೦೪.೪೪ | – | – |
| | ೧೫–೨೦ ಚ.ಮೀ. | ೩೮ | ೪೨.೨೨ | ೩೦ | ೩೩.೩೫ | ೪೧ | ೪೫.೫೫ |
| | ೨೦–೩೦ ಚ.ಮೀ. | ೩೨ | ೩೫.೫೫ | ೨೫ | ೨೭.೭೭ | ೨೬ | ೨೮.೮೮ |
| | ೩೦–೪೦ ಚ.ಮೀ.. | ೨೦ | ೨೨.೨೩ | ೩೧ | ೩೪.೪೪ | ೨೩ | ೨೫.೫೭ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೪ | ಮನೆಯ ಕೊಠಡಿ ಸಂಖ್ಯೆ | | | | | | |
| | ೨ | ೪೧ | ೪೫.೫೫ | ೩೪ | ೩೭.೭೭ | ೨೩ | ೨೫.೫೬ |
| | ೩ | ೩೨ | ೩೫.೫೭ | ೩೯ | ೪೩.೩೫ | ೪೩ | ೪೭.೭೭ |
| | ೪ | ೧೭ | ೧೮.೮೮ | ೧೭ | ೧೮.೮೮ | ೨೪ | ೨೬.೬೬ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |

ಮೂಲ : ಕ್ಷೇತ್ರ ಕಾರ್ಯದ ಮೂಲ

ಕೋಷ್ಟಕ ೩.೩೫ರಲ್ಲಿ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ವಾಸ ಮಾಡಲು ಇರುವ ಮನೆಯ ಪ್ರಮಾಣ, ಸ್ವಂತ ಮನೆ ಅಥವಾ ಬಾಡಿಗೆ ಮನೆಯಲ್ಲಿ ವಾಸ ಮಾಡವ ಶೇಕಡ, ಮನೆಯ ವಿಸ್ತೀರ್ಣದ ಪ್ರಮಾಣ, ಮನೆಯ ಕೊಠಡಿ ಸಂಖ್ಯೆಯ ಪ್ರಮಾಣ ಹೀಗೆ ನಾಲ್ಕು ವರ್ಗಗಳಲ್ಲಿ ವಿಂಗಡಿಸಿರುವ ಶೇಕಡವಾರು ತೋರಿಸುತ್ತದೆ. ಗಣಿ ವಲಯ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೮೬ ಕುಟುಂಬಗಳು ಶೇ.೯೫.೫೬ರಷ್ಟು ಮನೆ ಸಹಿತ ಪ್ರಮಾಣವಿದ್ದರೇ, ೧೪ ಕುಟುಂಬಗಳು ಶೇ.೦೪.೪೪ರಷ್ಟು ಮನೆ ರಹಿತ ಕುಟುಂಬಗಳಾಗಿವೆ. ಮನೆ ಇರುವ ೮೫ ಕುಟುಂಬಗಳಲ್ಲಿ ಶೇ ೯೫.೫೫ರಷ್ಟು ಸ್ವಂತ ಮನೆಯಿದ್ದು, ಶೇ.೦೪.೪೪ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದಾರೆ. ಮನೆಯ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ೧೫-೨೦ ಚದರ ಮೀಟರ್ ಮನೆಯ ವಿಸ್ತೀರ್ಣ ಹೊಂದಿದ ಕುಟುಂಬಗಳು ಶೇ.೪೨.೨೨ರಷ್ಟಿದ್ದು, ಹೆಚ್ಚಿನ ಪ್ರಮಾಣದಲ್ಲಿದೆ. ೩೦-೪೦ ಚದರ ಮೀಟರ್ ಹೊಂದಿದ ಕುಟುಂಬಗಳು ಶೇ.೨೨.೨೨ರಷ್ಟಿದ್ದು, ತಾಲೂಕಿನಲ್ಲಿ ಕಡಿಮೆ ಪ್ರಮಾಣದ ಮನೆಯ ವಿಸ್ತೀರ್ಣ ಹೊಂದಿರುವ ಕುಟುಂಬಗಳಾಗಿವೆ. ಈ ಕುಟುಂಬಗಳ ಮನೆಯ ಕೊಠಡಿ ಸಂಖ್ಯೆಯು ಪ್ರಮಾಣವು ೨ ಕೋಣೆಯ ಕೊಠಡಿ ಸಂಖ್ಯೆ ಹೊಂದಿರುವ ೪೧ ಕುಟುಂಬಗಳು ಶೇ.೪೫.೫೫ರಷ್ಟಿದ್ದು ಹೆಚ್ಚಿನ ಪ್ರಮಾಣದಲ್ಲಿದ್ದರೆ, ಮನೆಯ ೪ ಕೋಣೆ ಸಂಖ್ಯೆ ಹೊಂದಿರುವ ೧೭ ಕುಟುಂಬಗಳು ಶೇ.೧೮.೮೮ರಷ್ಟಿದ್ದು, ಕಡಿಮೆ ಪ್ರಮಾಣದ ಕೊಠಡಿ ಸಂಖ್ಯೆಯನ್ನು ಹೊಂದಿರುವ ಕುಟುಂಬಗಳಾಗಿವೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ವಾಸ ಮಾಡಲು ಮನೆ ಹೊಂದಿರುವವರು ಶೇ.೯೩.೩೪ರಷ್ಟು ಪ್ರಮಾಣವಿದ್ದು, ವಾಸ ಮಾಡಲು ಮನೆ ಇಲ್ಲದ ಕುಟುಂಬಗಳು ಶೇ.೦೬.೬೬ರಷ್ಟು ಪ್ರಮಾಣವಿದೆ. ವಾಸ ಮಾಡಲು ಮನೆ ಇಲ್ಲದ ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸವಾಗಿದ್ದು; ಬಾಡಿಗೆ ಮನೆಯಲ್ಲಿರುವ ಕುಟುಂಬಗಳು ಶೇ.೦೪.೪೪ರಷ್ಟಿದ್ದು, ಸ್ವಂತ ಮನೆಯನ್ನು ಹೊಂದಿರುವ ಕುಟುಂಬಗಳು ಶೇ.೯೬.೬೬ರಷ್ಟಿದ್ದಾರೆ. ಮನೆಯ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಈ ಗಣಿ ಗ್ರಾಮೀಣ ಪ್ರದೇಶದಲ್ಲಿ ೩೦-೪೦ ಚದರ ಮೀಟರ್ ಮನೆ ವಿಸ್ತೀರ್ಣ ಹೊಂದಿರುವ ಕುಟುಂಬಗಳು ಶೇ ೩೪.೪೪ರಷ್ಟಿದ್ದು, ಹೆಚ್ಚಿನ ಪ್ರಮಾಣದ ಮನೆ ವಿಸ್ತೀರ್ಣ ಹೊಂದಿದ ಕುಟುಂಬಗಳಾದರೇ, ೧೦-೨೦ ಚದರ ಮೀಟರ್ ಮನೆ ವಿಸ್ತೀರ್ಣ ಹೊಂದಿರುವ ಕುಟುಂಬಗಳು ಶೇ.೦೪.೪೪ರಷ್ಟಿದ್ದು, ಮನೆ ವಿಸ್ತೀರ್ಣದಲ್ಲಿ ಕಡಿಮೆ ವಿಸ್ತೀರ್ಣ ಹೊಂದಿದ ಕುಟುಂಬಗಳಾಗಿವೆ. ವಾಸ ಮಾಡಲು ಮನೆ ಹೊಂದಿರುವ ಕುಟುಂಬಗಳ ಮನೆಯ ೩ ಕೊಠಡಿ ಸಂಖ್ಯೆ ಹೊಂದಿರುವ ಕುಟುಂಬಗಳು ಶೇ.೪೩.೩೫ರಷ್ಟಿದ್ದು, ಹೆಚ್ಚಿನ ಕೊಠಡಿ ಸಂಖ್ಯೆಯನ್ನು ಹೊಂದಿರುವ ಕುಟುಂಬಗಳಾಗಿವೆ. ಆದರೆ ಅತಿ ಕಡಿಮೆ ಕೊಠಡಿ ಸಂಖ್ಯೆ ಹೊಂದಿರುವ ಕುಟುಂಬಗಳು ಶೇ.೧೮.೮೮ರಷ್ಟಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ವಾಸಮಾಡಲು ಮನೆ ಇರುವವರು ಶೇ.೯೬.೬೬ರಷ್ಟಿದ್ದರೇ, ವಾಸ ಮಾಡಲು ಮನೆ ಇರದ ಕುಟುಂಬಗಳು ಶೇ.೦೩.೩೪ರಷ್ಟಿರುವುದು ಕಂಡುಬಂದಿದ್ದು ಇವರು ಬಾಡಿಗೆ ಮನೆಯಲ್ಲಿ ವಾಸವಾಗಿದ್ದಾರೆ. ಮನೆಯ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ೧೫-೨೦ ಚದರ ಮೀಟರ್ ಮನೆ ವಿಸ್ತೀರ್ಣ ಹೊಂದಿದ ಕುಟುಂಬಗಳು ಶೇ.೪೫.೫೫ರಷ್ಟಿದ್ದರೇ, ೩೦-೪೦ ಚದರ ಮೀಟರ್ ಮನೆಯ ವಿಸ್ತೀರ್ಣ ಹೊಂದಿರುವ ಕುಟುಂಬಗಳು ಶೇ.೨೫.೫೫ರಷ್ಟಿದೆ. ಇದು ಮನೆಯ ವಿಸ್ತೀರ್ಣದಲ್ಲಿ ಕಡಿಮೆ ಪ್ರಮಾಣ ಹೊಂದಿರುವ ಕುಟುಂಬಗಳಾಗಿವೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಮನೆಯಲ್ಲಿ ವಾಸ ಮಾಡಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಮನೆಯ ವಿಸ್ತೀರ್ಣ ಮತ್ತು ಮನೆಯ ಕೋಠಡಿ ಸಂಖ್ಯೆಯು ಕಡಿಮೆ ಇದ್ದು, ಕುಟುಂಬ ಸದಸ್ಯರ ಸಂಖ್ಯೆಯ ಹೆಚ್ಚಳವು ಮನೆಯಲ್ಲಿ ಜಾಗವಿಲ್ಲದೆ ವಸತಿ ಹೂಡಲು ಗ್ರಾಮೀಣ ಪ್ರದೇಶದ ಕುಟುಂಬಗಳ ಸ್ಥಿತಿ ಚಿಂತಜನಕವಾಗಿದೆ.

### ೩.೯.೧ ವಿದ್ಯುತ್ ಸಂಪರ್ಕ ಮತ್ತು ಸೌಕರ್ಯ

ಆಧುನಿಕ ಸಮಾಜದಲ್ಲಿ ವಿದ್ಯುತ್ ಒಂದು ಅಗತ್ಯವಾದ ಮೂಲಗಳಲ್ಲಿ ಒಂದಾಗಿದೆ. ಗ್ರಾಮೀಣ ವಿದ್ಯುದ್ದೀಕರಣ ಕಾರ್ಯಕ್ರಮವು ಸರಿಯಾಗಿ ಹೇಳುವಂತೆ ವಿದ್ಯುತ್ ಆರ್ಥಿಕ ಪ್ರಗತಿ, ಉದ್ಯೋಗ ಸೃಷ್ಟಿ, ಬಡತನ ವಿವರಣೆ ಮತ್ತು ಮಾನವ ಅಭಿವೃದ್ಧಿಗೆ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಪ್ರಚೋದಿಸುವ ಕೊಂಡಿಯಾಗಿದೆ. ವಿದ್ಯುತ್ ಬಹು ಉಪಯೋಗ ಗುಣವನ್ನು ಹೊಂದಿರುವುದರಿಂದ ಅಗತ್ಯ ಮೂಲವಾಗಿದೆ. ವಿದ್ಯುತ್ ಬಡವರ ಮನೆಗಳಲ್ಲಿ ಅಗತ್ಯ ಬೆಳಕನ್ನು ಪಡೆಯುವುದರಿಂದ ಹಿಡಿದು, ನೀರಾವರಿಗೆ ಪಂಪಸೇಟ್ ಬಳಸುವವರೆಗೂ ಕುಡಿಯುವ ನೀರನ್ನು ನಲ್ಲಿಗಳ ಮುಖಾಂತರ ಸರಬರಾಜು ಮಾಡಲು ಅವಶ್ಯಕವಾಗಿರುವುದರಿಂದ ಅದರ ಬಳಕೆ ಬಡವರಲ್ಲಿ ಹಾಗೂ ಅದಕ್ಕಿಂತ ಹೆಚ್ಚಾಗಿ ಗ್ರಾಮೀಣ ಪ್ರದೇಶಗಳ ಕುಟುಂಬಗಳಲ್ಲಿ ವಿದ್ಯುತ್ ಉಪಯೋಗ ಹೆಚ್ಚಾಗುತ್ತಿದೆ. ೨೦೧೧ರ ಜನಗಣತಿಯ ಪ್ರಕಾರ ವಿದ್ಯುತ್ ಸೌಲಭ್ಯ ಹೊಂದಿರುವಗಳು ಜಿಲ್ಲೆಯಲ್ಲಿ ಶೇ.೯೧.೪೨ರಷ್ಟಿದ್ದು, ಶೇ.೮.೫೮ರಷ್ಟು ವಿದ್ಯುತ್ ಹೊಂದಿರದ ಕುಟುಂಬಗಳಿವೆ. ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯಗಳಲ್ಲಿ ವಿದ್ಯುತ್ ಹೊಂದಿರುವ ಹಾಗೂ ಹೊಂದಿರದ ಕುಟುಂಬಗಳನ್ನು ನೋಡಿದಾಗ ಬಳ್ಳಾರಿ ತಾಲ್ಲೂಕಿನ ವಿದ್ಯುತ್ ಸೌಲಭ್ಯ ಹೊಂದಿರದ ಕುಟುಂಬಗಳು ಶೇ.೯೪.೬೧ರಷ್ಟಿದ್ದರೇ, ವಿದ್ಯುತ್ ಹೊಂದದೆ ಇರುವ ಕುಟುಂಬಗಳು ಶೇ.೫.೩೯ರಷ್ಟಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ವಿದ್ಯುತ್ ಸೌಲಭ್ಯ ಹೊಂದಿದ ಕುಟುಂಬಗಳು ಶೇ.೯೨.೯೬ರಷ್ಟಿದ್ದು, ವಿದ್ಯುತ್ ಹೊಂದದೇ ಇರುವ ಕುಟುಂಬಗಳು ಶೇ ೭.೦೪ರಷ್ಟಿರುವುದು ಕಾಣಸಿಗುತ್ತದೆ. ಹಾಗೆಯೇ ಸಂಡೂರು ತಾಲ್ಲೂಕಿನಲ್ಲಿ ಶೇ ೯೨.೩೮ರಷ್ಟು ವಿದ್ಯುತ್ ಸೌಲಭ್ಯ ಹೊಂದಿರುವ ಕುಟುಂಬಳಾಗಿದ್ದು, ಶೇ ೭.೬೨ರಷ್ಟು ವಿದ್ಯುತ್ ಸೌಲಭ್ಯ ಹೊಂದದೆ ಇರುವ ಕುಟುಂಬಗಳಿವೆ. ಈ ವಿದ್ಯುತ್ ಸೌಲಭ್ಯಕ್ಕೆ ಸಂಬಂಧಿಸಿದಂತೆ ಹೊಸಪೇಟೆ, ಸಂಡೂರು, ಬಳ್ಳಾರಿ, ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕುಟುಂಬಗಳಿಂದ ಬಂದ ಫಲಿತಾಂಶವನ್ನು ಈ ಕೆಳಗೆ ಅಂಕಿ–ಅಂಶಗಳಿಂದ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೬ ವಿದ್ಯುತ್ ಸೌಲಭ್ಯ ಹೊಂದಿರುವ ಗಣಿ ವಲಯ ಕುಟುಂಬಗಳ ವಿವರ**

| ಕ್ರ.ಸಂ. | ಪ್ರಶ್ನೆ ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಮನೆಯಲ್ಲಿ ವಿದ್ಯುತ್ ಸೌಲಭ್ಯವಿದೆಯಾ | | | | | | |
| | ಇದೆ | ೮೨ | ೯೧.೧೨ | ೭೮ | ೮೬.೬೬ | ೭೧ | ೭೮.೮೮ |
| | ಇಲ್ಲ | ೦೮ | ೦೮.೮೮ | ೧೨ | ೧೩.೩೪ | ೧೯ | ೨೧.೧೨ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಇದೆಯಾದರೆ ವಿದ್ಯುತ್ ಸೌಲಭ್ಯ ಯಾವ ಬಗೆಯದು | | | | | | |
| | ಭಾಗ್ಯಜ್ಯೋತಿ | ೬೫ | ೭೯.೨೬ | ೫೭ | ೭೩.೦೭ | ೫೯ | ೮೩.೦೯ |
| | ಮೀಟರ್ | ೧೭ | ೨೦.೭೪ | ೨೧ | ೨೬.೯೩ | ೧೨ | ೧೬.೯೧ |
| | ಒಟ್ಟು | ೮೨ | ೧೦೦ | ೭೮ | ೧೦೦ | ೭೧ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ವಿದ್ಯುತ್ ಸೌಲಭ್ಯವನ್ನು ಹೊಂದಿದೆಯೇ ಅಥವಾ ಇಲ್ಲ ಹಾಗೂ ವಿದ್ಯುತ್ ಯಾವ ಬಗೆಯದು ಅಂದರೆ ಕುಟುಂಬಗಳು ಮನೆಯಲ್ಲಿ ವಿದ್ಯುತ್ ಸೌಲಭ್ಯ ಹೊಂದಿರುವುದು

ಭಾಗ್ಯಜ್ಯೋತಿ ಅಥವಾ ಮೀಟರ್ ವಿದ್ಯುತ್ ಸೌಲಭ್ಯಗಳನ್ನು ಹೊಂದಿರುವ ಶೇಕಡವಾರುಗಳನ್ನು ತೋರಿಸುತ್ತದೆ. ಗಣಿ ವಲಯ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಮನೆಯಲ್ಲಿ ವಿದ್ಯುತ್ ಸೌಲಭ್ಯವನ್ನು ಹೊಂದಿರುವ ಶೇ.೯೧.೧೧೨ರಷ್ಟು ೮೨ ಕುಟುಂಬಗಳಿದ್ದು, ಶೇ.೦೮.೮೮ರಷ್ಟು ವಿದ್ಯುತ್ ಸೌಲಭ್ಯವನ್ನು ಹೊಂದಿರದ ೦೮ ಕುಟುಂಬಗಳು ಈ ವಲಯಗಳಲ್ಲಿದೆ. ಕುಟುಂಬಗಳು ಹೊಂದಿರುವ ವಿದ್ಯುತ್ ಸೌಲಭ್ಯಗಳಲ್ಲಿ ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯವನ್ನು ಶೇ.೭೯.೨೬ರಷ್ಟು ೬೫ ಕುಟುಂಬಗಳು ಹೊಂದಿವೆ. ಇನ್ನು ಶೇ.೨೦.೭೪ರಷ್ಟು ೧೭ ಕುಟುಂಬದವರು ಮೀಟರ್ ವಿದ್ಯುತ್ ಸೌಲಭ್ಯಗಳನ್ನು ಬಳಸುತ್ತಿದ್ದಾರೆ. ಇದರಲ್ಲಿ ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯಗಳನ್ನು ಗ್ರಾಮೀಣ ಪ್ರದೇಶದ ಕುಟುಂಬಗಳು ಹೆಚ್ಚಾಗಿ ಹೊಂದಿರುವುದು ಕಂಡು ಬರುತ್ತದೆ. ಸಂಡೂರು ಗ್ರಾಮೀಣ ಪ್ರದೇಶದಲ್ಲಿ ವಿದ್ಯುತ್ ಸೌಲಭ್ಯ ಹೊಂದಿರುವ ಕುಟುಂಬಗಳು ಶೇ.೮೬.೬೬ರಷ್ಟಿದರೇ ಶೇ.೧೩.೩೪ರಷ್ಟು ವಿದ್ಯುತ್ ಸೌಲಭ್ಯವನ್ನು ಹೊಂದಿರದ ಕುಟುಂಬಗಳಾಗಿವೆ. ವಿದ್ಯುತ್ ಸೌಲಭ್ಯ ಹೊಂದಿರುವ ಕುಟಂಬಗಳು ಶೇ.೭೩.೦೭ರಷ್ಟು ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯ ಬಳಸಿಕೊಂಡರೇ, ಶೇ.೨೬.೯೩ರಷ್ಟು ಮೀಟರ್ ವಿದ್ಯುತ್ ಸೌಲಭ್ಯ ಹೊಂದಿರುವ ಕುಟುಂಬಗಳಾಗಿವೆ. ಹಾಗೆಯೇ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೭೮.೮೮ರಷ್ಟು ವಿದ್ಯುತ್ ಸೌಲಭ್ಯವನ್ನು ಹೊಂದಿರುವ ಕುಟುಂಬಗಳಾಗಿದ್ದು, ವಿದ್ಯುತ್ ಸೌಲಭ್ಯ ಹೊಂದಿರದ ಶೇ.೨೧.೧೨ರಷ್ಟು ಕುಟುಂಬಗಳು ಕಂಡು ಬರುತ್ತದೆ. ಕುಟುಂಬಗಳು ಹೊಂದಿರುವ ವಿದ್ಯುತ್ ಸೌಲಭ್ಯಗಳಲ್ಲಿ ಭಾಗ್ಯಜ್ಯೋತಿ ಸೌಲಭ್ಯವು ಶೇ.೮೩.೦೯ರಷ್ಟಿದ್ದರೇ, ಮೀಟರ್ ವಿದ್ಯುತ್ ಸೌಲಭ್ಯವನ್ನು ಹೊಂದಿರುವವರು ಶೇ.೧೬.೯೧ರಷ್ಟು ಕುಟುಂಬಗಳಲ್ಲಿ ಬಳಸಿರುವುದು ಕಾಣಸಿಗುತ್ತದೆ.

**೩.೯.೨ ಪಕ್ಕ ವಸತಿಯುತ ಕುಟುಂಬಗಳು**

ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರುವ ಜನರು ಶಾಂತಿಯಿಂದ ಜೀವನ ಸಾಗಸಲಿಕ್ಕೆ ಮನೆಗಳ ಗುಣಮಟ್ಟವು ಮಹತ್ವದ ಪಾತ್ರವಹಿಸುತ್ತದೆ. ಶಿಥಿಲ ಸ್ಥಿತಿಯಲ್ಲಿರುವ ಮನೆಗಳು ವಸತಿಗೆ ಯೋಗ್ಯಕರವಾಗಿರುವುದಿಲ್ಲ. ಹಾಗಾಗಿ ಪ್ರಸ್ತುತವಾಗಿ ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಉತ್ತಮ ಸ್ಥಿತಿಯ ಮನೆಗಳ ಸ್ಥಿತಿಗತಿಗಳು ಹೇಗಿವೆಂಬುದನ್ನು ಅರಿಯುವ ದೃಷ್ಟಿಕೋನದಿಂದ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಮನೆಯ ವಿವಿಧ ಶೈಲಿಯನ್ನು ತಿಳಿಯಲು ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದಿರುವ ಫಲಿತಾಂಶವನ್ನು ಈ ಕೆಳಗಿನಂತೆ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೭ ಕುಟುಂಬಗಳು ಹೊಂದಿರುವ ಮನೆಯ ಮಾದರಿಯ ಪ್ರಮಾಣ.**

| ಕ್ರಸಂ. | ಮನೆಶೈಲಿ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಮಣ್ಣಿನ ಮನೆ | ೦೭ | ೦೭.೭೭ | ೦೪ | ೦೪.೪೪ | ೧೬ | ೧೭.೭೯ |
| | ಗುಡಿಸಲು ಮನೆ | ೦೬ | ೦೬.೬೮ | ೦೪ | ೦೪.೪೪ | – | – |
| | ಆರ್.ಸಿ.ಸಿ. ಮನೆ | ೧೭ | ೧೮.೮೮ | ೨೩ | ೨೫.೫೬ | ೨೬ | ೨೮.೮೮ |
| | ಸಿಮೆಂಟ್ ಶೀಟಿನ ಮನೆ | ೬೦ | ೬೬.೬೭ | ೫೯ | ೬೫.೫೬ | ೪೮ | ೫೩.೩೩ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ಮಣ್ಣಿನ ಮನೆ, ಗುಡಿಸಲು ಮನೆ, ಆರ್.ಸಿ.ಸಿ. ಮನೆ, ಹಾಗೂ ಸಿಮೆಂಟ್ ಶೀಟಿನ ಮನೆಗಳನ್ನು ಹೊಂದಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಗಣಿ ಗ್ರಾಮೀಣ ಪ್ರದೇಶದ ಹೊಸಪೇಟೆ ತಾಲ್ಲೂಕಿನಲ್ಲಿ ಮಣ್ಣಿನ ಮನೆ ಶೇ.೦೭.೭೭ರಷ್ಟು ಗುಡಿಸಲು ಮನೆ ಶೇ.೦೬.೬೮ರಷ್ಟು, ಆರ್.ಸಿ.ಸಿ. ಮನೆ ಶೇ.೧೮.೮೮ರಷ್ಟು, ಸಿಮೆಂಟ್ ಸೀಟಿನ ಮನೆ

ಶೇ.೬೬.೬೭ರಷ್ಟು ಕುಟುಂಬಗಳು ಮನೆಯನ್ನು ಹೊಂದಿರುವ ಪ್ರಮಾಣವಾಗಿದೆ. ಈ ವಲಯದ ಗ್ರಾಮೀಣ ಪ್ರದೇಶದ ಕುಟುಂಬಗಳು ಸಿಮೆಂಟ್ ಸೀಟಿನ ಮನೆಯಲ್ಲಿ ವಾಸವಾಗಿರುವ ಪ್ರಮಾಣ (ಶೇ.೬೬.೬೭) ಅಧಿಕವಾಗಿದ್ದು, ಗುಡಿಸಲು ಮನೆಯಲ್ಲಿ ವಾಸವಾಗಿರುವ ಕುಟುಂಬಗಳು (ಶೇ.೦೬.೬೬) ಕಡಿಮೆ ಪ್ರಮಾಣದಲ್ಲಿದ್ದಾರೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಮಣ್ಣಿನ ಮನೆ ಶೇ.೦೪.೪೪ರಷ್ಟು, ಗುಡಿಸಲು ಮನೆ ಶೇ.೦೪.೪೪ರಷ್ಟು, ಆರ್.ಸಿ.ಸಿ ಮನೆ ಶೇ.೨೫.೫೬ರಷ್ಟು, ಸಿಮೆಂಟ್ ಸೀಟಿನ ಮನೆ ಶೇ.೬೫.೫೬ರಷ್ಟು, ವಾಸವಾಗಿರುವ ಕುಟುಂಬಗಳಾಗಿದ್ದು, ಸಿಮೆಂಟ್ ಸೀಟಿನ ಮನೆ ಹೊಂದಿರುವ ಕುಟುಂಬಗಳು ಅಧಿಕ ಪ್ರಮಾಣದಲ್ಲಿದೆ. ಹಾಗೆಯೇ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಮಣ್ಣಿನ ಮನೆಯಲ್ಲಿ ಶೇ.೧೭.೭೮ರಷ್ಟು, ಆರ್.ಸಿ.ಸಿ. ಮನೆಯಲ್ಲಿ ಶೇ.೨೮.೮೮ರಷ್ಟು, ಸಿಮೆಂಟ್ ಸೀಟು ಮನೆ ಶೇ.೫೩.೩೩ರಷ್ಟು ಹೊಂದಿರುವ ಕುಟುಂಬಗಳಾಗಿದೆ. ಈ ವಲಯದಲ್ಲೂ ಸಹ ಸಿಮೆಂಟ್ ಸೀಟಿನ ಮನೆಯನ್ನು ಹೊಂದಿರುವ ಕುಟುಂಬಗಳು ಅಧಿಕ ಪ್ರಮಾಣದಲ್ಲಿ ಇರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ಮೂರು ಗಣಿ ವಲಯವನ್ನು ತುಲನಾತ್ಮಕವಾಗಿ ಅವಲೋಕಿಸಿದಾಗ ಹೊಸಪೇಟೆ, ಬಳ್ಳಾರಿ, ಸಂಡೂರು ಮೂರು ವಲಯಗಳಲ್ಲಿ ಸಿಮೆಂಟ್ ಸೀಟಿನ ಮನೆ ಹೊಂದಿರುವ ಕುಟುಂಬಗಳ ಪ್ರಮಾಣ ಕ್ರಮಾನುಗತವಾಗಿ ಶೇ೬೬.೬೭, ಶೇ.೫೩.೩೩, ಶೇ.೬೫.೫೬ರಷ್ಟು ಹೆಚ್ಚಾಗಿರುವುದು ಕಂಡುಬರುತ್ತದೆ. ಇದರಲ್ಲಿಯೇ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಸಿಮೆಂಟ್ ಸೀಟಿನ ಮನೆ ಹೊಂದಿರುವ ಕುಟುಂಬಗಳ ಪ್ರಮಾಣ ಅಧಿಕವಾಗಿದೆ. ಕುಟುಂಬಗಳು ಹೊಂದಿರುವ ಅತಿ ಕಡಿಮೆ ಪ್ರಮಾಣದ ಶೇ.೦೪.೪೪ರಷ್ಟು ಗುಡಿಸಲು ಮನೆ ಮತ್ತು ಮಣ್ಣಿನ ಮನೆ ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಕಡಿಮೆ ಪ್ರಮಾಣದ ಮನೆ ಅಥವಾ ವಸತಿ ಹೊಂದಿರುವ ಕುಟುಂಬಗಳಾಗಿವೆ ಇದು ಶೋಚನೀಯವಾಗಿದೆ. ಈ ಕುಟುಂಬ ಗಳು ಮನೆ ನಿರ್ಮಾಣ ಮಾಡಲು ಸರ್ಕಾರದ ವಸತಿ ಯೋಜನೆಯ ಸೌಲಭ್ಯ ದೊರಕಿದೆಯಾ? ಸೌಲಭ್ಯ ದೊರಕಿದೆಯಾದರೇ ಯಾವ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣವಾಗಿದೆ ಎಂಬ ಅಂಶದ ಮಾಹಿತಿಯನ್ನು ಅರಿಯಲು ಗಣಿ ವಲಯದ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದ ಫಲಿತಾಂಶವನ್ನು ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೮ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣವಾಗಿರುವ ಕುಟುಂಬಗಳ ಪ್ರಮಾಣ**

| ಕ್ರ.ಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಮನೆ ನಿರ್ಮಾಣಕ್ಕೆ ವಸತಿ ಸೌಲಭ್ಯ | | | | | | |
| | ಹೌದು | ೫೫ | ೬೧.೧೩ | ೪೦ | ೪೪.೪೪ | ೩೬ | ೪೦ |
| | ಇಲ್ಲ | ೩೫ | ೩೮.೮೯ | ೫೦ | ೫೫.೫೬ | ೫೪ | ೬೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಯಾವ ವಸತಿ ಯೋಜನೆ | | | | | | |
| | ಆಶ್ರಯ ವಸತಿ ಯೋಜನೆ | ೧೫ | ೨೭.೨೭ | ೦೮ | ೨೦ | ೦೬ | ೧೬.೦೦ |
| | ಅಂಬೇಡ್ಕರ್ ವಸತಿ ಯೋಜನೆ | ೧೫ | ೨೭.೨೭ | ೧೩ | ೩೦ | ೦೭ | ೧೯.೪೪ |
| | ರಾಜೀವ್‌ಗಾಂಧಿ ವಸತಿಯೋಜನೆ | ೧೩ | ೨೧.೮೩ | ೧೧ | ೨೭.೫ | ೦೯ | ೨೫.೦೦ |
| | ಇಂದಿರಾಗಾಂಧಿ ವಸತಿಯೋಜನೆ | ೧೨ | ೨೩.೬೪ | ೦೯ | ೨೨.೫ | ೧೦ | ೨೭.೭೭ |
| | ಬಸವ ಅವಾಜ್ ವಸತಿಯೋಜನೆ | – | – | – | – | ೦೪ | ೧೧.೧೧ |
| | ಒಟ್ಟು | ೫೫ | ೧೦೦ | ೪೦ | ೧೦೦ | ೩೬ | ೧೦೦ |

**ಮೂಲ : ಕ್ಷೇತ್ರಕಾರ್ಯದ ಮಾಹಿತಿ**

ಕೋಷ್ಟಕ ೩.೩೮ರಲ್ಲಿ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪದ್ರೇಶದ ಮನೆ ನಿರ್ಮಾಣಕ್ಕೆ ವಸತಿ ಯೋಜನೆಯ ಸೌಲಭ್ಯ ದೊರಕಿದೆಯಾ? ಸೌಲಭ್ಯ ದೊರಕಿದೆಯಾದರೆ, ವಿವಿಧ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣವಾಗಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಗಣಿ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣ ಹೊಂದಿರುವ ಕುಟುಂಬಗಳು ಶೇ.೬೧.೧೨ರಷ್ಟು ಪ್ರಮಾಣದಲ್ಲಿದ್ದು, ಇನ್ನೂಳಿದ ಕುಟುಂಬಗಳಿಗೆ ಶೇ.೩೮.೮೮ರಷ್ಟು ವಸತಿ ಯೋಜನೆಯ ಸೌಲಭ್ಯ ದೊರೆತಿಲ್ಲ. ವಿವಿಧ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣ ಹೊಂದಿರುವ ಕುಟುಂಬಗಳನ್ನು ಪ್ರತಿಶತವಾಗಿ ಗಮನಿಸಿದಾಗ ಆಶ್ರಯ ವಸತಿ ಯೋಜನೆ ಅಡಿಯಲ್ಲಿ ಶೇ.೨೭.೨೭ರಷ್ಟು, ಅಂಬೇಡ್ಕರ್ ವಸತಿ ಯೋಜನೆಯಡಿಯಲ್ಲಿ ಶೇ.೨೭.೨೭ರಷ್ಟು, ರಾಜೀವ್ ಗಾಂಧಿ ವಸತಿ ಯೋಜನೆಯಡಿಯಲ್ಲಿ ಶೇ.೨೧.೮೨ರಷ್ಟು, ಇಂದಿರಾ ಗಾಂಧಿ ವಸತಿ ಯೋಜನೆಯಡಿಯಲ್ಲಿ ಶೇ.೨೩.೩೪ರಷ್ಟರ ಪ್ರಮಾಣದ ಮನೆ ನಿರ್ಮಾಣ ಹೊಂದಿರುವ ಕುಟುಂಬಗಳು ಕಂಡುಬರುತ್ತದೆ. ವಸತಿ ಯೋಜನೆಯ ಅಡಿಯಲ್ಲಿ ಕುಟುಂಬಗಳು ಮನೆ ನಿರ್ಮಾಣ ಹೊಂದಿರುವ ಪ್ರಮಾಣ ಆಶ್ರಯ ಮತ್ತು ಅಂಬೇಡ್ಕರ್ ವಸತಿ ಯೋಜನೆಯ ಅಡಿಯಲ್ಲಿ ಶೇ.೨೭.೨೭ರಷ್ಟು ಮನೆ ನಿರ್ಮಾಣವಾಗಿರುವುದು ಅಧಿಕ ಪ್ರಮಾಣದಲ್ಲಿದೆ. ಸಂಡೂರು, ಗಣಿ ಗ್ರಾಮೀಣ ಪ್ರದೇಶದಲ್ಲಿ ವಸತಿ ಯೋಜನೆಯಡಿಯಲ್ಲಿ ಮನೆ ನಿರ್ಮಾಣ ಹೊಂದಿರುವ ಕುಟುಂಬಗಳು ಶೇ.೪೪.೪೪ರಷ್ಟಿದ್ದು, ಇನ್ನುಳಿದ ಶೇ.೫೫.೫೬ರಷ್ಟು ಪ್ರಮಾಣದಲ್ಲಿ ವಸತಿಯ ಸೌಲಭ್ಯ ದೊರೆಯದೇ ಇರುವ ಕುಟುಂಬಗಳಾಗಿವೆ. ಈ ವಲಯದ ಗ್ರಾಮೀಣ ಪ್ರದೇಶದಲ್ಲಿ ವಸತಿ ಸೌಲಭ್ಯಗಳಿಂದ ವಂಚಿತರಾಗಿರುವುದು ಕಂಡುಬಂದಿದೆ. ಈ ಸಂಡೂರು ವಲಯಗಳಲ್ಲಿ ವಿವಿಧ ವಸತಿ ಯೋಜನೆ ಅಡಿಯಲ್ಲಿ ಮನೆ ನಿರ್ಮಾಣ ಮಾಡಿಕೊಂಡ ಕುಟುಂಬಗಳನ್ನು ನೋಡುವುದಾದರೇ, ಆಶ್ರಯ ವಸತಿ ಯೋಜನೆಯ ಅಡಿಯಲ್ಲಿ ಶೇ೨೦ರಷ್ಟು, ಅಂಬೇಡ್ಕರ್ ವಸತಿ ಯೋಜನೆಯ ಅಡಿಯಲ್ಲಿ ಶೇ.೩೦ರಷ್ಟು, ರಾಜೀವ್ ಗಾಂಧಿ ವಸತಿ ಯೋಜನೆಯ ಅಡಿಯಲ್ಲಿ ಶೇ.೨೭.೫ರಷ್ಟು, ಇಂದಿರಾ ಗಾಂಧಿ ವಸತಿ ಯೋಜನೆಯಅಡಿಯಲ್ಲಿ ಶೇ.೨೨.೫ರಷ್ಟರ ಪ್ರಮಾಣದ ಕುಟುಂಬಗಳು ಮನೆ ನಿರ್ಮಾಣವಾಗಿದೆ. ಈ ಕುಟುಂಬಗಳು ಅಂಬೇಡ್ಕರ್ ವಸತಿ ಯೋಜನೆಯ ಅಡಿಯಲ್ಲಿ (ಶೇ.೩೦) ಮನೆ ನಿರ್ಮಾಣವಾಗಿರುವುದು ಅಧಿಕ ಪ್ರಮಾಣದಲ್ಲಿ ಕಂಡು ಬರುತ್ತದೆ. ಹಾಗೆಯೇ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೪೦ರಷ್ಟು ವಸತಿ ಯೋಜನೆಯ ಅಡಿಯಲ್ಲಿ ಮನೆ ನಿರ್ಮಾಣವಾಗಿರುವುದು ಕಂಡುಬಂದರೇ, ಶೇ.೬೦ರಷ್ಟು ವಸತಿಯೋಜನೆಯ ಸೌಲಭ್ಯ ದೊರಕದೆ ಇರುವ ಕುಟುಂಬಗಳಾಗಿವೆ. ಅಂದರೆ ಈ ಗ್ರಾಮೀಣ ವಲಯದಲ್ಲಿ ಶೇ೬೦ರಷ್ಟು ವಸತಿ ಸೌಲಭ್ಯಗಳಿಂದ ವಂಚಿತವಾಗಿರುವ ಕುಟುಂಬಗಳಾಗಿವೆ. ವಿವಿಧ ವಸತಿ ಯೋಜನೆಯ ಅಡಿಯಲ್ಲಿ ಮನೆ ನಿರ್ಮಾಣ ಹೊಂದಿರುವ ಕುಟುಂಬಗಳನ್ನು ನೋಡುವುದಾದರೇ, ಆಶ್ರಯ ವಸತಿ ಯೋಜನೆಯ ಅಡಿಯಲ್ಲಿ ಶೇ.೧೬.೬೬ರಷ್ಟು, ಅಂಬೇಡ್ಕರ್ ವಸತಿ ಯೋಜನೆಯ ಅಡಿಯಲ್ಲಿ ಶೇ.೧೯.೪೪ರಷ್ಟು, ರಾಜೀವ್ ಗಾಂಧಿ ವಸತಿ ಯೋಜನೆಯ ಅಡಿಯಲ್ಲಿ ಶೇ.೨೫ರಷ್ಟು ಇಂದಿರಾ ಗಾಂಧೀ ವಸತಿಯೋಜನೆಯ ಅಡಿಯಲ್ಲಿ ಶೇ ೨೭.೨೭ರಷ್ಟು, ಬಸವ ಆವಾಜ್ ವಸತಿ ಯೋಜನೆಯಲ್ಲಿ ಶೇ.೧೧.೧೨ರಷ್ಟರ ಪ್ರಮಾಣದ ಮನೆ ನಿರ್ಮಾಣ ಮಾಡಿರುವ ಕುಟುಂಬಗಳು ಬಳ್ಳಾರಿ ಗ್ರಾಮೀಣ ವಲಯಗಳಲ್ಲಿ ಕಂಡು ಬರುತ್ತದೆ. ಈ ವಸತಿ ಯೋಜನೆಯ ಅಡಿಯಲ್ಲಿಯೇ ರಾಜೀವ್ ಗಾಂಧೀ ವಸತಿ ಯೋಜನೆಯಡಿಯಲ್ಲಿ (ಶೇ.೨೫) ಮನೆ ನಿರ್ಮಾಣ ಹೊಂದಿರುವ ಕುಟುಂಬಗಳ ಪ್ರಮಾಣ ಅಧಿಕವಾಗಿದೆ. ಒಟ್ಟಾರೆಯಾಗಿ ಗಣಿ ವಲಯ ಗ್ರಾಮೀಣ ಪ್ರದೇಶ ಕುಟುಂಬಗಳು ಹೊಂದಿರುವ ಮನೆ ನಿರ್ಮಾಣಕ್ಕೆ ದಕ್ಕಿರುವ ಸೌಲಭ್ಯವನ್ನು ತಾಲ್ಲೂಕುವಾರು ತುಲನಾತ್ಮಕವಾಗಿ ಗ್ರಹಿಸುವುದಾದರೇ, ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ವಸತಿ ಯೋಜನೆಯಡಿಯಲ್ಲಿ ಸೌಲಭ್ಯ ದೊರಕಿರುವ ಕುಟುಂಬಗಳು ಶೇ.೬೧.೧೨ರಷ್ಟು ಅಧಿಕ ಪ್ರಮಾಣದಲ್ಲಿ ಕಂಡು ಬಂದಿದ್ದು, ವಸತಿ ಯೋಜನೆಯ ಸೌಲಭ್ಯಗಳಿಂದ

ವಂಚಿತರಾಗಿರುವುದು ಶೇ ೬೦ರಷ್ಟು ಬಳ್ಳಾರಿ ತಾಲ್ಲೂಕಿನ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬಂದಿರುವುದು ಗೋಚರಿಸುತ್ತದೆ.

ಗಣಿ ವಲಯದ ಮನೆಯಲ್ಲಿ ಸ್ನಾನಗೃಹಕ್ಕೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದ ಫಲಿತಾಂಶಗಳ ಅಂಕಿ-ಅಂಶವನ್ನು ಈ ಕೆಳಗಿನಂತೆ ದಾಖಲಿಸಿ, ವಿಶ್ಲೇಷಣೆ ಒಳಪಡಿಸಲಾಗಿದೆ.

**ಕೋಷ್ಟಕ ೩.೩೯ ಮನೆಯ ಸ್ನಾನ ಗೃಹ ಹೊಂದಿರುವ ಕುಟುಂಬಗಳ ಪ್ರಮಾಣ**

| ಕ್ರ.ಸಂ | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಸ್ನಾನ ಗೃಹವಿದೆಯಾ | | | | | | |
| | ಇದೆ | ೬೨ | ೬೮.೮೮ | ೬೦ | ೬೬.೬೬ | ೪೮ | ೫೩.೩೪ |
| | ಇಲ್ಲ | ೨೮ | ೩೧.೧೨ | ೩೦ | ೩೩.೩೪ | ೪೨ | ೪೬.೬೬ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಇದೆಯಾದರೆ | | | | | | |
| | ಮನೆ ಒಳಗೆ | ೦೭ | ೧೧.೨೯ | ೦೯ | ೧೫ | ೦೫ | ೧೦.೪೨ |
| | ಮನೆ ಹೊರಗೆ | ೫೫ | ೮೮.೭೧ | ೫೧ | ೮೫ | ೪೩ | ೮೯.೫೮ |
| | ಒಟ್ಟು | ೬೨ | ೧೦೦ | ೬೦ | ೧೦೦ | ೪೮ | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಈ ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಸ್ನಾನಗೃಹದ ಪ್ರಮಾಣ, ಹಾಗೂ ಸ್ನಾನಗೃಹ ಇರುವ ಆವರಣದ ಪ್ರಮಾಣವನ್ನು ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಕುಟುಂಬಗಳು ಹೊಂದಿರುವ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಹೊಸಪೇಟೆ ಗ್ರಾಮೀಣ ಪ್ರದೇಶದಲ್ಲಿ ಸ್ನಾನಗೃಹವನ್ನು ಹೊಂದಿರುವ ಕುಟುಂಬಗಳು ಶೇ.೬೮.೮೮ರಷ್ಟಿದ್ದರೆ, ಸ್ನಾನಗೃಹ ಹೊಂದದೆ ಇರುವ ಕುಟುಂಬಗಳ ಪ್ರಮಾಣ ಶೇ.೩೧.೧೨ರಷ್ಟಿದೆ. ಸ್ನಾನಗೃಹ ಹೊಂದಿರುವ ಕುಟುಂಬಗಳಲ್ಲಿ ಮನೆಯ ಒಳಗೆ ಶೇ.೧೧.೨೯ರಷ್ಟು, ಮನೆಯ ಹೊರಗೆ ಸ್ನಾನ ಗೃಹ ಹೊಂದಿರುವ ಕುಟುಂಬಗಳು ಶೇ.೮೮.೭೧ರಷ್ಟಿದ್ದು, ಅಧಿಕ ಪ್ರಮಾಣದಲ್ಲಿದೆ. ಸಂಡೂರು ವಲಯದ ಗ್ರಾಮೀಣ ಪ್ರದೇಶದಲ್ಲಿ ಶೇ.೬೬.೬೬ರಷ್ಟು ಪ್ರಮಾಣದ ಸ್ನಾನ ಗೃಹವನ್ನು ಹೊಂದಿರುವ ಕುಟುಂಬಗಳಾಗಿವೆ. ಸ್ನಾನಗೃಹ ಹೊಂದಿರದ ಶೇ.೩೩.೩೪ರಷ್ಟು ಕುಟುಂಬಗಳಾಗಿದ್ದು, ಸ್ನಾನ ಗೃಹ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಈ ಸ್ನಾನ ಗೃಹ ಹೊಂದಿರುವ ಕುಟುಂಬಗಳಲ್ಲಿ ಮನೆಯ ಒಳಗೆ ಸ್ನಾನ ಗೃಹ ಹೊದಿರುವವರು ಶೇ.೧೫ರಷ್ಟಿದ್ದರೇ, ಮನೆಯ ಹೊರಗೆ ಸ್ನಾನಗೃಹ ಹೊಂದಿರುವ ಕುಟುಂಬಗಳ ಶೇ.೮೫ರಷ್ಟು ಕಂಡು ಬರುತ್ತದೆ. ಹಾಗೆಯೇ ಬಳ್ಳಾರಿ ವಲಯ ಗ್ರಾಮೀಣ ಪ್ರದೇಶದಲ್ಲಿ ಸ್ನಾನ ಗೃಹ ಹೊಂದಿರುವ ಕುಟುಂಬಗಳು ಶೇ.೫೩.೩೪ರಷ್ಟಿದೆ. ಇದರಲ್ಲಿ ಸ್ನಾನ ಗೃಹ ಇರುವ ಆವರಣಕ್ಕೆ ಸಂಬಂಧಿಸಿದಂತೆ ಮನೆಯ ಒಳಗೆ ಸ್ನಾನದ ಗೃಹ ಹೊಂದಿರುವ ಪ್ರಮಾಣ ಶೇ.೧೦.೪೧ರಷ್ಟು ಕುಟುಂಬಗಳಲ್ಲಿ ಕಂಡು ಬಂದರೇ, ಮನೆಯ ಹೊರಗೆ ಶೇ.೮೯.೫೮ರಷ್ಟು ಸ್ನಾನದ ಗೃಹವನ್ನು ಹೊಂದಿರುವ ಕುಟುಂಬಗಳಾಗಿವೆ. ಒಟ್ಟಾರೆಯಾಗಿ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಸ್ನಾನದ ಗೃಹ ಹೊಂದಿರುವ ಕುಟುಂಬಗಳು ಅತ್ಯಂತ ದುಸ್ಥಿತಿಯಲ್ಲಿವೆ.

**ಕೊನೆಯ ಟಿಪ್ಪಣಿಗಳು**

೧. ಕರ್ನಾಟಕ ಸರ್ಕಾರ, (೨೦೧೪), **ಬಳ್ಳಾರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ ೨೦೧೪**, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿತ ಇಲಾಖೆ, ಬೆಂಗಳೂರು, ಪು.ಸಂ. ೬೩-೬೮.
೨. ಅದೇ, ಪು.ಸಂ. ೬೭-೬೮.
೩. ಅದೇ, ಪು.ಸಂ. ೬೯-೭೦.
೪. ಅದೇ, ಪು.ಸಂ. ೮೫.
೫. ಅದೇ, ಪು.ಸಂ ೮೮-೮೯.
೬. ಟಿ.ಆರ್.ಚಂದ್ರಶೇಖರ್, (೨೦೧೪), **ಮಾನವ ಅಭಿವೃದ್ಧಿ ಬಡತನ ಮತ್ತು ಮಾನವ ಹಕ್ಕುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೭೫-೭೬.

# ಅಧ್ಯಾಯ ನಾಲ್ಕು

## ಗಣಿಗಾರಿಕೆ: ಗ್ರಾಮೀಣ ಜನರ ಆರ್ಥಿಕತೆಯ ಮೇಲಾದ ಪರಿಣಾಮಗಳು

## ಅಧ್ಯಾಯ ೪
## ಗಣಿಗಾರಿಕೆ: ಗ್ರಾಮೀಣ ಜನರ ಆರ್ಥಿಕತೆಯ ಮೇಲಾದ ಪರಿಣಾಮಗಳು

### ೪.೧ ಪ್ರಸ್ತಾವನೆ

೧೯೯೧ರ ಕೈಗಾರಿಕೆ ನೀತಿಯಲ್ಲಿನ ಬದಲಾವಣೆ ಮತ್ತು ಖನಿಜ ಅದಿರು ಚಟುವಟಿಕೆಗಳ ಉದಾರವಾದ ರಫ್ತು ನೀತಿಯಿಂದ ರಾಷ್ಟದಲ್ಲಿ ಶೀಘ್ರಗತಿಯ ಗಣಿ ಚಟುವಟಿಕೆಗಳು ಏರಿಕೆಯಾದವು ಮತ್ತು ಈ ವಲಯದಲ್ಲಿ ಖಾಸಗೀಕರಣದ ಪ್ರವೇಶವಾಯಿತು. ಬಳ್ಳಾರಿ ಜಿಲ್ಲೆಯು ಸಮೃದ್ಧವಾದ ಕಬ್ಬಿಣದ ಅದಿರು, ಮ್ಯಾಂಗನೀಸ್ ಅದಿರು, ಕೆಂಪು, ಆಕ್ಸೈಡ್, ಫೆರೋಸ್ ಆಕ್ಸೈಡ್‌ನಂತಹ ಖನಿಜ ಸಂಪನ್ಮೂಲಗಳನ್ನು ಹೊಂದಿದೆ. ಭಾರತದ ಕಬ್ಬಿಣದ ಅದಿರು ನಿಕ್ಷೇಪದ ಶೇ.೨೫ ರಷ್ಟನ್ನು ಬಳ್ಳಾರಿ ಜಿಲ್ಲೆಯು ಹೊಂದಿದ್ದು, ಗಣಿ ಚಟುವಟಿಕೆಗಳನ್ನು ಪ್ರೋತ್ಸಾಹ ನೀಡಿರುವ ಲೋಹದ ಅದಿರು ಹೇರಳವಾಗಿ ಬಳ್ಳಾರಿ ಜಿಲ್ಲೆಯ ಮೂರು ತಾಲ್ಲೂಕುಗಳಾದ ಸಂಡೂರು–ಹೊಸಪೇಟೆ ಮತ್ತು ಬಳ್ಳಾರಿಯಲ್ಲಿದೆ. ಜಿಲ್ಲೆಯಲ್ಲಿ ಬೃಹತ್ ಪ್ರಮಾಣದ ಖನಿಜ ಸಂಪನ್ಮೂಲಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಖಾಸಗಿ ಕಂಪನಿಗಳು ಗಣಿ ವಲಯದಲ್ಲಿ ಪ್ರವೇಶವನ್ನು ಹೊಂದಿವೆ. ಆದ್ದುದರಿಂದ ಈ ಜಿಲ್ಲೆಯು ಗಣಿ ಚಟುವಟಿಕೆಯಿಂದ ಗುರುತಿಸಲ್ಪಟ್ಟಿದೆ. ಜಿಲ್ಲೆಯ ಸಂಡೂರು–ಹೊಸಪೇಟೆ–ಬಳ್ಳಾರಿ ವಲಯಗಳು ಅಧಿಕ ಪ್ರಮಾಣದಲ್ಲಿ ಗಣಿ ಚಟುವಟಿಕೆ ನಡೆದಿರುವುದು ಕಂಡುಬಂದಿವೆ. ಗಣಿ ಚಟುವಟಿಕೆಗಳು ಕಾರ್ಮಿಕ ಆಧಾರಿತವಾಗಿರುವುದರಿಂದ ಅಲ್ಲಿ ಕಾರ್ಮಿಕರಿಗೆ ಇರುವ ಬೇಡಿಕೆ ಹೆಚ್ಚಿದೆ. ಇದು ಕಾರ್ಮಿಕರನ್ನು ಕೃಷಿ ಮತ್ತು ಇತರ ಚಟುವಟಿಕೆಗಳಿಂದ ಗಣಿ ಚಟುವಟಿಕೆಗಳಿಗೆ ವರ್ಗಾಯಿಸುತ್ತಿದೆ. ಗಣಿ ಕೈಗಾರಿಕೆಯಲ್ಲಿ ಅಧಿಕ ಕೂಲಿ ದರದ ಕಾರಣದಿಂದಾಗಿ ಮಹಿಳೆಯರು ಮಕ್ಕಳು, ಮತ್ತು ಮಧ್ಯಮ ಸಾಗುವಳಿದಾರರು ಗಣಿ ಚಟುವಟಿಕೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಗಣಿ ಕಾರ್ಮಿಕರ ವರಮಾನದ ಮಟ್ಟವು ಹೆಚ್ಚಾಗಿ ಅವರ ವೆಚ್ಚದ ಮಾದರಿಯು ಬದಲಾವಣೆ ಹೊಂದಿದೆ. ಇಂತಹ ಹೆಚ್ಚಿನ ಪ್ರಮಾಣದ ಗಣಿ ಚಟುವಟಿಕೆಗಳ ಗ್ರಾಮೀಣ ಪ್ರದೇಶದ ಆರ್ಥಿಕ ಬದುಕಿನ ಮೇಲೆ ಪರಿಣಾಮ ಬೀರಿವೆ. ಗಣಿ ಸ್ಥಗಿತತೆಯ ನಂತರ ಅದರ ಪರಿಣಾಮಗಳು ಸ್ವಲ್ಪಮಟ್ಟಿನ ಬದಲಾವಣೆಗಳಾಗಿರವುದು ವಾಸ್ತವವಾಗಿ ಬಿಂಬಿತವಾಗುತ್ತಿದೆ. ಪ್ರಸ್ತುತ ಅಧ್ಯಯನವು ಗಣಿಗಾರಿಕೆಯಿಂದಾಗಿ ಕೃಷಿಯ ಮೇಲಾಗಿರುವ ಪರಿಣಾಮಗಳ ಕುರಿತು ವಿವರಿಸಲಾಗಿದೆ. ಗಣಿಗಾರಿಕೆಯು ಗ್ರಾಮೀಣ ಪ್ರದೇಶದ ಕೃಷಿ ಭೂಹಿಡುವಳಿ, ಇಳುವರಿ, ಕೂಲಿ, ಉದ್ಯೋಗದ ಸ್ವರೂಪ ಮತ್ತು ವರಮಾನದಲ್ಲಾಗಿರುವ ಬದಲಾವಣೆಯ ಪರಿಣಾಮಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಭೂಹಿಡುವಳಿಯ ಇಳುವರಿ ಪ್ರಮಾಣ, ವರಮಾನದ ಪ್ರಮಾಣ, ಕೂಲಿಯ ಪ್ರಮಾಣಗಳ ಏರುಪೇರುಗಳಲ್ಲಿ ಗಣಿಗಾರಿಕೆಯಿಂದ ಬದಲಾವಣೆಗಳಾಗಿವೆಯೋ? ಅಥವಾ ಕೃಷಿಯಲ್ಲಿ ಗಣಿಗಾರಿಕೆಯ ಪರಿಣಾಮಗಳು ಹಾಗೆ ಇವೆಯೋ? ಎಂಬ ನಿರ್ಧಾರಕ ಅಂಶಗಳನ್ನು ಅರಿಯುವುದು ಅಗತ್ಯವಿದೆ. ಈ ನಿಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆಯು ಗ್ರಾಮೀಣ ಪ್ರದೇಶದ ಆರ್ಥಿಕ ಬದುಕಿನ ಮೇಲಾದ ಪರಿಣಾಮವನ್ನು ಅರಿಯಲು ಜಿಲ್ಲೆಯ ಗಣಿ ವಲಯಗಳಾದ ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ಗ್ರಾಮೀಣ ಪ್ರದೇಶಗಳನ್ನು ಆಯ್ಕೆ ಮಾಡಲಾಗಿದೆ. ಗಣಿಗಾರಿಕೆಯ ಪರಿಣಾಮವನ್ನು ಅಳೆಯುವಾಗ ಭೂ ಹಿಡುವಳಿ, ಇಳುವರಿ, ಕೂಲಿ, ವರಮಾನ, ಮತ್ತು ಉದ್ಯೋಗದ ಮೇಲಾಗುವ ಪರಿಣಾಮಗಳ ತರ್ಕಿಕವಾಗಿ ಕ್ಷೇತ್ರಕಾರ್ಯದ ಮಾಹಿತಿಯ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

## ೪.೨ ಗಣಿಗಾರಿಕೆ ಮತ್ತು ಕೃಷಿ

ಗಣಿಗಾರಿಕೆಯು ಗ್ರಾಮೀಣ ಪ್ರದೇಶದ ಕೃಷಿಯ ಮೇಲಾದ ಪರಿಣಾಮಗಳನ್ನು ಅರಿಯಲು ಭೂಮಿ, ಇಳುವರಿ, ಕೂಲಿ ಇತ್ಯಾದಿ ಉಪಸೂಚಕಗಳ ಆಧಾರದ ಮೇಲೆ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ೯ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿದ್ದು, ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದ ಫಲಿತಾಂಶಗಳ ಅಂಕಿ-ಅಂಶಗಳನ್ನು ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೪.೨.೧ ಭೂಹಿಡುವಳಿ

ಗಣಿ ವಲಯವಾದ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಭೂ ಹಿಡುವಳಿ ಕುರಿತು ಸಮೀಕ್ಷೆಗೆ ಒಳಪಡಿಸಲಾದ ೨೭೦ ಕುಟುಂಬಗಳ ಮಾಹಿತಿದಾರರಿಂದ ಕಂಡು ಬಂದಿರುವ ಫಲಿತಾಂಶವನ್ನು ಅಂಕಿ-ಅಂಶಗಳ ಮೂಲಕ ದಾಖಲಿಸಿ, ವಿಶ್ಲೇಷಣೆಗೆ ಈ ಕೆಳಗಿನಂತೆ ಒಳಪಡಿಸಲಾಗಿದೆ.

**ಕೋಷ್ಟಕ ೪.೧ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಭೂ ಹಿಡುವಳಿ ಹೊಂದಿರುವ ಕುಟುಂಬಗಳ ಶೇಕಾಡವಾರು ಪ್ರಮಾಣ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ನಿಮಗೆ ಸಾಗುವಳಿ ಮಾಡಲು ಕೃಷಿ ಭೂಮಿ ಇದೆಯಾ | | | | | | |
| | ಹೌದು | ೮೩ | ೯೨.೨೩ | ೮೫ | ೯೪.೪೪ | ೮೨ | ೯೧.೧೨ |
| | ಇಲ್ಲ | ೦೭ | ೦೭.೭೭ | ೦೫ | ೦೫.೫೬ | ೦೮ | ೦೮.೮೮ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |
| ೦೨ | ಹೌದಾದರೆ ಭೂಮಿ ಎಷ್ಟು ಕೊಟ್ಟಿದ್ದೀರಾ | | | | | | |
| | ೧-೫ ಎಕರೆ | ೨೫ | ೩೦.೧೩ | ೩೪ | ೪೦.೦೧ | ೨೬ | ೩೧.೭೧ |
| | ೫-೧೦ ಎಕರೆ | ೩೮ | ೪೫.೭೮ | ೨೪ | ೨೮.೨೩ | ೨೯ | ೩೫.೩೬ |
| | ೧೦-೧೫ ಎಕರೆ | ೨೦ | ೨೪.೦೯ | ೨೨ | ೨೫.೮೮ | ೨೭ | ೩೨.೯೩ |
| | ೧೫ ಕ್ಕಿಂತ ಹೆಚ್ಚು | - | - | ೦೫ | ೦೫.೫೮ | - | - |
| | **ಒಟ್ಟು** | **೮೩** | **೧೦೦** | **೮೫** | **೧೦೦** | **೮೨** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಭೂ ಹಿಡುವಳಿ ಪ್ರಮಾಣ ಹಾಗೂ ಎಷ್ಟು ಎಕರೆ ಭೂ ಹಿಡುವಳಿಯನ್ನು ಹೊಂದಿದ್ದಾರೆ ಎಂಬುವುದು ಶೇಕಡವಾರುಗಳಲ್ಲಿ ತೋರಿಸುತ್ತದೆ. ಈ ಕೋಷ್ಟಕದಲ್ಲಿ ಭೂಹಿಡುವಳಿಗೆ ಸಂಬಂಧಿಸಿದಂತೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಭೂಹಿಡುವಳಿ ಹೊಂದಿರುವ ಶೇಕಡವಾರು ಪ್ರಮಾಣವನ್ನು ಹೊಸಪೇಟೆ, ಬಳ್ಳಾರಿ, ಸಂಡೂರು, ತಾಲ್ಲೂಕುಗಳ ಕ್ಷೇತ್ರಕಾರ್ಯದ ದತ್ತಾಂಶವನ್ನು ವಿವರಿಸಲಾಗಿದೆ.

ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೯೨.೨೩ರಷ್ಟು ಕುಟುಂಬಗಳು ಭೂ ಹಿಡುವಳಿಯನ್ನು ಹೊಂದಿರುವ ಪ್ರಮಾಣವಾಗಿದೆ. ಭೂಹಿಡುವಳಿಯನ್ನು ಹೊಂದಿರದ ಕುಟುಂಬಗಳು ಶೇ.೦೭.೭೭ರಷ್ಟಿದೆ. ಈ ಗಣಿ ವಲಯದಲ್ಲಿ ೧ರಿಂದ೫ ಎಕರೆಯವರೆಗೆ ಶೇ.೩೦.೧೩ರಷ್ಟು, ೫ರಿಂದ೧೦

ಎಕರೆಯವರೆಗೆ ಶೇ.೪೫.೭೮ರಷ್ಟು, ೧೦ರಿಂದ೧೫ ಎಕರೆಯವರೆ ಶೇ.೨೪.೦೯ರಷ್ಟು ಪ್ರಮಾಣದ ಭೂ ಹಿಡುವಳಿಯನ್ನು ಹೊಂದಿರುವ ಕುಟುಂಬಗಳಾಗಿವೆ. ಭೂಹಿಡುವಳಿಯು ೫ರಿಂದ೧೦ ಎಕರೆಯವರೆಗೆ ಹೊಂದಿರುವ ಕುಟುಂಬಗಳು (ಶೇ.೪೫.೭೮) ಹೆಚ್ಚಾಗಿರುವುದು ಕಂಡುಬರುತ್ತದೆ. ಭೂಹಿಡುವಳಿ ಇಲ್ಲದವರು ಶೇ.೦೭.೭೭ರಷ್ಟಿದ್ದು, ಪಿತ್ರಾರ್ಜಿತವಾಗಿ ಭೂಮಿ ಹಂಚಿಕೆಯಾಗದಿರುವುದು ಮತ್ತು ಭೂಮಿ ಇಲ್ಲದೇ ಇರುವುದು ಭೂ ಹಿಡುವಳಿ ಇಲ್ಲದಿರಲು ಕಾರಣವಾಗಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೮೫ ಕುಟುಂಬಗಳು ಶೇ.೯೪.೪೪ರಷ್ಟು ಭೂ ಹಿಡುವಳಿ ಪ್ರಮಾಣ ಹೊಂದಿದ್ದರೇ,೦೫ಕುಟುಂಬಗಳು ಶೇ.೦೫.೫೬ರಷ್ಟು ಭೂಹಿಡುವಳಿಯನ್ನು ಹೊಂದಿರುವುದಿಲ್ಲ. ಅಂದರೆ ಸಾಗುವಳಿ ಮಾಡಲು ಕೃಷಿ ಭೂಮಿಯನ್ನು ಹೊಂದಿರದ ಕುಟುಂಬಗಳಾಗಿವೆ. ಭೂಹಿಡುವಳಿಯನ್ನು ಹೊಂದಿರುವ ಶೇ.೯೪.೪೪ರಷು ಕುಟುಂಬಗಳಿದ್ದು, ಇದರಲ್ಲಿ ೩೪ ಕುಟಂಬಗಳು ೧ರಿಂದ ೫ ಎಕರೆಯವರೆಗೆ ಶೇ.೪೦.೦೧ರಷ್ಟು, ೨೪ ಕುಟಂಬಗಳು ೫ರಿಂದ ೧೦ ಎಕರೆಯವರಿಗೆ ಶೇ.೨೮.೨೩ರಷ್ಟು,೨೨ಕುಟಂಬಗಳು ೧೦ರಿಂದ೧೫ಎಕರೆಯವರೆಗೆ ಶೇ.೨೫.೮೮ರಷ್ಟು, ೦೫ ಕುಟಂಬಗಳು ೧೫ಕ್ಕಿಂತ ಹೆಚ್ಚು ಎಕರೆಯನ್ನು ಶೇ.೦೫.೫೮ರಷ್ಟು ಭೂ ಹಿಡುವಳಿಯನ್ನು ಹೊಂದಿರುವ ಕುಟುಂಬಗಳಾಗಿವೆ. ಭೂಹಿಡುವಳಿಯನ್ನು ೧ರಿಂದ ೫ ಎಕರೆಯವರೆಗೆ ಹೊಂದಿರುವ ಕುಟುಂಬಗಳು ಶೇ.೪೦.೦೧ರಷ್ಟಿದ್ದು, ಅಧಿಕ ಪ್ರಮಾಣದ ಭೂಮಿಯನ್ನು ಹೊಂದಿದ್ದಾರೆ. ಇವರು ಸಣ್ಣ ಪ್ರಮಾಣದ ಭೂಹಿಡುವಳಿದಾರರು ಈ ವಲಯದಲ್ಲಿ ಅಧಿಕವಾಗಿದ್ದಾರೆ. ೧೫ಕ್ಕಿಂತ ಹೆಚ್ಚು ಎಕರೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಶೇ.೦೫.೫೫ರಷ್ಟಿದ್ದು, ಭೂಹಿಡುವಳಿಯನ್ನು ಹೊಂದಿರುವ ಕುಟುಂಬಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೯೧.೧೨ರಷ್ಟು ಭೂಹಿಡುವಳಿ ಹೊಂದಿರುವ ಕುಟುಂಬಗಳಾದರೆ ಶೇ.೦೮.೮೮ರಷ್ಟು ಕುಟುಂಬಗಳು ಸಾಗುವಳಿ ಮಾಡಲು ಭೂಹಿಡುವಳಿಯನ್ನು ಹೊಂದಿರದ ಕುಟುಂಬಗಳಾಗಿವೆ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಭೂಹಿಡುವಳಿಯನ್ನು ಹೊಂದಿರುವ ೨೬ ಕುಟುಂಬಗಳು ೦೧ರಿಂದ೦೫ ಎಕರೆಯವರೆಗೆ ಶೇ.೩೧.೭೧ರಷ್ಟು, ೨೯ ಕುಟಂಬಗಳು ೫ರಿಂದ ೧೦ಎಕರೆಯವರೆಗೆ ಶೇ.೩೫.೩೬ರಷ್ಟು, ೨೭ ಕುಟಂಬಗಳು ೧೦ರಿಂದ೧೫ ಎಕರೆಯವರೆಗೆ ಶೇ.೩೨.೯೩ರಷ್ಟು ಭೂ ಹಿಡುವಳಿಯನ್ನು ಹೊಂದಿರುವ ಪ್ರಮಾಣವಾಗಿದೆ. ೫ರಿಂದ೧೦ ಎಕರೆಯವರೆಗೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಶೇ.೩೫.೩೬ರಷ್ಟಿದ್ದು. ಅಧಿಕ ಪ್ರಮಾಣದ ಭೂಹಿಡುವಳಿ ಹೊಂದಿರುವ ಕುಟುಂಬಗಳಾಗಿವೆ. ಅಂದರೆ ಈ ಗ್ರಾಮೀಣ ಭಾಗದಲ್ಲಿ ಮಧ್ಯಮ ಗಾತ್ರದ ಭೂಹಿಡುವಳಿಯನ್ನು ಹೊಂದಿರುವ ಕುಟುಂಬಗಳು ಅಧಿಕ ಪ್ರಮಾಣದಲ್ಲಿ ಇರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ಮೂರು ವಲಯಗಳಲ್ಲಿ ಭೂ ಹಿಡುವಳಿಯ ಪ್ರಮಾಣವನ್ನು ತುಲನಾತ್ಮಕವಾಗಿ ಅವಲೋಕಿಸಿದಾಗ ಸಂಡೂರು ತಾಲೂಕಿನಲ್ಲಿ ಅಧಿಕ ಪ್ರಮಾಣದ (ಶೇ.೯೪.೪೪) ಭೂಹಿಡುವಳಿಯನ್ನು ಹೊಂದಿರುವ ಕುಟುಂಬಗಳಿದ್ದು, ಕಡಿಮೆ ಪ್ರಮಾಣದ ಭೂಹಿಡುವಳಿ ಹೊಂದಿರುವ ಕುಟುಂಬಗಳು (ಶೇ.೯೧.೧೨) ಬಳ್ಳಾರಿ ವಲಯಗಳಲ್ಲಿ ಕಂಡುಬರುತ್ತದೆ. ಭೂಹಿಡುವಳಿ ಹೊಂದಿರುವ ಗಾತ್ರಕ್ಕೆ ಸಂಬಂಧಿಸಿದಂತೆ ೫ರಿಂದ ೧೦ ಎಕರೆಯವರೆಗೆ (ಶೇ.೪೫.೫೮)ರಷ್ಟು ಕಡಿಮೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಹೊಸಪೇಟೆ ತಾಲ್ಲೂಕಿನಲ್ಲಿ ಅಧಿಕ ಪ್ರಮಾಣದಲ್ಲಿರುವುದು ಕಂಡುಬಂದರೆ, ೧೫ಕ್ಕಿಂತ ಹೆಚ್ಚು ಎಕರೆಯಷ್ಟು ಭೂಮಿಯನ್ನು ಹೊಂದಿರುವ ಕುಟುಂಬಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿದ್ದು, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಗಮನಿಸಬಹುದಾಗಿದೆ. ಭೂಹಿಡುವಳಿ ಹೊಂದಿದ ಕುಟುಂಬಗಳ ಕೃಷಿ ಭೂಮಿಯು ನೀರಾವರಿ ಅಥವಾ ನೀರಾವರಿವಲ್ಲದ

ಭೂಮಿಯಾಗಿದೆಯಾ ಎಂದು ಪ್ರಶ್ನೆ ಕೇಳಿದಾಗ ಕಂಡು ಬಂದ ಫಲಿತಾಂಶವನ್ನು ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೨ ನೀರಾವರಿ ಮತ್ತು ನೀರಾವರಿ ಅಲ್ಲದ ಕೃಷಿ ಭೂಹಿಡುವಳಿ ಹೊಂದಿರುವ ಕುಟುಂಬಗಳ ಪ್ರಮಾಣ**

| ಕ್ರ.ಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಕುಟುಂಬಗಳು ಹೊಂದಿರುವ ಕೃಷಿ ಭೂಮಿ | | | | | | |
| | ನೀರಾವರಿ ಭೂಮಿ | ೩೧ | ೩೭.೩೪ | ೨೯ | ೩೪.೧೨ | ೨೪ | ೨೯.೧೭ |
| | ನೀರಾವರಿವಲ್ಲದ ಭೂಮಿ | ೫೨ | ೬೨.೬೬ | ೫೬ | ೬೫.೮೮ | ೫೮ | ೭೦.೭೩ |
| | ಒಟ್ಟು | ೮೩ | ೧೦೦ | ೮೫ | ೧೦೦ | ೮೨ | ೧೦೦ |
| ೦೨ | ನೀರಾವರಿ ಭೂಮಿಯಾದರೆ | | | | | | |
| | ೧–೫ ಎಕರೆ | ೧೧ | ೩೫.೪೮ | ೧೬ | ೫೫.೧೭ | ೧೩ | ೫೪.೧೬ |
| | ೫–೧೦ ಎಕರೆ | ೧೩ | ೪೧.೯೩ | ೧೩ | ೪೪.೮೩ | ೦೮ | ೩೩.೩೩ |
| | ೧೦–೧೫ ಎಕರೆ | ೦೭ | ೨೨.೫೮ | – | – | ೦೩ | ೧೨.೫೧ |
| | ೧೫ ಕ್ಕಿಂತ ಹೆಚ್ಚು | – | – | – | – | – | – |
| | ಒಟ್ಟು | ೩೧ | ೧೦೦ | ೨೯ | ೧೦೦ | ೨೪ | ೧೦೦ |
| ೦೩ | ನೀರಾವರಿವಲ್ಲದ ಭೂಮಿಯಾದರೆ | | | | | | |
| ೦೩ | ೧–೫ ಎಕರೆ | ೧೮ | ೩೪.೬೨ | ೨೩ | ೪೧.೦೭ | ೨೮ | ೪೮.೨೭ |
| | ೫–೧೦ ಎಕರೆ | ೧೭ | ೩೨.೬೯ | ೧೯ | ೩೩.೯೩ | ೨೦ | ೩೪.೪೮ |
| | ೧೦–೧೫ ಎಕರೆ | ೧೭ | ೩೨.೬೯ | ೦೭ | ೧೨.೫೦ | ೧೦ | ೧೭.೨೫ |
| | ೧೫ ಕ್ಕಿಂತ ಹೆಚ್ಚು | – | – | ೦೭ | ೧೨.೫೦ | – | – |
| | ಒಟ್ಟು | ೫೨ | ೧೦೦ | ೫೬ | ೧೦೦ | ೫೮ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಕೃಷಿ ಭೂಮಿಯಲ್ಲಿ ನೀರಾವರಿ ಮತ್ತು ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳ ಶೇಕಡವಾರು ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳಲ್ಲಿರುವ ಪ್ರಮಾಣವನ್ನು ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ೩೧ ಕುಟುಂಬಗಳು ಶೇ.೩೭.೩೪ರಷ್ಟಿದ್ದು, ಪ್ರತಿಶತ ೦೧ರಿಂದ೦೫ ಎಕರೆವರೆಗೆ ಶೇ.೩೭.೪೮ರಷ್ಟು ಕುಟುಂಬಗಳು,೫ರಿಂದ೧೦ಎಕರೆವರೆಗೆ ಶೇ.೪೧.೯೫ರಷ್ಟು ಕುಟುಂಬಗಳು, ೧೦ರಿಂದ೧೫ಎಕರೆ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೨೨.೫೮ರಷ್ಟಿದ್ದಾರೆ. ನೀರಾವರಿವಲ್ಲದ ಅಂದರೆ ಒಣ ಬೇಸಾಯ ಅವಲಂಬಿತ ೫೨ ಕುಟುಂಬಗಳು ಶೇ.೬೨.೬೫ರಷ್ಟಿದ್ದು, ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶಗಳಾದ ಕಲ್ಹಳ್ಳಿ, ರಾಜಾಪುರ, ಪಾಪಿನಾಯಕನ ಹಳ್ಳಿಯಲ್ಲಿ ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಹೆಚ್ಚಾಗಿವೆ.ಈ ಕುಟುಂಬಗಳು ನೀರಾವರಿವಲ್ಲದ ಕೃಷಿ ಭೂಮಿ ಹೊಂದಿರುವ ಪ್ರಮಾಣ ೦೧ರಿಂದ೦೫ಎಕರೆವರೆಗೆ ಶೇ.೩೪.೬೨ರಷ್ಟು ಕುಟುಂಬಗಳು, ೦೫ರಿಂದ೧೦ಎಕರೆವರೆಗೆ ಶೇ.೩೨.೬೯ರಷ್ಟು ಕುಟುಂಬಗಳು,೧೦ರಿಂದ೧೫ಎಕರೆವರೆಗೆ ಶೇ.೩೨.೬೯ರಷ್ಟಿದೆ. ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವವರು ಪ್ರತಿಶತವಾಗಿ ೦೧ರಿಂದ೦೫ಎಕರೆ ಇರುವ ಕುಟುಂಬಗಳು ಹೆಚ್ಚಾಗಿರುವುದು ಕಂಡುಬಂದಿದೆ. ಅಂದರೆ ಅತಿ ಸಣ್ಣ

ಭೂಹಿಡುವಳಿದಾರರು ಹೆಚ್ಚಾಗಿರುವುದು ಗೋಚರಿಸುವ ಅಂಶವಾಗಿದೆ. ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ೨೯ ಕುಟುಂಬಗಳು ಶೇ.೩೪.೧೨ರಷ್ಟಿದ್ದು, ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೬೫.೮೮ರಷ್ಟಿದ್ದಾರೆ. ಈ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ೦೧ರಿಂದ೦೫ ಎಕರೆ ಭೂಹಿಡುವಳಿ ಹೊಂದಿರುವ ೧೬ ಕುಟುಂಬಗಳು ಶೇ.೫೫.೧೭ರಷ್ಟಿದ್ದರೆ, ೦೫ರಿಂದ೧೦ ಎಕರೆ ಭೂ ಹಿಡುವಳಿ ಹೊಂದಿರುವ ೧೩ ಕುಟುಂಬಗಳು ಶೇ.೪೪.೮೩ರಷ್ಟಿದ್ದಾರೆ. ಕೃಷಿ ಭೂಮಿಯಲ್ಲಿ ನೀರಾವರಿವಲ್ಲದ ಭೂಮಿಯನ್ನು ಹೊಂದಿರುವ ಕುಟುಂಬಗಳ ಒಟ್ಟು ಎಕರೆಯಲ್ಲಿ ವರ್ಗೀಕರಿಸುವುದಾದರೆ ೦೧ರಿಂದ೦೫ ಎಕರೆ ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವ ೨೩ ಕುಟುಂಬಗಳು ಶೇ.೪೧.೦೭ರಷ್ಟು, ೦೫ರಿಂದ೧೦ ಎಕರೆ ನೀರಾವರಿ ಅಲ್ಲದ ಭೂಮಿಯ ಹೊಂದಿರುವ ಶೇ.೩೩.೯೩ರಷ್ಟು ಕುಟುಂಬಗಳು, ೧೦ರಿಂದ೧೫ ಎಕರೆ ಹಾಗೂ ೧೫ಕ್ಕಿಂತ ಹೆಚ್ಚು ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೧೨.೫೦ರಷ್ಟು ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಭಾಗದಲ್ಲಿದ್ದಾರೆ. ಅಂದರೆ ಈ ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೆಚ್ಚಾಗಿ ೧ರಿಂದ೫ಎಕರೆವರೆಗೆ ಹೊಂದಿರುವ ಕುಟುಂಬಗಳು (ಶೇ.೪೧.೦೭) ಅಧಿಕ ಪ್ರಮಾಣದಲ್ಲಿದ್ದಾರೆ. ಇವರು ಅತೀ ಸಣ್ಣ ಭೂಹಿಡುವಳಿ ಹೊಂದಿರುವ ಕುಟುಂಬಗಳಾಗಿವೆ. ಹಾಗೆಯೇ ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ೨೪ ಕುಟುಂಬಗಳು ಶೇ೨೯.೧೭ರಷ್ಟಿದ್ದರೆ, ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಶೇ.೭೦.೭೩ರಷ್ಟು ೫೪ ಕುಟುಂಬಗಳು ಈ ವಲಯಗಳಲ್ಲಿ ಇರುವುದು ಕಂಡುಬರುತ್ತದೆ. ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳನ್ನು ಎಕರೆಗಳಲ್ಲಿ ಅವಲೋಕಿಸುವುದಾದರೆ, ನೀರಾವರಿ ಕೃಷಿ ಭೂಮಿಯನ್ನು ೦೧ರಿಂದ೦೫ ಎಕರೆವರೆಗೆ ಶೇ.೫೪.೧೬ರಷ್ಟು ಕುಟಂಬಗಳು, ೦೫ರಿಂದ೧೦ ಎಕರೆವರೆಗೆ ಶೇ ೩೩.೩೩ರಷ್ಟು ಕುಟಂಬಗಳು, ೧೦ರಿಂದ೧೫ ಎಕರೆವರೆಗೆ ಶೇ.೧೨.೫೧ರಷ್ಟು, ಕುಟುಂಬಗಳು ನಿರಾವರಿ ಭೂಮಿಯನ್ನು ಹೊಂದಿದ್ದಾರೆ. ಇದರಲ್ಲಿ ೦೧ರಿಂದ೦೫ ಎಕರೆ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳೇ ಹೆಚ್ಚಾಗಿವೆ. ನೀರಾವರಿವಲ್ಲದ ಕೃಷಿ ಭೂಮಿಗೆ ಸಂಬಂಧಿಸಿದಂತೆ ೦೧–೦೫ ಎಕರೆವರೆಗೆ ಶೇ.೪೮.೨೭ರಷ್ಟು ಕುಟಂಬಗಳು,೦೫ರಿಂದ೧೦ ಎಕರೆವರೆಗೆ ಶೇ.೩೪.೪೮ರಷ್ಟು ಕುಟಂಬಗಳು, ೧೦ರಿಂದ೧೫ ಎಕರೆವರೆಗೆ ಶೇ.೧೭.೨೫ರಷ್ಟು ಕುಟುಂಬಗಳು ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವುದು ಬಳ್ಳಾರಿ ಗಣಿ ವಲಯದ ಗ್ರಾಮೀಣ ಪ್ರದೇಶದಲ್ಲಿದ್ದಾರೆ. ಈ ವಲಯದಲ್ಲಿಯೂ ಸಹ ೧ರಿಂದ ೫ ಎಕರೆ ಭೂಮಿಯನ್ನು ಹೊಂದಿರುವ ಅತಿ ಸಣ್ಣ ಭೂಹಿಡುವಳಿದಾರರು ಅಧಿಕವಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಒಟ್ಟಾರೆಯಾಗಿ ಗಣಿ ವಲಯಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು, ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು (ಶೇ.೩೭.೩೪), ಹೊಸಪೇಟೆ ವಲಯದಲ್ಲಿ ಕಂಡುಬಂದರೆ ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೆಚ್ಚಾಗಿ ಹೊಂದಿರುವ ಕುಟುಂಬಗಳು (ಶೇ.೭೦.೭೩) ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬಂದಿರುವುದು ಗಮನಿಸಬಹುದಾಗಿದೆ.

**೪.೨.೨ ಕೃಷಿ ಬೆಳೆ ಮತ್ತು ಇಳುವರಿ**

ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆಯ ಸ್ಥಗಿತತೆಯ ನಂತರದಲ್ಲಿ ಕೃಷಿ ಭೂಮಿಯನ್ನು ಉಳುಮೆ ಮಾಡುವ ಹಾಗೂ ಬೆಳೆಯುವ ಇಳುವರಿಯ ಬಗ್ಗೆ ಸಂಬಂಧಿಸಿದಂತೆ ಸಮೀಕ್ಷೆ ಒಳಪಡಿಸಿದಾಗ ಕುಟುಂಬಗಳಿಂದ ಬಂದಂತಹ ಫಲಿತಾಂಶದ ದತ್ತಾಂಶವನ್ನು ಕೋಷ್ಟಕ ೪.೩ರಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೩ ಗಣಿ ಗ್ರಾಮೀಣ ಪ್ರದೇಶದಲ್ಲಿ ಉಳುಮೆ ಮಾಡುತ್ತಿರುವ ಮತ್ತು ಕೃಷಿ ಭೂಮಿಯಲ್ಲಿ ಇಳುವರಿ ಬೆಳೆದಿರುವ ಕುಟುಂಬಗಳ ಪ್ರಮಾಣ.**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕೃಷಿ ಭೂಮಿಯಲ್ಲಿ ಗಣಿ ಸ್ಥಗಿತತೆ ನಂತರ ಉಳುಮೆ ಮಾಡುತ್ತಿದ್ದೀರಾ? | | | | | | |
| | ಹೌದು | ೬೮ | ೭೫.೫೬ | ೭೪ | ೮೨.೨೨ | ೫೭ | ೬೩.೩೪ |
| | ಇಲ್ಲ | ೨೨ | ೨೪.೪೪ | ೧೬ | ೧೭.೭೮ | ೩೩ | ೩೬.೬೬ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಕೃಷಿ ಭೂಮಿಯಲ್ಲಿ ಯಾವ ಇಳುವರಿ ಬೆಳೆಯುತ್ತೀರಾ? | | | | | | |
| | ಬಾಳೆ | ೧೦ | ೧೪.೭೦ | – | – | – | – |
| | ಮೆಕ್ಕೆಜೋಳ | ೧೯ | ೨೭.೯೪ | ೨೬ | ೩೫.೧೩ | ೧೦ | ೧೭.೫೬ |
| | ಜೋಳ | ೧೦ | ೧೪.೭೦ | ೦೯ | ೧೨.೧೬ | ೦೭ | ೧೨.೨೮ |
| | ರಾಗಿ | ೦೩ | ೦೪.೪೪ | ೦೮ | ೧೦.೦೮ | ೦೬ | ೧೦.೫೨ |
| | ಸಜ್ಜೆ | – | – | ೦೩ | ೦೪.೦೫ | ೦೬ | ೧೦.೫೨ |
| | ಹತ್ತಿ | – | – | – | – | ೧೧ | ೧೯.೨೯ |
| | ಶೇಂಗಾ | ೦೯ | ೧೩.೨೩ | ೧೮ | ೨೪.೩೪ | ೧೩ | ೨೨.೮೧ |
| | ಭತ್ತ | – | – | – | – | – | – |
| | ಕಬ್ಬು | ೦೯ | ೧೩.೨೩ | – | – | – | – |
| | ತರಕಾರಿ | ೦೮ | ೧೧.೭೬ | ೧೦ | ೧೩.೫೪ | ೦೪ | ೦೭.೦೨ |
| | ಒಟ್ಟು | ೬೮ | ೧೦೦ | ೭೪ | ೧೦೦ | ೫೭ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ವಲಯದ ಗ್ರಾಮೀಣ ಪ್ರದೇಶದಲ್ಲಿ ಸಾಗುವಳಿ ಮಾಡುವ ಭೂಮಿಯ ಪ್ರಮಾಣ ಹಾಗೂ ಕೃಷಿ ಭೂಮಿಯಲ್ಲಿ ಇಳುವರಿ ಬೆಳೆದಿರುವ ಕುಟುಂಬಗಳ ಶೇಕಡವಾರುಗಳನ್ನು ತೋರಿಸುತ್ತದೆ. ಈ ಕೋಷ್ಟಕವನ್ನು ಅವಲೋಕಿಸಿದಾಗ, ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಗಣಿಗಾರಿಕೆಯ ಸ್ಥಗಿತತೆಯ ನಂತರ ಸಾಗುವಳಿ ಅಥವಾ ಉಳುಮೆ ಮಾಡುತ್ತಿರುವುದಕ್ಕೆ ಸಂಬಂಧಿಸಿದಂತೆ ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೮೨.೨೨ರಷ್ಟು ಕುಟುಂಬಗಳು ಕೃಷಿ ಭೂಮಿಯಲ್ಲಿ ಉಳುಮೆ ಮಾಡುತ್ತಿರುವ ಪ್ರಮಾಣ ಅಧಿಕವಾಗಿದೆ. ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಶೇ.೬೩.೩೪ರಷ್ಟು ಕಡಿಮೆ ಪ್ರಮಾಣದ ಕುಟುಂಬಗಳು ಕೃಷಿ ಭೂಮಿಯಲ್ಲಿ ಸಾಗುವಳಿ ಮಾಡುವುದರಲ್ಲಿ ತೊಡಗಿರುವುದು ಕಂಡುಬರುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯಲ್ಲಿ ಸಾಗುವಳಿ ತೊಡಗಿಸಿಕೊಂಡ ೬೮ ಕುಟುಂಬಗಳು ಶೇ.೭೫.೫೬ರಷ್ಟಿದ್ದರೇ, ೨೨ ಕುಟುಂಬಗಳು ಶೇ.೨೪.೪೪ರಷ್ಟು ಸಾಗವಳಿ ಮಾಡದಿರುವುದು ಕಂಡುಬಂದಿದೆ. ಸಾಗುವಳಿಯನ್ನು ತೊಡಗಿಸಿಕೊಂಡ ಕುಟುಂಬಗಳು ಕೃಷಿ ಭೂಮಿಯಲ್ಲಿ ಬಾಳೆ ಶೇ.೧೪.೭೦ರಷ್ಟು, ಮೆಕ್ಕೆಜೋಳ ಶೇ.೨೭.೯೪ರಷ್ಟು, ಜೋಳ ಶೇ.೧೪.೭೦ ರಷ್ಟು, ರಾಗಿ ಶೇ.೦೪.೪೪ರಷ್ಟು, ಶೇಂಗಾ ಶೇ.೧೩.೨೩ರಷ್ಟು, ಕಬ್ಬು ಶೇ.೧೩.೨೩ರಷ್ಟು ಮತ್ತು ತರಕಾರಿ ಶೇ.೧೧.೭೬ರಷ್ಟು ಕುಟುಂಬಗಳು ಇಳುವರಿ ಬೆಳೆದಿರುವ ಪ್ರಮಾಣವಾಗಿದೆ. ಅಂದರೆ ಬಹುತೇಕವಾಗಿ ಈ ಗ್ರಾಮೀಣ ಪ್ರದೇಶದಲ್ಲಿ ಬಾಳೆ ಮೆಕ್ಕೆಜೋಳ, ಜೋಳ, ರಾಗಿ, ಸಜ್ಜೆ, ಶೇಂಗಾ ಮತ್ತು ತರಕಾರಿ ಆಹಾರ ಪದಾರ್ಥಗಳನ್ನು ಬೆಳೆಯುತ್ತಿದ್ದು, ಕೃಷಿ ಭೂಮಿಯಲ್ಲಿ ಮೆಕ್ಕೆ ಜೋಳವನ್ನು

ಬೆಳೆದಿರುವ ಕುಟುಂಬಗಳು (ಶೇ.೨೭.೯೪) ಅಧಿಕ ಪ್ರಮಾಣದಲ್ಲಿದರೆ, ರಾಗಿ ಬೆಳೆಯನ್ನು ಕಡಿಮೆ ಪ್ರಮಾಣದಲ್ಲಿ ಬೆಳೆದಿರುವ ಕುಟುಂಬಗಳು ಶೇ.೦೪.೪೪ರಷ್ಟಿದೆ. ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೮೨.೨೨ರಷ್ಟು ೭೪ ಕುಟುಂಬಗಳು ಕೃಷಿ ಭೂಮಿ ಸಾಗುವಳಿಯಲ್ಲಿ ತೊಡಗಿಸಿಕೊಂಡರೇ ಇನ್ನುಳಿದ ಶೇ.೧೭.೭೮ರಷ್ಟು ೧೬ ಕುಟುಂಬಗಳು ಸಾಗುವಳಿಯಲ್ಲಿ ತೊಡಗಿರುವುದಿಲ್ಲ. ಕೃಷಿ ಭೂಮಿಯ ಸಾಗುವಳಿಯಲ್ಲಿ ತೊಡಗಿರುವ ಕುಟುಂಬಗಳು ಮುಖ್ಯವಾಗಿ ಮೆಕ್ಕೆಜೋಳ, ಜೋಳ, ರಾಗಿ, ಸಜ್ಜೆ, ಶೇಂಗಾ ಮತ್ತು ತರಕಾರಿಗಳನ್ನು ಬೆಳೆಯುತ್ತಿದ್ದಾರೆ. ಇದರಲ್ಲಿ ಮೆಕ್ಕೆಜೋಳದ ಇಳುವರಿಯನ್ನು ಬೆಳೆಯುವ ಕುಟುಂಬಗಳ (ಶೇ.೩೫.೧೩) ಪ್ರಮಾಣ ಅಧಿಕವಾಗಿದೆ. ಸಜ್ಜೆ ಇಳುವರಿಯನ್ನು ಬೆಳೆದಿರುವ ಕುಟುಂಬಗಳು (ಶೇ.೦೪.೦೫) ಪ್ರಮಾಣ ಕಡಿಮೆ ಇರುವುದು ಈ ವಲಯಗಳಲ್ಲಿ ಕಂಡುಬರುತ್ತದೆ. ಹಾಗೆಯೇ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ಸಾಗುವಳಿಯನ್ನಾಗಿಸಿಕೊಂಡ ೫೭ಕುಟುಂಬಗಳು ಶೇ.೬೩.೩೪ರಷ್ಟಿದ್ದರೆ, ಸಾಗುವಳಿಯನ್ನು ತೊಡಗದೇ ಇರುವ ೩೩ ಕುಟುಂಬಗಳು ಶೇ.೩೬.೬೬ರಷ್ಟರ ಪ್ರಮಾಣದಲ್ಲಿರುವುದು ಕಂಡುಬಂದಿದೆ. ಈ ವಲಯದ ಕೃಷಿ ಭೂಮಿಯಲ್ಲಿ ಮೆಕ್ಕೆಜೋಳ, ಜೋಳ, ರಾಗಿ, ಹತ್ತಿ, ಶೇಂಗಾ ಮತ್ತು ತರಕಾರಿಯ ಇಳುವರಿಯನ್ನು ಮುಖ್ಯವಾಗಿ ಬೆಳೆಯುತ್ತಾರೆ. ಇದರಲ್ಲಿ ಶೇಂಗಾ ಇಳುವರಿ ಬೆಳೆಯುವ ಪ್ರಮಾಣ ಶೇ.೨೨.೮೦ರಷ್ಟು ಕುಟುಂಬಗಳಲ್ಲಿ ಕಂಡುಬಂದಿದ್ದು, ಇದು ಅಧಿಕ ಪ್ರಮಾಣದಲ್ಲಿ ಬೆಳೆದ ಇಳುವರಿಯಾಗಿದೆ. ಕುಟುಂಬಗಳು ತರಕಾರಿಯನ್ನು ಶೇ.೦೭.೦೨ರಷ್ಟು ಪ್ರಮಾನದಲ್ಲಿ ಬೆಳೆದಿದ್ದು, ಇದರ ಪ್ರಮಾಣ ಕಡಿಮೆಯಾಗಿದೆ. ಆದರೆ ಬಳ್ಳಾರಿ–ಹೊಸಪೇಟೆ–ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಸಾಗುವಳಿ ಮಾಡದೇ ಇರುವ ಕುಟುಂಬಗಳಿವೆ. ಈ ಕುಟುಂಬಗಳು ಸಾಗುವಳಿ ಮಾಡದಿರಲು ಪಿತ್ರಾರ್ಜಿತವಾಗಿ ಭೂಮಿ ಹಂಚಿಕೆ ಆಗದಿರುವುದು, ಕೃಷಿ ಭೂಮಿಯಲ್ಲಿ ಗಣಿ ಡಿಗ್ಗಿಂಗ್ ಮಾಡಿರುವ ಪರಿಣಾಮ, ಮಳೆಯ ಅಭಾವವೇ ಕಾರಣವಾಗಿದೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಹೊಸಪೇಟೆ ಗ್ರಾಮೀಣ ಪ್ರದೇಶದ ೨೨ ಕುಟುಂಬಗಳು ಶೇ.೨೪.೪೪ರಷ್ಟು, ಸಂಡೂರು ಗಣಿ ಪ್ರದೇಶದಲ್ಲಿ ೧೬ ಕುಟುಂಬಗಳು ಶೇ.೧೭.೭೮ರಷ್ಟು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೩೬.೬೬ರಷ್ಟು ಕುಟುಂಬಗಳು ಸಾಗುವಳಿಯನ್ನು ಮಾಡುತ್ತಿಲ್ಲ. ಈ ಮೂರು ಗಣಿ ವಲಯದಲ್ಲಿ ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳು (ಶೇ.೩೬.೬೬) ಸಾಗುವಳಿ ಮಾಡದಿರುವುದು ಕ್ಷೇತ್ರಕಾರ್ಯದಿಂದ ಕಂಡುಬರುತ್ತದೆ. ಹೀಗೆ ಸಾಗುವಳಿ ತೊಡಗಿರುವ ಕುಟುಂಬಗಳಿಗೆ ಬರುವ ಆದಾಯವೆಷ್ಟು ಎಂಬ ಅಂಶವನ್ನು ಸಮೀಕ್ಷೆಗೆ ಒಳಪಡಿಸಿದಾಗ ಕುಟುಂಬಗಳಿಂದ ಬಂದಂತಹ ಫಲಿತಾಂಶವನ್ನು ಅಂಕಿ–ಅಂಶಗಳಲ್ಲಿ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೪.೨.೩ ಕೃಷಿಯಲ್ಲಿನ ಆದಾಯ

ಗ್ರಾಮೀಣ ಪ್ರದೇಶದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳು ಕುಟುಂಬಗಳ ಆದಾಯಕ್ಕೆ ಸಂಬಂಧಿಸಿದಂತೆ ಸಮೀಕ್ಷೆಗೆ ಒಳಪಡಿಸಿದಾಗ ಬಂದಿರುವ ಫಲಿತಾಂಶಗಳ ಅಂಕಿ–ಅಂಶಗಳನ್ನು ದಾಖಲಿಸಿ ವಿಶ್ಲೇಷಣೆ ಒಳಪಡಿಸಲಾಗಿದೆ.

**ಕೋಷ್ಟಕ ೪.೪ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಸಾಗುವಳಿಯಿಂದ ಬರುವ ವಾರ್ಷಿಕ ಆದಾಯದ ಪ್ರಮಾಣ**

| ಕ್ರಸಂ | ವಾರ್ಷಿಕ ಆದಾಯ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ೧೦,೦೦೦–೨೦,೦೦೦ | – | – | ೦೪ | ೦೫.೫೦ | ೧೩ | ೨೨.೮೧ |
| ೦೨ | ೨೦,೦೦೦–೩೦,೦೦೦ | ೧೭ | ೨೫.೦೦ | ೩೪ | ೪೫.೯೬ | ೧೭ | ೨೯.೮೩ |
| ೦೩ | ೩೦,೦೦೦–೪೦,೦೦೦ | ೩೩ | ೪೮.೫೩ | ೩೬ | ೪೮.೬೪ | ೧೨ | ೨೧.೦೫ |
| ೦೪ | ೪೦,೦೦೦ಕ್ಕಿಂತ ಹೆಚ್ಚು | ೧೮ | ೨೬.೪೭ | – | – | ೧೫ | ೨೬.೩೧ |
| | ಒಟ್ಟು | ೬೮ | ೧೦೦ | ೭೪ | ೧೦೦ | ೫೭ | ೧೦೦ |

**ಮೂಲ : ಕ್ಷೇತ್ರಕಾರ್ಯದ ಮಾಹಿತಿ (ಸೂಚನೆ: ಸಾಗುವಳಿಯಲ್ಲಿ ತೊಡಸಿಗಿದ ಕುಟುಂಬಗಳನ್ನು ಮಾತ್ರ ಪರಿಗಣಿಸಲಾಗಿದೆ)**

ಕೋಷ್ಟಕ ೪.೪ರಲ್ಲಿ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕುಗಳ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯ ಸಾಗುವಳಿ ತೊಡಗಿಸಿಕೊಂಡಿರುವ ಕುಟುಂಬಗಳಿಗೆ ವಾರ್ಷಿಕವಾಗಿ ಬರುವ ಆದಾಯದ ಪ್ರಮಾಣವನ್ನು ತೋರಿಸುತ್ತದೆ. ಕೃಷಿ ಭೂಮಿಯ ಸಾಗುವಳಿಯಲ್ಲಿ ತೊಡಗಿರುವ ಕುಟುಂಬಗಳ ಮಾಹಿತಿ ಆಧಾರದ ಮೇಲೆ ವಾರ್ಷಿಕವಾಗಿ ಬರುವ ಆದಾಯದ ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಹೊಸಪೇಟೆ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ೨೦,೦೦೦ರಿಂದ ೩೦,೦೦೦ ವಾರ್ಷಿಕ ಆದಾಯ ಪಡೆಯುವ ೧೭ ಕುಟುಂಬಗಳು ಶೇ.೨೫.೦೦ರಷ್ಟು, ೩೦ ಸಾವಿರದಿಂದ ೪೦ ಸಾವಿರದವರೆಗೆ ೩೩ ಕುಟುಂಬಗಳು ಶೇ.೪೮.೫೩ರಷ್ಟು ಕೃಷಿಯಿಂದ ವಾರ್ಷಿಕ ಆದಾಯವನ್ನು ಪಡೆಯುತ್ತದೆ. ಆದರೆ ೪೦ ಸಾವಿರಕ್ಕಿಂತ ಹೆಚ್ಚು ಕೃಷಿಯಿಂದ ಆದಾಯ ಪಡೆಯುವ ೧೮ ಕುಟುಂಬಗಳು ಶೇ.೨೬.೪೭ರಷ್ಟಿದ್ದಾರೆ. ೪೦ ಸಾವಿರಕ್ಕಿಂತ ಅಧಿಕ ಆದಾಯ ಪಡೆಯುವ ಕುಟಂಬಗಳು ಕಡಿಮೆ ಪ್ರಮಾಣದಲ್ಲಿದ್ದು, ೩೦,೦೦೦ ದಿಂದ ೪೦,೦೦೦ರವರೆಗೆ ಆದಯವನ್ನು ಪಡೆಯುವ ಕುಟುಂಬಗಳು ಅಧಿಕ ಪ್ರಮಾಣದಲ್ಲಿ ಇರುವವುದು ಬಾಸವಾಗುತ್ತದೆ. ಸಂಡೂರು ತಾಲ್ಲೂಕು ಗಣಿ ಪ್ರದೇಶಗಳಲ್ಲಿ ೧೦ ಸಾವಿರದಿಂದ ೨೦ಸಾವಿರದವರೆಗೆ ೦೪ ಕುಟುಂಬಗಳು ಶೇ.೦೫.೫೦ರಷ್ಟು, ೨೦,೦೦೦ ರಿಂದ ೩೦,೦೦೦ರವರೆಗೆ ೩೬ ಕುಟುಂಬಗಳು ಶೇ.೪೫.೯೬ರಷ್ಟು, ೩೦,೦೦೦ ರಿಂದ ೪೦,೦೦೦ವರೆಗೆ ೩೬ ಕುಟುಂಬಗಳು ಶೇ.೪೮.೬೪ರಷ್ಟು ಕೃಷಿಯಿಂದ ವಾರ್ಷಿಕ ಆದಾಯವನ್ನು ಪಡೆಯುವ ಪ್ರಮಾಣವಾಗಿದೆ. ಇದರಲ್ಲಿ ೩೦,೦೦೦ ರಿಂದ ೪೦,೦೦೦ವರೆಗೆ ಕೃಷಿಯಿಂದ ಅಧಿಕ ಪ್ರಮಾಣದ ಆದಾಯ ಪಡೆಯುವ ಕುಟುಂಬಗಳಾಗಿದು, ಅದು ಶೇ.೪೮.೬೪ರ ಪ್ರಮಾಣದಲ್ಲಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ೧೩ ಕುಟುಂಬಗಳು ೧೦,೦೦೦ ರಿಂದ ೨೦,೦೦೦ರ ವರೆಗೆ ಶೇ.೨೨.೮೧ರಷ್ಟು, ೨೦,೦೦೦ರಿಂದ ೩೦,೦೦೦ವರೆಗೆ ೧೭ ಕುಟುಂಬಗಳು ಶೇ.೨೯.೮೩ರಷ್ಟು ೩೦,೦೦೦ ರಿಂದ ೪೦,೦೦೦ವರೆಗೆ ೧೨ ಕುಟುಂಬಗಳು ಶೇ.೨೧.೦೫ರಷ್ಟು, ೪೦ ಸಾವಿರಕ್ಕಿಂತ ಹೆಚ್ಚು ೧೫ ಕುಟುಂಬಗಳು ಶೇ.೨೬.೩೧ರಷ್ಟು ಆದಾಯವನ್ನು ಕೃಷಿಯಿಂದ ವಾರ್ಷಿಕವಾಗಿ ಪಡೆಯುತ್ತಿದ್ದಾರೆ. ಇದರಲ್ಲಿ ೨೦,೦೦೦ ದಿಂದ ೩೦,೦೦೦ವರೆಗೆ ಅಧಿಕ ಪ್ರಮಾಣದ ಆದಾಯ ಪಡೆಯುವ ಕುಟುಂಬಗಳಾಗಿವೆ. ಒಟ್ಟಾರೆ ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ೩೦,೦೦೦ ದಿಂದ ೪೦,೦೦೦ವರೆಗೆ ಅಧಿಕ ಪ್ರಮಾಣದ ಆದಾಯವನ್ನು ಸಂಡೂರು ಗಣಿ ವಲಯದ ಕುಟುಂಬಗಳಲ್ಲಿ ಕಂಡು ಬಂದರೆ, ಕಡಿಮೆ ಪ್ರಮಾಣದ ಆದಾಯ ಗಳಿಸುವ ಕುಟುಂಬಗಳು ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

**೪.೩ ಕೃಷಿಯೇತರ ಚಟುವಟಿಕೆ: ಕೃಷಿ ಭೂಮಿ**

ಗಣಿ ಕೈಗಾರಿಕೆಗಳಿಗೆ ಕೃಷಿ ಜಮೀನನ್ನು ಅಥವಾ ಭೂಮಿಯನ್ನು ಕೊಟ್ಟಿರುವುದಕ್ಕೆ ಸಂಬಂಧಿಸಿದಂತೆ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದಂತಹ ಫಲಿತಾಂಶಗಳ ದತ್ತಾಂಶವನ್ನು ಕೋಷ್ಟಕ ೪.೫ರಲ್ಲಿ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೫. ಗಣಿ ಕೈಗಾರಿಕೆಗೆ ಜಮೀನನ್ನು ನೀಡಿರುವ ಕುಟುಂಬಗಳ ವಿವರ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಗಣಿಕೈಗಾರಿಕೆ ಕೃಷಿ ಭೂಮಿ ಕೊಟ್ಟಿದ್ದೀರಾ | | | | | | |
| | ಹೌದು | ೨೬ | ೨೮.೮೯ | ೩೩ | ೩೬.೬೭ | ೬೩ | ೭೦ |
| | ಇಲ್ಲ | ೬೪ | ೭೧.೧೧ | ೫೭ | ೬೩.೩೩ | ೨೭ | ೩೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಎಷ್ಟು ಎಕರೆ ಕೊಟ್ಟಿದ್ದೀರಾ | | | | | | |
| | ೧-೩ ಎಕರೆ | ೧೨ | ೪೬.೧೬ | ೧೯ | ೫೭.೫೭ | ೧೯ | ೩೦.೧೫ |
| | ೩-೫ ಎಕರೆ | ೦೭ | ೨೬.೯೨ | ೦೯ | ೨೭.೨೮ | ೨೪ | ೩೮.೦೯ |
| | ೫-೭ ಎಕರೆ | ೦೭ | ೨೬.೯೨ | ೦೫ | ೧೫.೧೫ | ೨೦ | ೩೧.೭೬ |
| | ೭ ಕ್ಕಿಂತ ಹೆಚ್ಚು | - | - | - | - | - | - |
| | ಒಟ್ಟು | ೨೬ | ೧೦೦ | ೩೩ | ೧೦೦ | ೬೩ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯಗಳ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿರುವ ಕುಟುಂಬಗಳ ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಹೊಸಪೇಟೆ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಶೇ.೨೮.೮೯ರಷ್ಟು ೨೬ ಕುಟುಂಬಗಳು ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ನೀಡಿದ್ದಾರೆ. ಅಂದರೆ ಗಣಿಕೈಗಾರಿಕೆಯ ಸ್ಥಾಪನೆಗೆ, ರಸ್ತೆಯ ನಿರ್ಮಾಣಕ್ಕೆ ಹಾಗೂ ಗಣಿಕೈಗಾರಿಕೆಯ ಸಂಪನ್ಮೂಲಗಳನ್ನು ಸಂಗ್ರಹಿಸಲು ರೈತರ ಜಮೀನನ್ನು ಹಣಕೊಟ್ಟ ಖರೀದಿಸಿದ್ದಾರೆಂದು ಕುಟುಂಬಗಳ ಮಾಹಿತಿದಾರರು ತಿಳಿಸಿದ್ದಾರೆ. ಎಷ್ಟು ಪ್ರಮಾಣ ಎಕರೆ ಭೂಮಿಯನ್ನು ಗಣಿಕೈಗಾರಿಕೆಗೆ ಈ ಕುಟುಂಬಗಳು ನೀಡಿದ್ದಾರೆ ಎಂಬ ಮಾಹಿತಿಗೆ ಸಂಬಂಧಿಸಿದಂತೆ ನಾಲ್ಕು ವರ್ಗಗಳಲ್ಲಿ ಎಕರೆಗಳನ್ನು ವರ್ಗೀಕರಿಸಿ, ಕುಟುಂಬಗಳು ಗಣಿ ಕೈಗಾರಿಕೆ ನೀಡಿರುವ ಜಮೀನಿನ ಶೇಕಡವಾರು ಪ್ರಮಾಣವನ್ನು ತಿಳಿಸಲಾಗಿದೆ. ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದಲ್ಲಿ ೧-೩ಎಕರೆ ೧೨ ಕುಟುಂಬಗಳು ಶೇ.೪೬.೧೬ರಷ್ಟು, ೩-೫ಎಕರೆ ೦೭ ಕುಟುಂಬಗಳು ಶೇ ೨೬.೯೨ರಷ್ಟು, ೫-ರಿಂದ ೭ಎಕರೆ ೦೭ ಕುಟುಂಬಗಳು ಶೇ.೨೬.೯೨ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿರುವುದು ಕಂಡುಬರುತ್ತದೆ. ಇದರಲ್ಲಿ ೧-೩ಎಕರೆವರೆಗೆ ಬರುವ ಕುಟುಂಬಗಳು ಗಣಿಕೈಗಾರಿಕೆಗೆ ತಮ್ಮ ಕೃಷಿ ಭೂಮಿಯನ್ನು ಕೊಟ್ಟಿರುವ ಪ್ರಮಾಣ ಅಧಿಕವಾಗಿ ಕಂಡುಬರುತ್ತದೆ. ಹೀಗೆ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗಳಿಗೆ ನೀಡಿ ಕೃಷಿಕರು ಭೂರಹಿತ ಕುಟುಂಬಗಳಾಗಿ ಪರಿವರ್ತನೆಯಾಗಿವೆ. ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ೩೩ ಕುಟುಂಬಗಳು ಶೇ.೩೬.೬೭ರಷ್ಟು ಪ್ರಮಾಣ ಕುಟುಂಬಗಳು ತಮ್ಮ ಕೃಷಿ ಭೂಮಿಯನ್ನು ಗಣಿ ಕೈಗಾರಿಕೆಗಳಿಗೆ ಕೊಟ್ಟಿದ್ದಾರೆ. ಕೊಟ್ಟಿರುವ ಕೃಷಿ ಭೂಮಿಯ ಪ್ರಮಾಣ ಎಕರೆಗಳಲ್ಲಿ ಹೇಳುವುದಾದರೆ ೧ರಿಂದ೩ ಎಕರೆವರೆಗೆ ೧೯ ಕುಟುಂಬಗಳು ಶೇ.೫೭.೫೭ರಷ್ಟು, ೩ರಿಂದ೫ಎಕರೆ ೦೯ ಕುಟುಂಬಗಳು ಶೇ.೨೭.೨೮ರಷ್ಟು, ೫ರಿಂದ೭ ಎಕರೆ ೦೫ ಕುಟುಂಬಗಳು ಶೇ.೧೫.೧೫ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿ ಉದ್ಯಮಗಳಿಗೆ ನೀಡಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೭೦ರಷ್ಟು ಕುಟುಂಬಗಳು ತಮ್ಮ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗಳಿಗೆ ಮಾರಿದ್ದು, ೧-೩ ಎಕರೆ ೧೯ ಕುಟುಂಬಗಳು ಶೇ.೩೦.೧೫ರಷ್ಟು, ೩-೫ಎಕರೆ ೨೪ ಕುಟುಂಬಗಳು ಶೇ.೩೮.೦೯ರಷ್ಟು, ೫-೭ ಎಕರೆ ೨೦ ಕುಟುಂಬಗಳು ಶೇ.೩೧.೭೬ರಷ್ಟು ಗಣಿಕೈಗಾರಿಕೆಗಳಿಗೆ ತಮ್ಮ ಕೃಷಿ ಭೂಮಿಯನ್ನು ಕೊಟ್ಟಿರುವ ಅಥವಾ ಮಾರಿರುವ ಪ್ರಮಾಣವಾಗಿದೆ. ಈ ಗಣಿ ವಲಯದಲ್ಲಿ ಹೆಚ್ಚಾಗಿ ಅಂದರೆ ೩-೫ ಎಕರೆ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿರುವ ಕುಟುಂಬಗಳು (ಶೇ.೩೮.೦೯) ಹೆಚ್ಚಿನ ಪ್ರಮಾಣದಲ್ಲಿ ಕಂಡು ಬಂದಿರುವುದು ಈ ವಲಯದ ದುಸ್ಥಿಯೇ ಆಗಿದೆ.

**೧.೩.೧ ಕೃಷಿ ಭೂಮಿಯಲ್ಲಿ ಕಡಿಮೆ ಇಳುವರಿ**

ಗಣಿ ಕೇಂದ್ರಿತ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯಲ್ಲಿ ಕಡಿಮೆ ಇಳುವರಿಗೆ ಸಂಬಂಧಿಸಿದಂತೆ ಹೊಸಪೇಟೆ, ಬಳ್ಳಾರಿ, ಸಂಡೂರು, ಗಣಿ ವಲಯದ ಗ್ರಾಮೀಣ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದಂತಹ ಫಲತಾಂಶವನ್ನು ಅಂಕಿ-ಅಂಶಗಳಿಂದ ದಾಖಲಿಸಿ ಕೋಷ್ಟಕ ೪.೬ರಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೬. ಗಣಿ ಗ್ರಾಮೀಣ ಪ್ರದೇಶದಲ್ಲಿ ಕಡಿಮೆ ಇಳುವರಿ ಮತ್ತು ಕಾರಣಗಳ ವಿವರ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲುಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಕೃಷಿ ಭೂಮಿಯಲ್ಲಿ ಇಳುವರಿ ಕಡಿಮೆಯಾಗಿದೆಯಾ | | | | | | |
| | ಹೌದು | ೭೯ | ೮೭.೭೭ | ೮೫ | ೯೪.೪೪ | ೮೩ | ೯೨.೨೩ |
| | ಇಲ್ಲ | ೧೧ | ೧೨.೩೩ | ೦೫ | ೦೫.೫೬ | ೦೭ | ೦೭.೭೭ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಇಳುವರಿ ಕಡಿಮೆಯಾಗಲು ಕಾರಣ | | | | | | |
| | ಮಳೆ ಅಭಾವ | ೨೨ | ೨೯.೭೨ | ೩೧ | ೩೬.೪೭ | ೨೬ | ೩೨.೫೦ |
| | ಗಣಿಗಾರಿಕೆ | ೩೦ | ೩೭.೯೭ | ೩೨ | ೩೭.೬೪ | ೨೭ | ೩೦.೦೦ |
| | ಬರಪೀಡಿತ | ೧೭ | ೨೧.೫೩ | ೧೨ | ೧೪.೧೧ | ೧೬ | ೨೦.೦೦ |
| | ಭೂಸವೇತ | ೧೦ | ೧೨.೬೫ | ೧೦ | ೧೧.೭೭ | ೧೪ | ೧೭.೫೦ |
| | ಒಟ್ಟು | ೭೯ | ೯೯.೯೯ | ೮೫ | ೯೯.೯೯ | ೮೩ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಇಳುವರಿ ಕಡಿಮೆ ಇರುವ ಪ್ರಮಾಣ ಹಾಗೂ ಕಡಿಮೆ ಇಳುವರಿಗೆ ಕಾರಣಗಳನ್ನು ತಿಳಿಸಿರುವ ಕುಟುಂಬಗಳ ಶೇಕಡಾವಾರು ಪ್ರಮಾಣವನ್ನು ತೋರಿಸುತ್ತದೆ. ಮೇಲಿನ ಕೋಷ್ಟಕವನ್ನು ತುಲನಾತ್ಮಕವಾಗಿ ಅವಲೋಕಿಸಿದಾಗ ಹೊಸಪೇಟೆ ತಾಲ್ಲೂಕಿನ ೭೯ ಕುಟುಂಬಗಳಲ್ಲಿ ಶೇ.೮೭.೭೭ರಷ್ಟು ಕೃಷಿ ಭೂಮಿಯ ಇಳುವರಿ ಕಡಿಮೆ ಕಂಡು ಬಂದರೆ, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ೮೫ ಕುಟುಂಬಗಳಲ್ಲಿ ಶೇ.೯೪.೪೪ರಷ್ಟು ಕೃಷಿ ಇಳುವರಿ ಕಡಿಮೆಯಾಗಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೮೩ ಕುಟುಂಬಗಳು ಶೇ.೯೨.೨೩ರಷ್ಟು ಕೃಷಿ ಇಳುವರಿ ಕಡಿಮೆಯಾಗಿರುವುದು ಕ್ಲಿಷ್ಟಕರವಾಗಿದೆ. ಈ ಮೂರು ತಾಲ್ಲೂಕಿನ ಕುಟುಂಬಗಳಲ್ಲಿ (ಶೇ.೯೪.೪೪) ಅಧಿಕ ಪ್ರಮಾಣದಲ್ಲಿ ಇಳುವರಿ ಕಡಿಮೆ ಆಗಿರುವುದು ಸಂಡೂರು ತಾಲ್ಲೂಕಿನ ಗ್ರಾಮೀಣ ಭಾಗದಲ್ಲಿ ಕಂಡುಬರುತ್ತದೆ. ಆದರೆ ವಲಯದಲ್ಲಿ ಕೆಲವು ಕುಟುಂಬಗಳು ಇಳವರಿ ಕಡಿಮೆ ಆಗಿಲ್ಲ ಎಂಬ ಅಂಶವು ಕಂಡು ಬರುತ್ತದೆ. ಈ ರೀತಿಯಾಗಿ ಬಂದಿರುವ ಫಲಿತಾಂಶವನ್ನು ಹೀಗೆ ವಿಶ್ಲೇಷಿಸಲಾಗಿದೆ. ಹೊಸಪೇಟೆ ತಾಲ್ಲೂಕಿನ ೧೧ ಕುಟುಂಬಗಳಲ್ಲಿ ಶೇ.೧೨.೩೩ರಷ್ಟು ಕೃಷಿ ಭೂಮಿಯ ಇಳುವರಿ ಕಡಿಮೆಯಾಗಿಲ್ಲ ಎಂದು ಕಂಡು ಬಂದರೆ, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿಯೂ ೦೫ ಕುಟುಂಬಗಳಲ್ಲಿ ಶೇ.೦೫.೫೬ರಷ್ಟು ಕೃಷಿ ಇಳುವರಿ ಕಡಿಮೆಯಾಗಿಲ್ಲ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೦೭ ಕುಟುಂಬಗಳು ಶೇ.೦೭.೭೭ರಷ್ಟು ಕೃಷಿ

ಇಳುವರಿ ಕಡಿಮೆಯಾಗಿಲ್ಲದಿರುವುದು ಅದು ಗಣಿ ಸ್ಥಗಿತತೆಯ ನಂತರದ ಬದಲಾವಣೆಯಾಗಿದೆ. ಅದು ಅಷ್ಟು ಪರಿಣಾಮಕಾರಿಯಾಗಿ ಈ ವಲಯದ ಪ್ರದೇಶದಲ್ಲಿ ಬೀರಿಲ್ಲ ಎಂಬ ಅಂಶವನ್ನು ಗ್ರಹಿಸುವ ಅಗತ್ಯವಿದೆ. ಈ ಮೂರು ಗ್ರಾಮೀಣ ವಲಯದ ಕುಟುಂಬಗಳಲ್ಲಿಯೇ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಭಾಗದಲ್ಲಿ (ಶೇ.೧೨.೩೩) ಅಧಿಕ ಪ್ರಮಾಣದಲ್ಲಿ ಇಳುವರಿ ಕಡಿಮೆ ಆಗಿರುವುದು, ಸ್ವಲ್ಪ ಮಟ್ಟಿನ ಬದಲಾವಣೆ ಅಗಿವೆ ಎಂದು ಹೇಳಬಹುದಾಗಿದೆ.

ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಮುಖ್ಯವಾಗಿ ಕಡಿಮೆ ಇಳುವರಿಯಾಗಲು ಮಳೆಯ ಅಭಾವ, ಗಣಿಗಾರಿಕೆ ಪ್ರಭಾವ, ಬರಪೀಡಿತ, ಭೂ ಸವೇತ ಅಂಶಗಳು ಕಾರಣಗಳಾಗಿವೆ. ಈ ಕಾರಣಗಳು ಹೇಳಿರುವ ಕುಟುಂಬಗಳ ಶೇಕಾಡವಾರು ಅಂಕಿ-ಅಂಶವನ್ನು ತಾಲ್ಲೂಕುವಾರು ನೋಡುವುದಾದರೇ, ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದಲ್ಲಿ ೨೨ ಕುಟುಂಬಗಳು ಮಳೆಯ ಅಭಾವ ಶೇ.೨೯.೭೪ರಷ್ಟು, ೩೦ ಕುಟುಂಬಗಳು ಗಣಿಗಾರಿಕೆ ಪ್ರಭಾವ ಶೇ.೩೭.೯೭ರಷ್ಟು, ೭ ಕುಟುಂಬಗಳು ಬರ ಪೀಡಿತವೇ ಶೇ.೨೦.೫೪ರಷ್ಟು ಹಾಗೂ ೧೦ ಕುಟುಂಬಗಳು ಭೂ ಸವೇತ ಶೇ.೧೨.೬೫ರಷ್ಟು ಕೃಷಿ ಇಳುವರಿ ಕಡಿಮೆಯಾಗಲು ಕಾರಣವಾಗಿವೆ. ಈ ವಲಯದಲ್ಲಿ ಇಳುವರಿ ಕಡಿಮೆಯಾಗಲು ಗಣಿಗಾರಿಕೆಯೇ ಹೆಚ್ಚಿನ ಪ್ರಮಾಣದ ಕಾರಣವಾದೆ. ಸಂಡೂರು ತಾಲ್ಲೂಕಿನಲ್ಲಿಯೂ ಇಳುವರಿ ಕಡಿಮೆಯಾಗಿವೆ. ಇದಕ್ಕೆ ೩೧ ಕುಟುಂಬಗಳು ಮಳೆ ಅಭಾವ ಶೇ.೩೬.೪೭ರಷ್ಟು, ೩೨ ಕುಟುಂಬಗಳು ಗಣಿಗಾರಿಕೆ ಶೇ.೩೭.೬೪ರಷ್ಟು, ೧೨ ಕುಟುಂಬಗಳು ಫಲವತ್ತೆತೆಯ ಕಡಿಮೆ ಶೇ.೧೪.೧೨ರಷ್ಟು, ೧೦ ಕುಟುಂಬಗಳು ಭೂ ಸವೇತ ಶೇ.೧೧.೭೭ರಷ್ಟು ಕೃಷಿ ಇಳುವರಿ ಕಡಿಮೆಯಾಗಲು ಕಾರಣವಾಗಿವೆ ಎಂಬ ಅಂಶವನ್ನು ಕುಟುಂಬಗಳ ಕ್ಷೇತ್ರಕಾರ್ಯದಿಂದ ತಿಳಿಯಬಹುದಾಗಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಕೃಷಿ ಭೂಮಿಯಲ್ಲಿ ಇಳುವರಿ ಕಡಿಮೆಯಾಗಲು ೨೬ ಕುಟುಂಬಗಳು ಮಳೆ ಅಭಾವ ಶೇ.೩೨.೫೦ರಷ್ಟು, ೨೭ ಕುಟುಂಬಗಳು ಗಣಿಗಾರಿಕೆ ಶೇ.೩೦.೦೦ರಷ್ಟು, ೧೬ ಕುಟುಂಬಗಳು ಕಡಿಮೆ ಫಲವತತ್ತೆ ಶೇ.೨೦.೦೦ರಷ್ಟು, ೧೪ ಕುಟುಂಬಗಳು ಭೂಸವೇತ ಶೇ.೧೭.೫೦ರಷ್ಟು ಕಾರಣವಾಗಿದೆ. ಒಟ್ಟಾರೆ ಕೃಷಿ ಇಳುವರಿ ಕಡಿಮೆಯಾಗಲು ಹೇಗೆ ಗಣಿಗಾರಿಕೆ ಕಾರಣವಾಗಿದೆ? ಎಂಬ ಪ್ರಶ್ನೆಯು ಅತಿ ಮುಖ್ಯವಾದದ್ದು, ಕೃಷಿ ಭೂಮಿಯಲ್ಲಿ ಗಣಿಗಾರಿಕೆ ಹೆಚ್ಚಾಗಿ ನಡೆದಿರುವುದು ಗ್ರಾಮೀಣ ಪ್ರದೇಶಗಳ ಕೃಷಿ ಕಡಿಮೆ ಇಳುವರಿಯಾಗಲು ಪರಿಣಾಮಗಳು ಆಗಿರಬಹುದು. ಅಂದರೆ ಗ್ರಾಮೀಣ ಕೃಷಿ ಭೂಮಿಯಲ್ಲಿ ಗಣಿಗಾರಿಕೆಯ ಡಿಗ್ಗಿಂಗ್ ಮಾಡಿರುವ ಕಾರಣದಿಂದ ಭೂಮಿಯಲ್ಲಿರುವ ಮೇಲ್ಪದರ ಮಣ್ಣು, ಜೆಸಿಬಿಯಿಂದ ತೆಗೆದು, ಮತ್ತೆ ಭೂಮಿಯನ್ನು ಸಮಗೊಳಿಸುವಾಗ ಫಲವತ್ತದ ಮಣ್ಣು ಕೆಳಗೆ ಹೋಗಿ ಖನಿಜಾಂಶದ ಮಣ್ಣು ಮೇಲೆ ಬಂದಾಗ ಮಣ್ಣಿನ ಫಲವತ್ತತೆಯು ಕೆಳೆದುಕೊಂಡು ಕಡಿಮೆ ಇಳುವರಿಯಾಗಲು ಒಂದು ಪ್ರಬಲವಾದ ಕಾರಣವಾಗಿದೆ. ಜೊತೆಗೆ ಗಣಿ ಚಟುವಟಿಕೆ ನಡೆದಾಗ ಹಾಗೂ ಸ್ಥಗಿತ ನಂತರವು ಗಣಿ ವಾಹನಗಳ ಒಡಾಟದಿಂದ ಉದ್ಭವಿಸುವಂತಹ ಧೂಳು, ಇಳುವರಿ ಮೇಲೆ ವಿಲೀನಗೊಂಡಾಗ ಬಿತ್ತನೆಯ ಬೀಜದ ಬೆಳವಣಿಗೆ ಮೋಟಕುಗೊಳಿಸುವುದರಿಂದ ಬೆಳೆ ಕಡಿಮೆಯಾಗುತ್ತದೆಂಬ ಮಾಹಿತಿಯನ್ನು ಕುಟುಂಬಗಳು ಹೇಳಿರುವುದು ಮಿತ್ಯವಾದ ಸಂಗತಿಯಾಗಿದೆ.

**೪.೩.೨ ಕೃಷಿ ಉತ್ಪಾದನೆ ಕುಂಠಿತ**

ಬಳ್ಳಾರಿ ಜಿಲ್ಲೆಯ ಗಣಿ ವಲಯಗಳಾದ ಬಳ್ಳಾರಿ-ಹೊಸಪೇಟೆ-ಸಂಡೂರು ಗ್ರಾಮೀಣ ಪ್ರದೇಶದಲ್ಲಿ ಕಳೆದ ಹತ್ತು ವರ್ಷಗಳಿಂದ ಕೃಷಿ ಉತ್ಪಾದಕತೆಯು ಕುಂಠಿತವು ಕಾಡುತ್ತಿರುವ ಸಮಸ್ಯೆಯಾಗಿದೆ. ಅಂದರೆ

ಗಣಿಗಾರಿಕಾ ಚಟುವಟಿಕೆ ನಡೆದಾಗ ಧೂಳಿನ ಸಮಸ್ಯೆ, ಸ್ಫೋಟಕದಿಂದ, ಭೂ ಕಂಪನಗಳ ಸಮಸ್ಯೆಯು ಪರಿಣಾಮವಾಗಿ ಕೃಷಿ, ತೋಟಗಾರಿಕೆಯಲ್ಲಿ ಬೆಳೆಯುವ ಇಳುವರಿ ಮಾತ್ರವಲ್ಲದೇ; ಪರಿಸರದ ಸಸ್ಯವರ್ಗಗಳ ಮೇಲೂ ಧೂಳು ಆವರಿಸಿದೆ. ಇದರಿಂದ ಜಿಲ್ಲೆಯ ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಭೀಕರವಾದ ಆಹಾರ ಧಾನ್ಯಗಳ ಕ್ಷಮೆ ಉಂಟಾಗಿವೆ. ಸಂಡೂರು, ಹೊಸಪೇಟೆ, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಭಾಗದಲ್ಲಿ ಕನಿಷ್ಠ ೮೦೦೦ಎಕರೆಯಲ್ಲಿ ನೀರಿಕ್ಷಿತ ಮಟ್ಟದ ಇಳುವರಿ ಬಾರದಿರುವುದು ಕೃಷಿ ಉತ್ಪಾದನಾ ಕುಂಠಿತವಾಗಲು ಗಣಿಗಾರಿಕಾ ಚಟುವಟಿಕೆಯು ಒಂದು ಪ್ರಬಲವಾದ ಕಾರಣವಾಗಿದೆ. ಗಣಿಗಾರಿಕೆಯ ಸ್ಥಗಿತತೆಯ ನಂತರವು ಈ ವಲಯಗಳಲ್ಲಿ ತೀವ್ರಗತಿಯ ಗಣಿಗಾರಿಕೆ ನಡೆಯದಿದ್ದರೂ, ಅದರ ಪರಿಣಾಮಗಳು ಕಲ್ಲಹಳ್ಳಿ, ರಾಜಾಪುರ, ಪಾಪಿನಾಯಕನಹಳ್ಳಿ, ಬೆಳಗಲ್, ಜಾನೆಕುಂಟೆ, ಹನ್ನೊಳ್ಳಿ, ಜೈಸಿಂಗ್‌ಪುರ, ಸುಶೀಲ ನಗರ, ತುಮಟಿ ಇತ್ಯಾದಿ ಗ್ರಾಮೀಣ ಪ್ರದೇಶದ ಕೃಷಿ ಉತ್ಪಾದನೆ ಇಳುವರಿ ಹಾನಿಯಾಗುತ್ತಿದೆ. ಇದು ಗಣಿ ಸ್ಥಗಿತತೆಯ ನಂತರದ ಸ್ವಲ್ಪ ಮಟ್ಟಿನ ಬದಲಾವಣೆ ಆಗಿರಬಹುದು. ಇಂದಿಗೂ ಗಣಿ ಸ್ಥಗಿತತೆಯ ನಂತರ ಜಿಲ್ಲೆಯ ಬಹುತೇಕ ಕಡೆಗಳಲ್ಲಿ ೬,೦೦೦ಕ್ಕೂ ಹೆಚ್ಚು ಅದಿರಿನ ಲಾರಿಗಳು ಸಂಚರಿಸಿ, ಅವುಗಳು ಸಾಗುವ ರಸ್ತೆಯ ಇಕ್ಕೆಲ್ಲಗಳು ಅಲ್ಲದೆ ಗಣಿ ಪ್ರದೇಶದ ಸುತ್ತಮುತ್ತಲು ನಡೆಯುತ್ತಿರುವ ವ್ಯವಸಾಯ ಚಟುವಟಿಕೆ ಸೊರಗುತ್ತಿವೆ. ಗ್ರಾಮೀಣ ಪ್ರದೇಶದ ಕೃಷಿಕರು ಸಾವಿರಾರು ರೂಪಾಯಿಯ ಬೀಜಗಳನ್ನು ಬಿತ್ತಲು ವ್ಯಯಸಿದ್ದು, ಗಣಿ ಧೂಳು, ಸ್ಫೋಟಕಗಳು, ಭೂಕಂಪನದಂತಹ ಸಂಗತಿಗಳು ರೈತರು ಬಿತ್ತಿದ ಬೆಳೆಗಳನ್ನು ನಾಶಪಡಿಸುತ್ತಿವೆ. ಹೀಗೆ ಸಂಡೂರು, ಬಳ್ಳಾರಿ, ಹೊಸಪೇಟೆ ವಲಯದಲ್ಲಿ ಕೃಷಿ ಉತ್ಪಾದನೆಯ ಇಳುವರಿ ಹಾನಿಗೆ ಒಳಗಾಗಿದೆಯೋ ಅಥವಾ ಇಲ್ಲ ಎಂಬ ಅಂಶಕ್ಕೆ ಸಂಬಂಧಿಸಿದಂತೆ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದಿರುವ ಫಲಿತಾಂಶವನ್ನು ದತ್ತಾಂಶದ ಮೂಲಕ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕೃಷಿ ಭೂಮಿಯಲ್ಲಿ ಬೆಳೆ ಹಾನಿಗೊಳಗಾದ ಕುಟುಂಬಗಳ ಪ್ರಮಾಣ ಹಾಗೂ ಬೆಳೆಹಾನಿಯಾಗಲು ಕುಟುಂಬಗಳು ನೀಡಿರುವ ಕಾರಣಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

**ಕೋಷ್ಟಕ ೪.೭. ಗಣಿ ಗ್ರಾಮೀಣ ವಲಯದ ಕೃಷಿ ಭೂಮಿಯ ಇಳುವರಿ ಕುಂಠಿತದ ಕಾರಣಗಳ ವಿವರ**

| ಕ್ರಸಂ. | ಪ್ರಶ್ನೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಕೃಷಿ ಭೂಮಿಯಲ್ಲಿ ಬೆಳೆ ಹಾನಿ ಆಗಿದೆಯಾ? | | | | | | |
| | ಹೌದು | ೮೧ | ೯೦ | ೮೪ | ೯೩.೩೪ | ೭೯ | ೮೭.೭೮ |
| | ಇಲ್ಲ | ೦೯ | ೧೦ | ೦೬ | ೦೬.೬೬ | ೧೧ | ೧೨.೨೨ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಬೆಳೆಹಾನಿಗೆ ಕಾರಣಗಳು | | | | | | |
| | ಗಣಿಧೂಳು | ೩೨ | ೩೯.೫೧ | ೨೧ | ೨೫.೦೦ | ೨೩ | ೨೯.೧೧ |
| | ಗಣಿಡಿಕಿಂಗ್ | ೧೪ | ೧೭.೨೮ | ೩೨ | ೩೮.೦೯ | ೨೩ | ೨೯.೧೧ |
| | ಗಣಿ ಹೂಳು | ೨೭ | ೩೩.೩೩ | ೧೯ | ೨೨.೬೩ | ೧೭ | ೨೧.೫೨ |
| | ಮಳೆ ಅಭಾವ | ೦೮ | ೦೯.೯೮ | ೧೨ | ೧೪.೨೮ | ೧೬ | ೨೦.೩೬ |
| | **ಒಟ್ಟು** | ೮೧ | ೧೦೦ | ೮೪ | ೧೦೦ | ೭೯ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ದತ್ತಾಂಶ ಮಾಹಿತಿ**

ಕೋಷ್ಟಕ ೪.೭ರಲ್ಲಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಇಳುವರಿ ಹಾನಿ ಹಾಗೂ ಹಾನಿಯಾಗಲು ಕಾರಣಗಳ ನೀಡಿರುವ ಕುಟುಂಬಗಳ ಪ್ರಮಾಣವನ್ನು ಬಳ್ಳಾರಿ, ಸಂಡೂರು, ಬಳ್ಳಾರಿ ತಾಲ್ಲೂಕುವಾರು

ದತ್ತಾಂಶವನ್ನು ತೋರಿಸುತ್ತದೆ. ಗಣಿಗಾರಿಕಾ ಗ್ರಾಮೀಣ ಪ್ರದೇಶದಲ್ಲಿ ೨೭೦ ಕಟುಂಬಗಳಲ್ಲಿ ಬೆಳೆಹಾನಿಗೆ ಸಂಬಂಧಿಸಿದಂತೆ ಪ್ರಶ್ನೆಯನ್ನು ಕೇಳಿದಾಗ ಕುಟುಂಬಗಳ ತಾಲ್ಲೂಕುವಾರುಗಳಂತೆ ೯೦ ಕುಟುಂಬಗಳು ನೀಡಿರುವ ದತ್ತಾಂಶವನ್ನು ಮೇಲಿನ ಕೋಷ್ಟಕದಲ್ಲಿ ದಾಖಲಿಸಿ, ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೮೧ ಕುಟುಂಬಗಳು ಶೇ.೯೦ರಷ್ಟು ಬೆಳೆ ಹಾನಿಯಾಗಿದೆ ಎಂದೂ, ಇನ್ನುಳಿದ ೦೯ ಕುಟುಂಬಗಳು ಶೇ.೧೦ರಷ್ಟು ಬೆಳೆಹಾನಿಯಾಗಿಲ್ಲ ಎಂಬ ಅಂಶ ಕಂಡುಬಂದಿದೆ. ಈ ೮೧ ಕುಟಂಬಗಳಲ್ಲಿ ಬೆಳೆಹಾನಿಗೆ ಕಾರಣಕ್ಕೊಳಗಾದ ಕುಟುಂಬಗಳ ಶೇಕಡವಾರು ನೋಡಿದಾಗ, ಕೃಷಿ ಭೂಮಿಯ ಬೆಳೆ ಹಾನಿಗೆ ಗಣಿ ಧೂಳು ೩೨ ಕುಟುಂಬಗಳು ಶೇ.೩೯.೫೧ರಷ್ಟು, ಗಣಿ ಡಿಗ್ಗಿಂಗ್ ೧೪ ಕುಟುಂಬಗಳು ಶೇ.೧೭.೨೮ರಷ್ಟು, ಗಣಿ ಧೂಳು ೨೭ ಕುಟುಂಬಗಳು ಶೇ.೩೩.೩೩ರಷ್ಟು, ಮಳೆ ಅಭಾವ ೦೮ ಕುಟುಂಬಗಳು ಶೇ.೦೯.೮೮ರಷ್ಟು ಕಾರಣಗಳಾಗಿವೆ. ಕುಟುಂಬಗಳು ನೀಡಿರುವ ಕಾರಣಗಳಲ್ಲಿ ಗಣಿಧೂಳು ಹೆಚ್ಚಾಗಿ ಬೆಳೆ ಹಾನಿಗೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ೮೪ ಕುಟುಂಬಗಳು ಕೃಷಿ ಭೂಮಿಯಲ್ಲಿ ಶೇ.೯೩.೩೪ರಷ್ಟು ಬೆಳೆ ಹಾನಿ ಒಳಗಾಗಿರುವ ಕುಟುಂಬವಾಗಿದ್ದು, ೦೬ ಕುಟುಂಬಗಳು ಶೇ.೦೬.೬೬ರಷ್ಟು ಬೆಳೆಹಾನಿಗೆ ಒಳಗಾಗದಿರುವ ಕುಟುಂಬಗಳಾಗಿವೆ. ಈ ಬೆಳೆ ಹಾನಿಗೆ ಒಳಗಾದ ೮೪ ಕುಟುಂಬಗಳ ಪೈಕಿ, ಗಣಿಧೂಳು ೨೧ ಕುಟುಂಬಗಳು ಶೇ.೨೫ರಷ್ಟು, ಗಣಿ ಡಿಗ್ಗಿಂಗ್ ೩೨ ಕುಟುಂಬಗಳು ಶೇ.೩೮.೦೯ರಷ್ಟು, ಗಣಿಹೂಳು ೧೯ ಕುಟುಂಬಗಳು ಶೇ.೨೨.೬೩ರಷ್ಟು ಹಾಗೂ ಮಳೆ ಅಭಾವ ೧೨ ಕುಟುಂಬಗಳು ಶೇ.೧೪.೨೮ರಷ್ಟು ಬೆಳೆ ಹಾನಿಗೆ ಕಾರಣವಾಗಿರುವ ಪ್ರಮಾಣ ಗೋಚರವಾಗುತ್ತದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯಲ್ಲಿ ಡಿಗ್ಗಿಂಗ್ ಮಾಡಿರುವ ಪರಿಣಾಮವೇ ಬೆಳೆಹಾನಿಗೆ ಹೆಚ್ಚಿನ ಪ್ರಮಾಣದ ಕಾರಣವಾಗಿದೆ. ಈ ಕಾರಣವನ್ನು ನೀಡಿರುವ ಕುಟುಂಬಗಳ ಪ್ರಮಾಣವೂ ಅಧಿಕವಾಗಿ ಕಂಡುಬರುತ್ತದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಬೆಳೆ ಹಾನಿಯಾಗಿರುವ ಕುಟುಂಬಗಳ ಪ್ರಮಾಣ ಶೇ.೮೭.೭೮ರಷ್ಟಿದ್ದು, ಕೃಷಿ ಭೂಮಿಯಲ್ಲಿ ಬೆಳೆಹಾನಿಗೊಳಗಾಗಿಲ್ಲ ಎನ್ನುವ ಕುಟುಂಬಗಳು ಶೇ.೧೨.೨೨ರಷ್ಟು ಇರುವುದು ಕಂಡುಬಂದಿದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಬೆಳೆ ಹಾನಿಗೊಳಾಗದ ೭೯ ಕುಟುಂಬಗಳಿಗೆ ಬೆಳೆಯ ಹಾನಿಗೆ ಕಾರಣವನ್ನು ಅವಲೋಕಿಸಿದಾಗ ಬೆಳೆ ಹಾನಿಗೆ ೨೩ ಕುಟುಂಬಗಳು ಗಣಿಧೂಳು ಶೇ.೨೯.೧೧ರಷ್ಟು, ೨೩ ಕುಟುಂಬಗಳು ಗಣಿ ಡಿಗ್ಗಿಂಗ್ ಶೇ.೨೯.೧೧ರಷ್ಟು, ೧೭ ಕುಟುಂಬಗಳು ಗಣಿಹೂಳು ಶೇ.೨೧.೫೨ರಷ್ಟು, ೧೬ ಕುಟುಂಬಗಳು ಮಳೆ ಅಭಾವ ಶೇ.೨೦.೨೫ರಷ್ಟು ಪ್ರಮಾಣದ ಕಾರಣಗಳಾಗಿವೆ ಎಂದು ತಿಳಿದುಬರುತ್ತದೆ. ಈ ಕಾರಣಗಳಲ್ಲೇ ಬೆಳೆ ಹಾನಿಗೆ ಗಣಿಧೂಳು ಮತ್ತು ಗಣಿ ಡಿಗ್ಗಿಂಗ್ ಕಾರಣಗಳು ಶೇ.೨೯.೧೧ ಹೆಚ್ಚಿನ ಪ್ರಮಾಣದಲ್ಲಿವೆ. ಒಟ್ಟಾರೆಯಾಗಿ ಈ ಮೂರು ತಾಲ್ಲೂಕುಗಳಲ್ಲಿ ಬೆಳೆ ಹಾನಿಯ ಪ್ರಮಾಣವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು (ಶೇ.೯೦) ಅಧಿಕ ಇರುವುದು ಕಂಡುಬಂದಿದೆ. ಕೃಷಿ ಭೂಮಿಯಲ್ಲಿ ಬೆಳೆ ಹಾನಿಯಾಗಲು ಗಣಿಗಾರಿಕೆ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರವು ಅದರ ಪರಿಣಾಮಗಳು ತಟಸ್ಥವಾಗಿರದೇ ನಿರಂತರವಾಗಿ ಬೆಳೆ ಹಾನಿಗೆ ಗಣಿಗಾರಿಕೆಯ ಪ್ರಕ್ರಿಯೆ ಕಾರಣವಾಗಿದೆ ಎಂದು ಕುಟುಂಬಗಳು ನೀಡಿರುವ ದತ್ತಾಂಶದಿಂದ ತಿಳಿದು ಬಂದಿದ್ದು ಶೋಚನಿಯವಾಗಿದೆ.

**೫.೩.೩ ಕುಟುಂಬಗಳು ಬೆಳೆದಿರುವ ಕೃಷಿ ಇಳುವರಿ**

ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಗಣಿ ಗ್ರಾಮೀಣ ಪ್ರದೇಶದಲ್ಲಿ ವರ್ಷಕ್ಕೆ ಬೆಳೆದಿರುವ ಇಳುವರಿ ಪ್ರಮಾಣಕ್ಕೆ ಸಂಬಂಧಿಸಿದಂತೆ ಕುಟುಂಬಗಳಿಂದ ಬಂದಿರುವ ಫಲಿತಾಂಶದ ದತ್ತಾಂಶವನ್ನು

ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಗ್ರಾಮೀಣ ಪ್ರದೇಶದಲ್ಲಿ ಇಳುವರಿ ಪ್ರಮಾಣವನ್ನು ಗಣಿಗಾರಿಕೆ ನಡೆದಾಗ ಮತ್ತು ಗಣಿಗಾರಿಕೆ ಸ್ಥಗಿತತೆಯ ನಂತರ ಬೆಳೆದಿರುವ ಕುಟುಂಬಗಳ ಇಳುವರಿ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೪.೮. ಗಣಿ ವಲಯದ ಕುಟುಂಬಗಳು ವರ್ಷಕ್ಕೆ ಬೆಳೆದಿರುವ ಇಳುವರಿ ಪ್ರಮಾಣದ ಶೇಕಡವಾರು (ಗಣಿಸ್ಥಗಿತತೆ ಮತ್ತು ಗಣಿ ನಡೆದಾಗ ಇಳುವರಿ ಪ್ರಮಾಣ)**

| ಗಣಿ ನಡೆದಾಗ ಇಳುವರಿ ಪ್ರಮಾಣ( ಹಿಂದಿನ ವರ್ಷದ ಇಳುವರಿಯನ್ನು ಪರಿಗಣಿಸಲಾಗಿದೆ) | | | | | | |
|---|---|---|---|---|---|---|
| ಕ್ವಿಂಟಾಲ್‌ಗಳಲ್ಲಿ ಇಳುವರಿ ಪ್ರಮಾಣ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
| | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೫–೧೦ | ೨೨ | ೨೪.೪೪ | ೩೩ | ೩೬.೬೬ | ೪೪ | ೪೮.೮೮ |
| ೧೦–೨೦ | ೩೭ | ೪೧.೧೨ | ೨೧ | ೨೩.೩೫ | ೨೩ | ೨೫.೫೫ |
| ೨೦–೩೦ | ೧೯ | ೨೧.೧೧ | ೨೨ | ೨೪.೪೪ | ೧೨ | ೧೩.೩೩ |
| ೩೦–೪೦ | ೧೨ | ೧೩.೩೩ | ೧೪ | ೧೫.೫೫ | ೧೧ | ೧೨.೨೪ |
| ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| **ಗಣಿ ಸ್ಥಗಿತತೆಯ ನಂತರ ಇಳುವರಿ ಪ್ರಮಾಣ (ಹಿಂದಿನ ವರ್ಷದ ಇಳುವರಿಯನ್ನು ಪರಿಗಣಿಸಲಾಗಿದೆ)** | | | | | | |
| ಕ್ವಿಂಟಾಲ್‌ಗಳಲ್ಲಿ ಇಳುವರಿ ಪ್ರಮಾಣ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
| | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೫–೧೦ | ೨೪ | ೨೬.೬೬ | ೧೯ | ೨೧.೧೧ | ೨೦ | ೨೨.೨೪ |
| ೧೦–೨೦ | ೨೮ | ೩೧.೧೧ | ೩೪ | ೩೭.೭೭ | ೨೬ | ೨೮.೮೮ |
| ೨೦–೩೦ | ೩೮ | ೪೨.೨೩ | ೨೮ | ೩೧.೧೨ | ೩೧ | ೩೪.೪೪ |
| ೩೦.೪೦ | – | – | ೦೯ | ೧೦.೦೦ | ೧೩ | ೧೪.೪೪ |
| ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ: ಕ್ಷೇತ್ರಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ–ಬಳ್ಳಾರಿ–ಸಂಡೂರು ವಲಯದ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರ ಕೃಷಿ ಭೂಮಿಯಲ್ಲಿ ಇಳುವರಿ ಬೆಳೆದಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ತಾಲ್ಲೂಕುವಾರು ತೋರಿಸುತ್ತದೆ. ಗಣಿಗಾರಿಕೆ ನಡೆದಾಗ ಕೃಷಿ ಭೂಮಿಯಲ್ಲಿ ಇಳುವರಿ ಬೆಳೆದಿರುವ ಕುಟುಂಬಗಳ ಪ್ರಮಾಣವನ್ನು ಗಣಿ ವಲಯದ ಗ್ರಾಮೀಣ ಪ್ರದೇಶದಲ್ಲಿ ಅವಲೋಕಿಸಿದಾಗ, ಹೊಸಪೇಟೆ ತಾಲ್ಲೂಕು ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ, ೨೨ ಕುಟುಂಬಗಳು ೫ರಿಂದ೧೦ ಕ್ವಿಂಟಲ್ ಶೇ.೨೪.೪೪ರಷ್ಟು ಇಳುವರಿ ಬೆಳೆದಿದ್ದು, ೧೦ರಿಂದ ೨೦ ಕ್ವಿಂಟಾಲ್ ಶೇ.೪೧.೧೧ರಷ್ಟು ಇಳುವರಿ ಬೆಳೆದಿರುವ ೩೭ ಕುಟುಂಬಗಳಿವೆ. ೨೦ರಿಂದ ೩೦ ಕ್ವಿಂಟಾಲ್ ಇಳುವರಿ ಬೆಳೆದಿರುವ ೧೯ ಕುಟುಂಬಗಳು ಶೇ.೨೧.೧೨ರಷ್ಟು, ೩೦–೪೦ ಕ್ವಿಂಟಾಲ್ ಇಳುವರಿ ಬೆಳೆದಿರುವ ೧೨ ಕುಟುಂಬಗಳ ಪ್ರಮಾಣ ಶೇ.೧೩.೩೩ರಷ್ಟಿದೆ. ಅತ್ಯಂತ ಕಡಿಮೆ ಅಂದರೆ ೫ರಿಂದ ೧೦

ಕ್ವಿಂಟಾಲ್ ಇಳುವರಿ ಬೆಳೆದಿರುವ ಕುಟುಂಬಗಳು ಶೇ.೪೧.೧೧ರಷ್ಟು ಅಧಿಕ ಪ್ರಮಾಣದಲ್ಲಿದೆ. ಅಧಿಕ ಪ್ರಮಾಣದ ಇಳುವರಿ ಅಂದರೆ ೩೦-೪೦ ಕ್ವಿಂಟಾಲ್ ಇಳುವರಿ ಬೆಳೆದಿರುವ ಕುಟುಂಬಗಳು (ಶೇ.೧೩.೩೩) ಕಡಿಮೆ ಪ್ರಮಾಣದಲ್ಲಿದೆ. ಈ ಎರಡು ವ್ಯತ್ಯಾಸಗಳು ಕಡಿಮೆ ಪ್ರಮಾಣದ ಇಳುವರಿ ಬೆಳೆದಿರಲು ಗಣಿಗಾರಿಕೆಯ ಪ್ರಭಾವದಿಂದ ಆಗಿರಬಹುದು ಹಾಗೂ ಅಧಿಕ ಪ್ರಮಾಣದ ಇಳುವರಿ ಬೆಳೆದಿರಲು ಗಣಿಗಾರಿಕೆಯ ಸ್ಥಗಿತತೆಯಿಂದಾದ ಬದಲಾವಣೆ ಆಗಿರಬಹುದು. ಸಂಡೂರು ತಾಲ್ಲೂಕಿನಲ್ಲಿ ೦೫-೧೦ ಕ್ವಿಂಟಾಲ್ ಶೇ.೩೬.೬೬ರಷ್ಟು, ೧೦-೨೦, ಕ್ವಿಂಟಾಲ್ ಶೇ.೨೩.೩೫ರಷ್ಟು, ೨೦-೩೦ ಕ್ವಿಂಟಾಲ್ ಶೇ.೨೪.೪೪ರಷ್ಟು, ೩೦ರಿಂದ ೪೦ ಕ್ವಿಂಟಾಲ್ ಶೇ.೧೫.೫೫ರಷ್ಟು ಕುಟುಂಬಗಳು ಇಳುವರಿಯನ್ನು ಬೆಳೆದಿರುವ ಪ್ರಮಾಣವಾಗಿದೆ. ಈ ವಲಯದಲ್ಲೂ ಅತ್ಯಂತ ಕಡಿಮೆ ಇಳುವರಿ ಅಂದರೆ ೫ರಿಂದ೧೦ ಕ್ವಿಂಟಾಲ್ ಇಳುವರಿ ಬೆಳೆದಿರುವ ಕುಟುಂಬಗಳ ಪ್ರಮಾಣವು (ಶೇ.೩೬.೬೬) ಅಧಿಕವಾಗಿ ಕಂಡುಬರುತ್ತದೆ. ಅಧಿಕ ಪ್ರಮಾಣದ ಇಳುವರಿ ಅಂದರೆ ೩೦-೪೦ ಕ್ವಿಂಟಲ್ ಇಳುವರಿಯು ಶೇ.೧೫.೫೫ರಷ್ಟಿದ್ದು, ಕಡಿಮೆ ಪ್ರಮಾಣದ ಇಳುವರಿಯನ್ನು ಬೆಳೆದಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ೫-೧೦ ಕ್ವಿಂಟಲ್ ಶೇ.೪೮.೮೮ರಷ್ಟು, ೧೦-೨೦ ಕ್ವಿಂಟಾಲ್ ಶೇ.೨೫.೫೫ರಷ್ಟು, ೨೦-೩೦ ಕ್ವಿಂಟಲ್ ಶೇ.೧೩.೩೩ರಷ್ಟು, ೩೦-೪೦ ಕ್ವಿಂಟಾಲ್ ಶೇ.೧೨.೨೪ರಷ್ಟು, ಪ್ರತಿಶತವಾಗಿ ಇಳುವರಿ ಬೆಳೆದಿರುವ ಕುಟುಂಬಗಳ ಪ್ರಮಾಣವಾಗಿದೆ. ಇದರಲ್ಲಿ ೫-೧೦ ಕ್ವಿಂಟಾಲ್ ಕನಿಷ್ಠ ಪ್ರಮಾಣ ಇಳುವರಿಯನ್ನು ಬೆಳೆದಿರುವ ಕುಟುಂಬಗಳ ಪ್ರಮಾಣ ಅಧಿಕ ಪ್ರಮಾಣದಲ್ಲಿದ್ದಾರೆ. ಗಣಿಗಾರಿಕೆ ನಡೆದಾಗ ಬೆಳೆದಿರುವ ಇಳುವರಿ ಪ್ರಮಾಣಕ್ಕೂ ಗಣಿಗಾರಿಕೆಯ ಸ್ಥಗಿತತೆಯ ನಂತರ ಬೆಳೆದಿರುವ ಇಳುವರಿ ಪ್ರಮಾಣಕ್ಕೆ ಹೋಲಿಸಿದಾಗ ಕುಟುಂಬಗಳು ಕೃಷಿ ಇಳುವರಿಯನ್ನು ಗಣಿ ಸ್ಥಗಿತತೆಯ ನಂತರ ಅಧಿಕ ಕ್ವಿಂಟಲ್ ಬೆಳೆದಿರುವ ಕುಟುಂಬಗಳ ಶೇಕಡವಾರುಗಳಲ್ಲಿ ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಬದಲಾವಣೆ ಕಂಡಿವೆ. ಅಂದರೆ ಹೊಸಪೇಟೆ, ಬಳ್ಳಾರಿ ಸಂಡೂರು, ತಾಲ್ಲೂಕಿನಲ್ಲಿ ಕನಿಷ್ಠ (೦೫-೧೦) ಕ್ವಿಂಟಲ್ ಇಳುವರಿ ಪ್ರಮಾಣ ಶೇಕಡವಾರುಗಳಲ್ಲಿ ಕಡಿಮೆಯಾಗಿರುವುದು ಕಾಣಸಿಗುತ್ತದೆ. ಹಾಗಾಗಿ ಗಣಿ ಸ್ಥಗಿತತೆಯ ನಂತರ ಗ್ರಾಮೀಣ ಕುಟುಂಬಗಳ ಕೃಷಿ ಭೂಮಿಯಲ್ಲಿ ಬೆಳೆದಿರುವ ಇಳುವರಿ ಪ್ರಮಾಣವನ್ನು ತಾಲ್ಲೂಕುವಾರು ನೋಡಿದಾಗ, ಹೊಸಪೇಟೆ ತಾಲ್ಲೂಕಿನಲ್ಲಿ ೫-೧೦ ಕ್ವಿಂಟಲ್ ಶೇ.೨೬.೬೬ರಷ್ಟು, ೧೦-೨೦ ಕ್ವಿಂಟಲ್ ಶೇ.೩೧.೧೧ರಷ್ಟು, ೨೦-೩೦ ಕ್ವಿಂಟಲ್ ಶೇ.೪೨.೨೩ರಷ್ಟು ಇಳುವರಿಯನ್ನು ಬೆಳೆದಿರುವುದು ಕುಟುಂಬಗಳಾಗಿವೆ. ಆದರೆ ೨೦-೩೦ಕ್ವಿಂಟಲ್ ಗರಿಷ್ಠ ಮಟ್ಟದ ಇಳುವರಿಯ ಬೆಳೆದಿರುವ ಅಧಿಕವಾಗಿದ್ದು, ಶೇ.೪೨.೨೨ರಷ್ಟು ಇಳುವರಿಯನ್ನು ಹೆಚ್ಚಾಗಿ ಬೆಳೆದಿರುವುದು ಕಾಣಬಹುದು. ೨೦-೩೦ಕ್ವಿಂಟಾಲ್ (ಶೇ.೨೧.೧೨) ಇಳುವರಿ ಪ್ರಮಾಣವನ್ನು ಗಣಿಗಾರಿಕೆ ನಡೆದಾಗ, ಕುಟುಂಬಗಳು ಬೆಳೆದಿರುವ ಇಳುವರಿ ಪ್ರಮಾಣಕ್ಕೆ ಹೋಲಿಕೆ ಮಾಡಿದಾಗ ಗಣಿ ಸ್ಥಗಿತತೆಯ ನಂತರ ಕುಟುಂಬಗಳು ಬೆಳೆದಿರುವ ಇಳುವರಿ ಪ್ರಮಾಣ ಹೆಚ್ಚಾಗಿರುವುದು ಕಂಡುಬಂದಿದೆ. ಸಂಡೂರು ತಾಲ್ಲೂಕಿನಲ್ಲಿ ಗಣಿ ಸ್ಥಗತಿತೆಯ ನಂತರ ೧೦-೨೦ಕ್ವಿಂಟಲ್ ಇಳುವರಿ ಬೆಳೆದಿರುವ ಕುಟುಂಬಗಳು ಶೇ.೩೭.೭೭ರಷ್ಟು ಅಧಿಕ ಪ್ರಮಾಣದಲ್ಲಿದ್ದು, ಗಣಿ ನಡೆದಾಗ ಈ ಕ್ವಿಂಟಾಲ್‌ಗಳಲ್ಲಿ ಇಳುವರಿ ಬೆಳೆದಿರುವ ಕುಟುಂಬಗಳು (ಶೇ.೨೩.೩೫) ಕಡಿಮೆ ಪ್ರಮಾಣದಲ್ಲಿ ಬೆಳೆದಿದ್ದಾರೆ. ಅಂದರೆ ಗಣಿ ಸ್ಥಿತತೆಯ ನಂತರ ಶೇ.೧೪.೪೨ರಷ್ಟು ಇಳುವರಿ ಬೆಳೆದಿರುವ ಪ್ರಮಾಣದಲ್ಲಿ ಬದಲಾವಣೆ ಕಂಡಿವೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನಲ್ಲೂ ಗಣಿ ಸ್ಥಗಿತತೆಯ ನಂತರ ೨೦-೩೦ಕ್ವಿಂಟಲ್ ಬೆಳೆದಿರುವ ಇಳುವರಿ ಪ್ರಮಾಣ ಶೇ.೩೪.೪೪ರಷ್ಟು ಕುಟಂಬಗಳಲ್ಲಿ ಕಂಡುಬಂದಿದ್ದು, ಅಧಿಕ ಪ್ರಮಾಣದಲ್ಲಿ ಇಳುವರಿಯನ್ನು ಬೆಳೆದಿರುವ ಕುಟುಂಬಗಳಾಗಿರುವುದು ಕೋಷ್ಟಕ ೫.೮ರಲ್ಲಿ ಗಮನಿಸಬಹುದಾಗಿದೆ. ಒಟ್ಟಾರೆಯಾಗಿ ಕೃಷಿ ಇಳುವರಿ ಪ್ರಮಾಣವನ್ನು ಗಣಿ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರ ಗಮನಿಸಿದಾಗ ಗಣಿ ಸ್ಥಗಿತತೆಯ ನಂತರ ಕೃಷಿ ಭೂಮಿಯಲ್ಲಿ ಅಧಿಕ ಪ್ರಮಾಣದ ಇಳುವರಿ ಬೆಳೆದಿರುವ ಕುಟುಂಬಗಳನ್ನು ಕಾಣಬಹುದಾಗಿದೆ. ಅಂದರೆ ಇದಕ್ಕೆ ಗಣಿಗಾರಿಕೆಯ ನಿಷ್ಕ್ರೀಯವಾಗಿರುವ ಚಟುವಟಿಕೆಯೇ ಕಾರಣವಾಗಿದೆ. ಪ್ರಸ್ತುತದಲ್ಲೂ ಗಣಿ

ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪರಿಣಾಮಗಳು ಕೃಷಿ ಇಳುವರಿಯಲ್ಲಿ ಸ್ವಲ್ಪಮಟ್ಟಿನ ಬದಲಾವಣೆ ತರಲು ಸಾಧ್ಯವಾಗಿದೆ.

### ೪.೪ ದುಡಿಮೆ ಮತ್ತು ವೃತ್ತಿ

ಬಳ್ಳಾರಿ ಸಂಡೂರು, ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಕೃಷಿ ಹಾಗೂ ಗಣಿಗಾರಿಕೆ ಎರಡೂ ವಲಯದ ದುಡಿಮೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಅಂದರೆ ಕೃಷಿ ಚಟುವಟಿಕೆಯಲ್ಲಿ ನಿರಂತರವಾದ ದುಡಿಮೆ ಇರುವುದಿಲ್ಲ. ಕೃಷಿ ಮಾಡುವ ಸಂದರ್ಭದಲ್ಲಿ ಮಾತ್ರ ೬ ತಿಂಗಳು ದುಡಿಮೆಯಲ್ಲಿ ತೊಡಗುತ್ತಾರೆ. ಇನ್ನೂ ಆರು ತಿಂಗಳು ದುಡಿಮೆ ಸಿಗದೆ ಇದ್ದಾಗ, ಗಣಿ ಕೇಂದ್ರಿತ ಪ್ರದೇಶವಾಗಿದ್ದರಿಂದ ಕುಟುಂಬಗಳು ಗಣಿ ವಲಯದ ದುಡಿಮೆಯಲ್ಲಿ ತೋಡಗಿರುತ್ತಾರೆ. ಹೀಗೆ ಗಣಿ, ಗಣಿಕೈಗಾರಿಕೆ, ಕೃಷಿ ವಲಯಗಳಲ್ಲಿ ದುಡಿಮೆ ಮಾಡುವ ಕುಟುಂಬಗಳ ದುಡಿಮೆದಾರರ ಕೆಲಸ, ವೇತನ ಮತ್ತು ಅವಧಿಯನ್ನು ಪರಿಗಣಿಸಿ ಈ ಗಣಿ ವಲಯಗಳ ಕೃಷಿ, ಗಣಿ, ಗಣಿಕೈಗಾರಿಕೆಯಲ್ಲಿ ತೊಡಗಿರುವ ಕುಟುಂಬಗಳ ಪ್ರಮಾಣವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಹಾಗಾಗಿ ಗಣಿ ವಲಯದ ಗ್ರಾಮೀಣ ಪ್ರದೇಶದಲ್ಲಿರುವ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿ ಕೃಷಿ, ಗಣಿ, ಗಣಿಕೈಗಾರಿಕೆ ವಲಯದಲ್ಲಿ ದುಡಿಮೆಗೆ ತೊಡಗಿರುವ ಕುಟುಂಬಗಳಿಂದ ಬಂದ ದತ್ತಾಂಶ ದಾಖಲಿಸಿ, ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೯ ವೃತ್ತಿಯಲ್ಲಿ ತೊಡಗಿಸಿಕೊಂಡ ಕುಟುಂಬಗಳ ಪ್ರಮಾಣದ ವಿವರ**

| ಕ್ರ.ಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ನಿಮ್ಮ ಕುಟುಂಬ ಯಾವ ವೃತ್ತಿಯಲ್ಲಿ ತೊಡಗಿದ್ದಿರಾ? | | | | | | |
| | ಕೂಲಿ | ೭೫ | ೮೩.೩೩ | ೮೧ | ೯೦ | ೭೮ | ೮೬.೬೬ |
| | ವ್ಯವಸಾಯ | ೨೫ | ೨೭.೭೭ | ೦೯ | ೧೦ | ೧೨ | ೧೩.೩೪ |
| | ಇತರೆ | – | – | – | – | – | – |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಕೂಲಿ ಕೆಲಸವಾದರೆ ಎಲ್ಲಿ ಮಾಡುತ್ತೀರಾ | | | | | | |
| | ಕೃಷಿಯಲ್ಲಿ | ೩೫ | ೪೬.೬೬ | ೩೧ | ೩೮.೨೭ | ೩೨ | ೪೧.೦೩ |
| | ಗಣಿಗಾರಿಕೆ | ೧೫ | ೨೦.೦೧ | ೨೩ | ೨೮.೩೯ | ೨೪ | ೩೦.೭೬ |
| | ಗಣಿಕೈಗಾರಿಕೆ | ೨೫ | ೩೩.೩೩ | ೨೭ | ೩೩.೩೪ | ೨೨ | ೨೮.೨೧ |
| | ಒಟ್ಟು | ೭೫ | ೧೦೦ | ೮೧ | ೧೦೦ | ೭೮ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ದತ್ತಾಂಶ ಮಾಹಿತಿ**

ಈ ಮೇಲಿನ ಕೋಷ್ಟಕವು ವೃತ್ತಿಯಲ್ಲಿ ತೊಡಗಿರುವ ಕುಟುಂಬಗಳ ಪ್ರಮಾಣವನ್ನು ತೋರಿಸುತ್ತದೆ. ವೃತ್ತಿಯನ್ನು ಕೂಲಿ, ವ್ಯವಸಾಯ ಇತರೆ ವರ್ಗಗಳಾಗಿ ವಿಂಗಡಿಸಿ ತಾಲ್ಲೂಕುವಾರು ಗ್ರಾಮೀಣ ಕುಟುಂಬಗಳ ವೃತ್ತಿ ಪ್ರಮಾಣ ಹಾಗೂ ಕೃಷಿ, ಗಣಿ ಮತ್ತು ಗಣಿಕೈಗಾರಿಕೆಯಲ್ಲಿ ತೊಡಗಿರುವ ಕುಟುಂಬಗಳ ದುಡಿಮೆಗಾರರ ವೃತ್ತಿಯನ್ನು ಶೇಕಡವಾರು ಅಂಕಿ–ಅಂಶಗಳನ್ನು ತಿಳಿಸಲಾಗಿದೆ. ಈ ಕೋಷ್ಟಕವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಿಂದ ೯೦ ಕುಟುಂಬಗಳಲ್ಲಿ ೭೫ ಕುಟುಂಬಗಳು ಶೇ.೮೩.೩೩ರಷ್ಟು ಕೂಲಿ ವೃತ್ತಿಯಲ್ಲಿ ತೊಡಗಿದ್ದು, ೨೫ ಕುಟುಂಬಗಳು ಶೇ.೨೭.೭೭ರಷ್ಟು ವ್ಯವಸಾಯ ಮಾಡುವ ವೃತ್ತಿಯಲ್ಲಿ ತೊಡಗಿದ್ದಾರೆ. ಕೃಷಿ ಕೂಲಿ ವೃತ್ತಿಯಲ್ಲಿ ತೊಡಗಿದ ೩೫ ಕುಟುಂಬಗಳ ದುಡಿಮೆಗಾರರು ಶೇ.೪೬.೬೬ರಷ್ಟು ತೊಡಗಿಸಿಕೊಂಡಿವೆ. ಗಣಿಯಲ್ಲಿ

ಕೂಲಿ ವೃತ್ತಿಯನ್ನು ತೊಡಗಿಸಿದ ೧೫ ಕುಟುಂಬಗಳು ಶೇ.೨೦.೦೧ರಷ್ಟಿದ್ದರೆ, ಗಣಿಕೈಗಾರಿಕೆಯ ಕೂಲಿ ವೃತ್ತಿಯಲ್ಲಿ ತೊಡಗಿಸಿಕೊಂಡ ೨೫ ಕುಟುಂಬಗಳು ಶೇ.೩೩.೩೩ರಷ್ಟಿರುವುದು ಕಂಡುಬರುತ್ತದೆ. ಇದರಲ್ಲಿ ಕೃಷಿಯಲ್ಲಿ ಕೂಲಿ ವೃತ್ತಿಯಲ್ಲಿ ತೊಡಗಿಸಿಕೊಂಡ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿರುವುದು ಗಣಿ ಸ್ಥಗಿತತೆಯ ನಂತರದ ಬೆಳವಣಿಗೆಯಾಗಿದೆ ಎಂದು ಹೇಳಬಹುದಾಗಿದೆ. ಸಂಡೂರು ತಾಲ್ಲೂಕಿನಲ್ಲಿ ಕೃಷಿ ಕೂಲಿ ವೃತ್ತಿಯಲ್ಲಿ ತೊಡಗಿರುವ ೮೧ ಕುಟುಂಬಗಳ ದುಡಿಮೆಗಾರರ ಪ್ರಮಾಣ ಶೇ.೯೦ರಷ್ಟಿದ್ದು, ವ್ಯವಸಾಯವನ್ನು ತೊಡಗಿಸಿಕೊಂಡ ೦೯ ಕುಟುಂಬಗಳ ದುಡಿಮೆಗಾರರು ಶೇ.೧೦ರಷ್ಟಿದ್ದಾರೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಕೃಷಿಯಲ್ಲಿ ಶೇ.೩೮.೨೭ರಷ್ಟು, ಗಣಿಯಲ್ಲಿ ಶೇ.೨೮.೩೯ರಷ್ಟು, ಗಣಿಕೈಗಾರಿಕೆಯಲ್ಲಿ ಶೇ.೩೩.೩೪ರಷ್ಟಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೭೮ ಕುಟುಂಬಗಳು ಶೇ.೮೬.೬೬ರಷ್ಟು ಕೂಲಿ ದುಡಿಮೆಯಲ್ಲಿ ತೊಡಗಿದ್ದು, ವ್ಯವಸಾಯದ ವೃತ್ತಿಯನ್ನೇ ಅವಲಂಬಿಸಿರುವ ಶೇ.೧೩.೩೩ರಷ್ಟು ೧೨ ಕುಟುಂಬಗಳಿವೆ. ಕೂಲಿ ವೃತ್ತಿಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ಕೃಷಿಯಲ್ಲಿ ಶೇ.೪೧.೦೩ರಷ್ಟು, ಗಣಿಯಲ್ಲಿ ಶೇ.೩೦.೭೬ರಷ್ಟು, ಗಣಿಕೈಗಾರಿಕೆಯಲ್ಲಿ ಶೇ.೨೮.೨೧ರಷ್ಟು ದುಡಿಮೆಯಲ್ಲಿ ತೊಡಗಿದ್ದಾರೆ. ಒಟ್ಟಾರೆಯಾಗಿ ಈ ಮೂರು ಗಣಿ ವಲಯದ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದ ಕೂಲಿ ದುಡಿಮೆಯಲ್ಲಿ ತೊಡಗಿರುವುದು ಬಳ್ಳಾರಿ ತಾಲ್ಲೂಕಿನ ಕುಟುಂಬಗಳಾಗಿವೆ (ಶೇ.೮೬.೬೬) ಬಳ್ಳಾರಿ, ಹೊಸಪೇಟೆ, ಸಂಡೂರು, ತಾಲ್ಲೂಕಿನ ಗಣಿ ಪ್ರದೇಶದಲ್ಲಿ ಕೃಷಿ ಕೂಲಿ ದುಡಿಮೆಗಾರರ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಇದಕ್ಕೆ ಗಣಿ ಸ್ಥಗಿತತೆಯ ನಂತರದ ಉತ್ತಮ ಬೆಳವಣಿಗೆ ಎಂದೇ ಹೇಳಬಹುದಾಗಿದೆ.

**೪.೫. ಕೃಷಿ ಮತ್ತು ದುಡಿಮೆ**

ಬಳ್ಳಾರಿ, ಹೊಸಪೇಟೆ, ಸಂಡೂರು ಗ್ರಾಮೀಣ ಪ್ರದೇಶದ ಕುಟುಂಬಗಳು ಕೃಷಿಯಲ್ಲಿ ಕೂಲಿ ದುಡಿಮೆಗಾರರಾಗಿ ದುಡಿಮೆಯುವ ಪ್ರಮಾಣಕ್ಕೆ ಸಂಬಂಧಿಸಿದಂತೆ ಈ ಮೂರು ತಾಲ್ಲೂಕುಗಳಲ್ಲಿ ೯೦ ಕುಟುಂಬಗಳಂತೆ, ಜಲ್ಲೆಯ ಒಟ್ಟು ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದ ದತ್ತಾಂಶಗಳನ್ನು ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೧೦ ಕೃಷಿ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರ ಪ್ರಮಾಣ ವಿವರ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ನಿಮ್ಮ ಮನೆಯಲ್ಲಿ ಕೂಲಿ ಕೆಲಸಕತ್ಕೆ ಹೊಗ್ತಾರೆಯೇ | | | | | | |
| | ಹೌದು | ೪೮ | ೫೩.೩೪ | ೫೩ | ೫೮.೮೮ | ೩೮ | ೪೨.೨೨ |
| | ಇಲ್ಲ | ೪೨ | ೪೬.೬೬ | ೨೭ | ೪೧.೧೨ | ೫೨ | ೫೭.೭೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಯಾರು ಕೂಲಿ ಕೆಲಸಕ್ಕೆ ಹೋಗ್ತಾರೆ | | | | | | |
| | ಮಹಿಳೆ | ೧೯ | ೩೯.೫೮ | ೩೨ | ೬೦.೩೮ | ೨೪ | ೬೩.೧೬ |
| | ಪುರುಷ | ೨೯ | ೬೦.೪೨ | ೨೧ | ೩೯.೬೨ | ೧೪ | ೩೬.೮೪ |
| | ಒಟ್ಟು | ೪೮ | ೧೦೦ | ೫೩ | ೧೦೦ | ೩೮ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ದತ್ತಾಂಶ ಮಾಹಿತಿ**

ಈ ಮೇಲಿನ ಕೋಷ್ಟಕವು ಬಳ್ಳಾರಿ ಹೊಸಪೇಟೆ, ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ಕೂಲಿ ದುಡಿಮೆಗಾರರು ಕೃಷಿಯಲ್ಲಿ ತೊಡಗಿರುವ ಶೇಕಡವಾರು, ಕೃಷಿ ದುಡಿಮೆಯಲ್ಲಿ ತೊಡಗಿರುವ

ಮಹಿಳೆ ಮತ್ತು ಪುರುಷ ಕೂಲಿ ದುಡಿಮೆಗಾರರ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಗಣಿ ವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶ ಕುಟುಂಬಗಳು ಉದ್ಯೋಗ ನಿರತರಾದ ಕೂಲಿ ದುಡಿಮೆಗಾರರ ಪ್ರಮಾಣವನ್ನು ತಾಲ್ಲೂಕುವಾರು ದತ್ತಾಂಶದ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ದುಡಿಮೆಗಾರರು ಕೂಲಿ ವೃತ್ತಿಯಲ್ಲಿ ತೊಡಗಿರುವ ಶೇ.೫೩.೩೪ರಷ್ಟು  ಕುಟುಂಬಗಳಿವೆ. ಕೃಷಿಯಲ್ಲಿ ಕೂಲಿ ದುಡಿಮೆಯನ್ನು ಮಾಡುವ ಮಹಿಳೆ ದುಡಿಮೆಗಾರರು ಶೇ.೩೯.೫೮ರಷ್ಟಿದ್ದರೆ, ಪುರುಷ ಕೂಲಿ ದುಡಿಮೆಗಾರರು ಶೇ.೬೦.೪ರಷ್ಟು ಕುಟುಂಬಗಳಲ್ಲಿದ್ದಾರೆ. ಅಂದರೆ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಪುರುಷರಿಗಿಂತ ಮಹಿಳೆ ದುಡಿಮೆಗಾರರು ಶೇ.೨೦.೮೩ರಷ್ಟು ಅಧಿಕವಾಗಿ ಇರುವುದು ಕಂಡುಬಂದಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೫೮.೮೮ರಷ್ಟು ಕೂಲಿ ವೃತ್ತಿಯಲ್ಲಿ ತೋಡಗಿದ್ದು, ಇದರಲ್ಲಿ ಮಹಿಳಾ ದುಡಿಮೆಗಾರರು ಶೇ.೬೦.೩೮ರಷ್ಟಿದ್ದರೇ, ಪುರುಷ ದುಡಿಮೆಗಾರರು ಶೇ.೩೯.೬೨ರಷ್ಟು ಕೃಷಿ ಕೂಲಿ ಕೆಲಸದಲ್ಲಿ ತೊಡಗಿರುತ್ತಾರೆ. ಅಂದರೆ ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಮಹಿಳೆ ದುಡಿಮೆಗಾರರು ಅಧಿಕ ಪ್ರಮಾಣದ ಕೃಷಿ ಚಟುವಟಿಕೆಯಲ್ಲಿ  ತೊಡಗಿರುವ ಕುಟುಂಬಗಳಾಗಿವೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೪೨.೨೨ರಷ್ಟು ಕೂಲಿ ಕಾರ್ಮಿಕರು ಕೃಷಿ ದುಡಿಮೆಯಲ್ಲಿ ತೊಡಗಿದ್ದು, ಇದರಲ್ಲಿ ದುಡಿಯುವ ಮಹಿಳಾ ಕೂಲಿ ದುಡಿಮೆಗಾರರು ಶೇ.೬೩.೧೬ರಷ್ಟಿದ್ದರೆ, ಪುರುಷ ಕೂಲಿ ದುಡಿಮೆಗಾರರು ಶೇ.೩೬.೮೪ರಷ್ಟಿದ್ದಾರೆ. ಅಂದರೆ ಬಳ್ಳಾರಿ ಗಣಿ ವಲಯ ಗ್ರಾಮೀಣ ಕುಟುಂಬಗಳು ಕೃಷಿಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಲ್ಲಿ ಮಹಿಳೆ ದುಡಿಮೆಗಾರರಿಗಿಂತ ಪುರುಷ ಕೂಲಿ ದುಡಿಮೆಗಾರರು(ಶೇ.೨೬.೩೧)ಹೆಚ್ಚಾಗಿ ಕೃಷಿಯಲ್ಲಿ ತೊಡಗಿದ್ದಾರೆ. ಗಣಿ ವಲಯದ ಕೃಷಿ ಚಟುವಟಿಕೆಯಲ್ಲಿ ಕೇವಲ ಆರು ತಿಂಗಳು ಮಾತ್ರ ದುಡಿಮೆಯಿದ್ದು. ಕೃಷಿಯಲ್ಲಿ ಮುಖ್ಯವಾಗಿ ಬೀಜ ಬಿತ್ತನೆ, ಕಳೆ ತೆಗೆಯುವುದು, ಬೆಳೆ ಕಟಾವು ಮಾಡುವ ಬೆಳೆಗಳಿಗೆ ಔಷಧಿ ಹೊಡೆಯುವ, ರಂಟೆ ಒಡೆಯುವ ಇತ್ಯಾದಿ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಕೃಷಿ ಭೂಮಿಯ ಬಿತ್ತನೆಯ ಸಮಯದಿಂದ ಇಳುವರಿ ಕಟಾವು ಮಾಡುವ ಸಂದರ್ಭದವರೆಗೂ ಮಾತ್ರ ಕೃಷಿಯಲ್ಲಿ ದುಡಿಮೆ ಲಭ್ಯವಿದ್ದು, ನಂತರದ ೬ ತಿಂಗಳು ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿ ಚಟುವಟಿಕೆಯ ದುಡಿಮೆ ಮತ್ತು ಕೂಲಿ ಅರಸಿ ಬೇರೆಡೆ ವಲಸೆ ಹೋಗಿ ಕೂಲಿ ದುಡಿಮೆಯಲ್ಲಿ ತೊಡಗುತ್ತಾರೆ.

**೪.೫.೧ ದುಡಿಮೆಯ ದರ–ಅವಧಿ– ಮಾದರಿ**

ಹೊಸಪೇಟೆ ಬಳ್ಳಾರಿ, ಸಂಡೂರು ಗಣಿವಲಯ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಚಟುವಟಿಕೆಯಲ್ಲಿ ನಿರತರಾದ ಕೂಲಿ ದುಡಿಮೆಗಾರರಿಗೆ ನೀಡುವ ಕೂಲಿಯ ದರ, ಅವಧಿ ಹಾಗೂ ಕೂಲಿ ನೀಡುವ ಮಾದರಿಗೆ ಸಂಬಂಧಿಸಿದಂತೆ ಕುಟುಂಬಗಳನ್ನು ಸಮೀಕ್ಷೆ ಒಳಪಡಿಸಿದಾಗ ಕುಟುಂಬಗಳಲ್ಲಿರುವ ಕೃಷಿ ಕೂಲಿ ದುಡಿಮೆಗಾರರು ನೀಡಿರುವ ಫಲಿತಾಂಶವನ್ನು ದತ್ತಾಂಶಗಳಲ್ಲಿ ದಾಖಲಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಲ್ಲಿ ಕೂಲಿಯ ದರ, ಅವಧಿ ಹಾಗೂ ಕೂಲಿ ಪಡೆಯುವ ವಿಧಾನ ಅಥವಾ ಮಾದರಿಗೆ ಸಂಬಂಧಿಸಿದಂತೆ ಕೃಷಿಯಲ್ಲಿ ಕೂಲಿ ದುಡಿಮೆಗೆ ತೊಡಗಿರುವ ಕುಟುಂಬಗಳ ಆಧಾರದ

ಮೇಲೆ ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದ ದತ್ತಾಂಶವನ್ನು ಮಾತ್ರ ಈ ಕೆಳಗಿನ ಕೋಷ್ಟಕದಲ್ಲಿ ಬಳಸಲಾಗಿದೆ ಹೆಚ್ಚಿನ ಮಾಹಿತಿಗಾಗಿ ಕೋಷ್ಟಕ ೪.೧೧ನ್ನು ಗಮನಿಸಿ.

**ಕೋಷ್ಟಕ ೪.೧೧ ಕೃಷಿಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರಿಗೆ ನೀಡುವ ಕೂಲಿಯ ದರ– ಮಾದರಿ–ಅವಧಿಯ ಶೇಕಡವಾರುಗಳ ವಿವರ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕುಟುಂಬಗಳ ಕೂಲಿ ಕಾರ್ಮಿಕರಿಗೆ ಕೂಲಿ ನೀಡುವ ದರ (ದಿನಕ್ಕೆ ರೂ.ಗಳಲ್ಲಿ) | | | | | | |
| | ೧೦೦–೧೧೦ | ೧೬ | ೩೩.೩೪ | ೧೯ | ೩೫.೮೫ | ೧೩ | ೩೪.೨೧ |
| | ೧೦೦–೧೨೦ | ೧೫ | ೩೧.೨೫ | ೧೩ | ೨೪.೫೭ | ೦೭ | ೧೮.೪೨ |
| | ೧೦೦–೧೫೦ | ೦೯ | ೧೮.೭೫ | ೨೧ | ೩೯.೬೮ | ೦೮ | ೨೧.೦೫ |
| | ೧೫೦ಕ್ಕಿಂತ ಹೆಚ್ಚು | ೦೮ | ೧೬.೬೬ | – | – | ೧೦ | ೨೬.೩೧ |
| | **ಒಟ್ಟು** | **೪೮** | ೧೦೦ | **೫೩** | ೧೦೦ | **೩೮** | ೧೦೦ |
| ೦೨ | ಕುಟುಂಬಗಳ ಕೂಲಿ ಕಾರ್ಮಿಕರಿಗೆ ಕೂಲಿದರ ನೀಡುವ ಮಾದರಿ | | | | | | |
| | ದಿನಗೂಲಿ | ೧೨ | ೨೫.೦೦ | ೨೧ | ೩೯.೬೩ | ೧೩ | ೩೪.೨೨ |
| | ವಾರದ ಕೂಲಿ | ೨೯ | ೫೮.೩೪ | ೩೨ | ೬೦.೩೭ | ೨೫ | ೬೫.೨೮ |
| | ತಿಂಗಳ ಕೂಲಿ | ೦೮ | ೧೬.೬೬ | – | – | – | – |
| | **ಒಟ್ಟು** | **೪೮** | ೧೦೦ | **೫೩** | ೧೦೦ | **೩೫** | ೧೦೦ |
| ೦೩ | ಕುಟುಂಬಗಳ ಕೂಲಿ ಕಾರ್ಮಿಕರು ದುಡಿಮೆ ಮಾಡುವ ಅವಧಿ | | | | | | |
| | ೮ –೬ | ೪೮ | ೧೦೦ | ೫೩ | ೧೦೦ | ೩೮ | ೧೦೦ |
| | ೮ ೨ | – | – | – | – | – | – |
| | ಇತರೆ | | | | | | |
| | ಒಟ್ಟು | ೪೮ | ೧೦೦ | ೫೩ | ೧೦೦ | ೩೮ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಕೃಷಿಯಲ್ಲಿ ತೊಡಗಿರುವ ದುಡಿಮೆಯ ದರ, ದುಡಿಮೆಯ ಮಾದರಿ ಹಾಗೂ ದುಡಿಮೆಯ ಅವಧಿಯನ್ನು ತಾಲ್ಲೂಕುವಾರು ಕೃಷಿ ಚಟುವಟಿಕೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೬೦ ಕುಟುಂಬಗಳ ಪೈಕಿ ೪೮ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೫೩.೩೪ರಷ್ಟು ಕೃಷಿ ಚಟುವಟಿಕೆಯ ದುಡಿಮೆಯಲ್ಲಿ ತೊಡಗಿದ್ದಾರೆ. ಈ ಕುಟುಂಬಗಳು ಪ್ರತಿಶತವಾಗಿ ಕೃಷಿಯಲ್ಲಿ ದುಡಿಮೆ ಮಾಡುವ ಕೂಲಿ ದುಡಿಮೆಗಾರರಿಗೆ ಕೂಲಿಯ ದರಕ್ಕೆ ಸಂಬಂಧಿಸಿದಂತೆ ೧೦೦–೧೧೦.ರೂ ಪಡೆಯುವ ಕೃಷಿ ಕೂಲಿ ದುಡಿಮೆಗಾರರು ಶೇ.೩೩.೩೪ರಷ್ಟು, ೧೦೦–೧೨೦.ರೂ ಕೂಲಿ ಪಡೆಯುವವರು ಶೇ.೩೧.೨೫ರಷ್ಟು, ೧೦೦–೧೫೦ ರೂಪಾಯಿವರೆಗೆ ಕೂಲಿಯನ್ನು ಪಡೆಯುವವರು ಶೆ.೧೮.೭೫ರಷ್ಟು, ೧೫೦ಕ್ಕಿಂತ ಹೆಚ್ಚು ಕೂಲಿಯನ್ನು ಪಡೆಯುವ ದುಡಿಮೆಗಾರರು ಶೇ.೧೬.೬೬ರಷ್ಟು ಕುಟುಂಬಗಳಲ್ಲಿ ಇರುವುದು ಕಂಡುಬಂದಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ದಿನಕ್ಕೆ ಮಹಿಳಾ ದುಡಿಮೆಗಾರರಿಗೆ ೧೨೦ರೂ

ಕೂಲಿಯನ್ನು ಹಾಗೂ ಪುರುಷ ದುಡಿಮೆಗಾರರಿಗೆ ೧೫೦ರೂ ಕೂಲಿಯನ್ನು ಕೃಷಿ ಚಟುವಟಿಕೆಯಲ್ಲಿ ನಿಗದಿಪಡಿಸಿದ್ದಾರೆ. ಕೃಷಿ ಚಟುವಟಿಕೆಯಲ್ಲಿ ಕೂಲಿ ದುಡಿಮೆಗೆ ತೊಡಗಿದವರು ಕೂಲಿಯನ್ನು ಪಡೆಯುವ ಮಾದರಿಗೆ ಸಂಬಂಧಿಸಿದಂತೆ ೧೨ ಕುಟುಂಬಗಳು ದಿನಗೂಲಿಯನ್ನು ಪಡೆಯುವ ದುಡಿಮೆಗಾರರು ಶೇ.೨೫ರಷ್ಟು, ವಾರದ ಕೂಲಿಯನ್ನು ಪಡೆಯುವ ೦೮ ಕುಟುಂಬಗಳ ದುಡಿಮೆಗಾರರು ಶೇ.೫೮.೩೪ರಷ್ಟು, ತಿಂಗಳು ಕೂಲಿಯನ್ನು ಶೇ.೧೬.೬೬ರಷ್ಟು ದುಡಿಮೆಗಾರರು ಪಡೆಯುತ್ತಿದ್ದಾರೆ. ತಿಂಗಳಿಗೆ ಕೂಲಿಯನ್ನು ಪಡೆಯುವ ದುಡಿಮೆಗಾರರು ಬೇರೊಂದು ಪ್ರದೇಶದ ಕೃಷಿ ಚಟುವಟಿಕೆಯ ದುಡಿಮೆಯಲ್ಲಿ ತೊಡಗಿದವರಾಗಿದ್ದು, ಅವರಿಗೆ ದಿನಕ್ಕೆ ೨೫೦ರೂ ಕೂಲಿಯನ್ನು ನಿಗದಿಪಡಿಸಿದ್ದಾರೆಂದು ತಿಂಗಳು ಕೂಲಿ ಪಡೆಯುವ ಕುಟುಂಬಗಳ ಕೂಲಿ ದುಡಿಮೆಗಾರರು ತಿಳಿಸಿದ್ದಾರೆ. ಕೃಷಿ ಚಟುವಟಿಕೆಯ ದುಡಿಮೆ ಅವಲಂಬಿಸಿರುವ ಕುಟುಂಬಗಳ ಕೂಲಿ ದುಡಿಮೆಗಾರರ ಅವಧಿಯು ಬೆಳಿಗ್ಗೆ ೮ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ ದುಡಿಮೆಯಲ್ಲಿ ತೊಡಗಿದ್ದು, ಪ್ರತಿಶತ ಶೇ.೧೦೦ರಷ್ಟಿರುವುದು ಕಂಡುಬರುತ್ತದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೫೮.೮೮ರಷ್ಟು ಕೃಷಿ ದುಡಿಮೆಯಲ್ಲಿ ತೊಡಗಿದ್ದಾರೆ. ಅಂದರೆ ೯೦ ಕುಟುಂಬಗಳ ಪೈಕಿ ೫೩ ಕುಟುಂಬಗಳು ಕೃಷಿ ಚಟುವಟಿಕೆಯಲ್ಲಿ ಕೂಲಿ ದುಡಿಮೆಗಾರರಾಗಿ ದುಡಿಮೆ ಮಾಡುತ್ತಿದ್ದಾರೆ. ಈ ಕುಟುಂಬಗಳು ಪ್ರತಿಶತವಾಗಿ ಕೃಷಿಯಲ್ಲಿ ದುಡಿಮೆ ಮಾಡುತ್ತಿರುವ ದುಡಿಮೆಗಾರರ ಕೂಲಿ ದರವನ್ನು ಅವಲೋಕಿಸಿದಾಗ ೧೦೦–೧೧೦ರೂ ಶೇ.೩೫.೮೫ರಷ್ಟು, ೧೧೦–೧೨೦.ರೂ ಶೇ.೨೪.೫೭ರಷ್ಟು, ೧೦೦–೧೫೦.ರೂ ಶೇ.೩೯.೬೮ರಷ್ಟು ಕುಟುಂಬಗಳಲ್ಲಿ ಕೂಲಿಯನ್ನು ಹಣದ ರೂಪದಲ್ಲಿ ಸಂಭಾವನೆ ಪಡೆಯುತ್ತಿದ್ದಾರೆ. ಕೂಲಿಯ ದರವನ್ನು ಮಹಿಳೆ ಮತ್ತು ಪುರುಷರಿಗೆ ಇಂತಿಷ್ಟೆಂದು ನಿಗದಿಪಡಿಸಲಾಗಿದೆ. ಕೃಷಿ ಚಟುವಟಿಕೆಯ ದುಡಿಮೆಯಲ್ಲಿ ತೊಡಗಿರುವ ಮಹಿಳಾ ಕೂಲಿ ದುಡಿಮೆಗಾರರಿಗೆ ೧೨೦.ರೂ ಹಾಗೂ ಪುರುಷರಿಗೆ ೧೫೦.ರೂ ಕೂಲಿಯ ದರ ದಿನಕ್ಕೆ ನಿಗದಿಪಡಿಸಲಾಗಿದೆ. ಕೃಷಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರ ಅವಧಿ ಬೆಳಿಗ್ಗೆ ೮ ರಿಂದ ಸಂಜೆ ೬ ಗಂಟೆಯವರೆಗೆ ಶೇ.೧೦೦ರಷ್ಟಿರುವುದು ಕಂಡುಬರುತ್ತದೆ. ದುಡಿಮೆಯ ಮಾದರಿಗೆ ಸಂಬಂಧಿಸಿದಂತೆ ೨೧ ಕುಟುಂಬಗಳು ದಿನಗೂಲಿಯನ್ನು ಪಡೆಯುವ ದುಡಿಮೆಗಾರರು ಶೇ.೩೬.೬೩ರಷ್ಟು, ವಾರದ ಕೂಲಿಯನ್ನು ಪಡೆಯುವ ೨೫ ಕುಟುಂಬಗಳ ದುಡಿಮೆಗಾರರು ಶೇ.೫೮.೩೪ರಷ್ಟಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ಶೇ.೪೨.೨೨ರಷ್ಟು ಕೂಲಿ ದುಡಿಮೆಗಾರರು ಕೃಷಿ ದುಡಿಮೆಯಲ್ಲಿ ತೊಡಗಿದ್ದು, ೧೩ ಕುಟುಂಬಗಳ ಕೂಲಿ ದುಡಿಮೆಗಾರರು ೧೦೦ರಿಂದ೧೧೦.ರೂ ಕೂಲಿ ದರವನ್ನು ಪಡೆಯುವವರು ಶೇ.೩೪.೨೧ರಷ್ಟು, ೧೧೦ರಿಂದ೧೨೦.ರೂ ಕೂಲಿ ದರವನ್ನು ಶೇ.೧೮.೪೨ರಷ್ಟು, ೧೦೦–೧೫೦ರೂ ಕೂಲಿ ದರವನ್ನು ಶೇ.೨೧.೦೫ರಷ್ಟು ಹಾಗೂ ೧೫೦ಕ್ಕಿಂತ ಹೆಚ್ಚು ಕೂಲಿ ದರವನ್ನು ಶೇ.೨೬.೩೨ರಷ್ಟು ಕೃಷಿ ದುಡಿಮೆ ತೊಡಗಿಸಿಕೊಂಡ ಕೂಲಿ ದುಡಿಮೆಗಾರರು ಪಡೆಯುತ್ತಿದ್ದಾರೆ. ಕೃಷಿ ದುಡಿಮೆಯಲ್ಲಿ ತೊಡಗಿಸಿಕೊಂಡ ಕುಟುಂಬಗಳ ದುಡಿಮೆಗಾರರು ದಿನಗೂಲಿಯನ್ನು ಶೇ.೩೪.೨೨ರಷ್ಟು, ವಾರದ ಕೂಲಿಯನ್ನು ಶೇ.೬೫.೭೮ರಷ್ಟು ಪಡೆಯುವ ಕುಟುಂಬಗಳು ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ. ಈ ವಲಯದಲ್ಲಿ ಕೃಷಿ ಕೂಲಿ ದುಡಿಮೆಗಾರರ ದುಡಿಮೆಯ ಅವಧಿ ಬೆಳಿಗ್ಗೆ ೮ ಗಂಟೆಯಿಂದ ಸಂಜೆ ೬ ಗಂಟೆ ಆಗಿದ್ದು, ಶೇ.೧೦೦ರಷ್ಟು ಕೃಷಿ ಕೂಲಿ ದುಡಿಮೆಗಾರರು ಈ ಅವಧಿಯಲ್ಲಿ ದುಡಿಮೆ ಮಾಡುತ್ತಿದ್ದಾರೆ. ಒಟ್ಟಾರೆಯಾಗಿ ದುಡಿಮೆಯ ದರ, ಮಾದರಿ ಮತ್ತು ಅವಧಿಯನ್ನು, ಮೂರು ತಾಲ್ಲೂಕಿನ ಕುಟುಂಬಗಳಲ್ಲಿ ಅವಲೋಕಿಸಿದಾಗ ೧೦೦–೧೧೦.ರೂ ಕೂಲಿಯ ದರವನ್ನು ಪಡೆಯುವ ಕೂಲಿ ದುಡಿಮೆಗಾರರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಆದರೆ ಈ ಮೂರು ತಾಲ್ಲೂಕುಗಳಲ್ಲಿ ೧೦೦–೧೧೦ರೂ ಕೂಲಿ ಪಡೆಯುವ ಕುಟುಂಬಗಳು (ಶೇ.೩೫.೮೫) ಸಂಡೂರು ತಾಲ್ಲೂಕಿನಲ್ಲಿ ಅಧಿಕವಾಗಿ ಕಂಡುಬರುತ್ತದೆ. ದುಡಿಮೆಯ ಮಾದರಿಯಲ್ಲಿ ಗಣಿ ಗ್ರಾಮೀಣ ಪ್ರದೇಶದ ಮೂರು ತಾಲ್ಲೂಕುಗಳೂ ವಾರದ ಕೂಲಿಯನ್ನು ಪಡೆಯುವ ಕುಟುಂಬಗಳು ಅಧಿಕ ಪ್ರಮಾಣದಲ್ಲಿದ್ದು,

ಆದರಲ್ಲಿಯೇ ಬಳ್ಳಾರಿ ತಾಲ್ಲೂಕಿನ ಕುಟುಂಬಗಳಲ್ಲಿ (ಶೇ.೬೫.೭೮) ವಾರದ ಕೂಲಿಯನ್ನು ಅಧಿಕವಾಗಿ ಪಡಯುವ ತಾಲ್ಲೂಕಾಗಿದೆಂದು ತಿಳಿದುಬರುತ್ತದೆ.

**೪.೬ ಗಣಿಗಾರಿಕೆ ಮತ್ತು ದುಡಿಮೆ**

ಬಳ್ಳಾರಿ, ಹೊಸಪೇಟೆ, ಸಂಡೂರು ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆಯ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಿಗೆ ಸಂಬಂಧಿಸಿದಂತೆ ಗಣಿ ವಲಯದ ಪ್ರತಿಯೊಂದು ತಾಲ್ಲೂಕಿಗೆ ೯೦ ಕುಟುಂಬಗಳಂತೆ ಜಿಲ್ಲೆಯ ಒಟ್ಟು ೨೭೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದ ದತ್ತಾಂಶವನ್ನು ದಾಖಲಿಸಿ, ಗಣಿ ಕೂಲಿ ಕೆಲಸದಲ್ಲಿ ತೊಡಗಿರುವ ದುಡಿಮೆಗಾರರ ಪ್ರಮಾಣ, ದುಡಿಮೆಯಲ್ಲಿ ತೊಡಗಿರುವ ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ, ಗಣಿ ದುಡಿಮೆಯ ಕೂಲಿ ದರ, ಕೂಲಿ ನೀಡುವ ವಿಧಾನ, ದುಡಿಮೆಯ ಅವಧಿ ಹಾಗೂ ಗಣಿಯ ಯಾವ ದುಡಿಮೆಯಲ್ಲಿ ತೊಡಗಿದ್ದಾರೆ ಎಂಬವುದನ್ನು ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೪.೧೨ ಗಣಿ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರ ಪ್ರಮಾಣದ ವಿವರ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕುಟುಂಬ ಗಳಲ್ಲಿ ಗಣಿ ಕೂಲಿ ಕೆಲಸಕ್ಕೆ ಹೋಗ್ತಾರೆಯೇ | | | | | | |
| | ಹೌದು | ೩೩ | ೩೬.೬೬ | ೪೧ | ೪೫.೫೫ | ೪೩ | ೪೭.೭೭ |
| | ಇಲ್ಲ | ೫೭ | ೬೩.೩೪ | ೪೯ | ೫೪.೪೬ | ೪೭ | ೫೨.೨೩ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಗಣಿಗಾರಿಕೆಯಲ್ಲಿ ಯಾವ ಕೆಲಸ ದುಡಿಮೆಯನ್ನು ತೊಡಗಿಸಿಕೊಂಡಿದ್ದಾರೆ | | | | | | |
| | ವ್ಯಾಗನ್ ಲೋಡಿಂಗ್ | ೦೬ | ೧೮.೧೮ | ೦೫ | ೧೨.೧೯ | ೧೦ | ೨೩.೨೫ |
| | ಡ್ರೈವರ್ | ೦೮ | ೨೪.೨೪ | ೦೬ | ೧೪.೬೩ | ೧೦ | ೨೩.೨೫ |
| | ಅಪರೇಟರ್ | ೦೪ | ೧೨.೧೨ | ೦೬ | ೧೪.೬೩ | ೦೧ | ೦೨.೩೪ |
| | ಕ್ಲೀನರ್ | ೦೬ | ೧೮.೧೮ | ೦೫ | ೧೨.೧೯ | ೦೯ | ೨೦.೯೩ |
| | ಕಸ ಹೊಡೆಯುವುದು | ೦೪ | ೧೨.೧೨ | ೦೯ | ೨೧.೯೭ | ೦೬ | ೧೩.೯೫ |
| | ನೆಲವರೆಸುವುದು | – | – | ೦೩ | ೦೭.೩೩ | ೦೭ | ೧೬.೨೮ |
| | ಕಲ್ಲು ಸಂಗ್ರಹ | ೦೫ | ೧೫.೧೬ | ೦೭ | ೧೭.೦೭ | – | – |
| | ಒಟ್ಟು | ೩೩ | ೧೦೦ | ೪೧ | ೧೦೦ | ೪೩ | ೧೦೦ |
| ೦೩ | ಗಣಿಕೂಲಿ ಕೆಲಸಕ್ಕೆ ಹೋರ್ಯಾರು? | | | | | | |
| | ಮಹಿಳೆ | ೦೯ | ೨೭.೨೭ | ೧೮ | ೪೩.೯೧ | ೦೯ | ೨೦.೬೪ |
| | ಪರುಷ | ೨೪ | ೭೨.೭೩ | ೨೩ | ೫೬.೦೯ | ೩೪ | ೭೯.೦೬ |
| | ಒಟ್ಟು | ೩೩ | ೧೦೦ | ೪೧ | ೧೦೦ | ೪೩ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆಯ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರ ಪ್ರಮಾಣ, ಅದರಲ್ಲಿ ಮಹಿಳಾ

ಮತ್ತು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ, ಹಾಗೂ ಗಣಿಗಾರಿಕೆಯ ಚಟುವಟಿಕೆಯಲ್ಲಿ ಯಾವ ದುಡಿಮೆಗೆ ತೊಡಗಿದ್ದಾರೆ ಎಂಬುವುದರ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಈ ಕೋಷ್ಟಕದಲ್ಲಿ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೩೩ ಕುಟುಂಬಗಳು ಗಣಿ ದುಡಿಮೆಯಲ್ಲಿ ತೊಡಗಿದ್ದು, ಗಣಿ ಕೂಲಿ ದುಡಿಮೆಗಾರರು ಶೇ.೩೬.೬೬ರಷ್ಟಿದ್ದಾರೆ. ಗಣಿ ದುಡಿಮೆಗೆ ತೊಡಗಿರುವ ಮಹಿಳಾ ಕೂಲಿ ದುಡಿಮೆಗಾರರು ಶೇ.೨೭.೨೭ರಷ್ಟು ಹಾಗೂ ಪುರುಷ ಕೂಲಿ ದುಡಿಮೆಗಾರರು ಶೇ.೭೨.೭೨ರಷ್ಟು ಗಣಿ ದುಡಿಮೆಯಲ್ಲಿ ನಿರತರಾಗಿದ್ದಾರೆ. ಈ ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ವ್ಯಾಗನ್ ಲೋಡಿಂಗ್, ಡ್ರೈವರ್, ಅಪರೇಟರ್, ಕ್ಲೀನರ್, ಕಸ ಹೊಡೆಯುವ, ನೆಲ ಒರೆಸುವ, ಕಲ್ಲು ಸಂಗ್ರಹಣೆ ಮಾಡುವ ಇತ್ಯಾದಿ ಗಣಿ ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಗಣಿಗಾರಿಕೆಯಲ್ಲಿ ತೊಡಗಿರುವ ದುಡಿಮೆಯ ಪ್ರಮಾಣವನ್ನು ನೋಡುವುದಾದರೆ, ವ್ಯಾಗನ್ ಲೋಡಿಂಗ್ ಕೂಲಿ ದುಡಿಮೆಯಲ್ಲಿ ಶೇ.೧೮.೧೮ರಷ್ಟು, ಕಸ ಹೊಡೆಯುವುದು ಶೇ.೧೨.೧೨ರಷ್ಟು, ಕಲ್ಲು ಸಂಗ್ರಹ ಮಾಡುವ ಕೆಲಸದಲ್ಲಿ ಶೇ.೧೫.೧೬ರಷ್ಟು ಕುಟುಂಬಗಳು ಗಣಿ ಕೂಲಿ ದುಡಿಮೆಗಾರರು ತೊಡಗಿದ್ದಾರೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೪೫.೫೬ರಷ್ಟು ಗಣಿ ಕೂಲಿ ದುಡಿಮೆಗಾರರು ದುಡಿಮೆ ಮಾಡುತ್ತಿದ್ದಾರೆ. ಗಣಿಗಾರಿಕೆಯ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಲ್ಲಿ ಶೇ.೪೩.೯೦ರಷ್ಟು ಮಹಿಳಾ ಕೂಲಿ ದುಡಿಮೆಗಾರರಿದ್ದು, ಪುರುಷ ಕೂಲಿ ದುಡಿಮೆಗಾರರು ಶೇ.೫೬.೦೯ರಷ್ಟಿದ್ದಾರೆ. ಅಂದರೆ ಗಣಿಗಾರಿಕೆಯ ದುಡಿಮೆಯಲ್ಲಿ ಮಹಿಳಾ ಕೂಲಿ ದುಡಿಮೆಗಾರರಿಗಿಂತ ಪುರುಷ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಗಣಿ ಕೂಲಿ ದುಡಿಮೆಗಾರರು, ವ್ಯಾಗನ್ ಲೋಡಿಂಗ್ ಶೇ.೧೨.೧೯ರಷ್ಟು, ಲಾರಿ ಡ್ರೈವರ್ ಶೇ.೧೪.೬೩ರಷ್ಟು, ಅಪರೇಟರ್ ಶೇ.೧೪.೬೩ರಷ್ಟು, ಕ್ಲೀನರ್ ಶೇ.೧೨.೧೯ರಷ್ಟು, ಕಸ ಹೊಡೆಯುವುದು ಶೇ.೨೧.೯೭ರಷ್ಟು, ನೆಲ ವರೆಸುವುದು ಶೇ.೦೭.೩೩ರಷ್ಟು, ಕಲ್ಲು ಸಂಗ್ರಹ ಮಾಡುವವರು ಶೇ.೧೭.೦೭ರಷ್ಟು ಗಣಿಗಾರಿಕೆಯ ವಿವಿಧ ದುಡಿಮೆಯಲ್ಲಿ ತೊಡಗಿರುವುದು ಈ ಕುಟುಂಬಗಳಲ್ಲಿ ಕಂಡುಬಂದಿದೆ. ಗಣಿಗಾರಿಕೆಯ ದುಡಿಮೆಯಲ್ಲಿ ಲಾರಿ ಡ್ರೈವರ್ ಹಾಗೂ ಅಪರೇಟರ್ ಕೂಲಿ ದುಡಿಮೆಗಾರರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಹಾಗೆಯೇ ಗಣಿ ವಲಯವಾದ ಬಳ್ಳಾರಿ ತಾಲ್ಲೂಕು ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಅವಲೋಕಿಸಿದಾಗ, ೯೦ ಕುಟುಂಬಗಳ ಪೈಕಿ ೪೩ ಕುಟುಂಬಗಳು ಗಣಿಗಾರಿಕೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಿದ್ದು, ಶೇ.೪೭.೭೭ರಷ್ಟಿದ್ದಾರೆ. ಇರದಲ್ಲಿ ಮಹಿಳಾ ಕೂಲಿ ದುಡಿಮೆಗಾರರು ಶೇ.೨೦.೯೪ರಷ್ಟಿದ್ದು, ಪರುಷ ಕೂಲಿ ದುಡಿಮೆಗಾರರು ಶೇ.೭೯.೦೬ರಷ್ಟಿದ್ದಾರೆ. ಅಂದರೆ ಬಳ್ಳಾರಿ ಗ್ರಾಮೀಣ ಪ್ರದೇಶದ ಗಣಿಗಾರಿಕೆಯಲ್ಲಿ ದುಡಿಮೆ ಮಾಡುವ ಪುರುಷ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿರುವುದು ಕಂಡುಬಂದಿದೆ. ಈ ಗಣಿ ಕೂಲಿ ದುಡಿಮೆಗಾರರನ್ನು ಹೊಂದಿರುವ ಕುಟುಂಬಗಳಲ್ಲಿ ವ್ಯಾಗನ್ ಲೋಡಿಂಗ್ ಶೇ.೨೩.೨೫ರಷ್ಟು, ಲಾರಿ ಡ್ರೈವರ್ ಶೇ.೨೩.೨೫ರಷ್ಟು, ಆಪರೇಟರ್ ಶೇ.೦೨.೩೪ರಷ್ಟು, ಕ್ಲೀನರ್ ಶೇ.೨೦.೯೩ರಷ್ಟು, ಕಸ ಹೊಡೆಯುವುದು ಶೇ.೧೩.೯೫ರಷ್ಟು, ನೆಲಹೊರೆಸುವುದು, ಶೇ.೧೬.೨೮ರಷ್ಟು ಗಣಿಗಾರಿಕೆಯ ವಿವಿಧ ದುಡಿಮೆಯಲ್ಲಿ ತೊಡಗಿಸಿಕೊಂಡಿರುವುದು ಕ್ಷೇತ್ರಕಾರ್ಯದಿಂದ ಕಂಡುಬಂದಿದೆ. ಒಟ್ಟಾರೆಯಾಗಿ ಗಣಿಗಾರಿಕೆಯ ದುಡಿಮೆಯಲ್ಲಿ ನಿರತರಾದ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಕೂಲಿ ದುಡಿಮೆಗಾರರನ್ನು ಅವಲೋಕಿಸಿದಾಗ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ (ಶೇ.೪೭.೭೮) ಗಣಿಗಾರಿಕೆಯ ದುಡಿಮಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರು

ಹೆಚ್ಚಿನ ಪ್ರಮಾಣದಲ್ಲಿ ಇರುವುದು ಕಂಡುಬಂದಿದೆ. ಹೀಗೆ ಈ ಮೂರು ಗಣಿ ವಲಯಗಳಲ್ಲಿ ವ್ಯಾಗನ್ ಲೋಡಿಂಗ್ ಹಾಗೂ ಲಾರಿ ಡ್ರೈವರ್ ಕೂಲಿ ಕೆಲಸ ಮಾಡುವವರು ಅಧಿಕ ಪ್ರಮಾಣದಲ್ಲಿ ಇರುವುದು ಕುಟುಂಬಗಳಲ್ಲಿ ಕಾಣಸಿಗುತ್ತದೆ (ಕೋಷ್ಟಕ ೪.೧೨ನ್ನು ಗಮನಿಸಿ).

**೪.೧೬ ದುಡಿಮೆಯ ದರ– ಮಾದರಿ–ಅವಧಿ**

ಬಳ್ಳಾರಿ, ಹೊಸಪೇಟೆ, ಸಂಡೂರು ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಯಲ್ಲಿ ತೊಡಗಿರುವ ದುಡಿಮೆಗಾರರಿಗೆ ನೀಡುವ ಕೂಲಿಯ ದರ, ಮಾದರಿ ಮತ್ತು ದುಡಿಯುವ ಅವಧಿಗೆ ಸಂಬಂಧಿಸಿದಂತೆ ಗಣಿ ಗ್ರಾಮೀಣ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿ, ಬಂದಂತಹ ಪಲಿತಾಂಶವನ್ನು ದತ್ತಾಂಶಗಳ ಮೂಲಕ ದಾಖಲಿಸಿ ಈ ಕೆಳಗಿನಂತೆ ವಿಶ್ಲೇಷಣೆ ಮಾಡಲಾಗಿದೆ.

**ಕೋಷ್ಟಕ ೪.೧೩. ಗಣಿಯಲ್ಲಿ ತೊಡಗಿರುವ ಕುಟುಂಬಗಳ ದುಡಿಮೆಗಾರರಿಗೆ ನೀಡುವ ದುಡಿಮೆಯ ದರ– ಮಾದರಿ– ಅವಧಿ ಪ್ರಮಾಣದ ವಿವರ.**

| ಕ್ರ.ಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಗಣಿಗಾರಿಯಲ್ಲಿ ದುಡಿಯುವ ಕೂಲಿ ದುಡಿಮೆಗಾರರಿಗೆ ನೀಡುವ ದರ (ರೂ) | | | | | | |
| | ೧೦೦–೧೫೦ | ೦೪ | ೧೨.೧೩ | ೧೧ | ೨೬.೮೮ | ೧೧ | ೨೫.೫೮ |
| | ೧೫೦–೨೦೦ | ೦೫ | ೧೫.೧೫ | ೦೮ | ೧೯.೫೪ | ೦೭ | ೧೬.೨೮ |
| | ೨೦೦–೩೦೦ | ೧೨ | ೩೬.೩೬ | ೧೫ | ೩೬.೫೮ | ೧೨ | ೨೭.೯೪ |
| | ೩೦೦ಕ್ಕಿಂತ ಹೆಚ್ಚು | ೧೨ | ೩೬.೩೬ | ೧೫ | ೧೭.೦೭ | ೧೩ | ೩೦.೨೩ |
| | **ಒಟ್ಟು** | **೩೩** | ೧೦೦ | **೪೧** | ೧೦೦ | **೪೩** | ೧೦೦ |
| ೦೨ | ಗಣಿಯಲ್ಲಿ ತೊಡಗಿರುವ ದುಡಿಮೆಗಾರರು ಕೂಲಿ ದರ ಪಡೆಯುವ ಮಾದರಿ | | | | | | |
| | ದಿನಗೂಲಿ | ೦೬ | ೧೮.೧೮ | ೦೫ | ೧೨.೧೯ | ೧೦ | ೨೩.೨೫ |
| | ವಾರದ ಕೂಲಿ | ೦೪ | ೧೨.೧೩ | ೧೯ | ೪೬.೩೫ | ೧೩ | ೩೦.೨೩ |
| | ತಿಂಗಳ ಕೂಲಿ | ೨೩ | ೬೯.೬೯ | ೧೭ | ೪೧.೪೬ | ೨೦ | ೪೬.೫೨ |
| | **ಒಟ್ಟು** | **೩೩** | ೧೦೦ | **೪೧** | ೧೦೦ | **೪೩** | ೧೦೦ |
| ೦೩ | ಗಣಿಯಲ್ಲಿ ದುಡಿಯುವ ದುಡಿಮೆಯ ಅವಧಿ | | | | | | |
| | ೮–೬ | ೧೫ | ೪೫.೪೬ | ೨೪ | ೫೮.೫೪ | ೨೩ | ೫೩.೪೮ |
| | ೮–೮ | ೧೮ | ೫೪.೫೪ | ೧೭ | ೪೧.೪೬ | ೨೦ | ೪೬.೫೨ |
| | ೮–೨ | – | – | – | – | – | – |
| | **ಒಟ್ಟು** | **೩೩** | ೧೦೦ | **೪೧** | ೧೦೦ | **೪೩** | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

**(ಸೂಚನೆ : ಗಣಿಗಾರಿಕೆಯ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ದತ್ತಾಂಶವನ್ನು ಪರಿಗಣಿಸಿ, ದಾಖಲಿಸಲಾಗಿದೆ).**

ಮೇಲಿನ ಕೋಷ್ಟಕವು ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಇರುವ ಕೂಲಿ ದುಡಿಮೆಗಾರರು ಗಣಿಗಾರಿಕೆಯಲ್ಲಿ ತೊಡಗಿದವರ ದುಡಿಮೆಯ ದರ, ಮಾದರಿ ಹಾಗೂ ದುಡಿಮೆಯ ಅವಧಿಯನ್ನು ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಹೊಸಪೇಟೆ, ಗ್ರಾಮೀಣ ಪ್ರದೇಶದ ೯೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ೩೩ ಕುಟುಂಬಗಳು ಶೇ.೩೬.೬೬ರಷ್ಟು

ಕೂಲಿ ದುಡಿಮೆಗಾರರು ಗಣಿಗಾರಿಕೆಯ ದುಡಿಮೆಯಲ್ಲಿ ನಿರತರಾಗಿದ್ದಾರೆ. ಇದರಲ್ಲಿ ಗಣಿ ದುಡಿಮೆಗಾರರ ಕೂಲಿಯ ದರಕ್ಕೆ ಸಂಬಂಧಿಸಿದಂತೆ ೧೦೦-೧೫೦.ರೂ ಕೂಲಿ ಪಡೆಯುವವರು ಶೇ.೧೨.೧೩ರಷ್ಟು, ೧೫೦-೨೦೦.ರೂ ಕೂಲಿಯನ್ನು ಪಡೆಯವವರು ಶೇ.೧೫.೧೫ರಷ್ಟು, ೨೦೦-೩೦೦.ರೂ ಕೂಲಿಯನ್ನು ಪಡೆಯುವವರು ಶೇ.೩೬.೬೬ರಷ್ಟು, ೩೫೦ಕ್ಕಿಂತ ಹೆಚ್ಚು ಕೂಲಿಯನ್ನು ಪಡೆಯುವವರು ಶೇ.೩೬.೬೬ರಷ್ಟಿದ್ದು, ಗಣಿಗಾರಿಕೆಯ ಚಟುವಟಿಕೆಯಲ್ಲಿ ಕೂಲಿಯನ್ನು ಪಡೆಯುವ ಕುಟುಂಬಗಳ ದುಡಿಮೆಗಾರರು ಈ ತಾಲ್ಲೂಕಿನಲ್ಲಿ ಕಂಡುಬಂದಿದೆ. ಇದರಲ್ಲಿ ೨೦೦-೩೦೦.ರೂ ಹಾಗೂ ೩೫೦ಕ್ಕಿಂತ ಹೆಚ್ಚು ಕೂಲಿಯನ್ನು ಪಡೆಯುವ ಗಣಿ ಕೂಲಿ ದುಡಿಮೆಗಾರರು (ಶೇ.೩೬.೬೬) ಅಧಿಕ ಪ್ರಮಾಣದಲ್ಲಿರುವ ಕುಟುಂಬಗಳಾಗಿವೆ. ಕೂಲಿಯ ದರವನ್ನು ಗಣಿಗಾರಿಕೆಯ ವಲಯದಲ್ಲಿ ವೃತ್ತಿಗನುಸಾರವಾಗಿ ನಿಗದಿಪಡಿಸಲಾಗಿದೆ. ಗಣಿ ಕೂಲಿ ಮಹಿಳಾ ದುಡಿಮೆಗಾರರಿಗೆ ದಿನಕ್ಕೆ ೧೨೦.ರೂ ಕೂಲಿಯನ್ನು, ವ್ಯಾಗನ್ ಲೋಂಡಿಂಗ್ ಮಾಡುವವರಿಗೆ ದಿನಕ್ಕೆ ೨೦೦.ರೂ ಕೂಲಿಯನ್ನು, ಕ್ಲೀನರ್‌ಗೆ ೧೫೦.ರೂ ಹಾಗೂ ಡ್ರೈವರಿಗೆ ೩೫೦.ರೂ ಕೂಲಿಯನ್ನು ನೀಡುತ್ತಾರೆ. ಗಣಿ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರು ಕೂಲಿಯನ್ನು ಪಡೆಯುವ ಮಾದರಿಗೆ ಸಂಬಂಧಿಸಿದಂತೆ ಗಣಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ದಿನಗೂಲಿಯನ್ನು ಶೇ.೧೮.೧೮ರಷ್ಟು, ವಾರದ ಕೂಲಿಯನ್ನು ಶೇ.೧೨.೧೩ರಷ್ಟು, ತಿಂಗಳ ಕೂಲಿಯನ್ನು ಶೇ.೬೯.೬೯ರಷ್ಟು ಕುಟುಂಬಗಳು ಕೂಲಿಯನ್ನು ಪಡೆಯುವ ಪ್ರಮಾಣವಾಗಿದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ಕಾರ್ಮಿಕರ ದುಡಿಮೆಯ ಅವಧಿಗೆ ಸಂಬಂಧಿಸಿದಂತೆ ಬೆಳಿಗ್ಗೆ ೮ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ ದುಡಿಯುವವರು ಶೇ.೪೫.೪೬ರಷ್ಟಿದ್ದಾರೆ. ಇದರಲ್ಲಿ ಗಣಿ ವಲಯಗಳಲ್ಲಿ ೧೨ ತಾಸು ಕೆಲಸ ಮಾಡುವ ಕೂಲಿ ದುಡಿಮೆಗಾರರು ಶೇ.೪೫.೪೫ರಷ್ಟು ೨೪ ತಾಸು ಕೆಲಸ ಮಾಡುವ ಕೂಲಿ ದುಡಿಮೆಗಾರರು ಶೇ.೫೪.೫೪ರಷ್ಟು ಕುಟುಂಬಗಳಲ್ಲಿ ಕಂಡು ಬಂದಿದ್ದು, ೨೪ ತಾಸು ಕೆಲಸ ಮಾಡುವ ಕೂಲಿ ದುಡಿಮೆಗಾರರ ಪ್ರಮಾಣಕ್ಕಿಂತ ಅಧಿಕವಾಗಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೪೫.೫೬ರಷ್ಟು ಗಣಿಗಾರಿಕೆ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿಗಾರಿಕೆ ದುಡಿಮೆಯಲ್ಲಿ ತೊಡಗಿದವರಿಗೆ ೧೦೦-೧೫೦.ರೂ ಶೇ.೨೬.೮೮ರಷ್ಟು, ೧೫೦-೨೦೦.ರೂ ಶೇ.೧೯.೫೪ರಷ್ಟು, ೩೫೦ಕ್ಕಿಂತ ಹೆಚ್ಚು ರೂ ಶೇ.೩೬.೫೮ರಷ್ಟು ಕೂಲಿಯನ್ನು ಪಡೆಯುವ ಕೂಲಿ ದುಡಿಮೆಗಾರರು ಈ ಕುಟುಂಬಗಳಿದ್ದಾರೆ. ದುಡಿಮೆಯ ದರದಲ್ಲಿ ೩೫೦ಕ್ಕಿಂತ ಹೆಚ್ಚು (ಶೇ.೩೬.೫೬) ಪಡೆಯುವ ಗಣಿ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿ ಇರುವುದು ಕಂಡುಬಂದಿದೆ. ಗಣಿ ದುಡಿಮೆಯಲ್ಲಿ ತೊಡಗಿದವರು ಕೂಲಿ ದುಡಿಮೆಗಾರರು ದಿನ ಕೂಲಿಯನ್ನು ಪಡೆಯುವರು ಶೇ.೧೨.೧೯ರಷ್ಟು, ವಾರದ ಕೂಲಿಯನ್ನು ಪಡೆಯುವರು ಶೇ.೪೬.೩೫ರಷ್ಟು, ತಿಂಗಳ ಕೂಲಿಯನ್ನು ಪಡೆಯುವರು ಶೇ.೪೧.೪೬ರಷ್ಟು ಗಣಿಯಲ್ಲಿ ಕೂಲಿಯನ್ನು ಪಡೆಯುತ್ತಿದ್ದಾರೆ. ಗಣಿ ದುಡಿಮೆಗಾರರು ಈ ವಲಯದಲ್ಲಿ ಬೆಳಿಗ್ಗೆ ೮ ಗಂಟೆಯಿಂದ ಸಂಜೆ ೮ ಗಂಟೆವರೆಗೆ ಅಂದರೆ ೧೨ ತಾಸು ಗಣಿ ದುಡಿಮೆಯಲ್ಲಿ ತೊಗಿಸಿಕೊಂಡ ಕೂಲಿ ದುಡಿಮೆಗಾರರು ಶೇ.೫೮.೫೪ರಷ್ಟಿದ್ದರೆ, ಬೆಳಿಗ್ಗೆ ೮ ರಿಂದ ಬೆಳಿಗ್ಗೆ ೮ ಗಂಟೆವರೆಗೆ ಅಂದರೆ ೨೪ ತಾಸು ಗಣಿ ದುಡಿಮೆಯಲ್ಲಿ ನಿರತರಾಗಿರುವ ಕುಟುಂಬಗಳು ಶೇ.೪೧.೪೬ರಷ್ಟು ಗಣಿ ಕೂಲಿ ದುಡಿಮೆಗಾರರಿದ್ದಾರೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ವಲಯಗಳಲ್ಲಿ ಶೇ.೪೭.೭೭ರಷ್ಟು ಕುಟುಂಬಗಳು ಗಣಿಗಾರಿಕೆ ದುಡಿಮೆಯಲ್ಲಿ ತೊಡಗಿದ್ದಾರೆ. ಈ ಕುಟುಂಬಗಳ ಗಣಿ ಕೂಲಿ ದುಡಿಮೆಗಾರರು ೧೦೦-೧೫೦.ರೂ ಶೇ.೨೫.೫೮ರಷ್ಟು, ೧೫೦-೨೦೦ರೂ ಶೇ.೧೬.೨೮ರಷ್ಟು, ೨೦೦-೩೦೦ರೂ ಶೇ.೩೦.೨೩ರಷ್ಟು, ೩೫೦ಕ್ಕಿಂತ ಹೆಚ್ಚು ರೂ ಶೇ.೨೭.೯೧ರಷ್ಟು ಕೂಲಿಯ ದರವನ್ನು ಪಡೆಯುವ ಕುಟುಂಬಗಳು ಕಂಡು ಬರುತ್ತದೆ. ಈ ಕೂಲಿಯ ದರದಲ್ಲಿ ೨೦೦-೩೦೦.ರೂ ಪಡೆಯುವ ಗಣಿ ಕೂಲಿ ದುಡಿಮೆಗಾರರು (ಶೇ.೩೦.೨೩) ಅಧಿಕ ಪ್ರಮಾಣದಲ್ಲಿದ್ದಾರೆ. ಗಣಿ ದುಡಿಮೆಯಲ್ಲಿ ದಿನಗೂಲಿ, ವಾರದ ಕೂಲಿ, ಹಾಗೂ ತಿಂಗಳ ಕೂಲಿಯನ್ನು ಗಣಿ ದುಡಿಮೆಗಾರರು ಸಂಭಾವನೆಯ ರೂಪದಲ್ಲಿ ಹಣವನ್ನು ಪಡೆಯುತ್ತಿದ್ದು, ದಿನ ಕೂಲಿಯನ್ನು ಶೇ.೨೩.೨೫ರಷ್ಟು, ವಾರದ ಕೂಲಿಯನ್ನು

ಶೇ.೩೦.೨೩ರಷ್ಟು ತಿಂಗಳ ಕೂಲಿಯನ್ನು ಶೇ.೪೬.೫೨ರಷ್ಟು ಗಣಿ ಕೂಲಿ ದುಡಿಮೆಗಾರರು ಪಡೆಯುತ್ತಾರೆ. ದುಡಿಮೆಯ ಅವಧಿಗೆ ಸಂಬಂಧಿಸಿದಂತೆ ಬೆಳಿಗ್ಗೆ ೮ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ ಅಂದರೆ ೧೨ ತಾಸು ಗಣಿಗಾರಿಕೆಯಲ್ಲಿ ಕೂಲಿ ದುಡಿಮೆ ಮಾಡುವವರು ಶೇ ೫೩.೪೮ ರಷ್ಟು ಕುಟುಂಬಗಳಲ್ಲಿ ಕಂಡುಬಂದರೆ, ಬೆಳಿಗ್ಗೆ ೮ ಗಂಟೆಯಿಂದ ಬೆಳಿಗ್ಗೆ ೮ ಗಂಟೆ ವರೆಗೆ ಅಂದರೆ ೨೪ ತಾಸು ಗಣಿಗಾರಿಕೆಯಲ್ಲಿ ದುಡಿಯುವ ಕೂಲಿ ಕಾರ್ಮಿಕರು ಶೇ.೪೬.೫೨ರಷ್ಟಿರುವುದು ಗಮನಿಸಬೇಕಾದ ಅಂಶವಾಗಿದೆ.

**೪.೭ ಗಣಿ ಉದ್ಯಮ ಮತ್ತು ದುಡಿಮೆ**

ಹೊಸಪೇಟೆ, ಬಳ್ಳಾರಿ ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ತೊಡಗಿರುವ ದುಡಿಮೆಗಾರರಿಗೆ ಸಂಬಂಧಿಸಿದಂತೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಕ್ಷೇತ್ರಕಾರ್ಯದ ಸಮೀಕ್ಷೆಗೆ ಒಳಪಡಿಸಿದಾಗ ಬಂದಂತಹ ಫಲಿತಾಂಶಗಳ ದತ್ತಾಂಶವನ್ನು ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಿ, ಗಣಿ ಉದ್ಯಮದಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರ ಪ್ರಮಾಣ, ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ, ಗಣಿ ಉದ್ಯಮದ ದುಡಿಮೆಯ ದರ, ಕೂಲಿ ನೀಡುವ ಮಾದರಿ ಅಥವಾ ವಿಧಾನ ಹಾಗೂ ಗಣಿ ಉದ್ಯಮದಲ್ಲಿ ತೊಡಗಿಸಿಕೊಂಡ ದುಡಿಮೆಯ ಮತ್ತು ಅವಧಿಯ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

**ಕೋಷ್ಟಕ ೪.೧೪. ಗಣಿ ಉದ್ಯಮದಲ್ಲಿ ದುಡಿಮೆಯನ್ನು ತೊಡಗಿಸಿಕೊಂಡ ಕುಟುಂಬಗಳ ದುಡಿಮೆಗಾರರ ಪ್ರಮಾಣ.**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಗಣಿಉದ್ಯಮದಲ್ಲಿ ಕೂಲಿ ಕೆಲಸಕ್ಕೆ ಹೋಗ್ತಿರಾ | | | | | | |
| | ಹೌದು | ೨೨ | ೨೪.೪೪ | ೨೫ | ೨೭.೭೨ | ೬೪ | ೭೧.೧೨ |
| | ಇಲ್ಲ | ೬೮ | ೭೫.೫೬ | ೬೫ | ೭೨.೨೮ | ೨೬ | ೨೮.೮೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಯಾರು ಗಣಿ ಕೆಲಸಕ್ಕೆ ಹೋಗ್ತಾರೆ | | | | | | |
| | ಮಹಿಳೆ | ೦೩ | ೧೩.೬೪ | ೦೮ | ೩೨ | ೨೪ | ೩೭.೫೦ |
| | ಪುರುಷ | ೧೯ | ೮೬.೩೬ | ೧೭ | ೬೮ | ೪೦ | ೬೨.೫೦ |
| | ಒಟ್ಟು | ೨೨ | ೧೦೦ | ೨೫ | ೧೦೦ | ೬೪ | ೧೦೦ |
| ೦೩ | ಗಣಿ ಉದ್ಯಮದ ಯಾವ ಕೆಲಸಕ್ಕೆ ಹೋಗ್ತಿರಾ | | | | | | |
| | ವ್ಯಾಗನ್ ಲೋಡಿಂಗ್ | ೦೪ | ೧೮.೧೮ | ೦೪ | ೧೬ | ೦೮ | ೧೨.೫೪ |
| | ಡ್ರೈವರ್ | ೦೭ | ೩೧.೮೪ | ೦೩ | ೧೨ | ೧೪ | ೨೧.೧೮ |
| | ಆಪರೇಟರ್ | ೦೫ | ೨೨.೭೨ | ೦೫ | ೨೦ | ೦೫ | ೦೭.೮೧ |
| | ಕ್ಲೀನರ್ | ೦೩ | ೧೩.೬೩ | ೦೭ | ೨೮ | ೧೩ | ೨೦.೦೬ |
| | ಕಸಹೊಡೆಯುವುದು | ೦೩ | ೧೩.೬೩ | ೦೨ | ೦೮ | ೦೯ | ೧೪.೦೮ |
| | ನೆಲ ಒರೆಸುವುದು | – | – | ೦೨ | ೦೮ | ೧೨ | ೧೫.೭೫ |
| | ಕಲ್ಲುಸಂಗ್ರಹ | – | – | ೦೨ | ೦೮ | ೦೩ | ೦೪.೦೮ |
| | ಇತರೆ | – | – | – | – | – | – |
| | ಒಟ್ಟು | ೨೨ | ೧೦೦ | ೨೫ | ೧೦೦ | ೬೪ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

ಕೋಷ್ಟಕ ೪.೧೪ರಲ್ಲಿ ಬಳ್ಳಾರಿ, ಹೊಸಪೇಟೆ, ಸಂಡೂರು ಪ್ರದೇಶದ ಗಣಿ ಗ್ರಾಮೀಣ ಕುಟುಂಬಗಳ ಕೂಲಿ ದುಡಿಮೆಗಾರರು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಪ್ರಮಾಣ, ಗಣಿ ಉದ್ಯಮದಲ್ಲಿ ನಿರತರಾದ ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ ಹಾಗೂ ಗಣಿ ಉದ್ಯಮದಲ್ಲಿ ಯಾವ ಕೂಲಿಯನ್ನು ಮಾಡುತ್ತಿರುವ ಶೇಕಡವಾರು ಪ್ರಮಾಣವನ್ನು ತೋರಿಸುತ್ತದೆ. ಗಣಿ ಉದ್ಯಮದ ಕೂಲಿ ಕೆಲಸವನ್ನು ತೊಡಗಿಸಿಕೊಂಡ ದುಡಿಮೆಗಾರರು ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೨.೪೬ರಷ್ಟು ಕೂಲಿ ದುಡಿಮೆಗಾರರು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದ್ದಾರೆ. ಅದರಲ್ಲಿ ಗಣಿ ಉದ್ಯಮದ ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರನ್ನು ಪ್ರತಿಶತವಾಗಿ ಗಮನಿಸಿದಾಗ, ಶೇ.೧೩.೬೪ರಷ್ಟು ಮಹಿಳಾ ದುಡಿಮೆಗಾರರು ಹಾಗೂ ಶೇ.೮೬.೩೬ರಷ್ಟು ಪುರುಷ ದುಡಿಮೆಗಾರರು ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ತೊಡಗಿರುವುದು ಈ ಕುಟುಂಬಗಳಲ್ಲಿ ಕಂಡುಬಂದಿದೆ. ಅಂದರೆ ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ಪುರುಷ ದುಡಿಮೆಗಾರರು (ಶೇ.೮೬.೩೬) ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಮಹಿಳಾ ಕೂಲಿ ದುಡಿಮೆಗಾರರಿಗಿಂತ ಪುರುಷ ದುಡಿಮೆಗಾರರು ಶೇ.೭೨.೭೩ರಷ್ಟು ಅಧಿಕ ಪ್ರಮಾಣದಲ್ಲಿ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ವಲಯದ ಕೂಲಿ ದುಡಿಮೆಗಾರರು ಬಹುತೇಕವಾಗಿ ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್, ಲಾರಿ ಡ್ರೈವರ್, ಕ್ಲೀನರ್, ಜೆಸಿಬಿ ಆಪರೇಟರ್, ಕಸ ಹೊಡೆಯುವ, ನೆಲಹೊರೆಸುವ, ಕಲ್ಲು ಸಂಗ್ರಹಿಸುವ ಕೂಲಿ ದುಡಿಮೆಯನ್ನು ಮಾಡುತ್ತಿದ್ದಾರೆ. ಪ್ರತಿಶತವಾಗಿ ಕೂಲಿ ದುಡಿಮೆ ಮಾಡುವ ಪ್ರಮಾಣವನ್ನು ನೋಡುವುದಾದರೆ, ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್ ಶೇ.೧೮.೧೮ರಷ್ಟು, ಲಾರಿ ಡ್ರೈವರ್ ಶೇ.೧೩.೮೪ರಷ್ಟು, ಆಪರೇಟ್ ಶೇ.೨೨.೭೨ರಷ್ಟು, ಕ್ಲೀನರ್ ಶೇ.೧೩.೬೩ರಷ್ಟು, ಕಸ ಹೊಡೆಯುವ ಶೇ.೧೩.೬೩ರಷ್ಟು ಕೂಲಿ ದುಡಿಮೆಯಲ್ಲಿ ತೊಡಗಿರುವ ದುಡಿಮೆಗಾರರಿದ್ದಾರೆ. ಇದರಲ್ಲಿ ವ್ಯಾಗನ್ ಲೋಡಿಂಗ್ ಹಾಗೂ ಜೆಸಿಬಿ ಆಪರೇಟರ್ ಕೂಲಿ ಕೆಲಸಕ್ಕೆ ಹೋಗುವ ದುಡಿಮೆಗಾರರು ಅಧಿಕವಾಗಿ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದ್ದಾರೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೭.೭೨ರಷ್ಟು ಕೂಲಿ ದುಡಿಮೆಗಾರರು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದ್ದು, ಪ್ರತಿಶತವಾಗಿ ಮಹಿಳಾ ಕೂಲಿ ದುಡಿಮೆಗಾರರು ಶೇ.೩೨ರಷ್ಟು, ಪುರುಷ ಕೂಲಿ ದುಡಿಮೆಗಾರರು ಶೇ.೬೮ರಷ್ಟಿದಾರೆ. ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರಲ್ಲಿ ಪುರುಷ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣ (ಶೇ.೬೮)ದಲ್ಲಿದ್ದು, ಗಣಿ ಉದ್ಯಮದಲ್ಲಿ ದುಡಿಯುವ ಮಹಿಳಾ ಕೂಲಿ ದುಡಿಮೆಗಾರರ ಪ್ರಮಾಣ ಕಡಿಮೆಯಿದೆ. ಅಂದರೆ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದವರು ಶೇ.೩೬ರಷ್ಟು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ ಅಧಿಕವಾಗಿದೆ. ಈ ಗಣಿ ವಲಯದ ಗ್ರಾಮೀಣ ಕುಟುಂಬಗಳು ವ್ಯಾಗನ್ ಲೋಡಿಂಗ್ ಶೇ.೧೬ರಷ್ಟು, ಲಾರಿ ಡ್ರೈವರ್ ಶೇ.೧೨ರಷ್ಟು, ಜೆಸಿಬಿ ಆಪರೇಟರ್ ಶೇ.೨೦ರಷ್ಟು, ಕ್ಲೀನರ್ ಶೇ.೨೮ರಷ್ಟು, ಕಸಹೊಡೆಯುವ, ನೆಲಹೊರೆಸುವ, ಕಲ್ಲು ಸಂಗ್ರಹ ಮಾಡುವವರು ಕ್ರಮಾನುಗತವಾಗಿ ಶೇ.೮ರಷ್ಟು ಗಣಿ ಉದ್ಯಮದ ದುಡಿಮೆಯಲ್ಲಿ ಕೂಲಿ ದುಡಿಮೆಗಾರರಾಗಿ ದುಡಿಯುತ್ತಿದ್ದಾರೆ. ಇದರಲ್ಲಿ ಜೆಸಿಬಿ ಆಪರೇಟರ್ ಮತ್ತು ಲಾರಿ ಕ್ಲೀನರ್ ದುಡಿಮೆಯಲ್ಲಿ ತೊಡಗಿಕೊಂಡ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿದಾರೆ. ಹಾಗೆಯೇ ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೭೧.೧೨ರಷ್ಟು ದುಡಿಮೆಗಾರರು ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿ ಉದ್ಯಮದ ಕೂಲಿ ದುಡಿಮೆಗಾರರಲ್ಲಿ ಮಹಿಳಾ ಕೂಲಿ ದುಡಿಮೆಗಾರರು ಶೇ.೩೭.೫೦ರಷ್ಟು ಮತ್ತು ಪುರುಷ ಕೂಲಿ ದುಡಿಮೆಗಾರರು ಶೇ.೬೨.೫೦ರಷ್ಟು ಕೂಲಿ ದುಡಿಮೆಯನ್ನು ಮಾಡುತ್ತಿದ್ದಾರೆ. ಅಂದರೆ ಗಣಿ ಉದ್ಯಮದ ಕೂಲಿ ದುಡಿಮೆಗೆ ಹೋಗುವ ಕುಟುಂಬಗಳಲ್ಲಿ ಪುರುಷ ಕೂಲಿ ದುಡಿಮೆಗಾರರ ಪ್ರಮಾಣ ಅಧಿಕವಾಗಿದೆ. ಮಹಿಳಾ ಕೂಲಿ ದುಡಿಮೆಗಾರರಿಗಿಂತ ಪುರುಷ ಕೂಲಿ ದುಡಿಮೆಗಾರರು ಶೇ.೨೫ರಷ್ಟು ಅಧಿಕವಾಗಿದೆ. ಇದು ಗಣಿ ಉದ್ಯಮದ ದುಡಿಮೆಯಲ್ಲಿ ಲಿಂಗ ಅಸಮಾನತೆ ಆರುವುದು ಕಾಣಸಿಗುತ್ತದೆ. ಈ ಕೂಲಿ

ದುಡಿಮೆಗಾರರು ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್ ಶೇ.೧೨.೫೪ರಷ್ಟು, ಲಾರಿಡ್ರೈವರ್ ಶೇ.೨೧.೧೮ರಷ್ಟು, ಜೆಸಿಬಿ ಆಪರೇಟರ್ ಶೇ.೦೭.೮೧ರಷ್ಟು, ಕ್ಲೀನರ್ ಶೇ.೨೮ರಷ್ಟು, ಕಸ ಹೊಡೆಯುವ ಶೇ.೦೯ರಷ್ಟು, ನೆಲೆ ಒರೆಸುವುದು ಶೇ.೧೨ರಷ್ಟು, ಹಾಗೂ ಕಲ್ಲು ಸಂಗ್ರಹಣೆ ಶೇ.೦೩ರಷ್ಟು ವಿವಿಧ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಿದ್ದಾರೆ. ಇದರಲ್ಲಿ ಲಾರಿಡ್ರೈವರ್ ಹಾಗೂ ಕ್ಲೀನರ್ ಕೂಲಿ ಕೆಲಸಕ್ಕೆ ಹೋಗುವವರ ಪ್ರಮಾಣ ಅಧಿಕವಾಗಿದೆ. ಒಟ್ಟಾರೆಯಾಗಿ ಈ ಮೂರು ತಾಲ್ಲೂಕುಗಳಲ್ಲಿ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೭೧.೧೨ರಷ್ಟು ಅಧಿಕವಾಗಿ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುತ್ತದೆ. ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಬಳ್ಳಾರಿ ಹೊಸಪೇಟೆ, ಸಂಡೂರು, ಗಣಿ ಗ್ರಾಮೀಣ ಪ್ರದೇಶದ ಮಹಿಳಾ ಕೂಲಿ ದುಡಿಮೆಗಾರರು ಕಡಿಮೆ ಪ್ರಮಾಣದಲ್ಲಿದ್ದು, ಪುರುಷ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿ ಇರುವುದು ಲಿಂಗ ಅಸಮಾನತೆಯನ್ನು ಗುರುತಿಸುತ್ತದೆ. ಗಣಿ ಉದ್ಯಮದ ದುಡಿಮೆಯಲ್ಲಿ ಶೇ ೮೬.೩೬ರಷ್ಟು ಪುರುಷ ಕೂಲಿ ದುಡಿಮೆಗಾರರು ತೊಡಗಿರುವುದು ಹೊಸಪೇಟೆ ವಲಯದ ಗ್ರಾಮೀಣ ಪ್ರದೇಶದಲ್ಲಿದ್ದಾರೆ ಕೋಷ್ಟಕ ೫.೧೪ರಲ್ಲಿ ಗಮನಿಸಿಬಹುದಾಗಿದೆ.

### ೪.೮.೧ ದುಡಿಮೆಯ ದರ–ಮಾದರಿ–ಅವಧಿ

ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಪಡೆಯುವ ದುಡಿಮೆಯ ದರ, ಮಾದರಿ ಮತ್ತು ದುಡಿಮೆಯ ಅವಧಿಗೆ ಸಂಬಂಧಿಸಿದಂತೆ ಕುಟುಂಬಗಳನ್ನು ಕ್ಷೇತ್ರ ಕಾರ್ಯದ ಸಮೀಕ್ಷೆಗೆ ಒಳಪಡಿಸಿದಾಗ, ಗಣಿ ಉದ್ಯಮ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರಿಂದ ಬಂದಂತ ಫಲಿತಾಂಶವನ್ನು ದತ್ತಾಂಶದ ಮೂಲಕ ದಾಖಲಿಸಿ, ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಗಣಿ ಉದ್ಯಮದ ಕೂಲಿ ದುಡಿಮೆಗಾರರನ್ನು ಮಾತ್ರ ಪರಿಗಣಿಸಿ ಕೋಷ್ಟಕವನ್ನು ಈ ಕೆಳಗಿನಂತೆ ರಚಿಸಿ ದುಡಿಮೆಯ ದರ, ಕೂಲಿ ಪಡೆಯುವ ಮಾದರಿ, ದುಡಿಮೆಯ ಅವಧಿಯನ್ನು ವಿಶ್ಲೇಷಣೆ ಮಾಡಲಾಗಿದೆ.

**ಕೋಷ್ಟಕ೪.೧೫ ಗಣಿಉದ್ಯಮದಲ್ಲಿ ತೊಡಗಿರುವ ದುಡಿಮೆಗಾರರ ಕೂಲಿ ದರ–ಕೂಲಿ ಮಾದರಿ–ಕೂಲಿ ಅವಧಿ ಪ್ರಮಾಣ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ಗಣಿ ಉದ್ಯಮದಲ್ಲಿ ದುಡಿಯುವ ಕೂಲಿ ದುಡಿಮೆಗಾರರಿಗೆ ಕೂಲಿ ನೀಡುವ ದರ (ರೂ) | | | | | | |
| | ೧೦೦–೧೫೦ | ೦೨ | ೦೯.೦೯ | ೦೫ | ೨೦ | ೧೫ | ೨೩.೪೩ |
| | ೧೫೦–೨೦೦ | ೦೧ | ೦೪.೫೫ | ೦೩ | ೧೨ | ೧೦ | ೧೫.೬೨ |
| | ೨೦೦–೩೦೦ | ೦೭ | ೩೧.೮೨ | ೦೮ | ೩೨ | ೧೮ | ೨೮.೧೩ |
| | ೩೦೦ಕ್ಕಿಂತ ಹೆಚ್ಚು | ೧೨ | ೫೪.೫೪ | ೦೭ | ೨೮ | ೨೧ | ೩೨.೮೪ |
| | **ಒಟ್ಟು** | **೨೨** | **೧೦೦** | **೨೫** | **೧೦೦** | **೬೪** | **೧೦೦** |
| ೦೨ | ಕೂಲಿ ಪಡೆಯುವ ಮಾದರಿ | | | | | | |
| | ದಿನಗೂಲಿ | – | – | – | – | ೧೦ | ೧೫.೬೨ |
| | ವಾರದ ಕೂಲಿ | ೧೨ | ೫೪.೫೪ | ೧೮ | ೭೨ | ೩೪ | ೫೩.೧೬ |
| | ತಿಂಗಳ ಕೂಲಿ | ೧೦ | ೪೫.೪೬ | ೧೭ | ೨೮ | ೨೦ | ೩೧.೬೨ |
| | **ಒಟ್ಟು** | **೨೨** | **೧೦೦** | **೨೫** | **೧೦೦** | **೬೪** | **೧೦೦** |
| ೦೩ | ದುಡಿಯುವ ಅವಧಿ | | | | | | |
| | (೧೨) ೮–೬ | ೦೭ | ೩೧.೮೩ | ೦೯ | ೩೬ | ೩೫ | ೫೪.೬೮ |
| | (೮) ೮–೨ | ೦೩ | ೧೩.೬೩ | ೦೫ | ೨೦ | – | – |
| | (೨೪) ೮–೮ | ೧೨ | ೫೪.೫೪ | ೧೧ | ೪೪ | ೨೯ | ೪೫.೩೨ |
| | **ಒಟ್ಟು** | **೨೨** | **೧೦೦** | **೨೫** | **೧೦೦** | **೬೪** | **೧೦೦** |

ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ

(ಸೂಚನೆ : ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ದತ್ತಾಂಶ ಪರಿಗಣಿಸಿ ದಾಖಲಿಸಲಾಗಿದೆ.)

ಮೇಲಿನ ಕೋಷ್ಟಕವು ಗಣಿ ಉದ್ಯಮದಲ್ಲಿ ದುಡಿಯುತ್ತಿರುವ ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರ ದುಡಿಮೆಯ ದರ–ಕೂಲಿ ಪಡೆಯುವ ಮಾದರಿ–ದುಡಿಮೆಯ ಅವಧಿಯ ಪ್ರಮಾಣವನ್ನು ಶೇಕಡವಾರುಗಳಲ್ಲಿ ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೨೪.೪೪ರಷ್ಟು ಗಣಿ ಉದ್ಯಮ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ೧೦೦–೧೫೦.ರೂ ಶೇ.೦೯.೦೯ರಷ್ಟು, ೧೫೦–೨೦೦.ರೂ ಶೇ.೦೪.೫೫ರಷ್ಟು, ೨೦೦–೩೦೦.ರೂ ಶೇ.೩೧.೮೨ರಷ್ಟು, ೩೦೦ಕ್ಕಿಂತ ಹೆಚ್ಚು ಶೇ.೫೪.೫೪ರಷ್ಟು ಕೂಲಿ ದರವನ್ನು ಪಡೆಯುತ್ತಿದ್ದಾರೆ. ಈ ಕೂಲಿ ದರ ಪಡೆಯುವ ದುಡಿಮೆಗಾರರು ೩೦೦ಕ್ಕಿಂತ ಹೆಚ್ಚು (ಶೇ.೫೪.೫೪) ಅಧಿಕ ಪ್ರಮಾಣದಲ್ಲಿ ಕೂಲಿಯನ್ನು ಪಡೆಯುತ್ತಿದ್ದಾರೆ. ಅಂದರೆ ಗಣಿ ಉದ್ಯಮದ ಲಾರಿ ಡ್ರೈವರ್ ಹಾಗೂ ಜೆಸಿಬಿ ಆಪರೇಟರ್ ಕೂಲಿ ದುಡಿಮೆಗಾರರು ಅಧಿಕ ಕೂಲಿಯನ್ನು ಪಡೆಯುತ್ತಿರುವ ಪ್ರಮಾಣ ಈ ಕುಟುಂಬಗಳಲ್ಲಿ ಕಂಡುಬಂದರೇ, ೧೫೦–೨೦೦.ರೂ ಕೂಲಿ ದರ ಪಡೆಯುವ ದುಡಿಮೆಗಾರರು (ಶೇ.೦೪.೫೫) ಕಡಿಮೆ ಪ್ರಮಾಣದಲ್ಲಿದ್ದು, ಇವರು ಗಣಿ ಉದ್ಯಮಗಳಲ್ಲಿ ನೆಲ ಒರೆಸುವ, ಕಸ ಹೊಡೆಯುವ, ಕಲ್ಲುಸಂಗ್ರಹ ಮಾಡುವ ದುಡಿಮೆಯಲ್ಲಿ ತೊಡಗಿರುವ ಮಹಿಳಾ ಕೂಲಿ ದುಡಿಮೆಗಾರರಿಗಿದ್ದಾರೆ. ಗಣಿ ಉದ್ಯಮದಲ್ಲಿ ಕೂಲಿ ಕೆಲಸ ಮಾಡುವ ದುಡಿಮೆಗಾರರು, ದಿನಗೂಲಿ, ವಾರದ ಕೂಲಿ ಹಾಗೂ ತಿಂಗಳ ಕೂಲಿ ರೂಪದಲ್ಲಿ ಸಂಭಾವನೆಯನ್ನು ಪಡೆಯುತ್ತಿದ್ದು, ದಿನಗೂಲಿ ಶೇ.೦.೦೦, ವಾರದ ಕೂಲಿ ಶೇ.೫೪.೫೪ರಷ್ಟು ಹಾಗೂ ತಿಂಗಳ ಕೂಲಿ ಶೇ.೪೫.೪೬ರಷ್ಟು ದುಡಿಮೆಗಾರರು ಕೂಲಿಯ ದರವನ್ನು ಪಡೆಯುತ್ತಿರುವುದು ಕಾಣಸಿಗುತ್ತದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಗಣಿ ಉದ್ಯಮದ ಕೂಲಿ ದುಡಿಮೆಗಾರರ ದುಡಿಮೆ ಅವಧಿಯು ಬೆಳಿಗ್ಗೆ ೮ ಗಂಟೆಯಿಂದ ೬ ಗಂಟೆಯವರೆಗೆ ಕೂಲಿ ದುಡಿಮೆಗಾರರು ಶೇ೩೧.೮೩ರಷ್ಟು, ಬೆಳಿಗ್ಗೆ ೮ ಗಂಟೆಯಿಂದ ಬೆಳಿಗ್ಗೆ ೨ ಗಂಟೆವರೆಗೆ ಕೂಲಿ ದುಡಿಮೆಗಾರರು ಶೇ.೧೩.೬೩ರಷ್ಟು, ಬೆಳಿಗ್ಗೆ ೮ ಗಂಟೆಯಿಂದ ಬೆಳಿಗ್ಗೆ ೮ ಗಂಟೆವರೆಗೆ ಅಂದರೆ ೨೪ ತಾಸು ಗಣಿ ಉದ್ಯಮದಲ್ಲಿ ದುಡಿಯುವ ಕೂಲಿ ದುಡಿಮೆಗಾರರು ಶೇ.೫೪.೫೪ರಷ್ಟು ಪ್ರಮಾಣದಷ್ಟಿದ್ದಾರೆ. ದುಡಿಮೆಯ ಅವಧಿಯಲ್ಲಿ ೨೪ ತಾಸು ದುಡಿಮೆಯಲ್ಲಿ ತೊಡಗಿಸಿಕೊಂಡ ಕೂಲಿ ದುಡಿಮೆಗಾರರ ಪ್ರಮಾಣ ಅಧಿಕವಾಗಿದೆ. ಹೀಗೆ ಅಧಿಕ ಅವಧಿಯಲ್ಲಿ ದುಡಿಯುವ ದುಡಿಮೆಗಾರರಿಗೆ ನೀಡುವ ಕೂಲಿಯ ಪ್ರಮಾಣ ಕಡಿಮೆಯಿದೆ ಅದು ಶೋಚನಿಯ ಸಂಗತಿಯಾಗಿದೆ.

ಸಂಡೂರು, ತಾಲ್ಲೂಕಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ ೨೭.೭೨ರಷ್ಟು ಗಣಿ ಉದ್ಯಮದಲ್ಲಿ ದುಡಿಯುತ್ತಿದ್ದಾರೆ. ಗಣಿ ಉದ್ಯಮದ ಕೂಲಿ ದುಡಿಮೆಗಾರರು ೧೦೦–೧೫೦ರೂ ಶೇ.೨೦ರಷ್ಟು, ೧೫೦–೨೦೦.ರೂ ಶೇ.೧೨ರಷ್ಟು, ೨೦೦–೩೦೦.ರೂ ಶೇ.೩೨ರಷ್ಟು, ೩೦೦ಕ್ಕಿಂತ ಹೆಚ್ಚು ಶೇ.೨೮ರಷ್ಟು ಕೂಲಿಯ ದರವನ್ನು ದಿನಕ್ಕೆ ಪಡೆಯುತ್ತಿದ್ದಾರೆ. ಇದರಲ್ಲಿ ೨೦೦–೩೦೦ರೂ ಹಾಗೂ ೩೦೦ಕ್ಕಿಂತ ಹೆಚ್ಚು ಕೂಲಿಯ ದರವನ್ನು ಪಡೆಯುವವರ ಪ್ರಮಾಣ ಅಧಿಕವಾಗಿದ್ದು, ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್ ಹಾಗೂ ಕ್ಲೀನರ್ ಕೂಲಿ ದುಡಿಮೆ ಮಾಡುವವರಾಗಿದ್ದಾರೆ. ಹೀಗೆ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ದುಡಿಮೆಗಾರರು ಕೂಲಿಯ ದರವನ್ನು ವಾರದ ಕೂಲಿ ಹಾಗೂ ತಿಂಗಳ ಕೂಲಿಯ ರೂಪದಲ್ಲಿ ಸಂಭಾವನೆಯನ್ನು ಪಡೆದುಕೊಳ್ಳುತ್ತಾರೆ. ಈ ವಲಯದ ಕುಟುಂಬಗಳ ದುಡಿಮೆಗಾರರು ವಾರದ ಕೂಲಿಯನ್ನು ಶೇ.೭೨ರಷ್ಟು, ತಿಂಗಳ ಕೂಲಿಯನ್ನು ಶೇ.೨೮ರಷ್ಟು ಪಡೆದುಕೊಳ್ಳುತಿದ್ದಾರೆ. ಹೀಗೆ ವಾರದ ಕೂಲಿ ಪಡೆಯುವ ದುಡಿಮೆಗಾರರು ಅಧಿಕ ಪ್ರಮಾಣದ ಕಂಡುಬಂದರೇ, ತಿಂಗಳ ಕೂಲಿಯನ್ನು ಪಡೆಯುವ ದುಡಿಮೆಗಾರರು ಕಡಿಮೆ ಪ್ರಮಾಣದಲ್ಲಿ ಇರುವುದು ಕಂಡುಬರುತ್ತದೆ. ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೭೧.೧೨ರಷ್ಟು ಗಣಿ ಉದ್ಯಮದಲ್ಲಿ ತೊಡಗಿದ್ದಾರೆ. ಗಣಿ ಉದ್ಯಮದ ಕೂಲಿ ದುಡಿಮೆಗಾರರು ೧೦೦–೧೫೦.ರೂ ಶೇ.೨೩.೪೩ರಷ್ಟು, ೧೫೦–೨೦೦.ರೂ

ಶೇ.೧೫.೬೨ರಷ್ಟು, ೨೦೦-೩೦೦ರೂ ಶೇ.೨೮.೧೪ರಷ್ಟು, ೩೦೦ಕ್ಕಿಂತ ಅಧಿಕ ಶೇ.೩೨.೮೧ರಷ್ಟು ಕೂಲಿಯ ದರವನ್ನು ಪಡೆದುಕೊಳ್ಳುವ ಪ್ರಮಾಣವಾಗಿದೆ. ಇದರಲ್ಲಿ ೨೦೦-೩೦೦ರೂ ಮತ್ತು ೩೦೦ಕ್ಕಿಂತ ಹೆಚ್ಚಿನ ಕೂಲಿಯನ್ನು ಪಡೆಯುವ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿದ್ದಾರೆ. ಹೀಗೆ ಗಣಿ ಉದ್ಯಮದ ದುಡಿಮೆಗಾರರು ದುಡಿಮೆಯ ಕೂಲಿಯನ್ನು ಪಡೆಯುತ್ತಿದ್ದಾರೆ. ಈ ಕೂಲಿಯನ್ನು ಪಡೆಯುವ ದುಡಿಮೆಗಾರರು ದಿನಗೂಲಿ, ವಾರದ ಕೂಲಿ ಹಾಗೂ ತಿಂಗಳ ಕೂಲಿ ರೂಪದಲ್ಲಿ ದುಡಿಮೆಯ ಸಂಭಾವನೆಯನ್ನು ಪಡೆಯುತ್ತಿದ್ದು, ದಿನಗೂಲಿ ಶೇ.೧೫.೬೨ರಷ್ಟು, ವಾರದ ಕೂಲಿ ಶೇ.೫೩.೧೬ರಷ್ಟು, ತಿಂಗಳ ಕೂಲಿ ಶೇ.೩೧.೬೨ರಷ್ಟು ಗಣಿ ಉದ್ಯಮದ ದುಡಿಮೆಗಾರರು ಕೂಲಿಯನ್ನು ಪಡೆಯುತ್ತಿರುವುದು ಕಾಣಸಿಗುತ್ತವೆ. ಈ ವಲಯದಲ್ಲಿ ವಾರದ ಕೂಲಿಯನ್ನು ಪಡೆಯುವ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿದ್ದಾರೆ. ದುಡಿಮೆಯ ಅವಧಿಗೆ ಸಂಬಂಧಿಸಿದಂತೆ ಈ ವಲಯದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೫೪.೬೮ರಷ್ಟು ೧೨ ಗಂಟೆಯ ಅವಧಿ ದುಡಿಮೆಯಲ್ಲಿ ತೊಡಗಿಸಿಕೊಂಡರೆ, ೨೪ ತಾಸು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರು ಶೇ.೪೫.೩೨ರಷ್ಟು ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುತ್ತದೆ. ಹೀಗೆ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳ ಗಣಿ ಗ್ರಾಮೀಣ ಪ್ರದೇಶದ ಕೂಲಿ ದುಡಿಮೆಗಾರರು ಗಣಿ ಉದ್ಯಮದಲ್ಲಿ ದುಡಿಮೆಯ ದರ, ಕೂಲಿ ಪಡೆದುಕೊಳ್ಳುವ ಮಾದರಿ ಮತ್ತು ದುಡಿಯುವ ಅವಧಿಯನ್ನು ವಿಶ್ಲೇಷಿಸಲಾಗಿದೆ.

**೪.೮ ಕುಟುಂಬಗಳ ಆರ್ಥಿಕ ಸ್ಥಿತಿ ಮತ್ತು ಒಡೆತನ**

ಕುಟುಂಬಗಳಲ್ಲಿ ಗೃಹ ಬಳಕೆಯ ವಸ್ತುಗಳು ಜನರ ಜೀವನ ಮಟ್ಟವನ್ನು ಅಳೆಯುವ ಸೂಚಿಯಾಗಿದೆ. ಗಣಿ ವಲಯ ಗ್ರಾಮೀಣ ಪ್ರದೇಶ ಕುಟುಂಬಗಳಿಗೆ ಸ್ಥಿರಾಸ್ತಿ ಹಾಗೂ ಚರಾಸ್ಥಿ ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬಂದಿರುವ ಫಲಿತಾಂಶವನ್ನು ದಾಖಲಿಸಿ, ಈ ಕೆಳಗಿನಂತೆ ವಿಶ್ಲೇಷಣೆ ಒಳಪಡಿಸಲಾಗಿದೆ.

**ಕೋಷ್ಟಕ ೪.೧೬ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನ ಹೊಂದಿರುವ ಕುಟುಂಬಗಳ ವಿವರ**

| ಕ್ರ.ಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೦೧ | ನಿಮ್ಮ ಮನೆಯಲ್ಲಿ ಚರಾಸ್ತಿ, ಸ್ಥಿರಾಸ್ತಿ ಸಂಪನ್ಮೂಲ ಹೊಂದಿದ್ದಿರಾ | | | | | | |
| | ಹೌದು | ೩೪ | ೩೭.೭೮ | ೪೭ | ೫೨.೨೩ | ೩೮ | ೪೨.೨೨ |
| | ಇಲ್ಲ | ೫೬ | ೬೨.೨೨ | ೪೩ | ೪೭.೭೭ | ೫೨ | ೫೭.೭೮ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೇ ಯಾವ ಚರಾಸ್ಥಿ ಸ್ಥಿರಾಸ್ಥಿ ಹೊಂದಿದ್ದೀರಾ? | | | | | | |
| | ಟಿಪ್ಪರ್ ಲಾರಿ | ೦೩ | ೦೮.೮೨ | ೦೭ | ೧೪.೮೯ | ೦೫ | ೧೩.೧೭ |
| | ಟ್ರಾಕ್ಸ್ (ಕಾರು) | ೦೪ | ೧೧.೭೬ | ೦೫ | ೧೦.೬೩ | ೦೨ | ೦೫.೨೮ |
| | ಟ್ರಾಕ್ಟರ್ | ೧೧ | ೩೨.೩೫ | ೦೪ | ೦೮.೫೨ | ೦೯ | ೨೩.೬೯ |
| | ಆಟೋ ರಿಕ್ಷಾ | ೦೨ | ೦೫.೫೮ | ೦೭ | ೧೪.೮೯ | ೦೮ | ೨೧.೦೬ |
| | ಹೋಲಿಗೆ ಯಂತ್ರ | ೦೬ | ೧೭.೬೫ | ೧೦ | ೨೧.೨೯ | ೦೬ | ೧೫.೭೮ |
| | ಸಿಲಿಂಡರ್ | ೦೮ | ೨೩.೫೪ | ೧೪ | ೨೯.೭೮ | ೦೮ | ೨೧.೦೫ |
| | ಇತರೆ | – | – | – | – | – | – |
| | ಒಟ್ಟು | ೩೪ | ೧೦೦ | ೪೭ | ೧೦೦ | ೩೮ | ೧೦೦ |
| ೦೩ | ಯಾವಾಗ ಈ ಸಂಪನ್ಮೂಲ | | | | | | |

| | | | | | | | |
|---|---|---|---|---|---|---|---|
| | ಹೊಂದಿದ್ದೀರಾ? | | | | | | |
| | ಗಣಿಗಾರಿಕೆ ಪೂರ್ವ | ೦೪ | ೧೧.೭೬ | ೧೧ | ೨೩.೪೧ | ೦೯ | ೨೩.೬೯ |
| | ಗಣಿಗಾರಿಕೆ ನಡೆದಾಗ | ೨೨ | ೬೪.೭೧ | ೨೬ | ೫೫.೩೧ | ೧೮ | ೪೭.೩೬ |
| | ಗಣಿಗಾರಿಕೆ ಸ್ಥಗಿತ | ೦೮ | ೨೩.೫೩ | ೧೦ | ೨೧.೨೮ | ೧೧ | ೨೮.೯೫ |
| | ಒಟ್ಟು | ೩೪ | ೧೦೦ | ೪೭ | ೧೦೦ | ೩೮ | ೧೦೦ |
| ೦೪ | ನೀವು ನಿವೇಶವನ್ನು ಹೊಂದಿದ್ದೀರಾ ? | | | | | | |
| | ಹೌದು | ೨೬ | ೨೮.೮೯ | ೧೮ | ೨೦ | ೨೫ | ೨೭.೨೭ |
| | ಇಲ್ಲ | ೪೦ | ೭೧.೧೧ | ೭೨ | ೮೦ | ೬೫ | ೭೨.೭೩ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೫ | ಹೌದಾದರೆ ಹೊಂದಿರುವ ನಿವೇಶದ ವಿಸ್ತೀರ್ಣ (ಚ.ಮೀ) | | | | | | |
| | ೧೫–೨೦ | ೦೪ | ೧೫.೩೮ | – | – | ೦೮ | ೩೨ |
| | ೨೦–೩೦ | ೧೦ | ೩೮.೪೬ | ೧೩ | ೭೨.೨೩ | ೧೦ | ೪೦ |
| | ೩೦–೪೦ | ೧೨ | ೪೬.೧೬ | ೦೫ | ೨೭.೭೭ | ೦೭ | ೨೮ |
| | ಒಟ್ಟು | ೨೬ | ೧೦೦ | ೧೮ | ೧೦೦ | ೨೫ | ೧೦೦ |
| ೦೬ | ಯಾವಾಗ ಈ ನಿವೇಶವನ್ನು ಹೊಂದಿದ್ದೀರಿ? | | | | | | |
| | ಗಣಿಗಾರಿಕೆ | ೦೬ | ೨೩.೦೭ | ೦೫ | ೨೭.೭೮ | ೦೫ | ೨೦.೦೦ |
| | ಗಣಿಗಾರಿಕೆ ನಡೆದಾಗ | ೧೨ | ೪೬.೧೫ | ೧೦ | ೫೫.೫೫ | ೧೨ | ೪೮ |
| | ಗಣಿ ಸ್ಥಗಿತ ನಂತರ | ೧೮ | ೩೦.೭೮ | ೦೩ | ೧೬.೬೭ | ೦೮ | ೩೨ |
| | ಒಟ್ಟು | ೨೬ | ೧೦೦ | ೧೮ | ೧೦೦ | ೨೫ | ೧೦೦ |
| ೦೭ | ನಿಮ್ಮ ಮನೆಯಲ್ಲಿ ಜಾನುವಾರು ಇದೆಯೋ | | | | | | |
| | ಹೌದು | ೫೩ | ೫೮.೮೮ | ೪೪ | ೪೮.೮೮ | ೩೯ | ೪೩.೩೪ |
| | ಇಲ್ಲ | ೩೭ | ೪೧.೧೨ | ೪೬ | ೫೧.೧೨ | ೫೧ | ೫೬.೬೬ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೮ | ಹೌದಾದರೇ ಯಾವ ಜಾನುವರುಗಳಿವೆ | | | | | | |
| | ಹಸು | ೧೪ | ೨೬.೪೧ | ೦೯ | ೨೦.೪೫ | ೦೫ | ೧೨.೮೪ |
| | ಎತ್ತು | ೧೧ | ೨೦.೭೫ | ೧೪ | ೩೧.೮೧ | ೦೯ | ೨೩.೦೭ |
| | ಎಮ್ಮೆ | ೦೭ | ೧೩.೨೨ | ೧೨ | ೨೭.೨೭ | ೦೪ | ೧೦.೨೫ |
| | ಕುರಿ | ೦೯ | ೧೬.೯೮ | ೦೬ | ೧೩.೩೬ | ೧೨ | ೩೦.೭೬ |
| | ಕೋಳಿ | ೧೨ | ೨೨.೬೪ | ೦೩ | ೦೬.೮೧ | ೦೯ | ೨೩.೦೮ |
| | ಇತರೆ | – | – | – | – | – | – |
| | ಒಟ್ಟು | ೫೩ | ೧೦೦ | ೪೪ | ೧೦೦ | ೩೯ | ೧೦೦ |
| ೦೯ | ಜಾನುವಾರನ್ನು ಯಾವಾಗ ಹೊಂದಿದ್ದೀರಿ? | | | | | | |
| | ಗಣಿಗಾರಿಕೆ ಪೂರ್ವ | ೧೮ | ೩೩.೯೬ | ೧೯ | ೪೩.೧೮ | ೧೪ | ೩೫.೮೯ |
| | ಗಣಿಗಾರಿಕೆ ನಡೆದಾಗ | ೨೧ | ೩೯.೬೨ | ೧೬ | ೩೬.೩೬ | ೧೭ | ೪೩.೫೮ |
| | ಗಣಿಗಾರಿಕೆ ಸ್ಥಗಿತ ನಂತರ | ೧೪ | ೨೬.೪೨ | ೦೯ | ೨೦.೪೬ | ೦೮ | ೨೦.೫೩ |
| | ಒಟ್ಟು | ೫೩ | ೧೦೦ | ೪೪ | ೧೦೦ | ೩೯ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಕುಟುಂಬಗಳ ದತ್ತಾಂಶ ಮಾಹಿತಿ**

ಕೋಷ್ಟಕ ೫.೧೬ರಲ್ಲಿ ಗಣಿ ವಲಯವಾದ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಚರಾಸ್ಥಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನದ ಪ್ರಮಾಣವನ್ನು ಹಾಗೂ ಈ ಚರಾಸ್ಥಿ ಮತ್ತು ಸ್ಥಿರಾಸ್ಥಿಯನ್ನು ಗಣಿಗಾರಿಕೆ ಪೂರ್ವ, ಗಣಿಗಾರಿಕೆ ನಡೆದಾಗ,ಗಣಿ ಸ್ಥಗಿತತೆಯ ನಂತರ ಹೊಂದಿರುವ ಕುಟಂಬಗಳ ಪ್ರಮಾಣವನ್ನು ತಾಲ್ಲೂಕುವಾರುಗಳಲ್ಲಿ ತೋರಿಸಲಾಗಿದೆ.

**೪.೮.೧ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನ**

ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ಹೊಸಪೇಟೆ ತಾಲ್ಲೂಕಿನ ಗಣಿ ಪ್ರದೇಶದ ೯೦ ಕುಟುಂಬಗಳ ಪೈಕಿ ೩೪ ಕುಟಂಬಗಳು ಶೇ.೩೭.೭೮ರಷ್ಟಿದ್ದರೇ, ಇನ್ನುಳಿದ ೫೬ ಕುಟುಂಬಗಳು ಶೇ.೬೨.೨೨ರಷ್ಟು ಚರಾಸ್ಥಿ ಮತ್ತು ಸ್ಥಿರಾಸ್ತಿಯನ್ನು ಹೊಂದಿರದ ಕುಟುಂಬಗಳಾಗಿವೆ. ಗಣಿ ಗ್ರಾಮೀಣ ಪ್ರದೇಶದ ಟಿಪ್ಪರ್ ಲಾರಿ, ಟ್ರಾಕ್ಸ್, ಆಟೋರಿಕ್ಷಾ, ಹೊಲಿಗೆಯಂತ್ರ, ಸಿಲೆಂಡರ್ ಸಂಪನ್ಮೂಲಗಳನ್ನು ಮಾತ್ರ ಪರಿಗಣಿಸಲಾಗಿದೆ. ಈ ಆಸ್ತಿ ಸಂಪನ್ಮೂಲಗಳು ಅಂದರೆ ಟಿಪ್ಪರ್ ಲಾರಿ ಶೇ.೦೮.೮೨ರಷ್ಟು, ಟ್ರಾಕ್ಸ್ ಶೇ.೧೧.೭೬ರಷ್ಟು, ಟ್ರಾಕ್ಟರ್ ಶೇ.೩೨.೩೫ರಷ್ಟು, ಆಟೋ ರಿಕ್ಷಾ ಶೇ.೦೫.೫೮ರಷ್ಟು, ಹೊಲಿಗೆಯಂತ್ರ ಶೇ.೧೭.೬೫ರಷ್ಟು, ಸಿಲೆಂಡರ್ ಶೇ.೨೩.೫೪ರಷ್ಟು ಸಂಪನ್ಮೂಲಗಳನ್ನು ಹೊಂದಿರುವ ಕುಟುಂಬಗಳಾಗಿವೆ. ಈ ಕುಟುಂಬಗಳ ಗ್ರಾಮೀಣ ಪ್ರದೇಶದಲ್ಲಿ ಟ್ರಾಕ್ಟರ್ ಚರಾಸ್ತಿಯು ಅಧಿಕ ಪ್ರಮಾಣದಲ್ಲಿ ಶೇ.೩೨.೩೫ರಷ್ಟು ಇರುವುದು ಗಮನಿಸಬಹುದು. ಈ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಗಣಿಗಾರಿಕಾ ಪೂರ್ವದಲ್ಲಿ ಶೇ.೧೧.೭೬ರಷ್ಟು, ಗಣಿಗಾರಿಕೆ ನಡೆದಾಗ ಶೇ.೬೪.೭೧ರಷ್ಟು, ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೩.೫೩ರಷ್ಟು ಹೊಂದಿದ್ದಾರೆ, ಅಂದರೆ ಗಣಿಗಾರಿಕೆ ನಡೆದಾಗ ಕುಟುಂಬಗಳ ಸ್ಥಿರಾಸ್ತಿ ಮತ್ತು ಚರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಅಧಿಕವಾಗಿ (ಶೇ.೬೪.೭೧) ಹೊಂದಿದ್ದಾರೆ. ಇದಕ್ಕೆ ಗಣಿಗಾರಿಕೆಯಿಂದ ಬಂದಿರುವ ಆದಾಯದ ಏರಿಕೆಯೇ ಕಾರಣವಾಗಿದೆ ಎಂದು ಗ್ರಹಿಸಬಹುದು. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ೯೦ ಕುಟುಂಬಗಳ ಪೈಕಿ ೪೭ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಶೇ.೫೨.೨೩ರಷ್ಟು ಹೊಂದಿರುವ ಪ್ರಮಾಣವಾಗಿದ್ದು, ೪೩ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಶೇ.೪೭.೭೭ರಷ್ಟು ಹೊಂದದೆ ಇರುವುದು ಪ್ರದೇಶಗಳಲ್ಲಿ ಕಂಡುಬಂದಿದೆ. ಚರಾಸ್ತಿ ಮತ್ತು ಸ್ಥಿರಾಸ್ತಿಯ ಸಂಪನ್ಮೂಲಗಳ ಒಡೆತನವನ್ನು ೪೭ ಕುಟುಂಬಗಳಲ್ಲಿ ಟಿಪ್ಪರ್ ಲಾರಿ ಶೇ.೧೪.೮೯ರಷ್ಟು, ಟ್ರಾಕ್ಸ್ ಶೇ.೧೦.೬೩ರಷ್ಟು, ಟ್ರಾಕ್ಟರ್ ಶೇ.೦೮.೫೨ರಷ್ಟು, ಆಟೋರಿಕ್ಷಾ ಶೇ.೧೪.೮೯ರಷ್ಟು, ಹೋಲಿಗೆ ಯಂತ್ರ, ಶೇ.೨೧.೨೯ರಷ್ಟು, ಸಿಲೆಂಡರ್ ಶೇ.೨೯.೭೮ರಷ್ಟು ಹೊಂದಿರುವ ಪ್ರಮಾಣವಾಗಿವೆ.ಇದರಲ್ಲಿ ಹೊಲಿಗೆಯಂತ್ರ(ಶೇ.೨೧.೨೯) ಸಿಲೆಂಡರ್ (ಶೇ.೨೯.೭೮) ಸಂಪನ್ಮೂಲಗಳು ಅಧಿಕವಾಗಿ ಕಂಡುಬರುತ್ತದೆ. ಈ ಅಧಿಕ ಪ್ರಮಾಣದ ಸಂಪನ್ಮೂಲಗಳ ಒಡೆತನವನ್ನು ಹೊಂದಿರಲು ಗಣಿಗಾರಿಕೆ ನಡೆದಾಗ ಗಳಿಸಿದ ಆದಾಯದ ಏರಿಕೆಯಿಂದಾಗಿರಬಹುದು. ಹಾಗೂ ಟ್ರಾಕ್ಟರ್ ಸಂಪನ್ಮೂಲ ಒಡೆತನವನ್ನು ಹೊಂದಿರುವ ಕುಟುಂಬಗಳು ಶೇ.೦೮.೫೧ರಷ್ಟು ಕಡಿಮೆ ಪ್ರಮಾಣದಲ್ಲಿದ್ದು, ಈ ಪ್ರಮಾಣ ಕಡಿಮೆಯಾಗಲು ಗಣಿಗಾರಿಕೆ ಸ್ಥಗಿತತೆಯ ನಂತರ ಆದಾಯದ ಇಳಿಕೆಯಿಂದ ಆಗಿರಬಹುದಾಗಿದೆ. ಸಂಡೂರು ಗ್ರಾಮೀಣ ಭಾಗದಲ್ಲಿ ಸಂಪನ್ಮೂಲಗಳ ಒಡೆತನವನ್ನು ಗಣಿಗಾರಿಕೆ ಪೂರ್ವದಲ್ಲಿ ಶೇ.೨೩.೪೧ರಷ್ಟು, ಗಣಿಗಾರಿಕೆ ನಡೆದಾಗ ಶೇ.೫೫.೩೧ರಷ್ಟು, ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೧.೨೮ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಹೊಂದಿರುವ ಕುಟುಂಬಗಳ ಪ್ರಮಾಣವಾಗಿದೆ. ಗಣಿಗಾರಿಕೆ ನಡೆದಾಗ ಚರಾಸ್ತಿ ಮತ್ತು ಸ್ಥಿರಾಸ್ತಿಯ ಸಂಪನ್ಮೂಲ ಹೊಂದಿರುವ ಪ್ರಮಾಣ (ಶೇ.೫೫.೫೧) ಅಧಿಕವಾಗಿರುವುದು ಗಮನಿಸಬೇಕಾದ ಅಂಶವಾಗಿದೆ.

ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೩೮ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಶೇ.೪೨.೨೨ರಷ್ಟು ಹೊಂದಿರುವ ಪ್ರಮಾಣವಾದರೆ, ಇನ್ನುಳಿದ ೫೨ ಕುಟುಂಬಗಳು ಶೇ.೫೭.೭೮ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿಯ ಸಂಪನ್ಮೂಲಗಳ

ಒಡೆತನವನ್ನು ಹೊಂದಿರುವುದು ಈ ವಲಯದ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ೩೮ ಕುಟುಂಬಗಳಲ್ಲಿ ಟಿಪ್ಪರ್ ಲಾರಿ ಶೇ.೧೩.೧೭ರಷ್ಟು, ಟ್ರಾಕ್ಸ್ ಶೇ.೦೫.೨೮ರಷ್ಟು, ಆಟೋರಿಕ್ಷಾ ಶೇ.೨೧.೦೬ರಷ್ಟು, ಟ್ರಾಕ್ಟಾರ್, ಶೇ.೨೩.೯೯ರಷ್ಟು, ಹೋಲಿಗೆಯಂತ್ರ ಶೇ.೧೫.೭೬ರಷ್ಟು, ಸಿಲೆಂಡರ್ ಶೇ.೨೧.೦೫ರಷ್ಟು ಪ್ರಮಾಣದಲ್ಲಿ ಇರುವುದು ಕಂಡು ಬರುತ್ತದೆ. ಚರಾಸ್ಥಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳಲ್ಲಿ ಟ್ರಾಕ್ಟರ್ ಚರಾಸ್ತಿ ಸಂಪನ್ಮೂಲ ಒಡೆತನ ಅಧಿಕವಾಗಿದೆ. ಇದಕ್ಕೆ ಗಣಿಗಾರಿಕೆ ನಡೆದಾಗ ಬಂದಿರುವ ಆದಾಯದಿಂದಾದ ಏರಿಕೆಯಾಗಿರಬಹುದು. ಈ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಯಾವಾಗ ಹೊಂದಿದ್ದಾರೆ ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ, ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೩.೯೯ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೭.೩೬ರಷ್ಟು ಹಾಗೂ ಗಣಿಗಾರಿಕೆಯೆ ಸ್ಥಗಿತತೆಯ ನಂತರ ಶೇ.೨೫.೯೫ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ಕುಟುಂಬಗಳಾಗಿವೆ. ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆ ನಡೆದಾಗ (ಶೇ.೪೭.೩೬) ಸ್ಥಿರಾಸ್ತಿ ಮತ್ತು ಚರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ಪ್ರಮಾಣ ಅಧಿಕವಾಗಿವೆ. ಇದು ಗಣಿಗಾರಿಕೆ ನಡೆದಾಗ ಬಂದಿರುವ ಆದಾಯದ ಏರಿಕೆಯಿಂದ ಆಗಿರುಬಹುದಾಗಿದೆ. ಒಟ್ಟಾರೆಯಾಗಿ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವು ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಅವಲೋಕಿಸಿದಾಗ, ಸಂಡೂರು ತಾಲ್ಲೂಕಿನ ಕುಟುಂಬಗಳ ಚರಾಸ್ಥಿ ಮತ್ತು ಸ್ಥಿರಾಸ್ತಿಯು ಶೇ.೫೨.೨೩ರಷ್ಟು ಅಧಿಕ ಪ್ರಮಾಣದಲ್ಲಿದೆ. ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವವನ್ನು (ಶೇ.೩೭.೭೮) ಕಡಿಮೆ ಪ್ರಮಾಣ ಹೊಂದಿರುವ ಕುಟುಂಬಗಳಾಗಿವೆ. ಬಳ್ಳಾರಿ, ಸಂಡೂರು, ಹೊಸಪೇಟೆ ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದ ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಹೊಂದಿದ್ದಾರೆ. ಅದರಲ್ಲಿ ಗಣಿಗಾರಿಕೆ ನಡೆದಾಗ ಕುಟುಂಬಗಳು ಸಂಪನ್ಮೂಲಗಳ ಒಡೆತನವನ್ನು (ಶೇ.೬೪.೭೧) ಅಧಿಕವಾಗಿ ಹೊಂದಿರುವ ಪ್ರಮಾಣ ಹೊಸಪೇಟೆ ತಾಲ್ಲೂಕಿನಲ್ಲಿ ಕಂಡು ಬಂದಿದೆ. ತದನಂತರ ಗಣಿಗಾರಿಕೆ ಸ್ಥಗಿತತೆಯ ನಂತರ ಚರಾಸ್ತಿ ಮತ್ತು ಸ್ಥಿರಾಸ್ತಿ ಹೊಂದಿರುವ ಕುಟುಂಬಗಳ ಪ್ರಮಾಣ ಕಡಿಮೆಯಾಗುತ್ತಾ ಬಂದಿರುವುದು ಕೋಷ್ಟಕ ೪.೧೬ರಲ್ಲಿ ಗಮನಿಸಬಹುದಾಗಿದೆ.

### ೪.೮.೨ ಕುಟುಂಬಗಳು ಹೊಂದಿರುವ ನಿವೇಶನ

ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ನಿವೇಶನ ಮತ್ತು ನಿವೇಶನ ರಹಿತ ಪ್ರಮಾಣವನ್ನು ಅರಿಯುವ ಅಗತ್ಯತೆ ಇದೆ. ಕೋಷ್ಟಕ ೧೫.೧೬ರ, ಕ್ರಮ ಸಂಖ್ಯೆ ೫ರಲ್ಲಿ ನಿವೇಶನ ಕುರಿತು ಅವಲೋಕಿಸಿದಾಗ, ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೨೬ ಕುಟುಂಬಗಳು ಶೇ.೨೮.೮೯ರಷ್ಟು ನಿವೇಶನ ಹೊಂದಿರುವ ಕುಟುಂಬಗಳಾದರೇ, ೪೦ ಕುಟುಂಬಗಳಲ್ಲಿ ಶೇ.೭೧.೧೧ರಷ್ಟು ನಿವೇಶನ ರಹಿತ ಕುಟುಂಬಗಳಾಗಿವೆ. ನಿವೇಶನ ಹೊಂದಿದ ಕುಟುಂಬಗಳ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ೧೫–೨೦ ಚ.ಮೀ. ಶೇ.೧೫.೩೮ರಷ್ಟು, ೨೦–೩೦ ಚ.ಮೀ. ಶೇ.೩೮.೪೬ರಷ್ಟು, ೩೦–೪೦ ಚ.ಮೀ. ಶೇ.೪೬.೧೬ರಷ್ಟು ಕುಟುಂಬಗಳು ನಿವೇಶನ ಹೊಂದಿರುವ ವಿಸ್ತೀರ್ಣದ ಪ್ರಮಾಣವಾಗಿದೆ. ನಿವೇಶನವನ್ನು ಹೊಂದಿರುವ ಕುಟುಂಬಗಳಲ್ಲಿ ೩೦–೪೦ ಚ.ಮೀ. ವಿಸ್ತೀರ್ಣ ಹೊಂದಿರುವ ಕುಟುಂಬಗಳ ಪ್ರಮಾಣ ಅಧಿಕವಾಗಿದೆ. ನಿವೇಶನವನ್ನು ಹೊಂದಿರುವ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೩.೦೭ರಷ್ಟು ಗಣಿಗಾರಿಕೆ ನಡೆದಾಗ ಶೇ.೪೬.೧೫ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೩೦.೭೮ರಷ್ಟಿದೆ. ಅಂದರೆ ಇಲ್ಲಿ ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದ ನಿವೇಶವನ್ನು ಈ ಕುಟುಂಬಗಳು ಹೊಂದಿವೆ. ಇದು ಗಣಿಗಾರಿಕೆಯಿಂದಾದ ಆದಾಯದ ಏರಿಕೆಯಾಗಿರಬಹುದಾಗಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೧೦ ಕುಟುಂಬಗಳಲ್ಲಿ ೧೮ ಕುಟುಂಬಗಳು ಶೇ.೨೦ರಷ್ಟು ನಿವೇಶವನ್ನು ಹೊಂದಿದ್ದರೆ, ಇನ್ನುಳಿದ ೭೨ ಕುಟುಂಬಗಳು ಶೇ.೮೦ರಷ್ಟು ನಿವೇಶನ ರಹಿತ ಕುಟುಂಬಗಳಾಗಿವೆ.

ನಿವೇಶನ ಹೊಂದಿರುವ ಕುಟುಂಬಗಳಲ್ಲಿ ೨೦-೩೦ ಚ.ಮೀ. ಶೇ.೭೨.೨೩ರಷ್ಟು, ೩೦-೪೦ಚ.ಮೀ. ಶೇ.೨೭.೭೭ರಷ್ಟು ನಿವೇಶನದ ವಿಸ್ತೀರ್ಣವನ್ನು ಹೊಂದಿರುವ ಪ್ರಮಾಣವಾಗಿದೆ. ಕುಟುಂಬಗಳು ನಿವೇಶವನ್ನು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೭.೭೮ರಷ್ಟು, ಗಣಿಗಾರಿಕೆ ನಡೆದಾಗ ಶೇ.೫೫.೫೫ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೧೬.೬೭ರಷ್ಟು ಹೊಂದಿದ್ದಾರೆ. ಈ ವಲಯದಲ್ಲಿ ನಿವೇಶನವು ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಇದು ಗಣಿಗಾರಿಕೆಯ ಆದಾಯದಲ್ಲಿನ ಏರಿಕೆಯಾಗಿದ್ದು, ಗಣಿ ಸ್ಥಗಿತತೆಯ ನಂತರ ನಿವೇಶನ ಹೊಂದಿರುವ ಕುಟುಂಬಗಳ ಪ್ರಮಾಣ ಕಡಿಮೆಯಾಗುತ್ತಿರುವುದು ಕೋಷ್ಟಕ ೪.೧೬ರಲ್ಲಿ ಗಮನಿಸಬಹುದಾಗಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೨೫ ಕುಟುಂಬಗಳು ಶೇ.೨೭.೨೭ರಷ್ಟು ನಿವೇಶವನ್ನು ಹೊಂದಿದ್ದು, ಇನ್ನುಳಿದ ೬೫ ಕುಟುಂಬಗಳು ಶೇ.೭೨.೭೮ರಷ್ಟು ನಿವೇಶವನ್ನು ಹೊಂದಿರುವುದಿಲ್ಲ. ನಿವೇಶನ ಹೊಂದಿರುವ ಕುಟುಂಬಗಳಲ್ಲಿ ಪ್ರತಿಶತವಾಗಿ ೧೫-೨೦ ಚ.ಮೀ. ಶೇ.೩೨ರಷ್ಟು, ೨೦-೩೦ ಚ.ಮೀ. ಶೇ.೪೦ರಷ್ಟು, ೩೦-೪೦ ಚ.ಮೀ ಶೇ.೨೮ರಷ್ಟು ನಿವೇಶನದ ವಿಸ್ತೀರ್ಣವನ್ನು ಹೊಂದಿರುವ ಕುಟುಂಬಗಳ ಪ್ರಮಾಣವಾಗಿದೆ. ಈ ಕುಟುಂಬಗಳು ನಿವೇಶನವನ್ನು ಗಣಿಗಾರಿಕಯ ಪೂರ್ವದಲ್ಲಿ ಶೇ.೨೦ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೮ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೩೨ರಷ್ಟಿದೆ. ಈ ವಲಯದಲ್ಲಿಯೂ ಗಣಿಗಾರಿಕೆ ನಡೆದಾಗ ಹೆಚ್ಚಿನ ಪ್ರಮಾಣದ ನಿವೇಶವನ್ನು ಹೊಂದಿರುವ ಕುಟುಂಬಗಳು ಇರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ನಿವೇಶನ ಹೊಂದಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ಬಳ್ಳಾರಿ, ಹೊಸಪೇಟೆ, ಸಂಡೂರು, ತಾಲ್ಲೂಕುವಾರು ನೋಡಿದಾಗ ಅಧಿಕ ಪ್ರಮಾಣದ ನಿವೇಶನ ಹೊಂದಿರುವ ಕುಟುಂಬಗಳು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಕಾಣಸಿಗುತ್ತದೆ.

**೫.೮.೩ ಜಾನುವಾರು ಹೊಂದಿರುವ ಕುಟುಂಬಗಳು**

ಜಾನುವಾರು ಹೊಂದಿರುವ ಕುಟುಂಬಗಳ ಪ್ರಮಾಣ ಹಾಗೂ ಹಸು, ಎತ್ತು, ಎಮ್ಮೆ, ಕುರಿ ಕೋಳಿ, ಇತರೆ ಜಾನುವಾರು ಹೊಂದಿರುವ ಕುಟುಂಬಗಳನ್ನು ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂವಾರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೫.೧೬ರಲ್ಲಿ ನೀಡಲಾಗಿದೆ. ಈ ಕೋಷ್ಟಕದಲ್ಲಿ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೫೩ ಕುಟುಂಬಗಳು ಶೇ.೫೮.೮೮ರಷ್ಟು, ಜಾನುವಾರು ಸಾಕಾಣಿಕೆಗೆ ತೊಡಗಿಸಿಕೊಂಡಿರುವ ಕುಟುಂಬಗಳಾಗಿದ್ದು, ಇನ್ನುಳಿದ ೩೭ ಕುಟುಂಬಗಳು ಶೇ.೪೧.೧೨ರಷ್ಟು ಜಾನುವಾರು (ಸಾಗಣೆ) ಪಾಲನೆಯನ್ನು ಹೊಂದಿರದ ಕುಟುಂಬಗಳಾಗಿವೆ. ಜಾನುವಾರು ಹೊಂದಿರುವ ಕುಟುಂಬಗಳಲ್ಲಿ ಹಸು ಶೇ.೨೬.೪೧ರಷ್ಟು, ಎತ್ತು ಶೇ.೨೦.೨೫ರಷ್ಟು, ಎಮ್ಮೆ ಶೇ.೧೩.೨೨ರಷ್ಟು, ಕುರಿ ಶೇ.೧೬.೯೮ರಷ್ಟು, ಕೋಳಿ ಶೇ.೨೨.೬೪ರಷ್ಟು ಜಾನುವಾರುಗಳಿವೆ. ಜಾನುವಾರು ಹೊಂದಿರುವ ಕುಟುಂಬಗಳು ಗಣಿಗಾರಿಕೆ ಪೂರ್ವ, ಗಣಿಗಾರಿಕೆ ನಡೆದಾಗ, ಗಣಿ ಸ್ಥಗಿತತೆಯ ನಂತರದ ಪ್ರಮಾಣವನ್ನು ನೋಡುವುದಾದರೆ, ಗಣಿಗಾರಿಕೆಯ ಪೂರ್ವದಲ್ಲಿ ಶೇ.೩೩.೯೬ರಷ್ಟು, ಗಣಿಗಾರಿಕೆ ನಡೆದಾಗ ಶೇ.೩೯.೬೨ರಷ್ಟು, ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೬.೪೨ರಷ್ಟು ಜಾನುವಾರುಗಳು ಇರುವುದು ಈ ವಲಯದಲ್ಲಿ ಕಂಡು ಬಂದಿದೆ. ಗಣಿಗಾರಿಕೆ ಪೂರ್ವದಲ್ಲಿ ಗ್ರಾಮೀಣ ಪ್ರದೇಶದ ಕುಟುಂಬಗಳು ಅಧಿಕವಾಗಿ (ಶೇ.೩೯.೬೨) ಜಾನುವಾರನ್ನು ಹೊಂದಿದ್ದು, ಇದು ಗಣಿಗಾರಿಕೆಯ ಪರಿಣಾಮ ಮಂದಗತಿಯಲ್ಲಿರುವುದು ಸೂಚಿಸುತ್ತದೆ. ಆದರೆ ಗಣಿಗಾರಿಕೆ ನಡೆದಾಗ ಹಾಗೂ ಗಣಿ ಸ್ಥಗಿತತೆಯ ನಂತರ ಜಾನುವಾರುಗಳ ಪ್ರಮಾಣ ಕಡಿಮೆಯಾಗುತ್ತಿರುವುದು ಕುಟುಂಬಗಳ ಶೇಕಾಡವಾರುಗಳಲ್ಲಿ ಗಮನಿಸಬಹುದಾಗಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೪೪ ಕುಟುಂಬಗಳು ಶೇ.೪೮.೮೮ರಷ್ಟು ಜಾನುವಾರುಗಳನ್ನು ಹೊಂದಿದ್ದು,ಇನ್ನುಳಿದ ೪೬ ಕುಟುಂಬಗಳು ಶೇ.೫೧.೧೨ರಷ್ಟು ಜಾನುವಾರುಗಳನ್ನು ಹೊಂದಿದ್ದಾರೆ. ಅಂದರೆ ಜಾನುವಾರು ಹೊಂದಿರುವ ಕುಟುಂಬಗಳ ಪ್ರಮಾಣ ಈ ಗಣಿ ವಲಯದಲ್ಲಿ ಕಡಿಮೆ ಇದೆ. ಜಾನುವಾರು ಹೊಂದಿರುವ ಕುಟುಂಬಗಳಲ್ಲಿ ಮುಖ್ಯವಾಗಿ ಹಸು

ಶೇ.೨೦.೪೫ರಷ್ಟು, ಎತ್ತು ಶೇ.೩೧.೮೧ರಷ್ಟು, ಎಮ್ಮೆ ಶೇ.೨೭.೨೭ರಷ್ಟು, ಕುರಿ ಶೇ.೧೩.೩೬ರಷ್ಟು, ಕೋಳಿ ಶೇ.೦೬.೮೧ರಷ್ಟಿವೆ. ಜಾನುವಾರು ಹೊಂದಿರುವ ಕುಟುಂಬಗಳಲ್ಲಿ ಎತ್ತು (ಶೇ.೩೧.೩೧)ರಷ್ಟು ಅಧಿಕ ಪ್ರಮಾಣದಲ್ಲಿ ಇರುವುದು ಕಂಡುಬಂದಿದೆ. ಜಾನುವಾರು ಹೊಂದಿರುವ ಕುಟುಂಬಗಳು ಗಣಿಗಾರಿಕೆ ಪೂರ್ವದಲ್ಲಿ ಶೇ.೪೩.೧೮ರಷ್ಟು, ಗಣಿಗಾರಿಕೆ ನಡೆದಾಗ ಶೇ.೩೬.೩೬ರಷ್ಟು, ಗಣಿ ಸ್ಥಗಿತತೆಯ ನಂತರದಲ್ಲಿ ಶೇ.೨೦.೪೬ರಷ್ಟು ಕುಟುಂಬಗಳು ಜಾನುವಾರುಗಳನ್ನು ಹೊಂದಿವೆ. ಈ ಕುಟುಂಬಗಳಲ್ಲಿ ಗಣಿಗಾರಿಕೆ ಪೂರ್ವದಲ್ಲಿ ಅಧಿಕ ಪ್ರಮಾಣದ (ಶೇ.೪೩.೧೮) ಜಾನುವಾರುಗಳನ್ನು ಹೊಂದಿದೆ. ಇದು ಗಣಿಗಾರಿಕೆ ಚಟುವಟಿಕೆಯು ಮಂದಗತಿಯಾಗಿ ನಡೆದಿರಬಹುದಾಗಿದೆ. ಆದರೆ ಗಣಿಗಾರಿಕೆ ನಡೆದಾಗ ಅದರ ಪ್ರಮಾಣ ಅಂದರೆ ಜಾನುವಾರುಗಳ ಪ್ರಮಾಣ ಕುಟುಂಬಗಳಲ್ಲಿ ಕಡಿಮೆಯಾಗುತ್ತಾ ಬರುತ್ತದೆ. ಇದು ಗಣಿಗಾರಿಕೆ ನಡೆದಾಗ ಬೀರಿರುವ ಪರಿಣಾಮಗಳೇ ಆಗಿರಬಹುದು. ಹಾಗೆಯೇ ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ೯೦ ಕುಟುಂಬಗಳಲ್ಲಿ ಶೇ.೪೩.೩೪ರಷ್ಟು ಜಾನುವಾರು ಹೊಂದಿರುವ ೩೯ ಕುಟುಂಬಗಳ ಪ್ರಮಾಣವಾದರೆ. ಜಾನುವಾರು ಶೇ.೫೬.೬೬ರಷ್ಟು ಹೊಂದದೆ ಇರುವ ೫೧ ಕುಟಂಬಗಳು ಕಂಡುಬರುತ್ತದೆ. ಜಾನುವಾರು ಹೊಂದಿರುವ ಕುಟುಂಬಗಳಲ್ಲಿ ಹಸು ಶೇ.೧೨.೮೪ರಷ್ಟು, ಎತ್ತು ಶೇ.೨೩.೦೭ರಷ್ಟು, ಎಮ್ಮೆ ಶೇ.೧೦.೨೫ರಷ್ಟು, ಕುರಿ ಶೇ.೩೦.೭೬ರಷ್ಟು, ಕೋಳಿ ಶೇ.೨೩.೦೮ರಷ್ಟಿದೆ. ಈ ಕುಟುಂಬಗಳಲ್ಲಿ (ಶೇ.೩೦.೭೬) ಕುರಿ ಜಾನುವಾರುಗಳನ್ನು ಅಧಿಕ ಪ್ರಮಾಣದಲ್ಲಿ ಹೊಂದಿವೆ. ಈ ವಲಯದಲ್ಲಿ ಗಣಿಗಾರಿಕೆ ಪೂರ್ವದಲ್ಲಿ ಶೇ.೩೫.೮೯ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೩.೫೮ರಷ್ಟು, ಗಣಿ ಸ್ಥಗಿತತೆ ನಂತರ ಶೇ.೨೦.೫೩ರಷ್ಟು ಜಾನುವಾರುಗಳನ್ನು ಹೊಂದಿರುವ ಕುಟುಂಬಗಳಾಗಿವೆ. ಗಣಿಗಾರಿಕೆಯ ಪೂರ್ವದಲ್ಲಿ ಜಾನುವಾರು ಹೊಂದಿರುವ ಪ್ರಮಾಣಕ್ಕಿಂತ ಗಣಿಗಾರಿಕೆ ನಡೆದಾಗ ಇರುವ ಜಾನುವಾರುಗಳ ಪ್ರಮಾಣ ತುಂಬಾ ಕಡಿಮೆಯಾಗಿರುವುದು ಗ್ರಾಮೀಣ ಪ್ರದೇಶದ ಕುಟುಂಬಗಳ ದುಸ್ಥಿಯೇ ಆಗಿದೆ. ಇದು ಗಣಿಗಾರಿಕೆ ಚಟುವಟಿಕೆಯ ಪರಿಣಾಮದಿಂದಾಗಿದೆ ಎಂದು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

# ಅಧ್ಯಾಯ ಐದು

## ಗಣಿಗಾರಿಕೆ: ಗ್ರಾಮೀಣ ಪರಿಸರದ ಮೇಲಾದ ಪರಿಣಾಮಗಳು

## ಅಧ್ಯಾಯ ೫
## ಗಣಿಗಾರಿಕೆ: ಗ್ರಾಮೀಣ ಪರಿಸರದ ಮೇಲಾದ ಪರಿಣಾಮಗಳು

### ೫.೧ ಪ್ರಸ್ತಾವನೆ

ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕುಗಳಲ್ಲಿ ನಡೆದಿರುವ ಗಣಿಗಾರಿಕೆಯು ಹಲವು ಬಗೆಯಲ್ಲಿ ಪರಿಸರದ ಪರಿಣಾಮಗಳನ್ನು ಉಂಟು ಮಾಡಿದೆ. ಬಹುಮುಖ್ಯವಾಗಿ ವಾಯು ಮಾಲಿನ್ಯ, ಶಬ್ದ ಮಾಲಿನ್ಯ, ಜಲಮಾಲಿನ್ಯತೆಯು ಆರೋಗ್ಯದ ಮೇಲಾಗುವ ಮಾರಕಾಂಶಗಳಾಗಿವೆ. ಗ್ರಾಮೀಣ ಪ್ರದೇಶದ ಸುತ್ತಮುತ್ತಲು ನಡೆದಿರುವ ಗಣಿಗಾರಿಕೆಯಿಂದ ಕಂಪನಗಳು, ನೆಲ ಕುಸಿತಗಳು, ಭೂತಾಳಗಳು, ಹೂಳು, ಭೂಸವೆತ, ಬಿರುಕುಗಳು ಇತ್ಯಾದಿಗಳ ಮಾನದಂಡಗಳ ಮೂಲಕ ಪರಿಸರ ಮಾಲಿನ್ಯ ಪ್ರಕಟಗೊಂಡಿರುವುದು ಗೋಚರಿಸುತ್ತದೆ. ಕರ್ನಾಟಕ ರಾಜ್ಯದಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಸಂಪನ್ಮೂಲಗಳ ಗಣಿಗಾರಿಕೆಯಿಂದ ರಾಜ್ಯದ ಭೊಕ್ಕಸಕ್ಕೆ ದೊಡ್ಡ ಪ್ರಮಾಣದ ಆದಾಯ ಬರುತ್ತಿದೆ ಎಂಬುವುದು ಹಲವು ಮೂಲಗಳಿಂದ ತಿಳಿದುಬಂದಿದೆ. ಆದರೆ ಗಣಿಗಾರಿಕೆಯಿಂದ ರಾಜ್ಯ ಹಾಗೂ ಜಿಲ್ಲೆಯ ಭೊಕ್ಕಸಕ್ಕೆ ಬರುತ್ತಿರುವ ಅದಾಯಕ್ಕಿಂತ ಪರಿಸರದ ಮೇಲಾಗಿರುವ ಹಾನಿಯು ದೀರ್ಘಾವಧಿ ನಷ್ಟವೇ ಅಧಿಕವಾಗಿದೆ. ಗಣಿಗಾರಿಕೆಯಲ್ಲಿ ಅದಿರನ್ನು ಹೊರ ತೆಗೆಯುವ ಪ್ರಕ್ರಿಯೆಯು ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ ನಡೆದಾಗ ತೀವ್ರಗತಿಯಲ್ಲಿ ಕಂಡು ಬಂದಿವೆ. ಅಂದರೆ ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶದ ಭಾಗಗಳಲ್ಲಿ ನೆಲ ಮತ್ತು ಜಲದ ಮೇಲಾಗಿರುವ ಪರಿಣಾಮಗಳು ಹೆಚ್ಚಾಗಿವೆ. ಗಣಿಗಾರಿಕೆಯ ನಿರಂತರ ಚಟುವಟಿಕೆಯ ಕಾರಣ ಪರಿಸರದ ನಿಯತಾಂಕಗಳಾದ ವಾಯು, ಜಲ ಮತ್ತು ಶಬ್ದಮಾಲಿನ್ಯಕ್ಕೆ ಗಣಿ ಪ್ರದೇಶದ ನದಿಗಳು, ಕೃಷಿ ಭೂಮಿ, ಸಸ್ಯವರ್ಗ ಮತ್ತು ತೋಟಗಳ ಮೇಲೆ ಆಗಾಧ ಹಾನಿಯನ್ನು ಉಂಟುಮಾಡಿವೆ. ಆದರೆ ಗಣಿಗಾರಿಕೆಯ ಮಧ್ಯಂತರ ಸ್ಥಗಿತತೆಯಿಂದ ಗಣಿಗಾರಿಕೆ ನಡೆದಿರುವ ಸುತ್ತಮುತ್ತಲಿನ ಸುಮಾರು ಗ್ರಾಮೀಣ ಪ್ರದೇಶದಲ್ಲಿ ಅದಿರು ಸಾಗಣಿಕೆ ಮಾಡುವ ವಾಹನಗಳ ಓಡಾಟ ಹಾಗೂ ಶಬ್ದಮಾಲಿನ್ಯ ಪ್ರಮಾಣ ಕಡಿಮೆಯಾಗಿವೆ. ಹೀಗೆ ಗಣಿಗಾರಿಕೆಗೂ ಮತ್ತು ಪರಿಸರಕ್ಕೆ ಅನನ್ಯವಾದ ಸಂಬಂಧವಿದೆ. ಯಾವುದೇ ಒಂದು ಗ್ರಾಮೀಣ ಪ್ರದೇಶದ ಸುತ್ತಮುತ್ತ ಗಣಿಗಾರಿಕೆ ನಡೆದಾಗ ಪರಿಸರದ ಮೇಲೆ ದೀರ್ಘವಧಿಯ ನಷ್ಟ ಉಂಟಾಗುತ್ತದೆ. ಅಂತರ್ಜಲ ಮಾಲಿನ್ಯ ಹಾಗೂ ವಾಯು ಮಾಲಿನ್ಯ ಮೇಲೆ ಹೇಗೆ ಪರಿಣಾಮ ಬೀರಿವೆ ಎಂಬುವುದು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

### ೫.೨ ಪರಿಸರದಲ್ಲಿ ವಾಯು ಮಾಲಿನ್ಯ

ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯಗಳು ತೆರೆದ ಗಣಿಗಾರಿಕೆಯಿಂದ ಉದ್ಭವಗೊಂಡಿರುವ ಧೂಳು ವಾತಾವರಣದ ಅನೇಕ ಬಗೆಗಳಲ್ಲಿ ವಿಲೀನಗೊಳ್ಳುತ್ತದೆ. ಗಣಿಗಳಲ್ಲಿ ಮಾಡುವ ಸ್ಫೋಟಕಗಳಿಂದಾಗಿ ಉಂಟಾಗುವ ಧೂಳು ಹಾಗೂ ಅದಿರನ್ನು ಯಂತ್ರಗಳಿಂದ ಪುಡಿ ಮಾಡುವ ವಿಧಾನ ಮತ್ತು ಸಾಗಿಸುವಾಗ ಸ್ಟಾಕ್‌ಯಾರ್ಡ್‌ಗಳ ಮೇಲೆ ಗಾಳಿ ಬೀಸಿದಾಗ ಧೂಳು ಗಾಳಿಯಲ್ಲಿ ವಿಲೀನವಾಗಿ ಪರಿಸರದಲ್ಲಿ ಸೇರಿಕೊಳ್ಳುತ್ತದೆ. ಹಾಗಾಗಿ ವಾಯು ಮಾಲಿನ್ಯದಿಂದ ಗ್ರಾಮೀಣ ಪ್ರದೇಶದ ಜನ ಸಮುದಾಯದ ಮೇಲೆ ಕಣ್ಣಿನ ರೋಗಗಳು, ಶ್ವಾಸಕೋಶದ ರೋಗಗಳು ಅಧಿಕವಾಗಿ ಗಣಿಗಾರಿಕೆ ನಡೆದಾಗ ಕಂಡುಬಂದಿವೆ. ಆದರೆ ಗಣಿ ಸ್ಥಗಿತತೆಯ ನಂತರ ಗ್ರಾಮೀಣ ಪ್ರದೇಶದಲ್ಲಿ ವಾಯು ಮಾಲಿನ್ಯದಿಂದಾಗಿ ಗ್ರಾಮೀಣ ಜನರ ಬದುಕು ಸ್ವಲ್ಪಮಟ್ಟಿಗೆ ಬದಲಾವಣೆಯಾಗಿರುವುದು ಕಾಣಸಿಗುತ್ತದೆ. ಖನಿಜಗಳನ್ನು ಹೊರ ತೆಗೆಯುವ ಸಾಧನಗಳು, ಪುಡಿ ಮಾಡುವ ಯಂತ್ರಗಳು, ಅವನ್ನು ಕರಗಿಸುವ ಕಾರ್ಖಾನೆಯ ವಿವಿಧ ವಿಧಾನಗಳಿಂದ ವಾಯು ಮಾಲಿನ್ಯ ಅಧಿಕವಾಗಿದೆ. ಆದರೆ ಗಣಿಗಾರಿಕೆ ಸ್ಥಗಿತತೆಯ ನಂತರ ಖನಿಜಗಳನ್ನು ಹೊರ ತೆಗೆಯುವ ಸಾಧನ, ಪುಡಿ ಮಾಡುವ ಯಂತ್ರಗಳ ಪ್ರಮಾಣ, ಪ್ರಸ್ತುತ ದಿನಗಳಲ್ಲಿ ಕಡಿಮೆಯಾಗಿವೆ. ಆದರೆ ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯಗಳಲ್ಲಿರುವ ಗಣಿ ಕಾರ್ಖಾನೆಗಳು ಹೊರ ಸೂಸುವ ಹೊಗೆ, ತ್ಯಾಜ್ಯ ವಸ್ತುಗಳ ಸಂಗ್ರಹಣೆ ಮತ್ತು

ಗಣಿ ಕೈಗಾರಿಕೆಯಲ್ಲಿ ಅದಿರನ್ನು ಸಾಗಾಣೆ ಮಾಡುವ ವಾಹನಗಳ ಓಡಾಟದ ಪ್ರಮಾಣವು ಗಣಿಗಾರಿಕೆ ಸ್ಥಗಿತತೆಯ ನಂತರವೂ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಹಾಗೆ ಇರುವುದು ಕಂಡುಬರುತ್ತದೆ. ವಿಶೇಷವಾಗಿ ಗಣಿ ಮತ್ತು ಕಲ್ಲು ಗಣಿಗಾರಿಕೆಯಲ್ಲಿ ತೆರೆದ ಗಣಿ ಕಾರ್ಯಾಚರಣೆಯು ಸರ್ವೆ ಸಮಾನ್ಯವಾದ ಪರಿಸರದ ಸಮಸ್ಯೆಯಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಮ್ಯಾಂಗನೀಸ್, ಗಣಿಗಳ ಬಗ್ಗೆ ರಾಷ್ಟ್ರೀಯ ಪರಿಸರ ಇಂಜನಿಯರಿಂಗ್ ಸಂಶೋಧನಾ ಸಂಸ್ಥೆ ಕೈಗೊಂಡ ವರದಿಯ ಪ್ರಕಾರ ಹಾಗೂ ಪರಿಸರ ಪರಿಣಾಮಗಳ ಮೌಲ್ಯಮಾಪನದ ಪ್ರಕಾರ ಬೇರೆ ಬೇರೆ ಜಾಗಗಳಲ್ಲಿ ತೇಲು ಕಣಗಳ ಸರಾಸರಿ ಸಾಂದ್ರತೆಯು ೧೩೦ ಎಂ.ಜಿ/ಎಂ$^{3}$ ಮತ್ತು ೧,೬೭೮ ಎಂ.ಜಿ/ಎಂ$^{3}$ ನಡುವೆ ವ್ಯತ್ಯಾಸ ಕಂಡುಬರುತ್ತದೆ. ತೆಲು ಕಣದ ಸಾಂದ್ರತೆಯ ಗರಿಷ್ಠ ಮಟ್ಟ ೪,೪೭೪ ಎಂ.ಜಿ/ಎಂ$^{3}$ ಎಂದು ಅವಲೋಕನಗಳಿಂದ ತಿಳಿದುಬಂದಿದೆ. ಈ ಮೌಲ್ಯವು ಗಣಿ ಸಂರಕ್ಷಣಾ ಮಹಾ ನಿರ್ದೇಶಕರು ನಿಗದಿ ಪಡೆಸಿರುವ ೫,೦೦೦ ಎಂ.ಜಿ/ಎಂ$^{3}$ ಗಳ ಕ್ಲುಪ್ತ ಮಿತಿಯಲ್ಲಿದೆ. ಆದಾಗ್ಯೂ ಕೈಗಾರಿಕಾ ಪ್ರದೇಶದಲ್ಲಿ ಇದು ೩೦೦ ಎಂ.ಜಿ/ಎಂ$^{3}$ ಮಿತಿಯಲ್ಲಿರಬೇಕೆಂದು ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯು ತೆಲು ಕಣಗಳ ಮಿತಿಯ ಮೌಲ್ಯಗಳನ್ನು ನಿಗದಿಗೊಳಿಸಿದೆ. ಆದರಿಂದ ಕೇಂದ್ರಿಕರಣವು ನಿಗದಿಪಡಿಸಿದ ಮಿತಿಯಲ್ಲೆ ಇದ್ದರೂ ಅದು ಗಣಿ ಗ್ರಾಮೀಣ ಜನರ ಮೇಲೆ ಹಾಗೂ ಗಣಿ ಕೂಲಿ ದುಡಿಮೆಗಾರರ ಆರೋಗ್ಯದ ಮೇಲೆ ದುಷ್ಪರಿಣಾಮಗಳು ಬೀರಿವೆ. ವಾಯುಮಾಲಿನ್ಯ ಗಣಿ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಗಣಿ ಪ್ರದೇಶವನ್ನು ದಾಟಿ ಸುತ್ತಮುತ್ತಲ ಗ್ರಾಮೀಣ ಪ್ರದೇಶಗಳಿಗೆ ಹರಡುತ್ತ ಹೋಗುತ್ತದೆ. ಹಾಗಾಗಿ ಸುತ್ತಮುತ್ತಲಿರುವ ಕಾಪು ವಲಯವನ್ನು ಬಹುತೇಕವಾಗಿ ಘಾಸಿಗೊಳಿಸುತ್ತದೆ. ಈ ಸಂದರ್ಭದಲ್ಲಿ ಜಿಲ್ಲೆಯ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕುಗಳಲ್ಲಿ ಜನವರಿ ೨೦೦೩ರಲ್ಲಿ ಕರ್ನಾಟಕ ರಾಜ್ಯ ದೂರಗ್ರಹಿ ಅನ್ವಯ ಕೇಂದ್ರ ಕೈಗೊಂಡ ಅಧ್ಯಯನದ ವರದಿಯಲ್ಲಿ ಗಣಿ ಧೂಳು ರಸ್ತೆಯ ಪಕ್ಕದಲ್ಲಿ, ವ್ಯವಸಾಯ ಮಾಡುವ ಕೃಷಿ ಭೂಮಿಯ ಮೇಲೂ ಸಂಚಯನವಾಗುತ್ತಿದೆ.

ಹೀಗೆ ವಾಯುಮಾಲಿನ್ಯದಿಂದ ಗಣಿಗಾರಿಕೆಯ ಪ್ರಕ್ರಿಯೆಯು ಪ್ರಬಲವಾಗಿದೆ. ಗಣಿಗಾರಿಕೆಯಿಂದ ಮತ್ತು ಗಣಿಕೈಗಾರಿಕೆಯಿಂದ ಉದ್ಭವವಾಗುವ ಧೂಳು, ಹೊಗೆ ಗಣಿ ಕೇಂದ್ರಿತ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ, ಅದು ಸುತ್ತಮುತ್ತಲಿನ ಪ್ರದೇಶದ ವಾತವರಣಕ್ಕೂ ಹರಡುತ್ತದೆ. ಇದರಿಂದಾಗಿ ಗ್ರಾಮೀಣ ಪ್ರದೇಶದ ಜನವಸತಿ ಪ್ರದೇಶ, ಕೃಷಿ ಭೂಮಿ, ಅರಣ್ಯ ಪ್ರದೇಶದಲ್ಲಿ ಸಸ್ಯ ಮತ್ತು ಪ್ರಾಣಿ ವರ್ಗಗಳ ಮೇಲೂ ಹಾನಿಕಾರಕ ಪರಿಣಾಮಗಳನ್ನು ಉಂಟು ಮಾಡುತ್ತದೆ. ಗಣಿಗಾರಿಕೆ ಸ್ಥಗಿತತೆಯ ನಂತರ ವಾಯುಮಾಲಿನ್ಯದ ಪ್ರಮಾಣ ಮಂದಗತಿಯಲ್ಲಿ ಕಡಿಮೆಯಾಗಿರಬಹುದೇ ವಿನಾಃ ಇದರಿಂದಾಗಿ ಗ್ರಾಮೀಣ ಪರಿಸರ ಹಾಗೂ ಆರೋಗ್ಯದ ಮೇಲಾಗಿರುವ ಪರಿಣಾಮಗಳು ದಿರ್ಘಾವಧಿಯವರೆಗೂ ಪರಿಭ್ರಮಿಸುತ್ತದೆ. ಈ ಪ್ರದೇಶದಲ್ಲಿ ಹರಡಿರುವ ಧೂಳು ತೆರೆದ ಬಾವಿಗಳು, ಕಾಲುವೆಗಳು, ವ್ಯವಸಾಯ ಮಾಡುವ ಭೂಮಿ, ದೇವಸ್ಥಾನಗಳು, ಜನರು ವಾಸಸ್ಥಳಗಳಲ್ಲಿ ಆವರಿಸುವುದು ಸಮಷ್ಠ ಬದುಕಿಗೆ ಮಾರಕವಾಗಿದೆ.

ಗಣಿಗಾರಿಕೆಯಲ್ಲಾಗುವ ಸ್ಫೋಟಕಗಳಿಂದ ಕಬ್ಬಿಣ ಮತ್ತು ಮಣ್ಣಿನ ಧೂಳಿನ ಕಣಗಳು ವಾಯುಮಂಡಲದಲ್ಲಿ ತುಂಬಿರುವುದು, ಗಿಡ ಮರಗಳ ಮೇಲೆ ಕೂತಿರುವ ಧೂಳಿನ ಪ್ರಮಾಣವನ್ನು ಪ್ರಸ್ತುತದಲ್ಲೂ ನೋಡಿ ಅರ್ಥೈಸಿಕೊಳ್ಳಬಹುದಾಗಿದೆ. ಹಾಗಾಗಿ ಜೀವ ಪರಿಸರಕ್ಕೆ ಮತ್ತು ಕೃಷಿಗೆ ಹಾನಿಯನ್ನುಂಟು ಮಾಡಿವೆ. ಇಲ್ಲಿ ನಡೆಯುತ್ತಿರುವ ಔದ್ಯಮೀಕರಣ ಮತ್ತು ಅದಕ್ಕೆ ಪೂರಕವಾಗಿ ನಿರ್ಮಾಣ ಆಗಿರುವ ನಗರೀಕರಣ ತೀವ್ರಗತಿಯಲ್ಲಿ ಬೆಳೆದು ವಾಯು ಮಾಲಿನ್ಯ ಉಂಟಾಗಿವೆ. ಗಣಿಗಾರಿಕೆಯಿಂದ ಆಗುತ್ತಿರುವ ವಾಯು ಮಾಲಿನ್ಯದ ಮಾರಕಕ್ಕೆ ಉದಾಹರಣೆ ಅಂದರೆ, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ವಲಯಗಳ ಗಣಿಗಾರಿಕೆಯ ಚಟುವಟಿಕೆಯೇ ಸಾಕ್ಷಿಯಾಗಿವೆ. ಗಣಿಗಾರಿಕೆ ಸ್ಥಗಿತತೆಯ ನಂತರ ಮಂದಗತಿಯಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ಧೂಳು ಅಧಿಕವಾಗಿ ಗಣಿ ಕೇಂದ್ರಿಕೃತವಾಗಿರುವ ಸುತ್ತಮುತ್ತಲಿನ ಗ್ರಾಮೀಣ ಬಯಲು ಪ್ರದೇಶದಲ್ಲಿ ತುಂಬಿರುವುದು ವಾಯು ಮಾಲಿನ್ಯಕ್ಕೆ ಕಾರಣವಾಗಿದೆ. ಇದು ಗ್ರಾಮೀಣ ಪ್ರದೇಶದ ಜನರಿಗೆ ಅನೇಕ

ರೋಗರುಜ್ಜಿನೆಗಳಿಗೆ ಕಾರಣವಾಗಿರುವುದು ಕಂಡುಬರುತ್ತಿದ್ದು, ಅಸ್ತಮಾ, ಅಲರ್ಜಿ, ಶ್ವಾಸಕೋಶದ ತೊಂದರೆಯಂಥ ರೋಗಗಳು ಗ್ರಾಮೀಣ ಪ್ರದೇಶದ ಜನರಲ್ಲಿ ಸಾಮಾನ್ಯವಾಗಿ ಹರಡಿರುವುದು ಕಾಣಬಹುದು. ಇದಕ್ಕೆ ಅಸ್ಪತ್ರೆಗಳಲ್ಲಿ ಅಧಿಕವಾಗಿ ದಾಖಲಾಗಿರುವ ಗಣಿ ಗ್ರಾಮೀಣ ಪ್ರದೇಶದ ಜನ ಸಾಮಾನ್ಯರು ಸಾಕ್ಷಿಯಾಗಿದ್ದಾರೆ. ಗಣಿಗಾರಿಕೆ ನಡೆದ ಸಂದರ್ಭದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಹಾದು ಹೋಗುವ ಸಾವಿರಾರು ಲಾರಿಗಳು ಎಬ್ಬಿಸುವ ಧೂಳು, ವಾಸದ ಮನೆ, ಅಂಗಡಿ ಮುಂಗಟ್ಟುಗಳನ್ನು ತುಂಬಿಸುತ್ತದೆ. ಇದರಿಂದ ನೈರ್ಮಲ್ಯದ ವಾತವರಣವೇ ಹದಗೆಟ್ಟಿದೆ. ಈ ಖನಿಜ ಭರಿತ ಕಬ್ಬಿಣಂಶದ ಧೂಳಿನ ಕಣಗಳ ಜೊತೆಗೆ ಲಾರಿಗಳಿಂದ ಬರುವ ಸೀಸ ಭರಿತ ವಾಯುವನ್ನು ಜನ ಸಾಮಾನ್ಯರು ಉಸಿರಾಡುವುದರಿಂದ, ಗ್ರಾಮೀಣ ಪ್ರದೇಶದಲ್ಲಿ ವಾಸಿಸುವವರು ವಾಯು ಸೇವಿಸಿವುದರಿಂದ ಜನರ ಬದುಕು ದುಸ್ಥಿತಿನ್ನು ತಲುಪಿದೆ. ಹೀಗೆ ಪರಿಸರ ಮಾಲಿನ್ಯದಿಂದ ಶುದ್ಧ ಕುಡಿಯುವ ನೀರು, ಗಾಳಿ, ಪೌಷ್ಟಿಕ ಅಹಾರಗಳು ದೂರೆಯದಂತಹ ಪರಿಸ್ಥಿತಿ ಉಲ್ಬಣಗೊಳ್ಳಿತ್ತಿದೆ. ಗಣಿಗಾರಿಕೆಯ ಚಟುವಟಿಕೆಯಲ್ಲಿ ವಾಹನಗಳ ಒಡಾಟದಿಂದ ಉದ್ಭವಿಸುವ ಧೂಳಿನ ಪ್ರಮಾಣ ವಾಯುಮಂಡಲಕ್ಕೆ ಸೇರಿ ಕಾರ್ಬನ್ ಮೊನಾಕ್ಸೈಡ್ ಶರೀರದ ಅಂಗಾಂಶಗಳಿಗೆ ದೊರೆಯುವ ಆಕ್ಸಿಜನ್ ಪ್ರಮಾಣವನ್ನು ಕಡಿಮೆ ಮಾಡುತ್ತಿದೆ. ಕ್ರಿಶ ೨೦೦೦ರ ಹೊತ್ತಿಗೆ ದೇಶದ ಎಲ್ಲ ಪ್ರಜೆಗಳನ್ನು ಆರೋಗ್ಯವಂತನನ್ನಾಗಿ ಮಾಡುವ ಉದ್ದೇಶವನ್ನು ವಿಶ್ವ ಆರೋಗ್ಯ ಸಂಸ್ಥೆ ಘೋಷಿಸಿತು. ಅದರೆ ಈ ಗುರಿಮುಟ್ಟುವ ಸೂಚನೆ ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯ ಪ್ರದೇಶದಲ್ಲಿ ಎಲ್ಲಿಯೂ ಕಾಣದಿರುವುದು ಶೋಚನಿಯ ಸ್ಥಿತಿಯಾಗಿದೆ. ಯಾಕೆಂದರೆ ಗಣಿ ಸ್ಥಗಿತತೆಯ ನಂರತರವು ಗಣಿ ಕೈಗಾರಿಕೆಯ ಪ್ರಭಾವದಿಂದ ವಾಯು ಮಾಲಿನ್ಯ ಸ್ಥಿತಿ ಹಾಗೆ ಇರುವುದು ಕಂಡು ಬರುತ್ತದೆ. ಜೊತೆಗೆ ಈ ಭಾಗಗಳಲ್ಲಿ ಧೂಳಿನ ಸಮಸ್ಯೆಗಳು ತೀವ್ರಗತಿಯಲ್ಲಾದಿದ್ದರೂ ಮಂದಗತಿಯಲ್ಲಿ ಮತ್ತೆ ಮರುಕಳಿಸುತ್ತಿವೆ. ಗಣಿ ಗ್ರಾಮೀಣ ಪ್ರದೇಶದಲ್ಲಿ ಪರಿಸರ ಮಾಲಿನ್ಯವನ್ನು ತಡೆಗಟ್ಟಬೇಕಾದರೆ ವ್ಯಕ್ತಿ, ಸಂಘ ಸಂಸ್ಥೆಗಳು ಹಾಗೂ ರಾಷ್ಟ್ರಗಳು ಪರಿಸರ ಮಾಲಿನ್ಯ ನಿಯಂತ್ರಣಕ್ಕಾಗಿ ಶ್ರಮಿಸಬೇಕಾಗುತ್ತದೆ.

**೫.೩ ಜಲ ಮಾಲಿನ್ಯ ಮತ್ತು ಹೂಳು**

ಬಳ್ಳಾರಿ ಜಿಲ್ಲೆಯ ತುಂಗಭದ್ರ ಜಲಾಶಯವು ಕೃಷಿ ಅವಲಂಬಿತ ಕುಟುಂಬಗಳಿಗೆ ಹಾಗೂ ಅಲ್ಲಿ ವಾಸಿಸುವ ಜನ ಸಾಮಾನ್ಯರಿಗೆ ಜೀವನಾಡಿ ಇದ್ದಂತೆ. ಈ ಜಲಾಶಯದ ನೀರನ್ನು ಕುಡಿಯುಲು, ಕೃಷಿ ಮತ್ತು ವಿದ್ಯುತ್ ಉತ್ಪಾದನೆಗಾಗಿ ಉಪಯೋಗವಾಗುತ್ತಿದೆ. ಜಿಂದಲ್‌ನಂಥ ಕಾರ್ಖಾನೆಗಳಿಗೂ ಈ ಜಲಾಶಯದ ನೀರು ಪೂರೈಕೆಯಾಗುತ್ತಿದೆ. ತುಂಗಭದ್ರಾ ಜಲಾಶಯದಿಂದ ಜಿಲ್ಲೆಯ ಬೇರೆ ಬೇರೆ ಭಾಗಗಳಿಗೆ ಕೆನಾಲ್‌ಗಳ ಮೂಲಕ ನೀರನ್ನು ಹರಿಸಲಾಗುತ್ತದೆ. ಈ ಕೆನಾಲ್‌ಗಳ ನೀರು ಹೊಸಪೇಟೆ ಪಟ್ಟಣ ಮತ್ತು ಅನೇಕ ಗ್ರಾಮೀಣ ಪ್ರದೇಶದಲ್ಲಿ ಹರಿಯುತ್ತದೆ. ಇದನ್ನು ಬಹುತೇಕವಾಗಿ ಸ್ನಾನ ಮಾಡಲು, ಕುಡಿಯಲು, ಬಟ್ಟೆ ಶುಚಿಗೊಳಿಸಲು ಬಳಸುತ್ತಿದ್ದಾರೆ. ಅದರೆ ಗಣಿಗಾರಿಕೆ ಚಟುವಟಿಕೆ ಭರದಿಂದ ನಡೆದ ಸಂದರ್ಭದಲ್ಲಿ ಗಣಿಗಳಿಂದ ಉತ್ಪನ್ನವಾಗುತ್ತಿರುವ ಧೂಳು ಮತ್ತು ಮಲಿನತೆಯು ಜಲಾಶಯದ ಮತ್ತಿತರ ಕಾಲುವೆಗಳ ಮೂಲಕ ವಿಲೀನಗೊಂಡು ಜಲಮಾಲಿನ್ಯ ಉಂಟಾಗುತ್ತದೆ. ಜಗತ್ತಿನಾದ್ಯಂತ ನಡೆದಿರುವ ಅಧ್ಯಯನಗಳು ಹೇಳುವಂತೆ ಅದರಿನ ಧೂಳಿನಲ್ಲಿ ವಿಷ ವಸ್ತುಗಳು ಅಧಿಕ ಪ್ರಮಾಣದಲ್ಲಿದ್ದು, ಧೂಳಿನ ಕಣಗಳು ಮಳೆಯಿಂದ ಮತ್ತು ಗಾಳಿಯಿಂದ ನೀರನ್ನು ಸೇರುವುದರಿಂದ ಜಲ ಮಲೀನತೆಯಾಗುತ್ತದೆ. ಈ ನೀರನ್ನು ಜನರು ದಿನನಿತ್ಯದ ಬಳಕೆಗೆ ಮತ್ತು ಕೃಷಿಗಾಗಿ ಬಳಸುವುದು ಯೋಗ್ಯಕರವಲ್ಲದ ಸ್ಥಿತಿಗೆ ತಲುಪಿದೆ. ಹೀಗೆ ಜಲಾಶಯದ ನೀರಿನಲ್ಲಿ ಗಣಿ ಕೆಲಸ ಮಾಡುವ ಕಾರ್ಮಿಕರು ಸಂಜೆ ಬಂದು ತಮ್ಮ ಮೈಯನ್ನು ತೊಳೆದುಕೊಳ್ಳುವ, ಮಾಲೀಕರು ಉಪಯೋಗಿಸುವ ಕಾರುಗಳನ್ನು ಹಾಗೂ ಅದಿರು ಸಾಗಿಸುವ ಲಾರಿಗಳನ್ನು ತೊಳೆಯುವುದರಿಂದ ಜನರಿಗೆ ಅತ್ಯವಶ್ಯಕವಾಗಿ ಬೇಕಾಗಿರುವ ನೀರು ಮಾಲಿನ್ಯದಿಂದ ಕೂಡಿರುತ್ತದೆ. ಹಾಗಾಗಿ ಗಣಿಗಳಿಂದ ಹರಿದು ಬರುವ ಮಣ್ಣು ಕೆಸರಿನಿಂದ ಈ ಪ್ರದೇಶದ ಜಲಾಶಯ, ಕೆರೆ, ಕಾಲುವೆಗಳಿಗೆ ತುಂಬಿಕೊಂಡು ಜನಸ್ಥಾನಗಳೆಲ್ಲವೂ ಧೂಳಿನಿಂದ ಆವೃತ್ತಗೊಳ್ಳುತ್ತಿದೆ. ಗಣಿ ಸ್ಫೋಟಕಗಳಿಂದ ಮತ್ತು ಕಾಲುವೆಗಳ ಪಕ್ಕದಲ್ಲಿ ಗಣಿಗಾರಿಕೆ

ನಡೆದಾಗ ಕಾಲುವೆಗಳಲ್ಲಿ ನೀರಿನ ಸೋರಿಕೆಯು ಜಾಸ್ತಿಯಾಗಿ ಅಮೂಲ್ಯವಾಗಿರುವ ನೀರು ವ್ಯರ್ಥವಾಗುತ್ತದೆ. ಕರ್ನಾಟಕದ ಅಪ್ರಧಾನ ಖನಿಜ ರಿಯಾತಿ ಕಾನೂನಿನಲ್ಲಿ ಅವಕಾಶವಿರುವಂತೆ ರೈಲ್ವೆ ಮಾರ್ಗ, ಕೆರೆ ಮತ್ತು ಕಾಲುವೆಗಳ ೨೦೦ ಮೀಟರ್ ದೂರದಲ್ಲಿ ಮರಳು ಅಗೆಯುವುದು, ಕಲ್ಲು ಸ್ಫೋಟವನ್ನು ಮಾಡುವುದು ನಿಷೇಧಿಸುವಂತೆ ಸೂಚಿಸುತ್ತಾರೆ. ಅದರೆ ತುಂಗಭದ್ರಾ ಬಲದಂಡೆಯ ಕಾಲುವೆಯ ಹತ್ತು ಅಡಿ ಅಂತರದಲ್ಲಿಯೇ ಕಬ್ಬಿಣದ ಅದಿರನ್ನು ತೆಗೆಯುವುದರಿಂದ ನೀರಿನ ಸೋರಿಕೆಯುಂಟಾಗಿದ್ದು, ಕಾಲುವೆಗಳು ಒಡವೆಯುವ ಸಂಭವವೂ ಇದೆ. ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳಲ್ಲಿ ಕರ್ನಾಟಕ ರಾಜ್ಯ ದೂರಗ್ರಾಹಿ ಅನ್ವಯ ಕೇಂದ್ರ ೨೦೦೩ರಲ್ಲಿ ಅಧ್ಯಯನ ಕೈಗೊಂಡು ಗಣಿ ಪ್ರದೇಶದ ಬಳಿಯ ಜಲರಾಶಿಗಳಲ್ಲಿ ಹೂಳು ಶೇಖರಣೆಗೊಳ್ಳುತ್ತಿರುವುದು ಪತ್ತೆಯಾಗಿವೆ. ತುಂಗಭದ್ರ ಜಲಾಶಯದ ನೀರಿನ ಶೇಖರಣೆಯ ಮಟ್ಟ ಪ್ರತಿವರ್ಷ ಕಡಿಮೆಯಾಗುತ್ತಿರುವ ಅಂಕಿ-ಅಂಶಗಳನ್ನು ಸೂಚಿಸುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿಯೇ ತುಂಗಭದ್ರಾ ಜಲಾಶಯದ ನೀರಿನ ಮಟ್ಟ ವರ್ಷದಲ್ಲಿ ಅತಿ ಕಡಿಮೆಯಾಗುವ ಜಲಾಶಯವಾಗಿದೆ. ಈ ಅಣೆಕಟ್ಟೆಯಲ್ಲಿ ೧೯೫೩ರಲ್ಲಿ ೧೩೩ ಟಿ.ಎಂ.ಸಿ. ನೀರು ಸಂಗ್ರಹವಾಗುತ್ತಿತ್ತು. ೧೯೯೩ರಲ್ಲಿ ೧೧೨ ಟಿ.ಎಂ.ಸಿ. ಮಾತ್ರ ಇತ್ತು. ಜಲಾಶಯದ ನೀರಿನ ಹರಿವು ೧೩೫ ಕ್ಯೂಸೆಕ್ಸ್‌ನಿಂದ ೯೦ ಕ್ಯೂಸೇಕ್ಸ್‌ಗೆ ಇಳಿದಿದೆ. ಹೈದರಾಬಾದ್ ದೂರ ಸಂವೇದಿ ಅನ್ವಯ ಕೇಂದ್ರ (ಆರ್‌ಎಸ್‌ಎಸಿ) ಅಧ್ಯಯನದ ಪ್ರಕಾರ ೨೦೦೦ರಲ್ಲಿ ಆಣೆಕಟ್ಟೆಯಲ್ಲಿ ೧೦೩.೦೩ ಟಿ.ಎಂ.ಸಿ. ಅಂದರೆ ೩೦ ಟಿ.ಎಂ.ಸಿ. ನೀರು ಕಡಿಮೆಯಾಗಿದೆ. ಇಷ್ಟು ನೀರು ಉತ್ತರ ಕರ್ನಾಟಕದ ೩ ಲಕ್ಷ ಎಕರೆ ಜಮೀನಿಗೆ ಸಾಕಾಗುವಷ್ಟು ಪ್ರಮಾಣದಲ್ಲಿದೆ. ಕುದುರೆಮುಖ ಗಣಿಗಾರಿಕೆಯಿಂದ, ಹರಿಹರದ ಕೈಗಾರಿಕೆಗಳಿಂದ ಸಾಕಷ್ಟು ಮಲೀನಗೊಂಡು ತುಂಗಭದ್ರ ನದಿಗೆ ಹರಿದು ಬಂದು ಈ ಜಲಾಶಯದಲ್ಲಿ ಸೇರಿಕೊಳ್ಳುತ್ತದೆ. ಇಲ್ಲಿ ತೆರೆದ ಗಣಿಗಾರಿಕೆಯಿಂದ ಇಲ್ಲಿರುವ ಗುಡ್ಡಗಳನ್ನು ಸ್ಫೋಟಕಗಳಿಂದ ಸಿಡಿಸಿ, ಯಂತ್ರ ಸಾಧನಗಳಿಂದ ಭೂಮಿಯನ್ನು ಸಡಿಲಗೊಳಿಸಿ, ತೊಡಿ, ಪುಡಿಮಾಡಿ ಸಾಗಿಸಲಾಗುವುದರಿಂದ; ಪುಡಿ ಮಾಡಿದ ಮಣ್ಣು-ಧೂಳು ಮಳೆಯಿಂದ ಜಲಾಶಯ ಮತ್ತು ನದಿಗಳಿಗೆ ಸೇರುತ್ತಿದೆ. ಜಲಾಶಯದ ಅಕ್ಕ ಪಕ್ಕದಲ್ಲಿರುವ ಜನವಾಸಿಗಳು ಇಂಥ ಮಲೀನಗೊಂಡ ನೀರನ್ನು ಕುಡಿಯಲು ಉಪಯೋಗಿಸುತ್ತಾರೆ ಎಂದು ಮಾಧವ್ ಕಾಡ್ಗೀಳ್ ಮತ್ತು ರಾಮಚಂದ್ರ ಗುಹಾ ಅವರು ಎಕಾಲಜಿ ಅಂಡ್ ಇಕ್ಯೂಟಿ ಎಂಬ ಕೃತಿಯಲ್ಲಿ ತುಂಗಭದ್ರ ಜಲಾಶಯ ದಿನೇ ದಿನೇ ಅವಸಾನದ ಕಡೆಗೆ ಹೊರಟಿರುವುದು ಸಾಬೀತುಪಡಿಸಿದ್ದಾರೆ. ೨೦೦೦ರಲ್ಲಿ ತುಂಗಭದ್ರ ಆಣೆಕಟ್ಟೆಯ ನೀರು ೧೦೩.೦೩ ಟಿ.ಎಂ.ಸಿ ಯಿಂದ ೩೦ ಟಿ.ಎಂ.ಸಿ. ಕಡಿಮೆಯಾಗಲು ಗಣಿಗಾರಿಕೆಯ ಪ್ರಭಾವವೇ ಆಗಿದೆ. ಆದರೆ ಪ್ರಜಾವಾಣಿ ೩೧ ಆಗಷ್ಟ್ ೨೦೧೮ರಲ್ಲಿ ಪ್ರಕಟಣೆಗೊಂಡತೆ ತುಂಗಭದ್ರ ಆಣೆಕಟ್ಟೆಯ ಒಳಹರಿವು ೨೦,೭೪೯ ಕ್ಯೂಸೆಕ್, ಹೊರಹರಿವು ೨೦,೦೧೯ ಕ್ಯೂಸೆಕ್‌ಯಿದ್ದು, ನೀರಿನ ಗರಿಷ್ಠ ಮಟ್ಟ ೧,೬೩೩ ಟಿ.ಎಂ.ಸಿ ನೀರು ಸಂಗ್ರಹವಾಗಿದೆ. ಇದು ಗಣಿಗಾರಿಕೆ ಸ್ಥಗಿತತೆಯ ನಂತರದಲ್ಲಾದ ಬದಲಾಣೆ ಆಗಿರಬಹುದು ಎಂದು ಗ್ರಹಿಸಬೇಕಾದ ಅಂಶವಾಗಿದೆ.

ಜಲಾಶಯದಲ್ಲಿ ವರ್ಷದಿಂದ ವರ್ಷಕ್ಕೆ ಅಧಿಕ ಪ್ರಮಾಣದಲ್ಲಿ ಹೂಳು ತುಂಬುತ್ತಾ ಹೋದಂತೆ ನೀರಿನ ಶೇಖರಣೆಯ ಪ್ರಮಾಣ ಕಡಿಮೆಯಾಗುತ್ತಿದೆ ಎನ್ನುವ ಸತ್ಯವನ್ನು ಹೇಳುವುದಿಲ್ಲ. ಆದರೆ ಆಯಾ ಜಲಾಶಯದ ಅಯಸ್ಸು ಎಷ್ಟಿರಬಹುದು? ಎಷ್ಟು ಕಾಲ ಬಾಳುತ್ತದೆ? ಎನ್ನುವುದರ ಕುರಿತು ಹೇಳುತ್ತಾ ಹೋಗುತ್ತಾರೆ. ಹಾಗಾಗಿ ಭಾರತದ ಯಾವ ತರಹದ ಭೂಮಿಯಲ್ಲಿ ಯಾವ ತರಹದ ಭೂ ಬಳಕೆಯಿಂದ ಎಷ್ಟು ಪ್ರಮಾಣದಲ್ಲಿ ಮಣ್ಣು ಕೊಚ್ಚಿಕೊಂಡು ಹೋಗುತ್ತಿವೆ? ಮತ್ತು ಸಂಬಂಧ ಪಟ್ಟ ಜಲಾಶಯದಲ್ಲಿ ಯಾವ ವೇಗದಲ್ಲಿ ಹೂಳು ತುಂಬುತ್ತಾ ಹೋಗುತ್ತದೆ ಎಂಬುವುದರ ಬಗ್ಗೆ ಸರಿಯಾದ ಅಧ್ಯಯನಗಳು ನಡೆದಿರುವುದು ಕಂಡು ಬಂದಿರುವುದಿಲ್ಲ. ಆದರೆ ಅಂತಹ ಅಧ್ಯಯನವನ್ನು ಕೈಗೊಳ್ಳದೇ ನಮ್ಮ ಯೋಜಕರು ಅಂದಾಜಿನ ಅಂಕಿ-ಅಂಶಗಳನ್ನು ತೋರಿಸಿ ಬಿಡುತ್ತಾರೆ. ಕರ್ನಾಟಕದ ತುಂಗಭದ್ರ ಜಲಾಶಯದ ಉದಾಹರಣೆಯನ್ನೇ ತೆಗೆದುಕೊಂಡರೆ, ೧೯೫೩ರಲ್ಲಿ ಕಟ್ಟಿದ ಈ ಆಣೆಕಟ್ಟು ೧೦ ವರ್ಷ ಆಯಸ್ಸು ಎಂದು ಯೋಜಕರು ನುಡಿದಿದ್ದರು. ಆದರೆ ಜಲಾಶಯದಲ್ಲಿ ತುಂಬಿಕೊಂಡಿರುವ ಹೂಳಿನ

ಪ್ರಮಾಣ ಅಧಿಕವಾದಂತೆ ನೀರು ಶೇಖರಣೆಯ ಪ್ರಮಾಣ ಕಡಿಮೆ ಆಗುತ್ತ ಹೋದಂತೆ ಈ ಜಲಾಶಯದ ಆಯಸ್ಸು ಮುಗಿಯುತ್ತ ಹೋಗುತ್ತದೆ. ೧೯೮೩ರಲ್ಲಿ ಅಂದರೆ ಕೇವಲ ೩೦ ವರ್ಷಕ್ಕೆ ಈ ಜಲಾಶಯದ ತಾಕತ್ತು ಶೇ.೬೦ರಷ್ಟು ಮುಗಿದಿದೆ ಎಂದರ್ಥ. ಅಂದರೆ ಎಷ್ಟು ಪ್ರಮಾಣದಲ್ಲಿ ಹೂಳು ತುಂಬಿದೆ ಎಂದು ಕೆಲವು ಸಂಶೋಧನೆಗಳು ಹೇಳುತ್ತಿವೆ. ೧೦೦ ವರ್ಷಗಳಲ್ಲಿ ತುಂಬಬೇಕಾಗಿರುವ ಹೂಳಿನ ಪ್ರಮಾಣ ಕೇವಲ ೩೦ವರ್ಷಕ್ಕೆ ತುಂಬಿದೆ ಎಂದರೆ ಯೋಜಕರ ಅಂದಾಜಿನ ಲೆಕ್ಕಚಾರವು ಸಮಂಜಸವಾಗಿರುವುದಿಲ್ಲ. ಕೆಲವು ವರ್ಷಗಳ ಹಿಂದೆ ಯೋಜನಾ ಆಯೋಗದ ಒಂದು ಅಧ್ಯಯನವು ಹೂಳು ತುಂಬುವ ವೇಗ, ಆಯಸ್ಸು, ಯೋಜನೆ ಆರಂಭವಾಗುವ ಹೊತ್ತಿಗೆ ಹಾಕಿದ ಅಂದಾಜಿಗಿಂತ ೨.೧೭ಪಟ್ಟು ಹೆಚ್ಚಿದೆ ಎಂದು ಹೇಳಲಾಗುತ್ತದೆ(ಸಂಗೀತ.ಪಿ, ೨೦೦೭). ಸೆಟ್ಟಿಕೆರೆ ಡಮ್ಮಿಯಾ ಗಣಿಗೆ ಹೋಗುವ ರಸ್ತೆಯಲ್ಲಿದ್ದು, ಜಿ.ಜಿ. ಬ್ರದರ್ಸ್ ಪ್ಯಾಕ್ಟರಿಯ ಎದುರು ಭಾಗದ ರಸ್ತೆಯಲ್ಲಿ ಸುಮಾರು ಎರಡು ಕಿ.ಮೀ ಸಾಗಿದರೆ ಗುಡ್ಡಗಳ ಸಾಲು ಆರಂಭವಾಗುತ್ತದೆ. ಈ ಸಟ್ಟೆ ಕೆರೆಯು ವಿಜಯನಗರ ಸಾಮ್ರಾಜ್ಯದ ಕಾಲದಲ್ಲೆ ನಿರ್ಮಾಣವಾಗಿದ್ದು, ಸುಮಾರು ಐವತ್ತು ಎಕರೆಯಷ್ಟು ಸಮದಟ್ಟದ ಭೂಮಿ ಕೆರೆಗೆ ಪಾತ್ರವಾಗಿದೆ. ಮಳೆಗಾಲದಲ್ಲಿ ಗುಡ್ಡಗಾಡುಗಳ ಮೇಲೆ ಸುರಿಯುವ ನೀರು ಹರಿದು ಈ ಕೆರೆಗಳಲ್ಲಿ ಸೇರುತ್ತದೆ. ಈ ಕೆರೆ ಹಿಂದಿನ ಕಾಲದಲ್ಲಿ ತಡೆಕೆರೆ ಅಥವಾ ಒಂದು ಚೆಕ್ ಡ್ಯಾಂಗಳಿದ್ದಂತೆ, ಇದರ ಕೆಳಭಾಗದಲ್ಲಿ ವಡ್ಡರಹಳ್ಳಿ ಕೆರೆ ನಂತರ ಕಮಲಾಪುರದ ಕೆರೆಗಳಾಗಿವೆ. ಮಳೆಗಾಲದಲ್ಲಿ ಸುರಿಯುವ ನೀರನ್ನು ಹಲವಾರು ಹಂತಗಳಲ್ಲಿ ತಡೆ ಹಿಡಿದು ಪ್ರದೇಶದ ಜನರ ಉಪಯೋಗಕ್ಕೆ ಬಳಸುವಂತ ಕಲೆ ಕರಗತವಾಗಿತ್ತು. ಆದರೆ ಇಂದು ಸ್ಥಿತಿ ತೀರ ಭಿನ್ನವಾಗಿದೆ. ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಈ ಕೆರೆಯ ಕೋಡಿ ಹರಿದಿತ್ತು. ಆರಂಭದಲ್ಲಿ ತುಂಬಾ ಸಣ್ಣ ಬಿರುಕುಗಳಾಗಿದ್ದವು. ನಂತರ ಅದು ಬೆಳೆಯಿತು ಈಗ ಕೆರೆಯು ಚಿಕ್ಕ ಪ್ರಮಾಣದ ನದಿಯಷ್ಟು ವಿಶಾಲವಾಗಿದೆ. ಮಳೆ ಜಾಸ್ತಿಯಾದಾಗ ಈ ನದಿ ತುಂಬಿ ಹರಿಯುತ್ತದೆ. ಆದರೆ ಗಣಿ ಪ್ರದೇಶದ ಕಲ್ಲು ಬಿಡಿ ಮಣ್ಣುಗಳನ್ನು ಕೆಳಭಾಗದ ಹೊಲಗಳಲ್ಲಿ ಇದು ತುಂಬುತ್ತದೆ. ಜಾಸ್ತಿ ಮಳೆಯಾದಾಗ ಗಣಿ ಗುಡ್ಡಗಾಡು ಪ್ರದೇಶಗಳಿಂದ ಹರಿದು ಬರುವ ಖನಿಜಯುಕ್ತ ಮಣ್ಣು ಹರಿದು ಬಂದು ಕೆರೆಯಲ್ಲಿ ಹೂಳು ತುಂಬುವುದರಿಂದ ಜಲಾಶಯದಲ್ಲಿರುವ ನೀರು ಮಲೀನಗೊಂಡು ಜಲಾಚಾರ ಜೀವಿಗಳ ನಾಶ ಹಾಗೂ ಆ ಕೆರೆಯಲ್ಲಿರುವ ಜಲಾಚರಗಳನ್ನು ಮಾನವರು ಸೇವಿಸುವುದರಿಂದ ಅನೇಕ ರೋಗರುಜ್ಜಿನೆಗಳಿಗೆ ತುತ್ತಾಗುವುದು. ಕೆರೆಯ ನೀರನ್ನು ಕುಡಿಯಲು ಹಾಗೂ ಕೃಷಿಗೆ ಬಳಸಲು ಯೋಗ್ಯಕರವಾಗಿರುವುದಿಲ್ಲ ಇದಕ್ಕೆ ಗಣಿಗಾರಿಕೆಯ ಹೂಳು ತುಂಬಿರುವುದೇ ಪ್ರಬಲವಾದ ಕಾರಣವಾಗಿದೆ(ಚಂದ್ರಪೂಜಾರಿ.ಎಂ, ೨೦೧೧).

**೫.೪ ಅಂತರ್ಜಲದ ಅಭಾವ**

ಗಣಿಗಾರಿಕೆಯ ಪ್ರಭಾವದಿಂದ ಗ್ರಾಮೀಣ ಪ್ರದೇಶಗಳಲ್ಲಿ ಅಂತರ್ಜಲದ ಮಟ್ಟ ಕುಸಿಯುತ್ತಿದೆ. ಕೇವಲ ಹತ್ತು ವರ್ಷಗಳ ಕೆಳಗಿದ್ದ ನೀರಿನ ಮಟ್ಟ ಪ್ರಸ್ತುತ ದೊಡ್ಡ ಪ್ರಮಾಣದಲ್ಲಿ ಕುಸಿತ ಕಂಡಿವೆ. ಕೇವಲ ೬೦–೭೦ ಅಡಿಗಳಲ್ಲಿ ಸಿಗುತ್ತಿದ್ದ ನೀರು ಈಗ ೨೦೦–೨೫೦ ಅಡಿವರೆಗೂ ಇಳಿದಿದೆ. ಇದು ಗಣಿಗಾರಿಕೆಯ ಚಟುವಟಿಕೆಯೇ ಪ್ರಮುಖ ಕಾರಣವಾಗಿದೆಂದು ಅಧ್ಯಯನಗಳು ತಿಳಿಯಪಡಿಸುತ್ತದೆ. ರಾಷ್ಟ್ರೀಯ ಪರಿಸರ ಇಂಜನಿಯರಿಂಗ್ ಸಂಶೋಧನಾ ಸಂಸ್ಥೆಯ ಪ್ರಕಾರ, ಅಂತರ್ಜಲದ ಗುಣಮಟ್ಟ ಮತ್ತು ಪ್ರಮಾಣವು ಮೇಲ್ಮೈ ಜಲ ವಿಜ್ಞಾನ ಮಣ್ಣಿನ ರಚನೆ ಮತ್ತು ನೆಲದ ಸಸ್ಯಗಳು ಮುಂತಾದ ಅನೇಕ ಅಂಶಗಳ ಮೂಲಕ ಬಾಧಿತವಾಗಬಹುದು. ತೆರೆದ ಗಣಿಗಳಲ್ಲಿ ಅಂತರ್ಜಲ ಮರುಪೂರ್ಣದಿಂದಾಗಿ ನೀರಿನ ಪ್ರಮಾಣ ವೃದ್ಧಿಸಿದರೂ ಎಲ್ಲಿ ಗಣಿ ಕಾರ್ಯಾಚರಣೆ ಅಂತರ್ಜಲ ಮಟ್ಟದಿಂದ ಕೆಳಗಿದೆಯೊ ಅಲ್ಲಿ ನೀರು ನುಗ್ಗುತ್ತದೆ. ಆ ನೀರನ್ನು ಸಂಪೂರ್ಣವಾಗಿ ಹೊರ ಹಾಕಬೇಕಾಗುತ್ತದೆ ಅಥವಾ ಭಾಷ್ಮೀಕರಣದಿಂದ ನಷ್ಟವಾಗುತ್ತದೆ. ಈ ಕಾರಣದಿಂದಲೇ ಅಂತರ್ಜಲ ಮಟ್ಟ ಕುಸಿಯುತ್ತದೆ, ಇದರಿಂದಾಗಿ ಗಣಿ ಪ್ರದೇಶದ ಸುತ್ತಮುತ್ತಲು ಕೆಲವು ಕಿಲೋಮೀಟರ್ ದೂರದವರೆಗೆ ಜಲ ಮೂಲದ ನಷ್ಟ ಅಥವಾ ಬಾವಿ, ನೀರು ಬರಿದಾಗುವ ಸಾಧ್ಯತೆಗಳಿವೆ. ಇದೇ ರೀತಿ ಗಣಿಗಾರಿಕೆ ನಡೆದ ನಂತರವೂ ಅಥವಾ ಪುನರುಜ್ಜೀವನ ಪ್ರಕ್ರಿಯೆಯ ನಂತರವೂ ಅಂತರ್ಜಲದ ಪ್ರಮಾಣ ಪ್ರತಿಕೂಲವಾಗಿ

ಭಾದಿತವಾಗಬಹುದು. ಒಂದು ವೇಳೆ ಗಣಿಯು ಅಂತರ್ಜಲದ ಮರು ಪುರಾಣ ಪ್ರದೇಶದಲ್ಲೇ ಇದರೆ, ಮರುಪುರಾಣ ಲಕ್ಷಣಗಳು ಹಿಂಬರ್ತಿ ವಸ್ತುಗಳಿಂದಾಗಿ ಭಾದಿತವಾಗುತ್ತದೆ. ಇವು ಗಣಿ ಗುತ್ತಿಗೆ ಪಡೆದ ಪ್ರದೇಶದಲ್ಲಿನ ಮೇಲ್ಮೈ ಮಣ್ಣು ಮತ್ತು ತಲೆ ಹೊರೆಯ ಲಕ್ಷಣಗಳಿಗಿಂತ ಭಿನ್ನವೇ ಆಗಿರಲುಬಹುದು. ಆಮ್ಲಿಯ ಗುಣದಿಂದ ಕೂಡಿದ ಇಲ್ಲವೇ ತೆಲೆ ಹೊರೆಯಿಂದ ಉತ್ಪನ್ನವಾಗುವ ಕ್ಷುಲನ ಆಮ್ಲಿಯವಾಗಿರಬಹುದು ಅಥವಾ ಖನಿಜಾಂಶದಿಂದ ಉತ್ಕೃಷ್ಟವಾಗಿರಬಹುದು. ಅದರ ಗುಣಮಟ್ಟವನ್ನು ಅವಲಂಬಿಸಿ ಅಂತರ್ಜಲದ ಗುಣಮಟ್ಟವೂ ಭಾದಿತವಾಗಿರಬಹುದು. ಆದುದರಿದ ಅಂತರ್ಜಲದ ಕೊರತೆಯನ್ನು ನಿಯಂತ್ರಿಸಲು ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು ಅವಶ್ಯಕವಾಗಿದೆ. ಗಣಿಗಾರಿಕೆಯ ಚಟುವಟಿಕೆಯ ಪ್ರಭಾವದಿಂದಾಗಿ ಅಂತರ್ಜಲದ ನೀರಿನ ಮಟ್ಟ ಕುಸಿದಿರುವುದು ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಗಣಿ ಕೇಂದ್ರಿತ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪೂರ್ವದಲ್ಲಿ ೬೦–೭೦ ಅಡಿಗಳಲ್ಲಿ ಅಂತರ್ಜಲದಲ್ಲಿ ನೀರು ಲಭ್ಯವಾಗುತ್ತಿತ್ತು ಆದರೆ ಗಣಿ ನಡೆದಾಗ ಗಣಿ ಸ್ಫೋಟಕಗಳಿಂದ, ಭೂ ಕಂಪನಗಳಿಂದ ಅಂತರ್ಜಲದ ನೀರಿನ ಮಟ್ಟವು ೨೦೦ರಿಂದ ೨೫೦ ಅಡಿ ಆಳದವರೆಗೂ ನೀರಿನ ಮಟ್ಟ ಕಡಿಮೆಯಾಗುತ್ತಿವೆಂಬುವುದು ಗ್ರಾಮೀಣ ಪ್ರದೇಶದ ಕುಟುಂಬಗಳ ಮಾಹಿತಿದಾರರು ವ್ಯಕ್ತಪಡಿಸಿದ್ದಾರೆ.

**೫.೫ ಶಬ್ದ ಮಾಲಿನ್ಯ**

ಬಳ್ಳಾರಿ ಜಿಲ್ಲೆಯಲ್ಲಿ ಗಣಿಗಾರಿಕೋದ್ಯಮ ಚಟುವಟಿಕೆಗಳು ತೀವ್ರವಾಗಿರುವ ಹಿನ್ನಲೆಯಲ್ಲಿ ಶಬ್ದ ಮಾಲಿನ್ಯದ ಪ್ರಮಾಣ ಅಧಿಕವಾಗುತ್ತಿದೆ. ಗಣಿಕೇಂದ್ರಿತ ಪ್ರದೇಶದಲ್ಲಿ ಅದಿರನ್ನು ಅಗೆಯುವ ಪ್ರಮಾಣ ಅಧಿಕವಾಗುತ್ತಿರುವುದರ ಪರಿಣಾಮ ಶಬ್ದ ಮಾಲಿನ್ಯದ ಪ್ರಮಾಣ ಸಹಜವಾಗಿಯೇ ಸಾಮಾಜಿಕ ಬದುಕಿನ ಸಮಸ್ಯೆಯಾಗಿ ಕಾಣುತ್ತದೆ. ಗಣಿಗಾರಿಕೆ ಕೇಂದ್ರಿತ ಪ್ರದೇಶಗಳಲ್ಲಿ ಪ್ರತಿ ದಿನ ೧ ಗಂಟೆ ೧೫ ನಿಮಿಷದಿಂದ ೧ ಗಂಟೆ ೪೫ ನಿಮಿಷದವರೆಗೆ, ಗುಡ್ಡಗಳಲ್ಲಿ ಶಕ್ತಿಯುತ ಸ್ಫೋಟಕಗಳನ್ನು ಸಿಡಿಸುವುದು ಒಂದು ಬಗೆಯಲ್ಲಿ ಶಬ್ಧಮಾಲಿನ್ಯವಾದರೆ; ಅಧಿಕ ಪ್ರಮಾಣದಲ್ಲಿ ಹೊರೆ ತೆಗೆದ ಅದಿರುಗಳನ್ನು ಗಣಿಗಳಿಂದ ಮತ್ತು ಸ್ವಾಕ್‌ಯಾರ್ಡ್‌ಗಳಿಂದ ದೇಶದ ಬೇರೆ ಬೇರೆ ಕಡೆ ಸಾಗಿಸುವ ಲಾರಿ, ಟ್ರಕ್ ರೈಲು ಮೊದಲಾದ ವಾಹನಗಳು ಅತಿಯಾಗಿ ಓಡಾಡುತ್ತಿವೆ. ಈ ಅತಿಯಾದ ಓಡಾಟದಿಂದ ಬರುವ ಶಬ್ದಗಳು ಇಲ್ಲಿನ ಗ್ರಾಮೀಣ ಪ್ರದೇಶಗಳಲ್ಲಿ ಅತಿಯಾಗಿವೆ. ಆದರೆ ಗಣಿಗಾರಿಕೆಯ ಸ್ಥಗಿತತೆಯ ನಂತರವು ಈ ಶಬ್ದ ಮಾಲಿನ್ಯದ ಪ್ರಮಾಣವು ಮಂದಗತಿಯಲ್ಲಿರುವುದು ಈ ಪ್ರದೇಶದಲ್ಲಿ ಗೋಚರಿಸುತ್ತದೆ. ದಿನದ ೨೪ ಗಂಟೆಗಳು ಗಣಿ ಪ್ರದೇಶ ಶಬ್ದ ಮಾಲಿನ್ಯದಿಂದ ಕೂಡಿರುತ್ತದೆ. ವಾಹನಗಳ ಸಂಚಾರದಿಂದ ಉಂಟಾಗುವ ಶಬ್ದ ೯೦ ಡೆಸಿಬಲ್ ನಷ್ಟಿದೆಂದು  ಅಧ್ಯಯನಗಳು ದೃಡಪಡಿಸಿದೆ. ೩೦ ವರ್ಷದೊಳಗಿನ ಮನುಷ್ಯ ೭೫ ಡೆಸಿಬಲ್‌ಗಳ ಶಬ್ದವನ್ನು ಮಾತ್ರ ತೆಗೆದುಕೊಳ್ಳವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಅದರೆ ಹೆಚ್ಚು ವಯಸ್ಸಾದಂತೆ ಶಬ್ದದ ತೀವುತೆಯನ್ನು ತೆಗೆದುಕೊಳ್ಳುವ ಸಾಮರ್ಥ್ಯ ಅಥವಾ ಧಾರಣ ಶಕ್ತಿ ಕಡಿಮೆಯಾಗುತ್ತದೆ. ೬೦ ವರ್ಷದ ವ್ಯಕ್ತಿಗೆ ಕೇವಲ ೬ ಡೆಸಿಬಲ್ ಶಬ್ದವನ್ನು ತೆಗೆಯುವ ಸಾಮರ್ಥ್ಯ ಕಷ್ಟಕರವಾಗುತ್ತದೆ. ಹೀಗೆ ಶಬ್ದದ ತೀವ್ರತೆ ಹೆಚ್ಚಾದಂತೆ ದೇಹದ ಕೊಲೆಸ್ಟ್ರಾಲ್ ಪ್ರಮಾಣ ಹೆಚ್ಚಾಗಿ, ಶಬ್ದ ಮಾಲಿನ್ಯದಿಂದ ಗಾಬರಿ, ಭಯ, ಅಸಹಜ ಹೃದಯ ಸ್ಪಂದನ, ರಕ್ತದೊತ್ತಡ, ಕಿವುಡುತನ ಇವೇ ಮೊದಲಾದ ಸಮಸ್ಯೆಗಳು ಉಂಟಾಗುತ್ತದೆ. ಶಬ್ದದ ತೀವ್ರತೆ ೧೫೦ ಡೆಸಿಬಲ್ ನಷ್ಟಿದೆವೆಂದರೆ ಗರ್ಭಣಿ ಸ್ತ್ರೀಯರ ಗರ್ಭಪಾತ ಉಂಟಾಗುತ್ತದೆಂದು ತಜ್ಞರ ಅಧ್ಯಯನಗಳಿಂದ ದೃಡಿಪಡಿಸಿವೆ. ಶಬ್ದ ಮಾಲಿನ್ಯ ನಿಯಂತ್ರಣಾ ಕಾಯಿದೆಗಳು ಗಣಿಗಾರಿಕೆಯ ಚಟುವಟಿಕೆಯಲ್ಲಿ ತೊಡಗಿದಾಗ ಹಗಲು ಮತ್ತು ರಾತ್ರಿ ಯಾವ ಪ್ರಮಾಣದಲ್ಲಿ ಸ್ಫೋಟಿಸಬೇಕೆಂಬ ಸೂಚನೆಗಳನ್ನು ನೀಡಿದರೂ ಸಹ, ಈ ಎಲ್ಲ ನಿಯಮಗಳನ್ನು ಉಲ್ಲಂಘಿಸಿ ಅದಿರನ್ನು ಹೋರ ತೆಗೆಯಲು ಬಳಸುವ ಸ್ಫೋಟಕ ಸಾದನಗಳ ಶಬ್ದವು ಗಣಿ ಕೇಂದ್ರಿತ ಗ್ರಾಮೀಣ ಪ್ರದೇಶದ ಸುತ್ತ ಮುತ್ತಲಿನ ವಾಸವಾಗಿರುವ ಜನರನ್ನು ಮಾನಸಿಕವಾಗಿ ಘಾಸಿಗೊಳ್ಳಿಸುತ್ತದೆ. ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯಗಳ ಗಣಿಗಾರಿಕೆ ನಡೆದ ಸಂದರ್ಭದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ಮಧ್ಯೆಯೇ ಮಿತಿ ಮೀರಿದ ಒಡಾಡುತ್ತಿರುವ ಅತಿ ಭಾರ ಹೊರುತ್ತಿರುವ

ಲಾರಿ, ಟ್ರಕ್‌ಗಳ ಓಡಾಟದಿಂದ ಉಂಟಾಗಿರುವ ಶಬ್ದಮಾಲಿನ್ಯವು ಜನಸಾಮಾನ್ಯರಿಗೆ ಹಿಂಸೆ, ಅಪಘಾತ, ಸಾವು, ನೋವುಗಳಾಗಿವೆ ಇದರ ಕುರಿತು ಅಧ್ಯಯನ ನಡೆಯಬೇಕಾಗಿದೆ. ಗಣಿ ವಲಯಗಳ ಹೊರ ಹೊಲದಲ್ಲಿ ವಾಸಗೃಹದ ಪಕ್ಕದಲ್ಲಿಯೇ ರೈಲು ರಸ್ತೆಯಲ್ಲಿ ಸುಮಾರು ೬೦ ವ್ಯಾಗನ್‌ಗಳಿಗಿಂತ ಅಧಿಕವಾಗಿರುವ ಗೂಡ್ಸ್‌ಗಳು ಹತ್ತಾರು ಬಾರಿ ಹಾರನ್ ಹಾಕುತ್ತಾ ಗಡ ಗಡ ಶಬ್ದ ಮಾಡುತ್ತಿರುವುದರಿಂದ ಉಂಟಾಗುವ ಶಬ್ದಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ಗಮನಿಸಬಹುದು.

**ಕೋಷ್ಟಕ ೫.೧ ಗಣಿ ವಲಯಗಳ ವಾಹನಗಳಿಂದಾಗುವ ಶಬ್ದದ ಪ್ರಮಾಣ**

| ಕ್ರಸಂ. | ವಾಹನಗಳು | ಶಬ್ದದ ಪ್ರಮಾಣ (ಡೆಸಿಬಲ್‌ಗಳಲ್ಲಿ) |
|---|---|---|
| ೦೧ | ಮೋಟಾರ್ ಸೈಕಲ್ ಮತ್ತು ಸ್ಕೂಟರ್ | ೮೦ರಿಂದ ೮೬ |
| ೦೨ | ಮೋಟಾರ್ ಕಾರ್ | ೮೪ |
| ೦೩ | ೩.೫ ಟನ್ ಟ್ರಕ್ (ಭಾರಿ) | ೮೦ |
| ೦೪ | ೧೨ ಟನ್‌ಗಿಂತ ಅಧಿಕ ಟನ್ | ೯೨ |
| ೦೫ | ೩.೫ ಟನ್ ಭಾರ ಬಸ್ | ೮೦ |
| ೦೬ | ೩.೫ರಿದ ೧೨ ಟನ್ ಟ್ರಕ್ | ೯೨ |
| ೦೭ | ೩.೫. ಟನ್‌ಗಿಂತ ಹೆಚ್ಚು ಬಾರದ ಬಸ್ | ೮೯ |

**ಮೂಲ : ಸಂಗೀತಿ ಪಿ. ಗಣಿಗಾರಿಕಾ ಮತ್ತು ಪರಿಸರ, ೨೦೦೭ ಪು.ಸಂ ೬೪**

ಈ ಮೇಲಿನ ಕೋಷ್ಟಕವು ವಿವಿಧ ವಾಹನಗಳು ಶಬ್ದ ಉಂಟು ಮಾಡುವ ಪ್ರಮಾಣವನ್ನು ಡೆಸಿಬಲ್‌ಗಳಲ್ಲಿ ನೀಡಲಾಗಿದೆ. ೧೨ ಟನ್ ಅಧಿಕ ಟನ್ ಹೊಂದಿರುವ ವಾಹನವು ೯೨ ಡೆಸಿಬಲ್ ಪ್ರಮಾಣದಷ್ಟು ಶಬ್ದವನ್ನು ಉಂಟು ಮಾಡುತ್ತದೆ. ೩.೫ ಟನ್ ಟ್ರಕ್‌ಗಳು ೮೦ ಡೆಸಿಬಲ್ ಪ್ರಮಾಣದಷ್ಟು ಶಬ್ದವನ್ನು ಉಂಟು ಮಾಡುತ್ತದೆ. ಮೋಟರ್ ಸೈಕಲ್ ಮತ್ತು ಸ್ಕೂಟರ್ ಹಾಗೂ ೩.೫ ಟನ್ ಭಾರದ ಬಸ್ ೮೦ರಿಂದ ೮೬ರಷ್ಟು ಡಿಸಿಬಲ್ ಶಬ್ದವನ್ನು ಕಡಿಮೆ ಪ್ರಮಾಣದಲ್ಲಿ ಉಂಟು ಮಾಡಿದ್ದರೆ, ೩.೫ಟನ್ ರಿಂದ ೧೨ ಟನ್ ಭಾರವಿರುವ ಟ್ರಕ್‌ಗಳು ೯೨ ಡೆಸಿಬಲ್‌ನಷ್ಟು ಅಧಿಕ ಪ್ರಮಾಣದಲ್ಲಿ ಶಬ್ದವನ್ನು ಉಂಟು ಮಾಡುತ್ತದೆಂದು ಈ ಕೋಷ್ಟಕದ ಮೂಲಕ ಗಮನಿಸಬಹುದಾಗಿದೆ. ಬಳ್ಳಾರಿ, ಹೊಸಪೇಟೆ, ಸಂಡೂರು ವಲಯದ ಗಣಿಗಾರಿಕೆಯಿಂದ ಮಣ್ಣಿನ ಧೂಳು-ಕಲ್ಲಿನ ಪುಡಿಗಳಿಂದಷ್ಟೇ ವಾಯುಮಾಲಿನ್ಯ ಸಂಭವಿಸುವುದಿಲ್ಲ. ವಾಹನಗಳು ಹೊರಹಾಕುವ ಹೊಗೆಯಿಂದ ಈ ಮಾಲಿನ್ಯ ಆಗುತ್ತದೆ. ವಾಹನಗಳ ಅತಿ ಒಡಾಟದಿಂದ ವಾಯು ಮಾಲಿನ್ಯದ ಜೊತೆಗೆ ಟ್ರಾಫಿಕ್ ಜಾಮಾಗುತ್ತಿರುವುದು ದೈನಂದಿನ ಪ್ರಯಾಣಕ್ಕೂ ತೊಂದರೆ ಉಂಟಾಗಿದೆ. ಇದು ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದಲ್ಲಾದರೆ, ಗಣಿ ಸ್ಥಗಿತತೆಯ ನಂತರವು ಈ ಪರಿಣಾಮಗಳು ಮಂದಗತಿಯಲ್ಲಿ ಮುಂದುವರಿದಿದೆ.

**೫.೬ ಪರಿಸರ ಮತ್ತು ಭೂ ಕಂಪನ**

ಮನುಷ್ಯ ತನ್ನ ಅಗತ್ಯತೆಯನ್ನು ಪೂರೈಸಿಕೊಳ್ಳುವ ಹಿತ ದೃಷ್ಟಿಯಿಂದ ಸುತ್ತಮುತ್ತಲಿನ ಪರಿಸರವನ್ನು ಮಿತಿ ಮೀರಿ ಬಳಕೆ ಮಾಡುತ್ತಿರುವುದು ಅವನ ವಿನಾಶ ಖಂಡಿತ ಎಂದು ಪರಿಸರ ವಿಜ್ಞಾನಿಗಳು ಸೂಚಿಸಿದ್ದಾರೆ. ಇಂತಹ ಪರಿಸರ ನಾಶದಿಂದಾಗಿ ಉಂಟಾಗುವ ನೈಸರ್ಗಿಕ ವಿಕೋಪಗಳಲ್ಲಿ ಭೂ ಕಂಪನವೂ ಒಂದಾಗಿದೆ. ಭೂಕಂಪನಗಳು ಉಂಟಾಗಲು ಕಾರಣವಾಗುವ ಅಂಶಗಳನ್ನು ಐದು ವಿಧಗಳಿಂದ ಅರ್ಥೈಸಿಕೊಳ್ಳಬಹುದು. ೧) ಭೂ ಅಂತರ್ ರಚನಾ ಸಂಬಂಧಿತ ಭೂಕಂಪನ ೨)

ಜ್ವಾಲಾಮುಖಿ ಸಂಬಂಧಿತ ಭೂಕಂಪನಗಳು ೩) ಭೂಪಾತ ಸಂಬಂಧಿತ ಭೂಕಂಪನಗಳು ೪) ಸ್ಫೋಟ ಸಂಬಂಧಿತ ಭೂಕಂಪನಗಳು ೫) ಜಲಾಶಯಗಳಲ್ಲಿ ನೀರಿನ ಶೇಖರಣೆಯಿಂದಾಗುವ ಭೂಕಂಪನಗಳು. ಈ ಮೇಲಿ ಭೂಕಂಪನಗಳು ಉಂಟಾಗಲು ಕಾರಣವಾಗಿದ್ದು, ಸ್ಫೋಟ ಹಾಗೂ ಜಲಾಶಯಗಳಲ್ಲಿ ನೀರಿನ ಶೇಖರಣೆಯಿಂದ ಭೂ ಕಂಪನವಾಗಲು ಗಣಿಗಾರಿಕೆಯೇ ಬಳ್ಳಾರಿ, ಹೊಸಪೇಟೆ, ಸಂಡೂರು ವಲಯಗಳಲ್ಲಿ ಕಾರಣವಾಗಿದೆ. ಗಣಿಗಾರಿಕೆ ನಡೆದಾಗ ಗಣಿ ಸ್ಫೋಟದಿಂದ ಸಂಭವಿಸುವ ಭೂಕಂಪನಗಳ ಮತ್ತು ಜಲಾಶಯ ನೀರಿನ ಶೇಖರಣೆಯಿಂದಾಗುವ ಭೂಕಂಪನದ ಲಕ್ಷಣಗಳು ಗಣಿ ವಲಯಗಳಲ್ಲಿ ಗೋಚರಿಸುತ್ತದೆ. ಬಳ್ಳಾರಿ, ಸಂಡೂರು, ಹೊಸಪೇಟೆ ವಲಯಗಳ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರನ್ನು ಹೊರತೆಗೆಯಲು ಗುಡ್ಡಗಾಡು ಪ್ರದೇಶದಲ್ಲಿ ಸ್ಫೋಟ ಮಾಡುವುದರಿಂದ ವಿವಿಧ ಪ್ರಮಾಣಗಳಲ್ಲಿ ಪ್ರತಿ ನಿತ್ಯ ೨೦–೩೦ ಕಿ.ಮೀ. ದೂರದ ಭೂಮಿ ಕಂಪಿಸುತ್ತದೆ. ಬೈರಿಗೆಗಳಿಂದ ರಂಧ್ರಗಳನ್ನು ಕೊರೆದು ಆಳದಲ್ಲಿ ಸ್ಫೋಟಕಗಳನ್ನು ತುಂಬಿ ದೊಡ್ಡ ಪ್ರಮಾಣದಲ್ಲಿ ಸ್ಫೋಟಕಗಳನ್ನು ಸಿಡಿಯುವುದರಿಂದ ಮಣ್ಣು ಮತ್ತು ಶಿಲೆಗಳು ಸ್ಫೋಟಗೊಂಡು ದೊಡ್ಡ ಪ್ರಮಾಣದ ಅದಿರನ್ನು ಸಂಗ್ರಹಿಸುವ ಕಾರ್ಯ ಈ ಗಣಿ ವಲಯ ಭಾಗಗಳಲ್ಲಿ ಕಂಡುಬರುತ್ತದೆ. ಇಂತಹ ಸ್ಫೋಟಕಗಳಿಂದ ಉಂಟಾಗುವ ಭೂಕಂಪನ ತೀವ್ರತೆ ಅಧಿಕವಾಗಿರುವುದು ಅಲ್ಲಿನ ಸ್ಮಾರಕಗಳು, ದೇವಾಲಯಗಳು, ವಾಸ ಗೃಹಗಳು, ಕೆರೆ–ಕಾಲುವೆ, ಆಣೆಕಟ್ಟುಗಳು ನಾಶವಾಗುವ ಹಾದಿಯಲ್ಲಿದೆ. ೧೯೬೭ರಲ್ಲಿ ಭಾರತದ ಕೊಯ್ನಾ ಭೂಕಂಪನಕ್ಕೆ ಮುಖ್ಯ ಕಾರಣ ಅಲ್ಲಿನ ಜಲಾಶಯದಲ್ಲಿ ಸಂಗ್ರಹಿಸಿದ ನೀರಿನ ಪ್ರಮಾಣ ಎಂಬುವುದೇ ಭೂ ವಿಜ್ಞಾನಿಗಳ ಅಭಿಪ್ರಾಯವಾಗಿದೆ. ಕೊಯ್ನಾ ಜಲಾಶಯವು ಸೇರಿದಂತೆ ದೇಶದ ಸುಮಾರು ೧೩ಕ್ಕಿಂತ ಹೆಚ್ಚಿನ ಸ್ಥಳಗಳಲ್ಲಿ ಜಲಾಶಯ ಕಟ್ಟಿದ ಮೇಲೆ ಅದೇ ಸ್ಥಳದ ಸುತ್ತಮುತ್ತ ಭೂಕಂಪನಗಳಾಗಿವೆ. ಅಷ್ಟೇ ಅಲ್ಲದೇ ಜಲಾಶಯಗಳಲ್ಲಿ ನೀರಿನ ಶೇಖರಣೆಯಿಂದಾಗಿ ಭೂಕಂಪನಗಳು ಸಂಭವಿಸುತ್ತದೆ ಎಂದು ಭೂ ವಿಜ್ಞಾನಿಗಳು ಎಚ್ಚರವನ್ನು ಕೊಡುತ್ತಾರೆ. ಹಾಗೆ ನೆಲದ ಅಳತೆ ನೀರು ಭೂ ಚಿಪ್ಪಿನ ಶಿಲೆಯೊಳಗೆ ಇಳಿದು ಅವುಗಳಲ್ಲಿ ಅನೇಕ ಪರಿಣಾಮಗಳನ್ನು ಉಂಟು ಮಾಡಿ ಭೂಕಂಪವಾಗಲು ದೊಡ್ಡ ಜಲಾಶಯಗಳು ಕಾರಣಗಳಾಗುತ್ತವೆಂದು ಸಂಶೋಧನಾ ಅಧ್ಯಯನಗಳು ಸೂಚಿಸುತ್ತದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಸಂಡೂರು ವಲಯಗಳ ಗಣಿಗಾರಿಕೆ, ಕೃಷಿ ಮತ್ತು ಗಣಿ ಉದ್ಯಮಕ್ಕಾಗಿ ನೀರನ್ನು ಸಂಗ್ರಹಿಸಲು ತುಂಗಭದ್ರಾ ಜಲಾಶಯಗಳು ಪ್ರಕೃತಿಯ ಅಸಮತೋಲನಕ್ಕೆ ಮನುಷ್ಯ ಎಸಗಿದ ಸ್ವಯಂಕೃತ ಕೃತ್ಯಗಳೇ ಉತ್ತಮ ನಿದರ್ಶನವಾಗಿದೆ. ಈ ಗಣಿ ವಲಯಗಳಲ್ಲಿ ಒಂದೆಡೆ ಕಿ.ಮೀ ಉದ್ದದ ಗುಡ್ಡಗಳನ್ನು ಬರಿದು ಮಾಡಿರುವ ಚಟುವಟಿಕೆ, ಮತ್ತೊಂದೆಡೆ ಹರಿದು ಹೋಗುವ ನದಿಗೆ ಅಡ್ಡವಾಗಿ ಆಣೆಕಟ್ಟನ್ನು ಕಟ್ಟಿ ಸಂಗ್ರಹಿಸಿರುವ ನೀರಿನ ಹೊರೆಯಾಗಿರುವುದು ಹಾಗೂ ಆಧುನಿಕ ಕೃಷಿ ಬಳಕೆಯ ರಸಾಯನಿಕ ಗೊಬ್ಬರಗಳು, ಭೂಕಂಪದಂತಹ ಭಯಾನಕ ಪ್ರಕೃತಿ ವಿಕೋಪಗಳಿಗೆ ಕಾರಣವಾಗುವ ಅಂಶಗಳಾಗಿವೆ.

ಭೂಕಂಪನಗಳು ಉತ್ತರ ಭಾರತಕ್ಕೆ ಹೋಲಿಸಿದರೇ ದಕ್ಷಿಣ ಭಾರತದಲ್ಲಿ ಕೆಲವು ಮುಖ್ಯ ಭೂಕಂಪನಗಳಾಗುವ ಸ್ಥಳಗಳ ಬಗೆಗೆ ನಡೆದಿರುವ ಅಧ್ಯಯನವನ್ನು ೧೯೪೪ರಲ್ಲಿ ಆಯೋಜಿಸಿದ ಕನ್ನಡ ವಿಶ್ವವಿದ್ಯಾಲಯದಲ್ಲಿ 'ಕರ್ನಾಟಕ ಪರಿಸರ ಎಂಬ ವಿಚಾರ ಸಂಕಿರಣದಲ್ಲಿ ಶ್ರೀ ನಿಜಗುಣಪ್ಪ ಎಂಬ ತಜ್ಞರು ಪ್ರಸ್ತಾಪಿಸಿದ್ದಾರೆ. ಭಾರತದಲ್ಲಿ ಸಂಭವಿಸುತ್ತಿರುವ ಭೂಕಂಪನಗಳ ಬಗ್ಗೆ ಅಧ್ಯಯನ ಮತ್ತು ಸಂಶೋಧನೆಯನ್ನು ಭಾರತೀಯ ಭೂವೈಜ್ಞಾನಿಕ ಸಂಸ್ಥೆ ನಡೆಸುತ್ತಾ ಬಂದಿದೆ. ಇದರ ಜೊತೆಗೆ ಭಾರತೀಯ ವಾತಾವರಣ ಶಾಸ್ತ್ರ ವಿಭಾಗವೂ ಕಂಪನ ಮಾಪಕ ಕೇಂದ್ರಗಳನ್ನು ದೇಶದ ಕೆಲವು ಪ್ರದೇಶಗಳಲ್ಲಿ ಸ್ಥಾಪಿಸಿ ಮಾಹಿತಿಯನ್ನು ಸಂಗ್ರಹಿಸುತ್ತಿದೆ. ದೇಶದಲ್ಲಿ ವಿಜ್ಞಾನ ಮುನ್ನಡೆಯಾಗುತ್ತಿರುವಂತೆ,

ವಿಶ್ವವಿದ್ಯಾಲಯದ ಬೇರೆ ಬೇರೆ ಸಂಸ್ಥೆಗಳು ಕಂಪನ ಶಾಸ್ತ್ರದ ಬಗ್ಗೆ ಅಧ್ಯಯನಗಳನ್ನು ಆರಂಭಿಸಿವೆ. ೧೯೬೫ರಲ್ಲಿ ಬೆಂಗಳೂರಿನಿಂದ ೭೦ಕಿ.ಮೀಗಳ ಉತ್ತರಕ್ಕಿರುವ ಗೌರಿಬಿದನೂರಿನಲ್ಲಿ ಕಂಪನ ಜಾಲಕೇಂದ್ರವನ್ನು ಡಾ.ಬಾಬಾ ಅವರ ನೇತೃತ್ವದಲ್ಲಿ ಪ್ರಾರಂಭಿಸಲಾಯಿತು. ಈ ಕೇಂದ್ರದಲ್ಲಿ ನಿರಂತರವಾಗಿ ಎಲ್ಲಾ ಕಂಪನಿಗಳ ತೀವ್ರತೆಯನ್ನು ದಾಖಲಿಸಲಾಗುತ್ತಿದೆ. ಕೋಲಾರದ ಚಿನ್ನದ ಗಣಿ, ಕುದುರೆಮುಖ ಕಬ್ಬಿಣದ ಗಣಿ, ಸಂಡೂರು, ಹೊಸಪೇಟೆ, ಬಳ್ಳಾರಿ ಕಬ್ಬಿಣದ ಮತ್ತು ಮ್ಯಾಂಗನೀಸ್ ಗಣಿಗಳ ಪ್ರದೇಶಗಳಲ್ಲಿ ಖನಿಜಗಳನ್ನು ಹೊರೆ ತೆಗೆಯಲು ಸ್ಫೋಟಕ ಶಿಲೆಗಳನ್ನು ಸಿಡಿಸುವುದರಿಂದ ಕಂಪನಗಳಾಗುತ್ತವೆ. ಗೌರಿ ಬಿದನೂರಿನ ಕಂಪನ ದಾಖಲಾತಿಯಲ್ಲಿ ಈ ಗಣಿ ಕಂಪನಗಳು ಹಾಗೂ ಸ್ತರ ಭಂಗಗಳ ಸಂಬಂಧಿತ ಕಂಪನಗಳು ಸೇರಿಸುವುದರಿಂದ ಈ ಪ್ರದೇಶಗಳಲ್ಲಿ ಸ್ತರ ಭಂಗಗಳ ಸಂಬಂಧಿತ ಕಂಪನಗಳ ಹೊರನಾಡಿಗಳನ್ನು ಬೇರ್ಪಡಿಸಿಲ್ಲ. ಆದರೆ ಕರ್ನಾಟಕದ ಬೇರೆ ಬೇರೆ ಕಂಪನ ಮೂಲಗಳನ್ನು ಬೇರ್ಪಡಿಸುವ ಸಂಶೋಧನಾ ಯೋಜನೆಯನ್ನು ಗುಲ್ಬರ್ಗಾ ವಿಶ್ವವಿದ್ಯಾಲಯದ ಅನ್ವಯಿಕ ಭೂವಿಜ್ಞಾನದ ವಿಭಾಗದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಈ ಮೇಲಿನ ಅಧ್ಯಯನಗಳ ಪ್ರಕಾರ ಜಿಲ್ಲೆಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕು ಪ್ರದೇಶಗಳಲ್ಲಿ ಭೂಕಂಪನದಂತಹ ಸಂಗತಿಗಳು ಮರುಕಳಿಸಬಹುದಾದ ದುಸ್ಥಿತಿಯಾಗಿದೆ.

ಗಣಿಗಾರಿಕೆ ನಡೆದ ಸಂದರ್ಭದಲ್ಲಿ, ಕೃಷಿ ಭೂಮಿಯಲ್ಲಿ ಗಣಿಗಾರಿಕೆಯನ್ನು ನಡೆಸಿ ನಂತರ ಅದನ್ನು ಹಾಗೆ ಬಿಟ್ಟು ಹೋಗಿರುವುದು ಯಾವುದೇ ಕೃಷಿ ಚಟುವಟಿಕೆಗೆ ಉಪಯೋಗವಾಗುತ್ತಿಲ್ಲ. ಗಣಿ ಸ್ಥಗಿತತೆಯ ನಂತರವೂ ಈ ಸ್ಥಿತಿ ಅಲ್ಪ ಮಟ್ಟದಲ್ಲಿ ಕಂಡುಬರುತ್ತದೆ. ಈ ಗಣಿ ವಲಯ ಜಾಗದಲ್ಲಿ ಮಳೆ ಬಿದ್ದಾಗ ಗಣಿ ಚಟುವಟಿಕೆಯಿಂದ ಭೂಮಿಯು ಸಡಿಲಗೊಂಡು ಕೆಲವು ಕಡೆ ಕುಸಿತಗೊಂಡು ಭೂಪಾತ ಉಂಟಾಗಿದೆ. ತೊರೆದು ಹೋದ ಗಣಿಗಳ ಮಣ್ಣು, ತ್ಯಾಜ್ಯ, ಮಳೆ ನೀರಿನ ಮೂಲಕ ಕೊಚ್ಚಿಕೊಂಡು ಜಲತಾಣಗಳಲ್ಲಿ ಹೂಳಾಗಿ ತುಂಬಿಕೊಳ್ಳುತ್ತದೆ. ಇದರಿಂದ ಪರೋಕ್ಷವಾಗಿ ಜಲಮಾಲಿನ್ಯ ಸೇರಿದಂತೆ ಆರೋಗ್ಯ ಸಂಬಂಧಿ ಸಮಸ್ಯೆಗಳಿಗೆ ಕಾರಣವಾಗಿದೆ. ಬೆಟ್ಟಗುಡ್ಡಗಳಲ್ಲಿ ತೊರೆದ ಗಣಿಗಾರಿಕೆಯ ತ್ಯಾಜ್ಯ, ಧೂಳುಗಳಿಂದ ಬೇಸಿಗೆ ಕಾಲದಲ್ಲಿ ಇಡೀ ಪರಿಸರಕ್ಕೆ ಮಾರಕವಾಗಿ ಪರಿಣಮಿಸಿದೆ.

ಈ ಮೇಲಿನ ಎಲ್ಲಾ ಅಧ್ಯಯನಗಳು ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕಿನಲ್ಲಿ ಗಣಿಗಾರಿಕೆ ನಡೆದಾಗ, ನಂತರದಲ್ಲೂ ಗಣಿ ಪ್ರದೇಶಗಳಲ್ಲಿ ಭೂಕಂಪನಗಳು ಸಂಭವಿಸಿರುವ ವಿಕೋಪಗಳಾಗಿವೆಂದು ದೃಢಪಡಿಸುತ್ತದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಗಣಿಗಾರಿಕೆಯಿಂದಾಗಿ ಗ್ರಾಮೀಣ ಪ್ರದೇಶದ ಪರಿಸರದ ಮೇಲಾದ ಪರಿಣಾಮವನ್ನು ಅಧ್ಯಯನ ಮಾಡಲು ನೆಲ ಮತ್ತು ಜಲ ಗೋಚರಿಸುವ ಸೂಚಕಗಳನ್ನು ಬಳಸಿಕೊಳ್ಳಲಾಗಿದೆ. ನೆಲ ಮತ್ತು ಜಲದ ಆಯಾಮದಲ್ಲಿ ಧೂಳು, ಹೂಳು, ಭೂಸವೇತ, ಮನೆ ಬಿರುಕುಗಳಂತಹ ಉಪಸೂಚಕಗಳನ್ನು ಬಳಸಿಕೊಂಡು ಗಣಿಯಿಂದ ಪರಿಸರದ ಮೇಲಾಗಿರುವ ಪರಿಣಾಮಗಳನ್ನು ಅರಿಯಲು ಗ್ರಾಮೀಣ ಪ್ರದೇಶದ ಬಳ್ಳಾರಿ, ಸಂಡೂರು, ಹೊಸಪೇಟೆ ಗಣಿ ವಲಯದ ಗ್ರಾಮಗಳಲ್ಲಿ ಕುಟುಂಬಗಳನ್ನು ಸಮೀಕ್ಷೆ ಒಳಪಡಿಸಿ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಕುಟುಂಬಗಳಿಂದ ತಿಳಿದು ಬಂದ ಫಲಿತಾಂಶಗಳ ಆಧಾರದ ಮೇಲೆ ಪರಿಸರದ ಪರಿಣಾಮಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**೫.೭ ಗಣಿಧೂಳು**

ಬಳ್ಳಾರಿ, ಹೊಸಪೇಟೆ, ಸಂಡೂರು ಗಣಿ ವಲಯಗಳ ಗ್ರಾಮೀಣ ಪ್ರದೇಶದಲ್ಲಿ ಪರಿಸರದಲ್ಲಾಗುವ ಧೂಳಿಗೆ ಸಂಬಂಧಿಸಿದಂತೆ ೨೭೦ ಕುಟುಂಬಗಳು ಅಂದರೆ ಪ್ರತಿ ತಾಲ್ಲೂಕಿನಲ್ಲಿ ೯೦ ಕುಟುಂಬಗಳನ್ನು ಸಮೀಕ್ಷೆ ಒಳಪಡಿಸಿದಾಗ ಬಂದಿರುವ ಫಲಿತಾಂಶದ ದತ್ತಾಂಶಗಳನ್ನು ಕೋಷ್ಟಕ ೫.೨ರಲ್ಲಿ ದಾಖಲಿಸಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ ೫.೨ ಗಣಿ ವಲಯಗಳಲ್ಲಿ ಧೂಳಿನ ಸಮಸ್ಯೆಯಿಂದ ಬಳಲುತ್ತಿರುವ ಕುಟುಂಬಗಳ ಪ್ರಮಾಣ**

| ಕ್ರಸಂ | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೧ | ನಿಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಧೂಳು ಉಂಟಾಗಿದೆಯೇ? | | | | | | |
| | ಹೌದು | ೮೩ | ೯೨.೨೩ | ೭೨ | ೮೦ | ೭೩ | ೮೧.೧೧ |
| | ಇಲ್ಲ | ೦೭ | ೦೭.೭೭ | ೧೮ | ೨೦ | ೧೭ | ೧೮.೮೯ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |
| ೦೨ | ಧೂಳು ಉಂಟಾಗಲು ಕಾರಣ | | | | | | |
| | ಗಣಿಗಾರಿಕೆ | ೨೭ | ೩೨.೫೩ | ೨೦ | ೨೮.೧೬ | ೧೮ | ೨೪.೬೫ |
| | ಗಣಿಸ್ಫೋಟ | ೨೨ | ೨೬.೫೧ | ೧೬ | ೨೨.೫೫ | ೨೦ | ೨೭.೩೯ |
| | ಗಣಿವಾಹನ ಒಡಾಟ | ೨೭ | ೩೨.೫೩ | ೧೩ | ೧೮.೩೧ | ೧೩ | ೧೭.೮೨ |
| | ಗಣಿಕೈಗಾರಿಕಾ | ೦೭ | ೦೮.೪೩ | ೨೨ | ೩೦.೯೮ | ೨೨ | ೩೦.೧೪ |
| | **ಒಟ್ಟು** | **೮೩** | **೧೦೦** | **೭೧** | **೧೦೦** | **೭೩** | **೧೦೦** |
| ೦೩ | ಈ ಧೂಳಿನಿಂದಾಗಿ ಯಾರ ಮೇಲೆ ಪರಿಣಾಮ ಬೀರಿದೆ? | | | | | | |
| | ಜನರ ಮೇಲೆ | ೨೪ | ೨೬.೬೬ | ೩೧ | ೩೪.೪೪ | ೩೩ | ೩೬.೬೬ |
| | ಕೃಷಿ ಮೇಲೆ | ೨೭ | ೩೦.೦೧ | ೨೭ | ೩೦.೦೧ | ೨೫ | ೨೭.೨೭ |
| | ಪರಿಸರ ಮೇಲೆ | ೨೩ | ೨೫.೫೫ | ೨೦ | ೨೨.೨೩ | ೧೯ | ೨೧.೧೩ |
| | ಜಾನುವಾರು ಮೇಲೆ | ೧೬ | ೧೭.೭೮ | ೧೭ | ೧೩.೩೩ | ೧೩ | ೧೪.೪೪ |
| | **ಒಟ್ಟು** | **೯೦** | **೧೦೦** | **೯೦** | **೧೦೦** | **೯೦** | **೧೦೦** |

**ಮೂಲ : ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಗಣಿ ವಲಯಗಳ ಗ್ರಾಮೀಣ ಪ್ರದೇಶದಲ್ಲಿ ಉಂಟಾಗಿರುವ ಧೂಳಿನ ಪ್ರಮಾಣವನ್ನು, ಧೂಳು ಉಂಟಾಗಲು ಕಾರಣಗಳನ್ನು ಹಾಗೂ ಈ ಧೂಳಿನಿಂದಾಗಿ ಯಾರ ಮೇಲೆ ಪರಿಣಾಮಗಳು ಬೀರಿದೆಂಬುದನ್ನು ಕುಟುಂಬಗಳ ಶೇಕಡವಾರುಗಳನ್ನು ತೋರಿಸುತ್ತದೆ.

ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಲ್ಲಿ ೮೩ ಕುಟುಂಬಗಳು ಶೇ.೯೨.೨೩ರಷ್ಟು ಧೂಳು ಉಂಟಾಗಿದೆ, ಇನ್ನುಳಿದ ೦೭ ಕುಟುಂಬಗಳು ಶೇ.೦೭.೭೭ರಷ್ಟು ಪರಿಸರದಲ್ಲಿ ಧೂಳಿನ ಸಮಸ್ಯೆ ಆಗಿಲ್ಲ ಎಂದು ಹೇಳಿದ್ದಾರೆ. ಆದರೆ ಶೇ.೯೨.೨೩ರಷ್ಟು ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ಧೂಳಿನ ಸಮಸ್ಯೆಯಿದೆ. ಈ ಧೂಳಿನ ಸಮಸ್ಯೆಗೆ ಕಾರಣಗಳನ್ನು ಕುಟುಂಬಗಳಲ್ಲಿ ನೋಡುವುದಾದರೆ, ಗಣಿಗಾರಿಕೆ ಚಟುವಟಿಕೆಯಿಂದ ಶೇ.೩೨.೫೩ರಷ್ಟು, ಗಣಿ ಸ್ಫೋಟಗಳಿಂದ ಶೇ.೩೨.೫೧ರಷ್ಟು, ಗಣಿ ಕೈಗಾರಿಕೆಗಳಿಂದ ಶೇ.೦೮.೪೩ರಷ್ಟು ಗ್ರಾಮೀಣ ಪ್ರದೇಶದಲ್ಲಿ ಧೂಳು ಸಮಸ್ಯೆ ಉಂಟಾಗಲು ಕಾರಣಗಳಾಗಿವೆ ಎಂಬುದು ಈ ಕುಟುಂಬಗಳಿಂದ ತಿಳಿದುಬರುತ್ತದೆ. ಗಣಿ ಚಟುವಟಿಕೆ ಹಾಗೂ ಗಣಿ ಸ್ಫೋಟಗಳಿಂದ ಈ ವಲಯಗಳಲ್ಲಿ ಧೂಳು, ಉಂಟಾಗಲು ಹೆಚ್ಚಿನ ಪ್ರಮಾಣದ ಕಾರಣಗಳಾಗಿವೆಂಬುದು ತಿಳಿದು ಬಂದಿದೆ. ಹೀಗೆ ಪರಿಸರದಲ್ಲಿ ಉಂಟಾದ ಧೂಳಿನಿಂದ ಯಾರ ಮೇಲೆ ಪರಿಣಾಮ ಬೀರಿದೆ ಎಂಬ ಅಂಶವನ್ನು ಅವಲೋಕಿಸಿದಾಗ, ಈ ಕುಟುಂಬಗಳು ಗಣಿ ಧೂಳಿನ ಸಮಸ್ಯೆಯು ಜನರ ಮೇಲೆ ಶೇ.೨೬.೬೬ರಷ್ಟು, ಕೃಷಿ ಮೇಲೆ ಶೇ.೩೦.೦೧ರಷ್ಟು, ಪರಿಸರದ ಮೇಲೆ ಶೇ.೨೫.೫೫ರಷ್ಟು, ಹಾಗೂ ಜಾನುವಾರುಗಳ ಮೇಲೆ ಶೇ.೧೭.೭೮ರಷ್ಟು ಪರಿಣಾಮಗಳಾಗಿವೆ. ಈ

ಧೂಳಿನ ಸಮಸ್ಯೆಯ ಪರಿಣಾಮಗಳ ಪ್ರಮಾಣ ಅಧಿಕವಾಗಿ (ಶೇ.೩೦.೦೧) ಕೃಷಿಯ ಮೇಲಾಗಿದೆ ಎಂಬ ಅಂಶ ಕುಟುಂಬಗಳ ಮಾಹಿತಿಯಿಂದ ಕಂಡುಕೊಳ್ಳಲಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಧೂಳಿನ ಸಮಸ್ಯೆ ಪರಿಸರದಲ್ಲಿ ಉಂಟಾಗಿದೆಯೇ? ಎಂಬ ಪ್ರಶ್ನೆಗೆ ೯೦ ಕುಟುಂಬಗಳಲ್ಲಿ ೭೨ ಕುಟುಂಬಗಳು ಶೇ.೮೦ರಷ್ಟು ಪರಿಸರದಲ್ಲಿ ಧೂಳು ಉಂಟಾಗಿದೆ. ಆದರೆ ೧೮ ಕುಟುಂಬಗಳು ಶೇ.೨೦ರಷ್ಟು ಪರಿಸರದಲ್ಲಿ ಧೂಳು ಉಂಟಾಗಿಲ್ಲವೆಂದು ತಿಳಿಸಿದ್ದಾರೆ. ಅಂದರೆ ಗಣಿ ವಲಯ ಪರಿಸರದಲ್ಲಿ ಧೂಳು ಶೇ.೮೦ರಷ್ಟರ ಪ್ರಮಾಣ ಗ್ರಾಮೀಣ ಪ್ರದೇಶದಲ್ಲಿ ಕಾರಣಗಳನ್ನು, ಈ ಕುಟುಂಬಗಳ ಮಾಹಿತಿಯ ಮೂಲಕ ಹುಡುಕುತ್ತಾ ಹೋದಾಗ ಗ್ರಾಮೀಣ ಪ್ರದೇಶದಲ್ಲಿ ಧೂಳು ಉಂಟಾಗಲು ಗಣಿಗಾರಿಕೆಯ ಚಟುವಟಿಕೆ ಶೇ.೨೮.೧೬ರಷ್ಟು, ಗಣಿ ಸ್ಫೋಟ ಶೇ.೨೨.೫೫ರಷ್ಟು, ಗಣಿ ವಾಹನಗಳ ಓಡಾಟದಿಂದ ಶೇ.೧೮.೩೧ರಷ್ಟು, ಗಣಿ ಕೈಗಾರಿಕೆಯಿಂದ ಶೇ.೩೦.೯೮ರಷ್ಟು ಧೂಳಿನ ಸಮಸ್ಯೆ ಉಂಟಾಗಲು ಕಾರಣಗಳಾಗಿವೆಂದು ತಿಳಿಸಿರುವುದು ಕಂಡುಬಂದಿದೆ. ಈ ಧೂಳಿನ ಸಮಸ್ಯೆಯು ಯಾರ ಮೇಲೆ ಪರಿಣಾಮ ಬೀರಿದೆಂಬುದನ್ನು ಕುಟುಂಬಗಳು ತಿಳಿಸಿರುವ ಮಾಹಿತಿಯ ಆಧಾರದ ಮೇಲೆ ಜನರ ಮೇಲೆ ಶೇ.೩೪.೪೪ರಷ್ಟು, ಕೃಷಿ ಮೇಲೆ ಶೇ.೩೦ರಷ್ಟು, ಪರಿಸರದ ಮೇಲೆ ಶೇ.೨೨.೭೨ರಷ್ಟು ಹಾಗೂ ಜಾನುವಾರುಗಳ ಮೇಲೆ ಶೇ.೧೩.೩೩ರಷ್ಟು ಪರಿಣಾಮಗಳು ಬೀರಿದೆ ಎಂಬುದು ತಿಳಿದುಬಂದಿದೆ. ಧೂಳಿನ ಸಮಸ್ಯೆಯ ಪರಿಣಾಮ ಜನರ ಮೇಲೆ ಅಧಿಕವಾಗಿ (ಶೇ.೩೪.೪೪) ಬೀರಿರುವುದು ಈ ಕುಟುಂಬಗಳಲ್ಲಿ ಕಂಡುಬಂದಿದೆ. ಹಾಗೆಯೇ ಬಳ್ಳಾರಿ, ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಪರಿಸರದಲ್ಲಿ ಧೂಳು ಉಂಟಾಗಿದೆಯಾ ಎಂಬ ಪ್ರಶ್ನೆಗೆ ೯೦ ಕುಟುಂಬಗಳು ನೀಡಿರುವ ಉತ್ತರವನ್ನು ನೋಡಿದಾಗ ೭೩ ಕುಟುಂಬಗಳು ಶೇ.೮೧.೧೧ರಷ್ಟು ಪರಿಸರದಲ್ಲಿ ಧೂಳು ಉಂಟಾಗಿದೆ. ಆದರೆ ಇನ್ನುಳಿದ ೧೭ ಕುಟುಂಬಗಳು ಶೇ.೧೮.೮೯ರಷ್ಟು ಪರಿಸರದಲ್ಲಿ ಧೂಳು ಉಂಟಾಗಿಲ್ಲ ಎಂದು ತಿಳಿಸಿದ್ದಾರೆ. ಅಂದರೆ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಶೇ.೮೧.೧೧ರಷ್ಟು ಪರಿಸರದಲ್ಲಿ ಧೂಳು ಉಂಟಾಗಿರುವುದು ಕಂಡು ಬಂದಿದೆ. ಆದರೆ ಕುಟುಂಬಗಳಿಗೆ ಧೂಳು ಉಂಟಾಗಲು ಕಾರಣಗಳನ್ನು ಕೇಳಿದಾಗ, ಗಣಿಗಾರಿಕೆಯಿಂದ ಶೇ.೨೪.೬೫ರಷ್ಟು, ಗಣಿ ಸ್ಫೋಟಕಗಳಿಂದ ಶೇ.೨೭.೩೯ರಷ್ಟು, ಗಣಿವಾಹನ ಓಡಾಟದಿಂದ ಶೇ.೧೭.೮೨ರಷ್ಟು, ಗಣಿಕೈಗಾರಿಕೆಯಿಂದಾಗಿ ಶೇ.೩೦.೩೧ರಷ್ಟು ಪರಿಸರದಲ್ಲಿ ಧೂಳು ಉಂಟಾಗಲು ಕಾರಣಗಳಾಗಿವೆಂದು ತಿಳಿದುಬಂದಿದೆ. ಅಂದರೆ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಧೂಳು ಉಂಟಾಗಲು ಗಣಿಸ್ಫೋಟ ಶೇ.೨೭.೩೯ರಷ್ಟು ಹಾಗೂ ಗಣಿ ಕೈಗಾರಿಕೆ ಶೇ.೩೦.೧೩ರಷ್ಟು, ಅಧಿಕ ಪ್ರಮಾಣದ ಕಾರಣಗಳಾಗಿವೆ ಎಂಬುದು ಕುಟುಂಬಗಳಿಂದ ತಿಳಿದುಬರುತ್ತದೆ. ಆದರೆ ಈ ಬಳ್ಳಾರಿ ವಲಯ ಕುಟುಂಬಗಳಿಗೆ ಈ ಧೂಳಿನ ಪರಿಣಾಮ ಯಾರ ಮೇಲೆ ಬೀರಿದೆ ಎಂದು ಕೇಳಿದಾಗ, ಜನರ ಮೇಲೆ ಶೇ.೩೬.೬೬ರಷ್ಟು, ಕೃಷಿಯ ಮೇಲೆ ಶೇ.೨೭.೭೭ರಷ್ಟು, ಪರಿಸರದ ಮೇಲೆ ಶೇ.೨೧.೧೩ರಷ್ಟು, ಜಾನುವಾರುಗಳ ಮೇಲೆ ಶೇ.೧೪.೪೪ರಷ್ಟು ಪರಿಣಾಮಗಳಾಗಿವೆ. ಅಂದರೆ ಈ ಭಾಗದ ಕುಟುಂಬಗಳು ಪರಿಸರದಲ್ಲಿ ಧೂಳಿನ ಸಮಸ್ಯೆಯು ಜನರ ಮೇಲೆ ಶೇ.೩೬.೬೬ರಷ್ಟು ಅಧಿಕ ಪ್ರಮಾಣದಲ್ಲಿ ಪರಿಣಾಮಗಳಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಗಣಿ ವಲಯಗಳಲ್ಲಿ ಉದ್ಭವಗೊಂಡಿರುವ ಧೂಳಿನ ಸಮಸ್ಯೆಯು ಜನರು ಮತ್ತು ಜಾನುವಾರುಗಳ ಮೇಲೆ ಅನಾರೋಗ್ಯವನ್ನು ಉಂಟು ಮಾಡಿದರೇ ಪರಿಸರದಲ್ಲಿ ಮಲೀನತೆಯನ್ನು ಹಾಗೂ ಕೃಷಿಯಲ್ಲಿ ಇಳುವರಿ ಕಡಿಮೆಯಾಗುವ ತೀಕ್ಷ್ಣವಾದ ಪರಿಣಾಮಗಳಾಗಿವೆ. ಈ ಮಾಹಿತಿಯು ಬಳ್ಳಾರಿ, ಸಂಡೂರು ಹಾಗೂ ಹೊಸಪೇಟೆ ವಲಯಗಳ ಗ್ರಾಮೀಣ ಪ್ರದೇಶದ ಕುಟುಂಬಗಳಿಂದ ತಿಳಿದುಬರುತ್ತದೆ. ಪರಿಸರದಲ್ಲಿ ಧೂಳು

ಉಂಟಾಗಿದೆಂದು ತಿಳಿಸಿರುವ ಕುಟುಂಬಗಳು ಹೊಸಪೇಟೆ ತಾಲ್ಲೂಕಿನಲ್ಲಿ ಅಧಿಕವಾಗಿರುವುದು ಕಂಡು ಬಂದಿದೆ. ಹೀಗೆ ಗ್ರಾಮೀಣ ಪ್ರದೇಶದಲ್ಲಿ ಧೂಳು ಉಂಟಾಗಲು ಗಣಿಗಾರಿಕೆಯ ಪ್ರಭಾವವೇ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಹಾಗಾದರೇ ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕಿನಲ್ಲಿ ಧೂಳಿನ ಪ್ರಮಾಣ ಯಾವ ಅವಧಿಯಲ್ಲಾಗಿದೆ ಎಂಬುದು ತಿಳಿದುಕೊಳ್ಳುವ ಅಗತ್ಯವಿದೆ. ಆದ್ದರಿಂದ ಪರಿಸರದಲ್ಲಿ ಧೂಳು, ಗಣಿಗಾರಿಕೆಯ ಪೂರ್ವದಲ್ಲಿ ಗಣಿ ನಡೆದಾಗ ಹಾಗೂ ಗಣಿ ಸ್ಥಗಿತತೆಯ ನಂತರ ಯಾವ ಪ್ರಮಾಣದಲ್ಲಿ ಉಂಟಾಗಿದೆ ಎಂಬುವುದು ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದ ಫಲಿತಾಂಶಗಳ ದತ್ತಾಂಶವನ್ನು ಈ ಕೆಳಗಿನಂತೆ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೫.೩ ಪರಿಸರದಲ್ಲಿ ಧೂಳು ಉಂಟಾಗಿರುವ ಅವಧಿಯ ವಿವರ**

| ಕ್ರಸಂ. | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| | ಪರಿಸರದಲ್ಲಿ ಧೂಳು ಯಾವ ಅವಧಿಯಲ್ಲಿ ಉಂಟಾಗಿದೆ? | | | | | | |
| ೧ | ಗಣಿಗಾರಿಕೆ ಪೂರ್ವ | ೧೮ | ೨೦.೦೧ | ೨೫ | ೨೭.೭೭ | ೨೪ | ೨೬.೬೬ |
| | ಗಣಿಗಾರಿಕೆ ನಡೆದಾಗ | ೪೪ | ೪೮.೮೮ | ೪೩ | ೪೭.೭೭ | ೩೯ | ೪೩.೩೩ |
| | ಗಣಿಸ್ಥಗಿತತೆ ನಂತರ | ೨೮ | ೩೧.೧೧ | ೨೨ | ೨೪.೪೬ | ೨೭ | ೩೦.೦೧ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಧೂಳು ಯಾವ ಅವಧಿಯಲ್ಲಿ ಅಂದರೆ ಗಣಿ ಪೂರ್ವ, ಗಣಿ ನಡೆದಾಗ, ಗಣಿ ಸ್ಥಗಿತತೆ ನಂತರ ಯಾವ ಪ್ರಮಾಣದಲ್ಲಿ ಧೂಳು ಉಂಟಾಗಿದೆ ಎಂಬುದನ್ನು ಕುಟುಂಬಗಳ ಶೇಕಡವಾರುಗಳಲ್ಲಿ ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳು ಶೇ.೯೨.೨೩ರಷ್ಟು ಪರಿಸರದಲ್ಲಿ ಧೂಳು ಉಂಟಾಗಿದೆ. ಈ ಧೂಳು ಯಾವ ಅವಧಿಯಲ್ಲಿ ಹೆಚ್ಚಾಗಿವೆಂಬುದಕ್ಕೆ ೧೮ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೦.೦೧ರಷ್ಟು, ೪೪ ಕುಟುಂಬಗಳು ಶೇ.೪೮.೮೮ರಷ್ಟು ಗಣಿಗಾರಿಕೆ ನಡೆದಾಗ, ೨೮ ಕುಟುಂಬಗಳು ಗಣಿ ಸ್ಥಗಿತತೆಯ ನಂತರ ಶೇ.೩೧.೧೧ರಷ್ಟು ಗಣಿ ವಲಯ ಹೊಸಪೇಟೆ ಗ್ರಾಮೀಣ ಪ್ರದೇಶದಲ್ಲಿ ಧೂಳಿನ ಪ್ರಮಾಣ ಉಂಟಾಗಿದೆ. ಅಂದರೆ ಗಣಿಗಾರಿಕೆಯ ಪೂರ್ವದಲ್ಲಿ ಧೂಳಿನ ಪ್ರಮಾಣ ಶೇ.೨೦ರಷ್ಟು ಕಡಿಮೆಯಿದ್ದು, ಗಣಿಗಾರಿಕೆ ನಡೆದಾಗ ಧೂಳಿನ ಪ್ರಮಾಣ (ಶೇ.೪೮.೮೮) ಅಧಿಕವಾಗಿರುವುದು ಕಂಡುಬರುತ್ತದೆ. ಆದರೆ ಗಣಿಗಾರಿಕೆ ನಡೆದಾಗ ಪರಿಸರದಲ್ಲಿ ಉಂಟಾಗಿರುವ ಧೂಳಿನ ಪ್ರಮಾಣಕ್ಕಿಂತ ಗಣಿ ಸ್ಥಗಿತತೆಯ ನಂತರ ಶೇ.೧೭.೭೭ರಷ್ಟು ಈ

ಭಾಗದ ಗ್ರಾಮೀಣ ಪರಿಸರದಲ್ಲಿ ಧೂಳಿನ ಪ್ರಮಾಣ ಕಡಿಮೆಯಾಗಿದೆ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೯೦ ಕುಟುಂಬಗಳಲ್ಲಿ ೨೫ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೭.೭೭ರಷ್ಟು, ೪೩ ಕುಟುಂಬಗಳು ಗಣಿಗಾರಿಕೆ ನಡೆದಾಗ ಶೇ.೪೭.೭೭ರಷ್ಟು ಹಾಗೂ ೨೨ ಕುಟುಂಬಗಳು ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೪.೪೬ರಷ್ಟು ಗ್ರಾಮೀಣ ಪರಿಸರದಲ್ಲಿ ಧೂಳು ಉಂಟಾಗಿದೆ ಎಂದು ತಿಳಿದಿದೆ. ಅಂದರೆ ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪೂರ್ವದಲ್ಲಿ ಧೂಳಿನ ಪ್ರಮಾಣ (ಶೇ.೨೭.೭೭) ಕಡಿಮೆಯಿದ್ದು, ಗಣಿಗಾರಿಕೆ ನಡೆದಾಗ (ಶೇ.೪೭.೭೭) ಧೂಳಿನ ಪ್ರಮಾಣ ಅಧಿಕವಾಗಿರುವುದು ಗ್ರಹಿಸಬೇಕಾಗಿದೆ. ಆದರೆ ಗಣಿ ಸ್ಥಗಿತತೆಯ ನಂತರ ಧೂಳಿನ ಪ್ರಮಾಣ ಶೇ ೨೪.೪೬ರಷ್ಟು ಕಡಿಮೆಯಾಗಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳ ಪ್ರಕಾರ ಪರಿಸರದಲ್ಲಿ ಧೂಳಿನ ಪ್ರಮಾಣ ಹಾಗೂ ಪರಿಣಾಮಗಳು ಗಣಿಗಾರಿಕೆ ನಡೆದ ಅವಧಿಯಲ್ಲಿ ಅಧಿಕವಾಗಿದೆ. ಕಾಲಕ್ರಮೇಣ ಗಣಿ ಸ್ಥಿತತೆಯ ನಂತರ ಸ್ವಲ್ಪಮಟ್ಟಿಗೆ ಸುಧಾರಣೆಗಳಾಗಿವೆ ಎಂಬುದು ತಿಳಿದುಬರುತ್ತದೆ.

ಬಳ್ಳಾರಿ ಗ್ರಾಮೀಣ ಗಣಿ ವಲಯದ ೯೦ ಕುಟುಂಬಗಳಲ್ಲಿ ೨೭ ಕುಟುಂಬಗಳು ಗಣಿಗಾರಿಕೆ ಪೂರ್ವ ಅವಧಿಯಲ್ಲಿ ಶೇ.೨೬.೬೬ರಷ್ಟು, ೩೯ ಕುಟುಂಬಗಳು ಗಣಿಗಾರಿಕೆ ನಡೆದಾಗ ಶೇ.೪೩.೩೩ರಷ್ಟು, ೨೪ ಕುಟುಂಬಗಳು ಗಣಿಗಾರಿಕೆ ಸ್ಥಗಿತತೆಯ ನಂತರದ ಅವಧಿಯಲ್ಲಿ ಶೇ.೩೦.೦೧ರಷ್ಟು ಧೂಳಿನ ಪ್ರಮಾಣ ಆಗಿರುವುದು ಕಂಡು ಬಂದಿದೆ ಎಂದು ಕುಟಂಬಗಳ ಮಾಹಿತಿಯಿಂದ ತಿಳಿದುಬರುತ್ತದೆ. ಅಂದರೆ ಬಳ್ಳಾರಿ ಗಣಿ ವಲಯದಲ್ಲೂ ಗಣಿ ಪೂರ್ವ ಅವಧಿಯಲ್ಲಿ ಧೂಳಿನ ಪ್ರಮಾಣ (ಶೇ.೨೬.೬೬) ಕಡಿಮೆಯಿದ್ದು, ಗಣಿ ನಡೆದಾಗ ಧೂಳಿನ ಪ್ರಮಾಣ (ಶೇ.೪೩.೩೩) ಅಧಿಕವಾಗಿರುವುದು ಕಂಡುಬಂದಿದೆ. ಆದರೆ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಗಣಿ ಸ್ಥಗಿತತೆಯ ನಂತರ ಅವಧಿಯಲ್ಲಿ ಗಣಿ ನಡೆದಾಗ ಹೋಲಿಸಿದರೇ ಶೇ.೧೩.೩೩ರಷ್ಟು ಕಡಿಮೆಯಾಗಿರುವುದು ಗೋಚರವಾಗುತ್ತದೆ. ಒಟ್ಟಾರೆಯಾಗಿ ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳ ಪರಿಸರದಲ್ಲಿ ಗಣಿಗಾರಿಕೆ ನಡೆದಾಗ ಧೂಳಿನ ಪ್ರಮಾಣ ಅಧಿಕವಾಗಿದೆ. ಈ ಮೂರು ತಾಲ್ಲೂಕುಗಳಲ್ಲಿ ಗಣಿಗಾರಿಕೆ ನಡೆದಾಗ ಧೂಳಿನ ಪ್ರಮಾಣ ಅಧಿಕವಾಗಿ (ಶೇ.೫೩.೩೩) ಸಂಡೂರು ತಾಲ್ಲೂಕಿನಲ್ಲೇ ಆಗಿರುವುದು ದುಸ್ಥಿತಿಯಾಗಿದೆ.

**೫.೮ ಗಣಿ ಪ್ರದೇಶದ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು**

ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆಗೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶದ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಂಡು ಬಂದ ಫಲಿತಾಂಶಗಳನ್ನು ದತ್ತಾಂಶದ ಮೂಲಕ ದಾಖಲಿಸಿ, ಹೂಳು ತುಂಬುವಿಕೆ ಪ್ರಮಾಣ, ಹೂಳು ತುಂಬಿರಲು ಕಾರಣ ಹಾಗೂ ಹೂಳು ತುಂಬಿರುವ ಜಲಾಶಯದ ನೀರಿನಿಂದಾಗಿ ಯಾರ ಮೇಲೆ ಪರಿಣಾಮಗಳಾಗಿವೆ ಎನ್ನುವ ಅಂಶಗಳನ್ನು ಕೋಷ್ಟಕ ೫.೪ರಲ್ಲಿ ದಾಖಲಿಸಲಾಗಿದೆ.

**ಕೋಷ್ಟಕ ೫.೪. ಗಣಿ ಗ್ರಾಮೀಣ ಪ್ರದೇಶಗಳ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆ ವಿವರ**

| ಕ್ರಸಂ | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೧ | ನಿಮ್ಮ ಗ್ರಾಮದಲ್ಲಿ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟು ಇದೆಯಾ? | | | | | | |
| | ಹೌದು | ೬೪ | ೭೧.೧೧ | ೬೫ | ೭೨.೨೨ | ೮೩ | ೯೨.೨೨ |
| | ಇಲ್ಲ | ೨೬ | ೨೮.೮೯ | ೨೫ | ೨೭.೭೮ | ೦೭ | ೦೭.೭೮ |
| | **ಒಟ್ಟು** | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಅದರಲ್ಲಿ ಹೂಳು ಇದೆಯಾ? | | | | | | |
| | ಹೌದು | ೫೧ | ೭೯.೬೮ | ೫೮ | ೮೯.೨೪ | ೭೬ | ೯೧.೫೬ |
| | ಇಲ್ಲ | ೧೩ | ೨೦.೩೨ | ೦೭ | ೧೦.೭೬ | ೦೭ | ೦೮.೪೪ |
| | **ಒಟ್ಟು** | **೬೪** | ೧೦೦ | **೬೫** | ೧೦೦ | **೮೩** | ೧೦೦ |
| ೦೩ | ಹೂಳು ತುಂಬಲು ಕಾರಣವೇನು? | | | | | | |
| | ಗಣಿಗಾರಿಕೆ ಪ್ರಭಾವ | ೧೮ | ೩೫.೨೯ | ೨೦ | ೩೪.೪೮ | ೨೫ | ೩೨.೮೯ |
| | ಮಳೆ ಪ್ರಭಾವ | ೦೮ | ೧೫.೬೮ | ೧೭ | ೨೯.೩೧ | ೧೧ | ೧೪.೪೯ |
| | ಭೂ ಸವೆತ | ೧೫ | ೨೯.೪೨ | ೧೦ | ೧೭.೨೫ | ೨೦ | ೨೬.೩೧ |
| | ಪ್ರಕೃತಿ ವಿಕೋಪ | ೧೦ | ೧೯.೬೧ | ೧೧ | ೧೮.೯೬ | ೨೦ | ೨೬.೩೧ |
| | **ಒಟ್ಟು** | **೫೧** | ೧೦೦ | **೫೮** | ೧೦೦ | **೭೬** | ೧೦೦ |
| ೦೪ | ಹೂಳು ತುಂಬುವಿಕೆಯಿಂದ ಯಾರ ಮೇಲೆ ಪರಿಣಾಮ ಬೀರಿದೆ. | | | | | | |
| | ಜನರ ಮೇಲೆ | ೧೮ | ೩೫.೨೯ | ೨೭ | ೪೬.೫೫ | ೨೬ | ೩೪.೨೨ |
| | ಕೃಷಿ ಮೇಲೆ | ೧೯ | ೩೭.೨೫ | ೧೮ | ೩೧.೦೩ | ೨೮ | ೩೬.೮೪ |
| | ಜಾನುವಾರು ಮೇಲೆ | ೧೪ | ೨೭.೪೬ | ೧೩ | ೨೨.೪೨ | ೨೨ | ೨೮.೯೪ |
| | **ಒಟ್ಟು** | **೫೧** | ೧೦೦ | **೫೮** | ೧೦೦ | **೭೬** | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಕೋಷ್ಟಕ ೫.೪ರಲ್ಲಿ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಸುತ್ತಮುತ್ತ ಇರುವ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳ ಪ್ರಮಾಣ, ಇದರಲ್ಲಿ ಹೂಳು ತುಂಬಿವಿಕೆಯ ಪ್ರಮಾಣ, ಇವುಗಳಲ್ಲಿ ಹೂಳು ತುಂಬಿರಲು ಕಾರಣ ಮತ್ತು ಇದರಿಂದಾದ ಪರಿಣಾಮಗಳನ್ನು ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ತಾಲ್ಲೂಕುವಾರು ಶೇಕಾಡವಾರುಗಳಲ್ಲಿ ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆಯಾ? ಎಂದು ಪ್ರಶ್ನೆ ಕೇಳಿದಾಗ, ೯೦ ಕುಟುಂಬಗಳಲ್ಲಿ ೬೪ ಕುಟುಂಬಗಳು ಗ್ರಾಮದ ಸುತ್ತಮುತ್ತ ಶೇ.೭೧.೧೧ರಷ್ಟು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆಂದು ಹೇಳಿದರೇ ೨೬ ಕುಟುಂಬಗಳು ಅಂದರೆ ಗ್ರಾಮದ ಸುತ್ತಮುತ್ತ ಕೆರೆ, ಹಳ್ಳ, ಬಾವಿಗಳಲ್ಲಿ ಶೇ.೨೮.೮೯ರಷ್ಟು ಕುಟುಂಬಗಳು ಹೂಳು ಕಂಡುಬರುವುದಿಲ್ಲ ಎಂದಿದ್ದಾರೆ. ೬೪ ಕುಟುಂಬಗಳಿಗೆ ಗ್ರಾಮದ ಸುತ್ತಮುತ್ತಲಿರುವ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು

ತುಂಬಿದೆಯಾ ಎಂಬ ಪ್ರಶ್ನೆಗೆ ೫೧ ಕುಟುಂಬಗಳು ಶೇ.೭೯.೬೮ರಷ್ಟು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬಿದೆ. ಇನ್ನುಳಿದ ೧೩ ಕುಟುಂಬಗಳು ಶೇ.೨೦.೩೨ರಷ್ಟು ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿಲ್ಲ ಎನ್ನುವ ಅಂಶ ಕ್ಷೇತ್ರಕಾರ್ಯದಿಂದ ಕಂಡುಕೊಳ್ಳಲಾಗಿದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಕಾರಣವನ್ನು ನೋಡುವುದಾದರೇ ಹೂಳು ತುಂಬಿದೆ ಎಂದು ಹೇಳಿರುವ ೫೧ ಕುಟುಂಬಗಳು ಗಣಿಗಾರಿಕೆಯ ಪ್ರಭಾವ ಶೇ.೩೫.೨೯ರಷ್ಟು, ಮಳೆ ಪ್ರಭಾವ ಶೇ.೧೫.೬೮ರಷ್ಟು, ಭೂಸವೆತ ಶೇ.೨೯.೪೨ರಷ್ಟು, ಪ್ರಕೃತಿಯ ವಿಕೋಪ ಶೇ.೧೯.೬೧ರಷ್ಟು, ಕೆರೆ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಕಾರಣವಾಗಿದೆ ಎಂಬುದು ಕುಟುಂಬಗಳಿಂದ ತಿಳಿದು ಬರುತ್ತದೆ. ಆದರೆ ಹೊಸಪೇಟೆ ಗ್ರಾಮೀಣ ವಲಯಗಳ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಗಣಿಗಾರಿಕೆಯ ಪ್ರಭಾವದಿಂದಲೇ ಹೂಳು ತುಂಬಿರಲು ಪ್ರಮುಖವಾದ ಕಾರಣಗವಾಗಿದೆ. ಹೀಗೆ ಹೊಸಪೇಟೆ ವಲಯದ ಸುತ್ತಮುತ್ತಲಿರುವ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಶೇ.೭೯.೬೮ರಷ್ಟು ಹೂಳು ತುಂಬಿವೆ. ಇದರ ಪರಿಣಾಮವೇ ಗ್ರಾಮೀಣ ಪ್ರದೇಶ ಹಾಗೂ ಜಲಾಶಯಗಳಲ್ಲಿನ ನೀರಿನ ಒರತೆ ಉಂಟಾಗಿವೆಂದು ಗ್ರಹಿಸಬಹುದಾಗಿದೆ. ಕೆರೆ, ಬಾವಿ, ಅಣೆಕಟ್ಟುಗಳಲ್ಲಿ ಗಣಿಗಾರಿಕೆಯ ಪ್ರಭಾವದಿಂದ ಹೂಳು ತುಂಬಿರುವುದರಿಂದ ಇವುಗಳಲ್ಲಿರುವ ಹೂಳು ಹೆಚ್ಚಾಗಿ ಯಾರ ಮೇಲೆ ಪರಿಣಾಮಗಳನ್ನು ಬೀರಿವೆಂದು ೫೧ ಕುಟುಂಬಗಳಿಗೆ ಕೇಳಿದಾಗ, ಜನರ ಮೇಲೆ ಶೇ.೨೫.೩೯ರಷ್ಟು, ಕೃಷಿಯ ಮೇಲೆ ಶೇ.೩೭.೨೫ರಷ್ಟು ಹಾಗೂ ಜಾನುವಾರುಗಳ ಮೇಲೆ ಶೇ.೨೭.೪೬ರಷ್ಟು ಪರಿಣಾಮಗಳಾಗಿವೆಂದು ತಿಳಿದುಬಂದಿದೆ. ಇದರಲ್ಲಿ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆಯಿಂದ ಕೃಷಿಯ ಮೇಲೆ ಆಗಿರುವ ಪರಿಣಾಮಗಳು ಅಧಿಕವಾಗಿರುವುದು ಶೋಚನಿಯ ಸಂಗತಿಯಾಗಿದೆ. ಅಂದರೆ ಕೆರೆ, ಬಾವಿ, ಹಳ್ಳಿಗಳಲ್ಲಿ ಹೂಳು ತುಂಬುವಿಕೆಯ ಪ್ರಮಾಣ ಅಧಿಕಗೊಂಡಂತೆ ನೀರಿನ ಒರತೆಯ ಪ್ರಮಾಣ ಕಡಿಮೆಯಾಗಿ ಕೃಷಿ ಉತ್ಪನ್ನಗಳು ಕುಂಠಿತವಾಗುತ್ತಿದೆ. ಮತ್ತೊಂದೆಡೆ ನೀರಿನ ಹರಿಯುವಿಕೆಯೊಂದಿಗೆ ಹೂಳು ಕೃಷಿ ಭೂಮಿಯಲ್ಲಿ ವಿಲೀನಗೊಂಡಾಗ ಇಳುವರಿ ಹಾನಿಯಾಗುವ ಸಾಧ್ಯತೆಗಳಿವೆ.

ಸಂಡೂರು, ತಾಲ್ಲೂಕಿನ ಗ್ರಾಮೀಣ ಪ್ರದೇಶದ ಸುತ್ತಮುತ್ತ ಕೆರೆ, ಬಾವಿ ಹಳ್ಳ, ಆಣೆಕಟ್ಟುಗಳಿವೆಂದು ಕುಟುಂಬಗಳಿಗೆ ಪ್ರಶ್ನೆ ಕೇಳಿದಾಗ ೯೦ ಕುಟುಂಬಗಳ ಪೈಕಿ ೬೫ ಕುಟುಂಬಗಳು ಶೇ.೭೨.೨೨ರಷ್ಟು ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆ, ಇನ್ನುಳಿದ ೨೫ ಕುಟುಂಬಗಳು ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಆಣೆಕಟ್ಟುಗಳು ಇಲ್ಲ ಎಂದು ಶೇ.೨೭.೭೮ರಷ್ಟು ಕುಟುಂಬಗಳಿಂದ ತಿಳಿದು ಬರುತ್ತದೆ. ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆ ಎಂದು ಹೇಳಿರುವ ೬೫ ಕುಟುಂಬಗಳಿಗೆ ಇವುಗಳಲ್ಲಿ ಹೂಳು ತುಂಬಿದೆಯಾ ಎಂದು ಕೇಳಿದಾಗ ೫೮ ಕುಟುಂಬಗಳು ಶೇ.೮೯.೨೩ರಷ್ಟು ಹೌದೆಂದು ಹೇಳಿದರೆ, ಇನ್ನುಳಿದ ೦೭ ಕುಟುಂಬಗಳು ಶೇ.೧೦.೭೭ರಷ್ಟು ಇಲ್ಲ ಎಂಬ ಫಲಿತಾಂಶ ಕಂಡು ಬಂದಿದೆ. ಅಂದರೆ ಈ ವಲಯದ ಕೆರೆ, ಬಾವಿ, ಹಳ್ಳಿ ಆಣೆಕಟ್ಟುಗಳಲ್ಲಿ ಶೇ.೮೯.೨೩ರಷ್ಟು ಹೂಳು ತುಂಬಿದೆ ಎಂಬುವುದು ಕುಟುಂಬಗಳ ಮಾಹಿತಿಯ ಆಧಾರದಿಂದ ತಿಳಿದುಕೊಳ್ಳಬಹುದಾಗಿದೆ. ಹೂಳು ತುಂಬಲು ಕಾರಣಗಳೇನು ಎಂಬ ಅಂಶಕ್ಕೆ ಸಂಬಂಧಿಸಿದಂತೆ ೯೦ ಕುಟುಂಬಗಳ ಪೈಕಿ ೫೮ ಕುಟುಂಬಗಳು ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿದೆ ಹೇಳಿರುವುದರಿಂದ ೫೮ ಕುಟುಂಬಗಳನ್ನು ಮಾತ್ರ ಪರಿಗಣಿಸಿದಾಗ ಹೂಳು ತುಂಬಲು ಗಣಿಗಾರಿಕೆಯ ಪ್ರಭಾವ ಶೇ.೩೪.೪೮ರಷ್ಟು, ಮಳೆ ಪ್ರಭಾವ ಶೇ.೨೯.೩೧ರಷ್ಟು, ಭೂಸವೆತ ಶೇ.೧೭.೨೫ರಷ್ಟು, ಪ್ರಕೃತಿ ವಿಕೋಪ ಶೇ.೧೯.೬೦ರಷ್ಟು ಕಾರಣಗಳಾಗಿವೆಂದು ಕ್ಷೇತ್ರಕಾರ್ಯಕ್ಕೆ ಒಳಪಡಿಸದ ಕುಟುಂಬಗಳಿಂದ

ತಿಳಿದುಬಂದಿದೆ. ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಅಧಿಕ ಪ್ರಮಾಣದ ಹೂಳು ತುಂಬಲು ಗಣಿಗಾರಿಕೆಯ ಪ್ರಭಾವವೇ ಈ ವಲಯದ ಪ್ರಬಲವಾದ ಕಾರಣವಾಗಿದೆಂದು ಗ್ರಹಿಸಬೇಕಾಗಿದೆ. ಹೂಳು ತುಂಬುವಿಕೆಯಿಂದಾಗಿ ಬೀರುವ ಪರಿಣಾಮಗಳು ಜನರ ಮೇಲೆ ಶೇ.೪೬.೫೫ರಷ್ಟು, ಕೃಷಿಯ ಮೇಲೆ ಶೇ.೩೧.೦೩ರಷ್ಟು ಜಾನುವಾರುಗಳ ಮೇಲೆ ಶೇ.೨೨.೪೨ರಷ್ಟು ಪರಿಣಾಮಗಳಾಗಿವೆ ಎಂದು ಕುಟುಂಬಗಳ ಮಾಹಿತಿಯಿಂದ ತಿಳಿದುಕೊಳ್ಳಲಾಗಿದೆ. ಅಂದರೆ ಹೂಳು ತುಂಬುವಿಕೆಯಿಂದ ಸಂಡೂರು ವಲಯದ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೪೬.೫೫ರಷ್ಟು ಜನರ ಮೇಲೆಯೇ ಅಧಿಕ ಪ್ರಮಾಣದ ಪರಿಣಾಮಗಳಾಗಿವೆ ಎಂಬುದು ಕ್ಷೇತ್ರಕಾರ್ಯದಿಂದ ಅಂಕಿ-ಅಂಶಗಳಿಂದ ಸ್ಪಷ್ಟವಾಗಿದೆ. ಹಾಗೆಯೇ ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳಿಗೆ ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಆಣೇಕಟ್ಟುಗಳಿವೆಯಾ ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ೯೦ ಕುಟುಂಬಗಳ ಪೈಕಿ ೮೩ ಕುಟುಂಬಗಳು ಶೇ.೯೨.೨೨ರಷ್ಟು ಗ್ರಾಮಗಳಲ್ಲಿ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆಂಬುದು ಕಂಡುಬಂದರೆ, ಇನ್ನುಳಿದ ೧೭ ಕುಟುಂಬಗಳು ಶೇ.೦೭.೭೮ರಷ್ಟು ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳು ಕಂಡು ಬರುವುದಿಲ್ಲವೆಂದು ಸೂಚಿಸಿದ್ದಾರೆ. ಆದರೆ ೮೩ ಕುಟುಂಬಗಳಿಗೆ ಪರಿಗಣೆನೆಗೆ ತೆಗೆದುಕೊಂಡಾಗ ೭೬ ಕುಟುಂಬಗಳಲ್ಲಿ ಶೇ.೯೧.೫೬ರಷ್ಟು ಕೆರೆ, ಬಾವಿಗಳಲ್ಲಿ ಹೂಳು ತುಂಬಿದೆ. ಇನ್ನು ೦೭ ಕುಟುಂಬಗಳಲ್ಲಿ ಶೇ.೦೮.೪೪ರಷ್ಟು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬಿಲ್ಲ ಎಂದು ತಿಳಿಸಿದ್ದಾರೆ. ಅಂದರೆ ಬಳ್ಳಾರಿ ವಲಯ ಗ್ರಾಮೀಣ ಪ್ರದೇಶದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಶೇ.೯೧.೫೬ರಷ್ಟು ಕುಟುಂಬಗಳು ಹೂಳು ತುಂಬಿದೆಂದು ಹೇಳಿರುವುದು ಕ್ಷತ್ರಕಾರ್ಯದ ಅಂಕಿ-ಅಂಶದಿಂದ ಸಾಬೀತಾಗಿದೆ. ಆದರೆ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಕಾರಣವೇನೆಂದು ಅವಲೋಕಿಸಿದಾಗ, ೭೬ ಕುಟುಂಬಗಳು ಗಣಿಗಾರಿಕೆಯ ಪ್ರಭಾವ ಶೇ.೩೨.೮೯ರಷ್ಟು, ಮಳೆ ಪ್ರಭಾವ ಶೇ.೧೪.೪೭ರಷ್ಟು, ಭೂಸವೆತ ಶೇ.೨೬.೩೧ರಷ್ಟು, ಪ್ರಕೃತಿ ವಿಕೋಪಗಳಿಂದ ಶೇ.೨೬.೩೧ರಷ್ಟು ಪ್ರಮಾಣದ ಹೂಳು ತುಂಬಲು ಕಾರಣಗಳಾಗಿವೆ. ಅಂದರೆ ೭೬ ಕುಟುಂಬಗಳಲ್ಲಿಯೇ ಶೇ.೩೨.೮೯ರಷ್ಟು ಕುಟುಂಬಗಳು ಹೂಳು ತುಂಬಿರಲು ಗಣಿಗಾರಿಕೆಯ ಪ್ರಭಾವವೇ ಅಧಿಕ ಪ್ರಮಾಣದ ಕಾರಣಗಳಾಗಿವೆಂದು ತಿಳಿಯಪಡಿಸುತ್ತದೆ. ಗಣಿ ವಲಯದ ಗ್ರಾಮೀಣ ಪ್ರದೇಶದ ಸುತ್ತಮುತ್ತಲ್ಲಿರುವ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆಯಿಂದ ಯಾರ ಮೇಲೆ ಪರಿಣಾಮಗಳಾಗಿವೆ ಎಂಬ ಅಂಶಕ್ಕೆ ಸಂಬಂಧಿಸಿದಂತೆ ಕುಟುಂಬಗಳಿಗೆ ಪ್ರಶ್ನೆ ಕೇಳಿದಾಗ ೯೦ ಕುಟುಂಬಗಳ ಪೈಕಿ ೭೬ ಕುಟುಂಬಗಳಲ್ಲಿ ಜನರ ಮೇಲೆ ಶೇ.೩೪.೨೨ರಷ್ಟು, ಕೃಷಿಯ ಮೇಲೆ ಶೇ.೩೬.೮೪ರಷ್ಟು, ಜಾನುವಾರುಗಳ ಮೇಲೆ ಶೇ.೨೮.೯೪ರಷ್ಟು ಪರಿಣಾಮಗಳಾಗಿವೆ. ಅಂದರೆ ಈ ಕುಟುಂಬಗಳಲ್ಲಿ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿರುವ ಹೂಳಿನಿಂದಾಗಿ ಕೃಷಿಯ ಮೇಲೆ ಅಧಿಕ ಪ್ರಮಾಣದ ಪರಿಣಾಮಗಳಾಗಿರುವುದು ವಿಷಾದಕಾರ ಸಂಗತಿಯಾಗಿದೆ. ಒಟ್ಟಾರೆಯಾಗಿ ಹೂಳು ತುಂಬುವಿಕೆಯ ಪ್ರಮಾಣವನ್ನು ಕೆರೆ, ಹಳ್ಳ, ಬಾವಿ, ಆಣೆಕಟ್ಟುಗಳಲ್ಲಿ ಅಧಿಕವಾಗಿ (ಶೇ.೯೨.೨೨) ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿದೆ. ಗಣಿ ವಲಯವಾದ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಗಣಿಗಾರಿಕೆಯ ಪ್ರಭಾವವೇ ಪ್ರಮುಖವಾದ ಕಾರಣವಾಗಿದೆ. ಹೊಸಪೇಟೆ ತಾಲ್ಲೂಕಿನಲ್ಲೇ ಹೂಳು ತುಂಬುವಿಕೆಗೆ ಗಣಿಗಾರಿಕೆಯ ಪ್ರಭಾವವೇ ಅಧಿಕ ಪ್ರಮಾಣದ ಕಾರಣಗಳಾಗಿವೆ ಎಂಬುದು ಕುಟುಂಬಗಳ ಕ್ಷೇತ್ರಕಾರ್ಯದಿಂದ ಕಂಡುಬಂದಿದೆ. ಹಾಗೆ ಜಲಾಶಯಗಳಲ್ಲಿ

ಗಣಿ ಹೂಳು ತುಂಬುವಿಕೆಯು ಜನರ ಮೇಲೆ, ಕೃಷಿಯ ಮೇಲೆ, ಜಾನುವಾರುಗಳ ಮೇಲೆ ಪರಿಣಾಮಗಳು ಆಗಿರುವುದು ಸಮೀಕ್ಷೆಗೆ ಒಳಪಡಿಸಿದ ಕುಟುಂಬಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

### ೫.೯ ಗಣಿ ಕೃಷಿ ಭೂಮಿಯಲ್ಲಿ ಭೂಸವೆತ

ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲಾಕುಗಳ ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂ ಸವೆತಕ್ಕೆ ಸಂಬಂಧಿಸಿದಂತೆ ಕುಟುಂಬಗಳನ್ನು ಕ್ಷೇತ್ರಕಾರ್ಯದ ಸಮೀಕ್ಷೆ ಒಳಪಡಿಸಿದಾಗ ಕಂಡು ಬಂದಿರುವ ಫಲಿತಾಂಶವನ್ನು ದತ್ತಾಂಶದ ಮೂಲಕ ದಾಖಲಿಸಿ, ಕೃಷಿ ಭೂಮಿಯಲ್ಲಿ ಆಗಿರುವ ಭೂ ಸವೆತದ ಪ್ರಮಾಣ, ಕಾರಣಗಳು ಹಾಗೂ ಪರಿಣಾಮಗಳನ್ನು ಕುಟುಂಬಗಳ ಮಾಹಿತಿಯಿಂದ ಈ ಕೆಳಗಿನಂತೆ ಗಣಿ ವಲಯಗಳ ಮೇಲಾಗಿರುವ ಶೇಕಡವಾರು ಪ್ರಮಾಣವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೫.೫ ಗಣಿವಲಯದ ಕೃಷಿ ಭೂಮಿಯ ಮೇಲಾಗಿರುವ ಭೂಸವೆತದ ಪ್ರಮಾಣ**

| ಕ್ರಸಂ | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕೃಷಿ ಭೂಮಿಯಲ್ಲಿ ಭೂ ಸವೇತವಾತದೆಯಾ? | | | | | | |
| | ಹೌದು | ೮೫ | ೯೪.೪೪ | ೭೯ | ೮೭.೭೮ | ೮೮ | ೯೭.೭೭ |
| | ಇಲ್ಲ | ೦೫ | ೦೫.೫೬ | ೧೧ | ೧೨.೨೨ | ೦೨ | ೦೨.೨೩ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೦೨ | ಹೌದಾದರೆ ಕಾರಣವೇನು? | | | | | | |
| | ಗಣಿಗಾರಿಕೆ ಹಾವಳಿ | ೪೨ | ೪೯.೪೧ | ೩೪ | ೪೩.೦೫ | ೩೬ | ೪೦.೯೧ |
| | ಮಣ್ಣು ಸಾಗಾಣಿಕೆ | ೨೭ | ೩೧.೭೬ | ೩೦ | ೩೭.೯೭ | ೩೫ | ೩೯.೭೭ |
| | ನೈಸರ್ಗಿಕ ವಿಕೋಪ | ೧೬ | ೧೮.೮೩ | ೧೫ | ೧೯.೯೮ | ೧೭ | ೧೯.೩೨ |
| | ಒಟ್ಟು | ೮೫ | ೧೦೦ | ೭೯ | ೧೦೦ | ೮೮ | ೧೦೦ |
| ೦೩ | ಭೂಸವೇತದಿಂದ ಯಾವ ಪರಿಣಾಮಗಳಾಗಿವೆ? | | | | | | |
| | ಕೃಷಿ ಕುಂಠಿತ | ೩೦ | ೩೫.೨೯ | ೩೧ | ೩೯.೨೪ | ೪೪ | ೫೦.೦೧ |
| | ಮಣ್ಣಿನ ನಾಶ | ೨೬ | ೩೦.೫೮ | ೨೦ | ೨೫.೩೨ | ೧೬ | ೧೮.೧೮ |
| | ಕಡಿಮೆ ಫಲವತ್ತತೆ | ೧೫ | ೧೭.೬೬ | ೧೨ | ೧೫.೧೮ | ೧೨ | ೧೩.೬೩ |
| | ಕಡಿಮೆ ಇಳುವರಿ | ೧೪ | ೧೬.೪೭ | ೧೬ | ೨೦.೨೬ | ೧೬ | ೧೮.೧೮ |
| | ಒಟ್ಟು | ೮೫ | ೧೦೦ | ೭೯ | ೧೦೦ | ೮೮ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಕೋಷ್ಟಕ ೫.೫ರಲ್ಲಿ ಗಣಿಗಾರಿಕೆಯಿಂದ ಹೊಸಪೇಟೆ ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯ ಮೇಲಾಗಿರುವ ಭೂಸವೆತದ ಪ್ರಮಾಣ, ಭೂಸವೆತಕ್ಕೆ ಕಾರಣಗಳು ಮತ್ತು ಪರಿಣಾಮಗಳ ಶೇಕಡವಾರು ಕ್ಷೇತ್ರಕಾರ್ಯ ಒಳಪಡಿಸಿರುವ ಕುಟುಂಬಗಳ ಮಾಹಿತಿಯ ದತ್ತಾಂಶವನ್ನು ತೋರಿಸುತ್ತದೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯಲ್ಲಿ ಒಟ್ಟು ೯೦ ಕುಟುಂಬಗಳು ಪೈಕಿ ೮೫ ಕುಟಂಬಗಳು ಶೇ.೯೪.೪೪ರಷ್ಟು ಕೃಷಿ ಭೂಮಿಯ ಮೇಲೆ ಭೂಸವೇತಗಳಾಗಿವೆ. ಇನ್ನುಳಿದ ೦೫ ಕುಟುಂಬಗಳು ಶೇ.೦೫.೫೬ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಿರುವುದು ಕಂಡು ಬಂದಿಲ್ಲ ಎಂದು ತಿಳಿಸಿದ್ದಾರೆ. ಆದರೆ ಈ ಗಣಿ ಗ್ರಾಮೀಣ ಪ್ರದೇಶದಲ್ಲಿ ಭೂಸವೆತ ಉಂಟಾಗಲು ಕಾರಣವೇನು ಎಂಬ ಪ್ರಶ್ನೆಯನ್ನು ಕೇಳಿದಾಗ ಒಟ್ಟು ೮೫

ಕುಟುಂಬಗಳಲ್ಲಿ ೪೨ ಕುಟುಂಬಗಳು ಗಣಿಗಾರಿಕೆಯ ಹಾವಳಿ ಅಥವಾ ಪ್ರಭಾವದಿಂದ ಶೇ ೪೯.೪೧ರಷ್ಟು, ೨೭ ಕುಟುಂಬಗಳು ಮಣ್ಣಿನ ಸಾಗಣಿಕೆಯಿಂದ ಶೇ.೩೧.೭೬ರಷ್ಟು ಹಾಗೂ ೧೬ ಕುಟುಂಬಗಳು ನೈಸರ್ಗಿಕ ವಿಕೋಪಗಳೇ ಶೇ.೧೮.೮೨ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಕಾರಣಗಳಾಗಿವೆ. ಈ ಮೂರು ಕಾರಣಗಳನ್ನು ಕುಟುಂಬಗಳಲ್ಲಿ ಅವಲೋಕಿಸಿದಾಗ ೪೨ ಕುಟುಂಬಗಳು ಅಂದರೇ ಶೇ.೪೯.೪೧ರಷ್ಟು ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೇತ ಉಂಟಾಗಲು ಗಣಿಗಾರಿಕೆಯೇ ಅಧಿಕ ಪ್ರಮಾಣದ ಕಾರಣವಾಗಿರುವುದು ಕುಟುಂಬಗಳ ದತ್ತಾಂಶದಿಂದ ಗ್ರಹಿಸಬಹುದಾಗಿದೆ. ಹಾಗೆಯೇ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೇತ ಉಂಟಾಗುವುದರಿಂದ ಯಾವ ಪರಿಣಾಮಗಳಾಗಿವೆ ಎಂಬ ಪ್ರಶ್ನೆಗೆ ೮೫ ಕುಟುಂಬಗಳಲ್ಲಿ ೩೦ ಕುಟುಂಬಗಳು ಕೃಷಿಯ ಮೇಲೆ ಶೇ.೩೫.೨೯ರಷ್ಟು, ೨೬ ಕುಟುಂಬಗಳು ಮಣ್ಣಿನ ನಾಶ ಶೇ.೩೦.೫೮ರಷ್ಟು, ೧೫ ಕುಟುಂಬಗಳು ಕಡಿಮೆ ಫಲವತ್ತತೆ ಶೇ.೧೭.೬೪ರಷ್ಟು ಹಾಗೂ ೧೪ ಕುಟುಂಬಗಳು ಕಡಿಮೆ ಇಳುವರಿ ಶೇ.೧೬.೪೮ರಷು ಭೂಸವೇತದ ಪರಿಣಾಮಗಳಾಗಿವೆ. ಇದರಲ್ಲಿ ಶೇ ೩೦.೫೮ರಷ್ಟು ಕೃಷಿ ಕುಂಠಿತಗೊಳ್ಳುತ್ತಿರುವ ಪರಿಣಾಮಗಳೇ ಅಧಿಕ ಪ್ರಮಾಣದಾಗಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಗಣಿ ವಲಯದ ಒಟ್ಟು ೯೦ ಕುಟುಂಬಗಳಲ್ಲಿ ಕೃಷಿ ಭೂಮಿಯಲ್ಲಿ ಭೂಸವೆತವಾಗಿದೆಯಾ ಎಂಬ ಪ್ರಶ್ನೆಗೆ ೭೯ ಕುಟುಂಬಗಳು ಶೇ.೮೭.೭೮ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಿದೆಂದು, ಇನ್ನುಳಿದ ೧೧ ಕುಟುಂಬಗಳು ಅಂದರೇ ಶೇ.೧೨.೨೨ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಿಲ್ಲ ಎಂಬ ಹೇಳಿಕೆಯು ಸಮೀಕ್ಷೆಯ ದತ್ತಾಂಶಗಳಿಂದ ಕಂಡು ಬಂದಿದೆ. ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಿವೆಂದು ಹೇಳಿರುವ ಒಟ್ಟು ೭೯ ಕುಟುಂಬಗಳಿಗೆ ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಕಾರಣವೇನು ಎಂದು ಕೇಳಿದಾಗ, ೩೪ ಕುಟುಂಬಗಳು ಗಣಿಗಾರಿಕೆ ಹಾವಳಿ ಶೇ.೪೩.೦೫ರಷ್ಟು, ೩೦ ಕುಟುಂಬಗಳು ಮಣ್ಣು ಸಾಗಾಣಿಕೆ ಶೇ.೩೭.೯೭ರಷ್ಟು, ೧೬ ಕುಟುಂಬಗಳು ನೈಸರ್ಗಿಕ ವಿಕೋಪ ಶೇ.೧೮.೯೮ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಕಾರಣವಾಗಿದೆ. ಅಂದರೆ ಈ ವಲಯದ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಗಣಿಗಾರಿಕೆಯ ಹಾವಳಿಯ ಕಾರಣಗಳೇ (ಶೇ,೪೩.೦೫) ಅಧಿಕ ಪ್ರಮಾಣದಲ್ಲಿ ಇರುವುದು ಕಾಣಸಿಗುತ್ತದೆ. ಮುಂದುವರೆದು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾದಾಗ ಯಾವ ಪರಿಣಾಮಗಳು ಬೀರಿವೆ ಎಂಬ ಪ್ರಶ್ನೆಗೆ ೭೯ ಕುಟುಂಬಗಳಲ್ಲಿ ೩೦ ಕುಟುಂಬಗಳು ಕೃಷಿ ಕುಂಠಿತ ಶೇ.೩೯.೨೪ರಷ್ಟು, ೨೦ ಕುಟುಂಬಗಳು ಮಣ್ಣು ನಾಶ ಶೇ.೨೫.೩೨ರಷ್ಟು, ೧೨ ಕುಟುಂಬಗಳು ಕಡಿಮೆ ಫಲವತತ್ತೆ ಶೇ.೧೫.೧೮ರಷ್ಟು ಹಾಗೂ ೧೬ ಕುಟುಂಬಗಳು ಕಡಿಮೆ ಇಳುವರಿ ಶೇ.೨೦.೨೧ರಷ್ಟು ಪರಿಣಾಮಗಳು ಬೀರಿವೆ. ಒಟ್ಟಾರೆಯಾಗಿ ಈ ಕುಟುಂಬಗಳಲ್ಲಿ ಭೂಸವೇತದಿಂದಾಗಿ ಶೇ.೩೯.೨೪ರಷ್ಟು ಕೃಷಿ ಕುಂಠಿತಗೊಳ್ಳುತ್ತಿರುವ ಪರಿಣಾಮದ ಪ್ರಮಾಣ ಅಧಿಕವಾದರೆ, ಕಡಿಮೆ ಫಲವತತ್ತೆಯ ಪರಿಣಾಮಗಳು ಶೇ.೧೫.೧೮ರಷ್ಟು ಕಡಿಮೆ ಪ್ರಮಾಣದಲ್ಲಿರುವುದು ಕುಟುಂಬಗಳಿಂದ ಕಂಡುಬರುತ್ತದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೆತವಾಗಿದೆಯಾ ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ಒಟ್ಟು ೯೦ ಕುಟುಂಬಗಳಲ್ಲಿ ೮೮ ಕುಟುಂಬಗಳು ಕೃಷಿ ಭೂಮಿಯಲ್ಲಿ ಶೇ.೯೭.೭೭ರಷ್ಟು ಭೂಸವೆತ ಉಂಟಾಗಿದೆ ಎಂದೂ, ಇನ್ನುಳಿದ ೧೨ ಕುಟುಂಬಗಳು ಕೃಷಿ ಭೂಮಿಯಲ್ಲಿ ಶೇ.೦೨.೨೩ರಷ್ಟು ಭೂಸವೆತ ಉಂಟಾಗಿರುವುದು ಕಂಡುಬಂದಿಲ್ಲ ಎಂದು ತಿಳಿಸಿದ್ದಾರೆ. ಆದರೆ ಕೃಷಿ ಭೂಮಿಯಲ್ಲಿ ಭೂಸವೆತಕ್ಕೆ ಒಳಗಾಗಿರುವ ೮೮ ಕುಟುಂಬಗಳಿಗೆ ಭೂಸವೆತ ಸಂಭವಿಸಲು ಕಾರಣವೇನು ಎಂದು ಕೇಳಿದಾಗ, ೩೬ ಕುಟುಂಬದ ಮಾಹಿತಿದಾರರು ಗಣಿಗಾರಿಕೆ ಹಾವಳಿ ಶೇ.೪೦.೯೧ರಷ್ಟು, ೩೫ ಕುಟುಂಬದವರು ಮಣ್ಣು ಸಾಗಣಿಕೆ ಶೇ.೩೯.೭೭ರಷ್ಟು, ೧೭ ಕುಟುಂಬದವರು ನೈಸರ್ಗಿಕ ವಿಕೋಪಗಳೇ ಶೇ.೧೯.೩೨ರಷ್ಟು ಭೂಸವೇತಕ್ಕೆ ಕಾರಣವಾಗಿವೆ. ಇದರಲ್ಲಿ ಬಹುಮುಖ್ಯವಾಗಿ ಗ್ರಹಿಸಬೇಕಾದ ಅಂಶವೆಂದರೆ ಕೃಷಿ ಭೂಮಿಯಲ್ಲಿ ಭೂಸವೇತ ಉಂಟಾಗಲು ಗಣಿಗಾರಿಕೆಯ ಹಾವಳಿಯೇ (ಶೇ.೪೦.೯೧) ಅಧಿಕ

ಪ್ರಮಾಣದ ಕಾರಣವಾಗಿದೆ ಎಂದು ಕುಟುಂಬಗಳಿಂದ ಕಂಡು ಬಂದಿರುವ ನಿಲುವುಗಳಾಗಿವೆ. ಈ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಉಂಟಾಗಿರುವ ಭೂ ಸವೇತದ ಪರಿಣಾಗಳೇನು ಎಂದು ಕುಟುಂಬಗಳಿಗೆ ಪ್ರಶ್ನೆಯನ್ನು ಕೇಳಿದಾಗ, ಒಟ್ಟು ೮೮ ಕುಟುಂಬಗಳಲ್ಲಿ ೪೪ ಕುಟುಂಬಗಳು ಕೃಷಿ ಕುಂಠಿತ ಶೇ.೫೦.೦೧ರಷ್ಟು,೧೬ ಕುಟುಂಬಗಳು ಮಣ್ಣಿನ ನಾಶ ಶೇ.೧೮.೧೮ರಷ್ಟು, ೧೨ ಕುಟುಂಬಗಳು ಕಡಿಮೆ ಫಲವತ್ತತೆ ಶೇ.೧೩.೬೩ರಷ್ಟು, ೧೬ ಕುಟುಂಬಗಳು ಶೇ.೧೮.೧೮ರಷ್ಟು ಕಡಿಮೆ ಇಳುವರಿಯ ಪರಿಣಾಮಗಳಾಗಿವೆ ಎಂದು ತಿಳಿಸಿದ್ದಾರೆ. ಇದರಲ್ಲಿ ಭೂಸವೇತದಿಂದಾಗಿ ಕೃಷಿ ಕುಂಠಿತಗೊಳ್ಳುವ ಪರಿಣಾಮಗಳ ಪ್ರಮಾಣ ಅಧಿಕವಾಗಿದೆ. ಒಟ್ಟಾರೆಯಾಗಿ ಗಣಿಗಾರಿಕೆಯ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂ ಸವೇತ ಉಂಟಾಗಿದೆ. ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಅಧಿಕವಾಗಿ ಕೃಷಿ ಭೂಮಿಯಲ್ಲಿ ಭೂಸವೇತಗಳಾಗಿರುವುದು ಕುಟುಂಬಗಳ ಸಮೀಕ್ಷೆಯಿಂದ ತಿಳಿದು ಬರುತ್ತದೆ. ಗಣಿ ವಲಯದ ಕೃಷಿ ಭೂಮಿಯಲ್ಲಿ ಉಂಟಾಗಿರುವ ಭೂಸವೇತ, ಭೂಸವೇತಕ್ಕೆ ಕಾರಣ ಹಾಗೂ ಪರಿಣಾಮಗಳನ್ನು ಕುಟುಂಬಗಳ ಮಾಹಿತಿಯ ಆಧಾರದ ಮೇಲೆ ತಾಲ್ಲೂಕುವಾರು ದತ್ತಾಂಶವನ್ನು ಕೋಷ್ಟಕ ೬.೫ರಲ್ಲಿ ನೀಡಿರುವುದು ಗಮನಿಸಬಹುದಾಗಿದೆ.

**೫.೧೦ ಗಣಿ ಸ್ಫೋಟ ಮತ್ತು ಬಿರುಕು**

ಗಣಿಗಾರಿಕೆಯ ಗ್ರಾಮೀಣ ಪ್ರದೇಶದಲ್ಲಿ ಉಂಟಾಗುತ್ತಿರುವ ಗಣಿ ಸ್ಫೋಟಗಳಿಂದಾಗುವ ಬಿರುಕಿನ ಪ್ರಭಾವಕ್ಕೆ ಸಂಬಂಧಿಸಿದಂತೆ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಮನೆ ಬಿರುಕು ಬಿಟ್ಟಿದೆಯಾ ಹಾಗೂ ಈ ಬಿರಕು ಬಿಡಲು ಕಾರಣಗಳನ್ನು ಕೇಳಿದಾಗ ಬಂದ ಫಲಿತಾಂಶವನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕೋಷ್ಟಕ ೫.೬ ಗಣಿ ವಲಯದ ಕುಟುಂಬಗಳ ಮನೆ ಬಿರುಕು ಬಿಟ್ಟಿರುವ ಪ್ರಮಾಣ**

| ಕ್ರಸಂ | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲೂಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬಗಳು | ಶೇ | ಕುಟುಂಬಗಳು | ಶೇ | ಕುಟುಂಬಗಳು | ಶೇ |
| ೧ | ಮನೆ ಬಿರುಕು ಬಿಟ್ಟಿದೆಯಾ | | | | | | |
| | ಹೌದು | ೮೦ | ೮೮.೮೮ | ೭೨ | ೮೦ | ೭೧ | ೭೮.೮೯ |
| | ಇಲ್ಲ | ೧೦ | ೧೧.೧೨ | ೧೮ | ೨೦ | ೧೯ | ೨೧.೧೧ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| ೨ | ಹೌದಾದರೆ ಕಾರಣ | | | | | | |
| | ಗಣಿಸ್ಫೋಟ | ೬೧ | ೭೬.೨೫ | ೫೧ | ೭೦.೮೪ | ೫೭ | ೮೦.೨೮ |
| | ಪ್ರಕೃತಿ ವಿಕೋಪ | ೧೯ | ೨೩.೭೫ | ೨೧ | ೨೯.೧೬ | ೧೪ | ೧೯.೭೨ |
| | ಇತರೆ | – | – | – | – | – | – |
| | ಒಟ್ಟು | ೮೦ | ೧೦೦ | ೭೨ | ೧೦೦ | ೭೧ | ೧೦೦ |

**ಮೂಲ : ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಬಳಾರಿ–ಹೊಸಪೇಟೆ–ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮನೆ ಬಿರುಕು ಬಿಟ್ಟಿರುವ ಪ್ರಮಾಣ ಮತ್ತು ಮನೆ ಬಿರುಕು ಬಿಡಲು ಕಾರಣಗಳ ಶೆಕಾಡವಾರು ಪ್ರಮಾಣವನ್ನು ತೋರಿಸುತ್ತದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಿಗೆ ಮನೆ ಬಿರುಕು ಬಿಟ್ಟಿರುವ ಪ್ರಶ್ನೆಗೆ ಸಂಬಂಧಿಸಿದಂತೆ ಕಂಡು ಬಂದ ಫಲಿತಾಂಶವನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಹೊಸಪೇಟೆ ಗಣಿ ಪ್ರದೇಶದ ಒಟ್ಟು ೯೦ ಕುಟುಂಬಗಳ ಪೈಕಿ ೮೦ ಕುಟುಂಬಗಳು ಶೇ.೮೮.೮೮ರಷ್ಟು ಮನೆ ಬಿರುಕು ಬಿಟ್ಟಿದರೆ, ಇನ್ನುಳಿದ ೧೦ ಕುಟುಂಬಗಳು ಶೇ.೧೧.೧೨ರಷ್ಟು ಮನೆ ಬಿರುಕು ಬಿಟ್ಟಿಲ್ಲ ಎಂದು ತಿಳಿಸಿದಾರೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮನೆಗಳು ಅಧಿಕವಾಗಿ ಬಿರುಕು ಬಿಟ್ಟಿರುವುದು

ಅತ್ಯಂತ ದುಸ್ಥಿತಿಯಾಗಿದೆ. ಮನೆ ಬಿರುಕು ಬಿಟ್ಟರುವ ೮೦ ಕುಟುಂಬಗಳಿಗೆ ಬಿರುಕು ಬಿಡಲು ಕಾರಣಗಳನ್ನು ಕೇಳಿದಾಗ ೬೧ ಕುಟುಂಬಗಳ ಮನೆಗಳು ಗಣಿ ಸ್ಫೋಟದಿಂದ ಶೇ.೭೬.೨೫ರಷ್ಟು, ಪ್ರಕೃತಿ ವಿಕೋಪಗಳಿಂದ ಶೇ.೨೩.೭೫ರಷ್ಟು, ೧೯ ಕುಟುಂಬಗಳ ಮನೆಗಳು ಬಿರುಕು ಬೀಡಲು ಕಾರಣಗಳಾಗಿವೆ. ಮನೆ ಬಿರಕು ಬಿಡಲು ಗಣಿ ಸ್ಫೋಟದ ಕಾರಣವೇ ಅಧಿಕವಾಗಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಗೋಚರಿಸಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಮನೆ ಬಿರುಕು ಬಿಟ್ಟಿರುವ ಪ್ರಮಾಣವನ್ನು ಗಮನಿಸುವುದಾದರೆ, ೯೦ ಕುಟುಂಬಗಳಲ್ಲಿ ೭೨ ಕುಟುಂಬಗಳ ಮನೆಗಳು ಶೇ.೭೦.೮೪ರಷ್ಟು ಮನೆಗಳು ಬಿರುಕು ಬಿಟ್ಟಿದರೆ, ಇನ್ನುಳಿದ ೧೮ ಕುಟುಂಬಗಳು ಶೇ.೨೯.೧೬ರಷ್ಟು ಮನೆಗಳು ಬಿರುಕು ಬಿಟ್ಟಿಲ್ಲ ಎಂಬ ಅಂಶವು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಈ ವಲಯದಲ್ಲಿಯೂ ಮನೆ ಬಿರುಕು ಬಿಟ್ಟರುವ ಪ್ರಮಾಣ ಅಧಿಕವಾಗಿ ಗೋಚರಿಸುತ್ತದೆ. ಇದು ಗಣಿಗಾರಿಕೆ ನಡೆದಾಗ ಆಗಿರುವ ಪರಿಣಾಮಗಳಾಗಿವೆಂದು ಹೇಳಲಾಗಿದೆ. ಅದು ಹೇಗೆಂದರೆ ಗಣಿಯಲ್ಲಿ ಅದರನ್ನು ಸ್ಫೋಟ್ಟಿಸಿದಾಗ ಭೂ ಕಂಪನವಾಗಿ ಮನೆಗಳು ಬಿರುಕು ಬಿಟ್ಟಿದೆ. ಮನೆ ಬಿರುಕು ಬಿಟ್ಟಿವೆಂದು ಹೇಳಿರುವ ೭೨ ಕುಟುಂಬಗಳಿಗೆ ಮನೆ ಬಿರುಕು ಬೀಡಲು ಕಾರಣವೇನು? ಎಂದು ಕೇಳಿದಾಗ ೫೧ ಕುಟುಂಬಗಳು ಮನೆ ಬಿರುಕು ಬಿಡಲು ಗಣಿ ಸ್ಫೋಟವೇ ಶೇ.೭೦.೮೪ರಷ್ಟು ಕಾರಣವಾಗಿದೆ ಎಂದೂ, ಇನ್ನುಳಿದ ೧೨ ಕುಟುಂಬಗಳು ಶೇ.೨೯.೧೬ರಷ್ಟು ಪ್ರಕೃತಿ ವಿಕೋಪಗಳೇ ಕಾರಣವಾಗಿವೆಂದು ತಿಳಿದು ಬರುತ್ತದೆ. ಈ ವಲಯದಲ್ಲೂ ಮನೆ ಬಿರುಕು ಬೀಡಲು ಗಣಿ ಸ್ಫೋಟವೇ ಕಾರಣವಾಗಿದೆ ಎಂದು ಕ್ಷೇತ್ರಕಾರ್ಯದಿಂದ ಬಂದ ಫಲಿತವಾಗಿದೆ. ಕುಟುಂಬಗಳ ಮನೆ ಬಿರುಕು ಬಿಡುವ ಕಾರಣವಾದ ಗಣಿ ಸ್ಫೋಟ ಅಂಶವೇ ಅಧಿಕವಾಗಿ ಗೋಚರಿಸುತ್ತದೆ.

ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೯೦ ಕುಟುಂಬಗಳ ಪೈಕಿ ೭೧ ಕುಟುಂಬಗಳು ಶೇ.೭೮.೮೮ರಷ್ಟು ಮನೆ ಬಿರುಕು ಬಿಟ್ಟಿವೆ ಎಂದೂ, ಇನ್ನಳಿದ ೧೯ ಕುಟುಂಬಗಳು ಶೇ.೨೧.೧೨ರಷ್ಟು ಮನೆ ಬಿರುಕು ಬಿಟ್ಟಿಲ್ಲ. ಇದರಲ್ಲಿ ಪ್ರಮುಖವಾಗಿ ಮನೆ ಬಿರುಕು ಬಿಟ್ಟಿರುವ ಕುಟುಂಬಗಳು ಶೇ.೫೭.೭೬ರಷ್ಟು ಹೆಚ್ಚಾಗಿರುವುದು ಕಂಡು ಬರುತ್ತದೆ. ಮನೆ ಬಿರುಕು ಬೀಡಲು ಕಾರಣವನ್ನು (೭೧) ಕುಟುಂಬಗಳಿಗೆ ಕೇಳಿದಾಗ, ೫೭ ಕುಟುಂಬಗಳು ಮನೆ ಬಿರುಕು ಬೀಡಲು ಗಣಿ ಸ್ಫೋಟವೇ ಶೇ.೮೦.೨೮ರಷ್ಟು ಕಾರಣವಾಗಿದೆ ಎಂದೂ, ಇನ್ನುಳಿದ ೫೩ ಕುಟುಂಬಗಳು ಮನೆ ಬೀರುಕು ಬಿಡಲು ಪ್ರಕೃತಿ ವಿಕೋಪವೂ ಶೇ.೧೯.೭೨ರಷ್ಟು ಕಾರಣವಾಗಿದೆ. ಇದರಲ್ಲಿ ಮನೆ ಬಿರುಕು ಬಿಡಲು ಗಣಿ ಸ್ಫೋಟವೇ (ಶೇ.೮೦.೨೮) ಅಧಿಕವಾಗಿ ಕಾರಣವಾಗಿರುವ ಅಂಶವಾಗಿದೆ. ಒಟ್ಟಾರೆ ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮನೆ ಬಿರುಕು ಬಿಡಲು ಗಣಿ ಸ್ಫೋಟ್ಟವೇ ಕಾರಣವಾಗಿದೆ. ಈ ಕಾರಣವನ್ನು ತಾಲ್ಲೂಕುವಾರು ಅವಲೋಕಿಸುವುದಾದರೆ, ಹೊಸಪೇಟೆ ತಾಲ್ಲೂಕಿನ ಕುಟುಂಬಗಳ ಮನೆಗಳು (ಶೇ.೮೮.೮೮) ಅಧಿಕವಾಗಿ ಬಿರುಕು ಬಿಟ್ಟಿವೆ. ಆದರೆ ಕಡಿಮೆ ಪ್ರಮಾಣದಲ್ಲಿ ಮನೆ ಬಿರುಕು ಬಿಟ್ಟರುವ ಕುಟುಂಬಗಳು (ಶೇ.೭೮.೮೮) ಬಳ್ಳಾರಿ ಗ್ರಾಮೀಣ ಪ್ರದೇಶದಲ್ಲಿವೆ ಎಂಬ ಅಂಶವನ್ನು ಕೋಷ್ಟಕದಲ್ಲಿ ಗಮನಿಸಬಹುದು. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಮನೆ ಬಿರುಕು ಬಿಡಲು ಕಾರಣವನ್ನು ಗಮನಿಸಿದಾಗ, ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ (ಶೇ.೮೦.೨೮) ಅಧಿಕವಾಗಿ ಕಂಡು ಬಂದರೆ, ಕಡಿಮೆ ಪ್ರಮಾಣದ ಮನೆ ಬಿರುಕು ಬಿಡಲು ಕಾರಣ (ಶೇ.೭೦.೮೩) ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಕಾಣಸಿಗುತ್ತದೆ. ಅಂದರೆ ಗಣಿ ಕೇಂದ್ರಿತ ಪ್ರದೇಶದ ಸುತ್ತಮುತ್ತಲು ಗಣಿ ಸ್ಫೋಟಗಳಿಂದಾಗಿ ಮನೆ ಬಿರುಕು ಬಿಟ್ಟಿರುವುದು ಗ್ರಹಿಸಬೇಕಾದ ಅಂಶವಾಗಿದೆ.

### ೫.೧೧ ಕೆರೆ-ಬಾವಿ-ಅಣೆಕಟ್ಟುಗಳ ನೀರಿನ ಗುಣಮಟ್ಟ

ಗಣಿ ಗ್ರಾಮೀಣ ಪ್ರದೇಶದ ಕೆರೆ-ಬಾವಿ-ಅಣೆಕಟ್ಟುಗಳ ನೀರಿನ ಗುಣಮಟ್ಟಕ್ಕೆ ಸಂಬಂಧಿಸಿದಂತೆ ಜಲವನ್ನು ಸೂಚಕವಾಗಿ ಬಳಸಿಕೊಂಡು ಕುಟುಂಬಗಳನ್ನು ಕ್ಷೇತ್ರಕಾರ್ಯಕ್ಕೆ ಒಳಪಡಿಸಿದಾಗ ಕೆರೆ-ಬಾವಿ-ಅಣೆಕಟ್ಟುಗಳ ನೀರು ಗುಣಮಟ್ಟದೇ ಅಥವಾ ಗುಣಮಟ್ಟದಲ್ಲ ಎಂದೂ ಹೇಳುವುದಾದರೇ ಅದಕ್ಕೆ ಕಾರಣವೇನು? ಅಂತ ಕೇಳಿದಾಗ ಬಂದ ಫಲಿತಾಂಶವನ್ನು ದತ್ತಾಂಶದ ಮೂಲಕ ದಾಖಲಿಸಿ ವಿಶ್ಲೇಷಣೆ ಈ ಕೆಳಗಿನಂತೆ ಒಳಪಡಿಸಲಾಗಿದೆ.

**೫.೭ ಗಣಿ ವಲಯದ ಕರೆ-ಬಾವಿ-ಅಣೆಕಟ್ಟುಗಳ ನೀರಿನ ಗುಣಮಟ್ಟದ ಪ್ರಮಾಣದ ವಿವರ**

| ಕ್ರಸಂ | ವಿವರಣೆ | ಹೊಸಪೇಟೆ ತಾಲ್ಲೂಕು | | ಸಂಡೂರು ತಾಲ್ಲಾಕು | | ಬಳ್ಳಾರಿ ತಾಲ್ಲೂಕು | |
|---|---|---|---|---|---|---|---|
| | | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ | ಕುಟುಂಬ ಗಳು | ಶೇ |
| ೦೧ | ಕೆರೆ-ಬಾವಿ-ಅಣೆಕಟ್ಟುಗಳ ನೀರು ಗುಣಮಟ್ಟದಾಗಿದೆಯಾ? | | | | | | |
| | ಹೌದು | ೦೯ | ೧೦ | ೩೦ | ೩೩.೩೪ | ೨೭ | ೩೦ |
| | ಇಲ್ಲ | ೮೧ | ೯೦ | ೬೦ | ೬೬.೬೬ | ೬೩ | ೭೦ |
| | ಒಟ್ಟು | ೯೦ | ೧೦೦ | ೯೦ | ೧೦೦ | ೯೦ | ೧೦೦ |
| | ಇಲ್ಲವಾದರೆ ಕಾರಣಗಳೇನು? | | | | | | |
| | ಗಣಿ ಹೂಳು | ೩೬ | ೪೪.೪೫ | ೧೬ | ೨೬.೬೭ | ೨೮ | ೪.೪೪ |
| | ಗಣಿ ತಜ್ಯ | ೨೮ | ೩೪.೫೭ | ೨೫ | ೪೧.೬೫ | ೧೦ | ೧೫.೮೮ |
| | ಕಲುಷಿತ | ೧೭ | ೨೦.೯೮ | ೧೯ | ೩೧.೬೮ | ೨೫ | ೩೯.೬೯ |
| | ಒಟ್ಟು | ೮೧ | ೧೦೦ | ೬೦ | ೧೦೦ | ೬೩ | ೧೦೦ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವು ಹೊಸಪೇಟೆ-ಬಳ್ಳಾರಿ-ಸಂಡೂರು ಗಣಿ ಗ್ರಾಮೀಣ ಸುತ್ತಮುತ್ತಲ್ಲಿನ ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗಿದೆಯಾ ಅಥವಾ ಇಲ್ಲವೋ ಎಂಬ ಅಂಶದ ಆಧಾರದ ಮೇಲೆ ಕುಟುಂಬಗಳ ಕ್ಷೇತ್ರಕಾರ್ಯದ ಫಲಿತಾಂಶಗಳಿಂದ ತಾಲ್ಲೂಕುವಾರು ಕೆರೆ-ಬಾವಿ-ಅಣೆಕಟ್ಟುಗಳ ನೀರು ಯೋಗ್ಯವಾಗಿರುವ ಪ್ರಮಾಣ ಹಾಗೂ ನೀರು ಬಳಸಲು ಯೋಗ್ಯವಾಗದಿರಲು ಕಾರಣಗಳ ಪ್ರಮಾಣವನ್ನು ತೋರಿಸುತ್ತದೆ. ಗಣಿ ಗ್ರಾಮೀಣ ಪ್ರದೇಶದ ಸುತ್ತಮುತ್ತಲ್ಲಿನ ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗಿದೆಯಾ? ಎಂಬ ಪ್ರಶ್ನೆಯನ್ನು ಕೇಳಿದಾಗ, ಹೊಸಪೇಟೆ ವಲಯದ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಪೈಕಿ ೦೯ ಕುಟುಂಬಗಳು ನೀರು ಬಳಸಲು ಶೇ.೧೦ರಷ್ಟು ಯೋಗ್ಯವಾಗಿದೆ ಎಂದೂ, ಇನ್ನುಳಿದ ೮೧ ಕುಟುಂಬಗಳು ನೀರು ಬಳಸಲು ಅಥವಾ ಕುಡಿಯಲು ಶೇ.೯೦ರಷ್ಟು ಯೋಗ್ಯವಾಗಿಲ್ಲ ಎಂದು ತಿಳಿದು ಬರುತ್ತದೆ. ಹಾಗಾದರೆ ೮೧ ಕುಟುಂಬಗಳಲ್ಲಿಯೇ ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದೆ ಇರಲು ಕರಣಗಳೇನು? ಎಂದು ಕೇಳಿದಾಗ, ೩೬ ಕುಟುಂಬಗಳು ಗಣಿ ಹೂಳು ಶೇ.೪೪.೪೫ರಷ್ಟು, ೧೭ ಕುಟುಂಬಗಳು ಗಣಿ ತಾಜ್ಯ

ಶೇ.೩೪.೫೭ರಷ್ಟು, ೩೬ ಕುಟುಂಬಗಳು ಕಲುಷಿತ ಶೇ.೨೦.೯೮ರಷ್ಟು ಗಣಿ ಗ್ರಾಮೀಣ ಪ್ರದೇಶದಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದಿರಲು ಕಾರಣವಾಗಿದೆ. ಇದರಲ್ಲಿಯೇ ಗಣಿ ಹೂಳಿನಿಂದಾಗಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾದಿರಲು (ಶೇ.೪೪.೪೫) ಅಧಿಕ ಪ್ರಮಾಣದ ಕಾರಣವಾಗಿರುವುದು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ದುಸ್ಥಿತಿಯೇ ಆಗಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ೯೦ ಕುಟುಂಬಗಳ ಕ್ಷೇತ್ರಕಾರ್ಯದ ಮಾಹಿತಿಯ ಪ್ರಕಾರ ಗ್ರಾಮೀಣ ಪ್ರದೇಶದ ೩೦ ಕುಟುಂಬಗಳಿಗೆ ಸುತ್ತಮುತ್ತಲಲ್ಲಿ ಇರುವ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಶೇ.೩೪.೩೪ರಷ್ಟು ಯೋಗ್ಯವಾದರೆ, ೬೦ ಕುಟುಂಬಗಳಿಗೆ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಶೇ.೬೬.೬೬ರಷ್ಟು ಯೋಗ್ಯವಾಗಿರುವುದಿಲ್ಲ ಎಂಬ ಅಂಶ ಕಂಡುಬಂದಿದೆ. ಹಾಗಾದರೆ ಈ ನೀರು ಯಾಕೆ ಬಳಸಲು ಯೋಗ್ಯವಿಲ್ಲ ಅಥವಾ ಅದಕ್ಕೆ ಕಾರಣಗಳೇನು ಎಂದು ಕೇಳಿದಾಗ, ೧೬ ಕುಟುಂಬಗಳು ಗಣಿ ಹೂಳು ಶೇ.೨೬.೬೭ರಷ್ಟು, ೨೫ ಕುಟುಂಬಗಳು ಗಣಿ ತಾಜ್ಯ ಶೇ.೪೧.೬೫ರಷ್ಟು, ೧೯ ಕುಟುಂಬಗಳು ಕಲುಷಿತ ಶೇ.೩೧.೬೮ರಷ್ಟು ಗಣಿ ಗ್ರಾಮೀಣ ಪ್ರದೇಶದಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದಿರಲು ಕಾರಣವಾಗಿದೆ. ಇದರಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು (ಶೇ.೪೧.೬೫) ಗಣಿ ಹೂಳು ಕಾರಣಗಳೇ ಅಧಿಕವಾಗಿ ಕಂಡುಬರುತ್ತದೆ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕೆರೆ–ಬಾವಿ–ಅಣೆಕಟ್ಟುಗಳ ನೀರು  ಬಳಸಲು ಯೋಗ್ಯವಾಗಿದೆಯಾ? ಎಂಬ ಪ್ರಶ್ನೆಗೆ ೯೦ ಕುಟುಂಬಗಳ ಪೈಕಿ ೨೭ ಕುಟುಂಬಗಳು ಕೆರೆ–ಬಾವಿ–ಅಣೆಕಟ್ಟುಗಳ ನೀರು ಶೇ.೩೦ರಷ್ಟು ಬಳಸಲು ಯೋಗ್ಯವಾಗಿದೆ ಎಂದೂ, ಇನ್ನುಳಿದ ೬೩ ಕುಟುಂಬಗಳು ಕೆರೆ–ಬಾವಿ–ಅಣೆಕಟ್ಟುಗಳ ನೀರು ಬಳಸಲು ಶೇ.೭೦ರಷ್ಟು ಯೋಗ್ಯವಾಗಿಲ್ಲ ಎಂಬ ಅಂಶ ಕ್ಷೇತ್ರಕಾರ್ಯದ ದತ್ತಾಂಶಗಳಿಂದ ತಿಳಿದುಬರುತ್ತದೆ. ಈ ವಲಯದಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಬಳಸಲು ಯೋಗ್ಯವಾಗಿಲ್ಲದ ಪ್ರಮಾಣಕ್ಕಿಂತ ಬಳಸುವ ನೀರು ಯೋಗ್ಯವಾಗಿದೆ ಎಂದು (ಶೇ.೭೦) ಅಧಿಕವಾಗಿ ಕಂಡು ಬರುವ ಮಾಹಿತಿಯಾಗಿದೆ. ಆದರೆ ಇವುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದಿರಲು ಕಾರಣಗಳನ್ನು ಹುಡುಕುತ್ತಾ ಹೋದಾಗ ೬೩ ಕುಟುಂಬಗಳಲ್ಲಿ ೧೬ ಕುಟುಂಬಗಳು ಗಣಿ ಹೂಳು ಶೇ.೪೪.೪೪ರಷ್ಟು, ೧೦ ಕುಟುಂಬಗಳು ಗಣಿ ತಜ್ಯ ಶೇ.೧೫.೮ರಷ್ಟು, ೨೫ ಕುಟುಂಬಗಳು ಕಲುಷಿತ ಶೇ.೩೯.೬೯ರಷ್ಟು ಅಂಶಗಳೇ ನೀರು ಬಳಸದರಲು ಕಾರಣವಾಗಿದೆ. ಇದರಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು (ಶೇ.೪೪.೪೪) ಗಣಿ ಹೂಳು ಕಾರಣಗಳೇ ಅಧಿಕವಾಗಿರುವುದು ಗಮನಿಸಬೇಕಾದ ಅಂಶವಾಗಿದೆ. ಒಟ್ಟಾರೆಯಾಗಿ ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗಿಲ್ಲ ಎಂಬ ಅಂಶ ಹೆಚ್ಚಾಗಿ (ಶೇ.೯೦) ಹೊಸಪೇಟೆ ಗಣಿ ಗ್ರಾಮೀಣ ಭಾಗದಲ್ಲಿದೆ. ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು ಕಾರಣಗಳೂ ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ವಲಯಗಳಲ್ಲಿ ಅಧಿಕವಾಗಿದೆ. ಈ ಪ್ರಮಾಣದ ಕಾರಣಗಳು ಗಣಿಗಾರಿಕೆ ನಡೆದಾಗ ಅಧಿಕವಾಗಿದ್ದು, ಗಣಿ ಸ್ಥಗಿತತೆಯ ನಂತರ ಇದರ ಪ್ರಮಾಣ ಸ್ವಲ್ಪಮಟ್ಟಿಗೆ ಕಡಿಮೆಯಾಗಾರುವುದು ಉತ್ತಮ ಬದಲಾವಣೆಯಾಗಿದೆ. ಈ ಅಧ್ಯಾಯವನ್ನು ಕ್ಷೇತ್ರಕಾರ್ಯದ ಮಾಹಿತಿಯ ಮೂಲಕ ವಿಶ್ಲೇಷಿಸಲಾಗಿದೆ.

**ಕೊನೆಯ ಟಿಪ್ಪಣಿ**

೧. ಸಂಗೀತ.ಪಿ (೨೦೦೭), ಗಣಿಗಾರಿಕೆ ಮತ್ತು ಪರಿಸರ, ಕವನ ಪ್ರಿಂಟ್ಸ್, ಬೆಂಗಳೂರು, ಪು.ಸಂ ೫೬–೫೯.
೨. ಅದೇ, ಪು.ಸಂ ೩೧–೩೩.
೩. ಚಂದ್ರಪೂಜಾರಿ.ಎಂ, (೨೦೧೧), ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ ೪೮–೪೯.
೪. ಪೂರ್ವೋಕ್ತ, ಪು.ಸಂ ೬೨–೬೪.
೫. ಅದೇ, ಪು.ಸಂ ೬೮–೭೭.

# ಅಧ್ಯಾಯ ಆರು

## ಸಮಾರೋಪ

೬.೧ ಅಧ್ಯಯನ ಫಲಿತಗಳು
೬.೨ ಅಧ್ಯಯನ ಸಲಹೆಗಳು
೬.೩ ಅನುಬಂಧಗಳು
೬.೩.೧ ಆಕರ ಗ್ರಂಥಗಳು
೬.೩.೨ ರಚಿತ ಪ್ರಶ್ನಾವಳಿ

# ಅಧ್ಯಾಯ ೬
# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಗಣಿಗಾರಿಕೆಯಿಂದಾಗಿರುವ ಸಾಮಾಜಿಕ, ಆರ್ಥಿಕ, ಸಾಮಾಜಿಕ ಹಾಗೂ ಪರಿಸರಾತ್ಮಕ ಪರಿಣಾಮಗಳನ್ನು ವಿಶಾಲ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದರೂ, ಆರ್ಥಿಕ ಮತ್ತು ಸಾಮಾಜಿಕ ಅಂಶಗಳನ್ನು ಕೇಂದ್ರಿಕರಿಸಿರುವ ಅಧ್ಯಯನ ಇದಾಗಿದೆ. ಗಣಿಗಾರಿಕಾ ಪ್ರದೇಶದಲ್ಲಿ ಆಗಿರುವ ಅನೇಕ ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ಸಂಶೋಧನಾ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಪ್ರಯತ್ನವನ್ನು ಈ ಅಧ್ಯಯನ ನಡೆಸಿದೆ. ಸಮಾರೋಪದಲ್ಲಿ ಗ್ರಾಮೀಣ ಪ್ರದೇಶದ ಜನರ ಆರ್ಥಿಕ ಹಾಗೂ ಸಾಂಸ್ಕೃತಿಕ ಬದುಕಿನ ಮೇಲೆ ಗಣಿಗಾರಿಕೆ ಉಂಟು ಮಾಡಿರುವ ಪರಿಣಾಮಗಳನ್ನು ಉದ್ದೇಶಗಳಿಗೆ ಅನುಗುಣವಾಗಿ ಹಿಡಿದಿಡುವ ಜೊತೆಗೆ ಕೆಲವು ತಾತ್ಕಾಲಿಕ ತಿರ್ಮಾನಗಳನ್ನು ಹಾಗೂ ಅಧ್ಯಯನ ಮಿತಿಯ ಒಳಗೆ ಕೆಲವು ಸಲಹೆಗಳನ್ನು ನೀಡಲು ಪ್ರಯತ್ನಿಸಲಾಗಿದೆ.

ಗಣಿಗಾರಿಕೆಯು ಗ್ರಾಮೀಣ ಜನರ ಬದುಕಿನ ಮೇಲೆ ಉಂಟು ಮಾಡಿರುವ ಪರಿಣಾಮಗಳ ಹಿನ್ನಲೆಯಲ್ಲಿ ಬಳ್ಳಾರಿ ಗಣಿವಲಯಗಳಾದ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶದ ಸಾಮಾಜಿಕ, ಆರ್ಥಿಕ ಮತ್ತು ಪರಿಸರಾತ್ಮಕ ಆಯಾಮಗಳ ಮೇಲಾಗಿರುವ ಪರಿಣಾಮಗಳ ಸ್ಥಿತ್ಯಂತರಗಳನ್ನು ಗ್ರಹಿಸಲಾಗಿದೆ. ಅತ್ಯಂತ ದೊಡ್ಡ ಪ್ರಮಾಣದಲ್ಲಿ ಹಾಗೂ ಕಾನೂನು ಬಾಹಿರವಾಗಿ ಗಣಿಗಾರಿಕೆ ನಡೆದ (೨೦೦೦-೨೦೧೦) ಅವಧಿಯಲ್ಲಿ ಗಣಿಗಾರಿಕೆಯ ಪರಿಣಾಮಗಳು ತೀವ್ರವಾಗಿ ಕಂಡು ಬಂದಿದೆ. ವಿಶೇಷವಾಗಿ ೨೦೦೦-೨೦೧೦ರ ಅವಧಿಯಲ್ಲಿ ಅನೇಕ ರೀತಿಯಾ ಕಾನೂನು ಬಾಹಿರ ಗಣಿ ಚಟುವಟಿಕೆಯು ನಡೆಸಲಾಗಿದೆ. ಈ ಕುರಿತು ಪೂರ್ಣ ಪ್ರಮಾಣದ ತನಿಖೆ ನಡೆಸುವಂತೆ ಸರ್ಕಾರದ ಅಧಿಸೂಚನೆಗಳಾದ Govt.Notification No. CI 164 MMM 2006, dated 12/03/2007, Govt.Notification No. CI 164 MMM 2006 (part), dated 09/09/2008, Govt.Notification No. CI 164 MMM 2006 (part), dated 24/12/2008 and Govt.Notification No. CI 164 MMM 2006(Part), dated 19/07/2010ರ ಆಧಾರದ ಮೇಲೆ ಕರ್ನಾಟಕ ಲೋಕಯುಕ್ತ ಸಂತೋಷ ಹೆಗ್ಡೆ ಅವರ ನೇತೃತ್ವದ ತನಿಖಾ ತಂಡವು ಲೋಕಯುಕ್ತ ಕಾಯ್ದೆ ೧೯೮೮ರ ಅಡಿಯಲ್ಲಿ ಜುಲೈ ೨೭, ೨೦೧೧ರ ತನಿಖಾ ವರದಿಯನ್ನು ಸಲ್ಲಿಸಿದೆ. ಈ ವರದಿಯು ಬಳ್ಳಾರಿ, ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳಲ್ಲಿ ಕಾನೂನು ಬಾಹಿರವಾಗಿ ನಡೆದ ಚಟುವಟಿಕೆಯನ್ನು ತನಿಖೆ ಮಾಡುವ ಮೂಲಕ ವರದಿ ನೀಡಿದೆ. ೨೦೦೬-೧೦ನೇ ಅವಧಿಯವರೆಗೆ ಕರ್ನಾಟಕದಲ್ಲಿ ಗಣಿಗಾರಿಕೆಯ ಉದ್ದಿಮೆದಾರರು ನಡೆಸಿದ ಅಕ್ರಮ ಗಣಿಗಾರಿಕೆ, ಖನಿಜ ಸಂಪತ್ತಿನ ಸಾಗಾಣಿಕೆ, ರಫ್ತು ವ್ಯಾಪಾರಕ್ಕೆ ಉಪಯೋಗಿಸಿದ ಮಾರ್ಗಗಳನ್ನು ಲೋಕಯುಕ್ತ ತಜ್ಞರ ತನಿಖಾ ತಂಡವು ಕೂಲಂಕೂಷವಾಗಿ ಪರಿಶೀಲಿಸಿ ವಿಸ್ತಾರವಾದ ವರದಿಯೊಂದನ್ನು ಸಲ್ಲಿಸಿತು.

ಸರ್ಕಾರದಿಂದ ಗಣಿಗಾರಿಕೆಯ ಗುತ್ತಿಗೆಯನ್ನು ಪಡೆದವರು ಕಬ್ಬಿಣದ ಅದಿರುನ್ನು ಆಂತರಿಕ ಮತ್ತು ವಿದೇಶಕ್ಕೆ ಮಾಡಬಹುದಾಗಿತ್ತು. ಈ ಗುತ್ತಿಗೆ ಗಣಿಯ ಜಾಗಗಳಾಗಿರುವ ಅರಣ್ಯ ಪ್ರದೇಶ, ಕಂದಾಯ ಭೂಮಿಗಳು ಅಥವಾ ಕೃಷಿ ಭೂಮಿಗಳಲ್ಲಿರುತ್ತವೆ. ಭೂಮಿಯಿಂದ ಕಬ್ಬಿಣದ ಅದಿರನ್ನು ಹೊರತೆಗೆಯುವುದು ಅನುಮೋದಿತ ನೀತಿ ಮತ್ತು ಯೋಜನೆಯಡಿಯಲ್ಲಿ ಮಾತ್ರ ಸಾಧ್ಯ. ಇದು ವರ್ಷಕ್ಕೆ ನಿಗದಿ ಪಡೆಸಿರುವ ಪ್ರಮಾಣದಲ್ಲಿಯೇ ನಡೆಸಬೇಕು. ಇದನ್ನು ಉಲ್ಲಂಘಿಸಿದ ಎಲ್ಲಾ ಗಣಿಗಾರಿಕೆಯು ಕಾನೂನು ಬಾಹಿರವಾಗಿರುತ್ತದೆ. ಅಂತವುಗಳಲ್ಲಿ ರೈಸಿಂಗ್(ಹೆಚ್ಚಿದ) ಕಂಟ್ರಾಕ್ಟರ್‌ಗಳ ಉತ್ಪಾದನೆಯ ಮೂಲ ಅಂದರೆ ಗುತ್ತಿಗೆ ನಿಗದಿಪಡೆಸಿದ ಪ್ರದೇಶ ವ್ಯಾಪ್ತಿಯ ಹೊರಗಡೆ ಮಾಡಿದ ಗಣಿಗಾರಿಕೆಯು ಕಾನೂನು ಬಾಹಿರವಾಗಿರುತ್ತದೆ. ಏಕೆಂದರೆ ಖನಿಜವನ್ನು ಗಣಿಯಿಂದ ಹೊರ ತೆಗೆಯುವ ಗಣಿಗಾರಿಕೆ, ಅದಿರಿನ ಸಾಗಾಣಿಕೆ ಇವೆಲ್ಲವೂ ಗಣಿ ಗುತ್ತಿಗೆಯ ಕರಾರು ಮತ್ತು ನೀತಿ ನಿಬಂಧನೆಗಳಿಗೆ ಒಳಪಟ್ಟಿರುತ್ತವೆ.

ಗಣಿಗಳಲ್ಲಿ ಉತ್ಪಾದನೆಯಾದ ಅದಿರನ್ನು ಸಾಗಾಟ ಮಾಡಲು ಟ್ರಾನ್ಸಿಟ್ ಫರ್ಮಿಟ್ ಎನ್ನುವ ಒಂದು ಪರವಾನಿಗೆ ಅವಶ್ಯಕವಾಗಿದೆ. ಭಾರಿ ಮೊತ್ತದ ಕಬ್ಬಿಣದ ಅದಿರನ್ನು ಸಾಗಿಸಲು ಎಂ.ಡಿ.ಪಿ (ಮಿನರಲ್ ಡಿಸ್‌ಪ್ಯಾಚ್ ಫರ್ಮಿಟ್) ಅಗತ್ಯವಿದೆ. ಅದನ್ನು ಗುತ್ತಿಗೆದಾರ ಮತ್ತು ನೋಂದಾಯಿತ ಸ್ಟಾಕ್ಯಾರ್ಡ್ ಮಾಲೀಕರಿಗೆ ನೀಡಲಾಗುವುದು. ಅದರಲ್ಲಿ ಕಬ್ಬಿಣ ಅದರಿನ ಮೂಲಸ್ಥಾನ, ಅ ಗುಣಮಟ್ಟ, ವರ್ಗ ಮತ್ತು ಪ್ರಮಾಣ, ಕ್ರಿಯಾಮಟ್ಟ ಗ್ರಾಹಕನ ಹೆಸರು, ಸರಕು ತಲುಪಬೇಕಾದ ಸ್ಥಳ/ಸ್ಥಾನ, ಸಾಗಾಣಿಕೆಯ ಮಾರ್ಗ ಎಲ್ಲವೂ ನೋಂದಾಯಿತವಾಗಿರುತ್ತದೆ. ಅದಿರನ್ನು ಸಾಗಿಸುವ ವಾಹನಗಳು ಗರಿಷ್ಠ ೧೬ ಮೆಟ್ರಿಕ್ ಟನ್‌ನಷ್ಟು ಕಬ್ಬಿಣದ ಅದಿರನ್ನು ತುಂಬಿಕೊಳ್ಳಬಹುದಾಗಿದೆ. ಭಾರಿ ವಾಹನದಲ್ಲಿ ಸ್ವಲ್ಪ ಹೆಚ್ಚಿಗೂ ಹಾಕಿಸಕೊಳ್ಳಬಹುದು. ಗಣಿ ಗುತ್ತಿಗೆ ಪ್ರದೇಶವು ಕಾಡು ಆಗಿದ್ದಲ್ಲಿ ಅರಣ್ಯ ಇಲಾಖೆಯು 'ಫಾರೆಸ್ಟ್ ಟ್ರಾನ್ಸಿಟ್ ಪರ್ಮಿಟ್' ಅನ್ನುವ ಟ್ರಿಪ್‌ಶೀಟ್‌ನಂತೆ ಪ್ರತಿಯೊಂದು ಲಾರಿಗೆ ಅದಿರು ತುಂಬಿದಾಗ ನೀಡಲಾಗುತ್ತದೆ (ಲೋಕಾಯುಕ್ತರ ತನಿಖಾ ವರದಿ, ಪು.ಸಂ ೧–೨).

ಹೀಗೆ ಗಣಿ ಅದಿರನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸುವ ಸಂದರ್ಭಗಳು ಕೇವಲ ಗಣಿ ಮತ್ತು ಮಾರಾಟಕ್ಕೆ ಸಂಬಂಧಿಸಿರಲಿಲ್ಲ. ಕಾನೂನು ಬಾಹಿರ ಚಟುವಟಿಕೆಗಳು ಅತ್ಯಂತ ವೇಗವಾಗಿ ಹಗಲು ರಾತ್ರಿ ಎನ್ನದೇ ಚಲಿಸತೊಡಗಿದ್ದವು. ಇದು ವಾಹನ ದಟ್ಟನೆಯ ಜೊತೆಗೆ ನಿಗದಿತ ಪ್ರಮಾಣ್ಕಿಂತ ಹೆಚ್ಚಿನ ಪ್ರಮಾಣದ ಅದಿರನ್ನು ಭಾರಿ ವಾಹನಗಳಲ್ಲಿ (ಟಿಪ್ಪರ್ ಲಾರಿಗಳು) ತುಂಬಿಸಿದರ ಫಲವಾಗಿ ಮಾರ್ಗದ ರಸ್ತೆಗಳು ಸಂಪೂರ್ಣವಾಗಿ ಗುಂಡಿಗಳಾದ್ದವು. ಇದು ತುರ್ತು ಸಂದರ್ಭದಲ್ಲಿ ಸಾರ್ವಜನಿಕರು ಸರಳವಾಗಿ ಹೋಗಿ ಬರಲಾರದ ಸ್ಥಿತಿಯನ್ನು ನಿರ್ಮಾಣ ಮಾಡಿತ್ತು. ಇದರ ಜೊತೆಗೆ ವೇಗದ ಚಾಲನೆಯಿಂದಾಗಿ ಬೆಟ್ಟದಂತೆ ಧೂಳು ಉಲ್ಬಣಗೊಂಡಿತ್ತು. ಇದು ಸ್ಥಳೀಯ ಜನರ ಆರೋಗ್ಯದ ಮೇಲೆ ಅದರಲ್ಲಿಯೂ ಶ್ವಾಸಕೋಶದ ಸಮಸ್ಯೆ ರುವವರ ಮೇಲೆ ಅತ್ಯಂತ ಗಂಭೀರವಾದ ಪರಿಣಾಮವನ್ನು ಹುಟ್ಟುಹಾಕಿತ್ತು. ಇದರ ಮುಂದುವರೆದ ಭಾಗದಲ್ಲಿ ಅನಿಯಂತ್ರಿತವಾದ ಗಣಿಗಾರಿಕೆಯಲ್ಲಿ ಹಣದ ಲಾಭಕ್ಕೆ ವಾಹನವನ್ನು ವೇಗವಾಗಿ ಚಲಿಸುವಾ ಅನೇಕ ಅಪಘಾತಗಳು ನಡೆದವು. ಸಂಡೂರು ಠಾಣೆಯಲ್ಲಿ ದಾಖಲಾಗಿರುವ ರಸ್ತೆ ಅಪಘಾತವನ್ನು ೨೦೦೫–೦೬ರಿಂದ ೨೦೧೦ರವರೆಗೆ ಗಮನಿಸಿದರೆ, ಲಾರಿ ಅಪಘಾತದಿಂದ ಸರಾಸರಿ ಒಂದು ವರ್ಷಕ್ಕೆ ೮೦ರಿಂ೧೨೦ರವರೆಗೆ ಲಾರಿ ಅಪಘಾತದಿಂದ ಸ್ಥಳದಲ್ಲಿಯೇ ಮರಣ ಹೊಂದಿದ್ದವರ ಸಂಖ್ಯೆ ತಿಳಿಯುತ್ತದೆ. ಹೀಗೆ ಮರಣ ಹೊಂದಿದ್ದವರ ವಯೋಮಾನ ಗಮನಿಸಿದಾಗ ೨೦–೩೫ ವಯೋಮಾನಕ್ಕೆ ಸೇರಿದಂವರಲ್ಲಿ ಬಹುತೇಕರು ಪುರುಷರು. ಇವರಲ್ಲಿ ಶೇ.೯೫ರಷ್ಟು ಜನರು ವಿವಾಹಿತರು, ಇವರು ದುರ್ಮಣದ ನಂತರ ಇವರ ಕುಟುಂಬಗಳು ಅನಾಥವಾಗಿವೆ. ಅಷ್ಟು ಮಾತ್ರವಲ್ಲದೇ ಈ ಹೆಣ್ಣು ಮಕ್ಕಳು ಮತ್ತು ಕುಟುಂಬಗಳು ಅತ್ಯಂತ ಗಂಭೀರ ಬಿಕ್ಕಟ್ಟುಗಳಿಗೆ ಒಳಪಟ್ಟಿರುವುದು ನಾವು ಗಮನಿಸಿದ್ದೇವೆ. ಇದರಿಂದ ಕೇವಲ ಆರ್ಥಿಕ ಉತ್ಪಾದನಾ ಚಟುವಟಿಕೆಗೆ ಮಾತ್ರವಲ್ಲದೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳು ಸೃಷ್ಠಿಯಾಗಿರುವುದು ತಿಳಿದುಬರುತ್ತದೆ. ಹೀಗೆ ಅಪಘಾತಕ್ಕೊಳಗಾದ ಕುಟುಂಬಗಳಿಗೆ ಪರಿಹಾರವೆಂಬುದು ದುಸ್ವಪ್ನವಾಗಿ ಕಾಣುತ್ತದೆ.

ಗಣಿಗಾರಿಕೆಯಲ್ಲಿ ಕಬ್ಬಿಣದ ಅದರಿನ ಸಾಗಣಿಕೆಯ ಆರಂಭವು ಗಣಿ ಗುತ್ತಿಗೆ ಪಡೆದ ಭೂಮಿ ಅಥವಾ ನೋಂದಾಯಿತ ಸ್ಟಾಕ್ಯಾರ್ಡ್‌ನಿಂದಲ್ಲದೇ ಬೇರ‍್ಯಾವ ಪ್ರದೇಶದಿಂದಲೂ ಕಬ್ಬಿಣದ ಅದರಿನ ಸಾಗಣಿಕೆ ಮಾಡುವುದು ಸಾಮಾನ್ಯವಾಗಿ ಸಾಧ್ಯವಿಲ್ಲ. ಆದರೆ ಅದಿರು ತಲುಪುವ ಸ್ಥಳವು ಒಂದು ಬಂದರು, ನೋಂದಾಯಿತ ಸ್ಟಾಕ್ಯಾರ್ಡ್, ಕಬ್ಬಿಣದ ಕಾರ್ಖಾನೆಗಳಾಗಿರುತ್ತವೆ. ಸರ್ಕಾರದ ಪರವಾನಿಗೆ ಇಲ್ಲದೇ ಸಾಗಾಣಿಕೆಯಾಗುವ ಎಲ್ಲ ಕಬ್ಬಿಣದ ಅದಿರೂ ಸಹ ಕಾನೂನು ಬಾಹಿರವಾಗಿರುತ್ತದೆ. ಹಾಗೂ ಎಂ.ಡಿ.ಪಿ ನಿವಂಧನೆಗಳನ್ನು ಉಲ್ಲಂಘಿಸಿದ ಎಲ್ಲಾ ಕಬ್ಬಣದ ಅದರಿನ ಸಾಗಾಣಿಕೆಯು ಸಹ ಕಾನೂನು ಬಾಹಿರಕ್ಕೆ ಒಳಪಟ್ಟಿರುತ್ತದೆ. ಕಬ್ಬಿಣದ ಅದರಿನ ರಫ್ತುದಾರರು ಸಹ ರಫ್ತು–ಆಮದು ಕೋಡ್ ನಂಬರನ್ನು ಸರ್ಕಾದಿಂದ ಪಡೆದುಕೊಳ್ಳಬೇಕು. ಕರ್ನಾಟಕದಲ್ಲಿ ಕಬ್ಬಿಣದ ಅದರಿನ ರಫ್ತುದಾರರು ತಮ್ಮ ಮಾಲನ್ನು ಚೆನ್ನೈ, ಎನ್ನೂರು, ಮರ್ಮಾಗೋವಾ, ಪಣಜಿ, ಕಾಕಿನಾಡ, ವಿಶಾಖಪಟ್ಟಣಂ, ಕೃಷ್ಣಪಟ್ಟಣಂ, ಬೇಲೆಕೇರಿ,

ಕಾರವಾರ ಮತ್ತು ನವ ಬಂದರುಗಳಿಂದ ರಫ್ತು ಮಾಡುತ್ತಾರೆ. ಗೋವಾದ ಮೂಲಕ ಹೋಗುವ ಕರ್ನಾಟಕದ ಕಬ್ಬಿಣದ ಅದರಿನ ಜೊತೆಗೆ ಗೋವಾ ಮೂಲದ ಕಬ್ಬಿಣ ಅದಿರನ್ನು ಅಕ್ರಮವಾಗಿ ಸೇರಿಸುತ್ತಾರೆ. ಇದರಿಂದ ಅಲ್ಲಿನ ಅದರಿನ ಎಫ್‌ಐ ಬಹುಮಟ್ಟಿಗೆ ಹೆಚ್ಚಾಗುತ್ತದೆ. ಆಳವಾದ ಅಧ್ಯಯನದ ಮೂಲಕ ೨೦೦೬-೦೭ರಿಂದ ೨೦೧೦ರ ಅವಧಿಯಲ್ಲಿ ೨,೯೮,೬೦,೬೪೭ ಮೆಟ್ರಿಕ್ ಟನ್‌ನಷ್ಟು ಕಾನೂನು ಬಾಹಿರವಾಗಿ ಕಬ್ಬಿಣದ ಅದರಿನ ರಫ್ತು ನಡೆದಿರಬೇಕೆಂದು ಅಂದಾಜು ಮಾಡಿದಾಗ ಅದರ ಮೌಲ್ಯ ೧,೨೨,೨೮,೧೪,೮೫೪ ರೂಗಳಾಗಿರುತ್ತದೆ. ಇಂತಹ ಕಾನೂನು ಬಾಹಿರ ಸಾಗಾಣಿಕೆಯನ್ನು ಪರ್ಮಿಟ್ ಇಲ್ಲದ ಲಾರಿಗಳಲ್ಲಿ ಖೋಟಾ ಪತ್ರಗಳನ್ನು ಹೊಂದಿರುವ ಮತ್ತು ಲಾರಿಗೆ ಇರುವ ಮಿತಿಯನ್ನು ವರದಿಯನ್ನು ಲೋಕಾಯುಕ್ತ ತಜ್ಞರ ತನಿಖಾ ತಂಡವು ನೀಡಿತ್ತು (ಲೋಕಾಯುಕ್ತರ ತನಿಖಾ ವರದಿ, ಪು.ಸಂ ೭-೮). ೨೦೦೬ರಲ್ಲಿ ಗಣಿಗಾರಿಕೆ ಮತ್ತು ಭೂಗರ್ಭ ಇಲಾಖೆಯು ರಾಮಘಡ್ ಬ್ಲಾಕನಲ್ಲಿ ಸರ್ವೇ ನಂಬರ್ ೯ರಲ್ಲಿದ್ದ, ಕಬ್ಬಿಣದ ಗುಪ್ಪೆಗಳನ್ನು ಹರಾಜು ಮಾಡಲು ಮುಂದಾದಾಗ ವಾಸ್ತವವಾಗಿ ಆ ಪ್ರದೇಶದಲ್ಲಿ ಸರ್ವೇ ನಂಬರ್ ೯ಎಂಬುವದೇ ಇರಲಿಲ್ಲ. ಆದರೂ ರಾಂಕ್ ಇಂಟರ್ ನ್ಯಾಷನಲ್ ಎಂಬ ಕಂಪನಿಯೊಂದು ಆ ಹರಾನಿನಲ್ಲಿ ೩೯,೦೦೦ ಮೆಟ್ರಿಕ್ ಟನ್‌ನಷ್ಟು ಖರೀದಿಸಿರುವುದು ವರದಿಯಾಗಿದೆ. ಹೀಗೆ ಈ ಕಂಪನಿಯು ರಾಮಘಡ್ ಬ್ಲಾಕಿನ ಸುತ್ತಮುತ್ತಲಿನಲ್ಲಿ ಅನಧಿಕೃತವಾಗಿ ೬೨ಎಫ್ ಗ್ರೇಡಿನ ಉತ್ತಮವಾದ ಅದಿರನ್ನು ಅಗೆದಿರುವುದು ೪೮,೧೬೮ ಮೆಟ್ರಿಕ್ ಟನ್ ಆಗಿದೆ. ಈ ಅದರಿನ ಮಾರುಕಟ್ಟೆ ಮೌಲ್ಯ ೯,೪೩,೩೬,೦೦೦/-ರೂಗಳಾಗಿರುತ್ತದೆ. ಇದು ಕಾನೂನು ಬಾಹಿರವಾಗಿ ಸಂಪಾದನೆ ಮಾಡಿರುವ ಹಣದ ಮೊತ್ತವಾಗಿದೆ. ಹಾಗೆಯೇ ರಾಮಘಡ್‌ನ ಸರ್ವೇ ನಂಬರ್ ೧೭-೧೮ರಲ್ಲಿ ಕಾನೂನು ಬಾಹಿರ ಕಬ್ಬಿಣ ಅರಿನ ಗಣಿಗಾರಿಕೆಯಲ್ಲಿ ೭೦ಮೆಟ್ರಿಕ್ ಟನ್‌ಗಳಷ್ಟು ಅದಿರನ್ನು ಅಗೆಯಲಾಗಿದೆಂದು ೨೦೧೧ರಲ್ಲಿ ಭೂಗರ್ಭ ಶಾಸ್ತ್ರ ವಿಜ್ಞಾನಿಗಳು ಪಂಚನಾಮಿ ಮಾಡಿದ್ದಾರೆ. ವಾಸ್ತವವಾಗಿ ಇಲ್ಲಿ ಗಣಿಗಾರಿಕೆಗೆ ಯಾರಿಗೂ ಅನುಮತಿ ನೀಡಿಲ್ಲವಾದರೂ ಆ ಪ್ರದೇಶದಲ್ಲಿ ಕಾನೂನು ಬಾಹಿರ ಗಣಿಗಾರಿಕೆ ನಡೆದಿರುವುದು ಲೋಕಾಯುಕ್ತ ತನಿಖಾ ವರದಿ ತಿಳಿಸುತ್ತದೆ (ಲೋಕಾಯುಕ್ತರ ತನಿಖಾ ವರದಿ, ಪು.ಸಂ ೯೪-೯೫).

ಸಂಡೂರು, ಹೊಸಪೇಟೆ ಗಣಿ ವಲಯಗಳು ಹಲವಾರು ಪ್ರದೇಶಗಳಲ್ಲಿ ಅಕ್ರಮ ಗಣಿಗಾರಿಕೆ ನಡೆದಿದೆ. ರಾಜ್ಯದ ಗಡಿಯನ್ನು ಗುರುತಿಸುವ ಕಲ್ಲುಗಳು ಆಗಿಂದ್ದಾಗೆ ಬೇರೆ ಸ್ಥಳಗಳಿಗೆ ಸಾಗಿಸಲಾಗುತ್ತಿದೆ. ಸರ್ಕಾರಿ ಮತ್ತು ಅರಣ್ಯ ಜಮೀನುಗಳಲ್ಲಿ ಅಕ್ರಮ ಗಣಿಗಾರಿಕೆ ಮಾಡಲಾಗುತ್ತಿದೆ. ಇದರಿಂದ ಭೂಮಿಯ ಒತ್ತುವರಿ ಮತ್ತು ಕಬ್ಬಳಿಕೆ, ಪರವಾನಿಗೆ ಇಲ್ಲದೇ ಕಬ್ಬಣದ ಅದಿರು ಸಾಗಾಣಿಕೆಯ ಸ್ಟಾಕ್ಯಾರ್ಡ್‌ಗಳು, ಗಣಿಗಳಿಗೆ ಕಾನೂನು ಬಾಹಿರವಾಗಿ ಅರಣ್ಯ ಪ್ರದೇಶದಲ್ಲಿ ರಸ್ತೆಗಳ ನಿರ್ಮಾಣವಾಗಿರುವುದು ಗಣಿಗಾರಿಕೆ ನಡೆದ ಸಂದರ್ಭದಲ್ಲಿ ಅತಿ ಹೆಚ್ಚಾಗಿವೆ. (ಲೋಕಾಯುಕ್ತರ ತನಿಖಾ ವರದಿ ಪು.ಸಂ ೯೫). ಪ್ರಾಕೃತಿಕ ಸಂಪತ್ತು ಮತ್ತು ಸಂಪನ್ಮೂಗಳ ಅತಿಯಾದ ಲೂಟಿ ಮತ್ತು ಅವುಗಳಲ್ಲಿ ಮುಖ್ಯವಾಗಿ ಕಬ್ಬಿಣ ಅದಿರನ್ನು ಕಾನೂನು ಬಾಹಿರವಾಗಿ ಹೊರತೆಗೆಯುತ್ತಿರುವುದರಿಂದ ಮತ್ತು ಅದರಿಂದ ಉಂಟಾಗುತ್ತಿರುವ ಪರ್ಯಾವರಣದ ಶಿಥೀಲ ಮತ್ತು ನಿಯಂತ್ರಣ ರಹಿತವಾಗಿ ಅರಣ್ಯ ಪ್ರದೇಶದ ಮೇಲೆ ನಡೆದ ದಾಳಿಯಿಂದ ಉಂಟಾಗುವ ವಿನಾಶ ಮುಂತಾದ ವಿಷಯದಲ್ಲಿ ನ್ಯಾಯಾಲಯ ಮದ್ಯಪ್ರವೇಸಿಸುವ ಅನಿವಾರ್ಯತೆ ಉಂಟಾಯಿತು. (ರೀಟ್ ಪಿಟಿಷನ್(ಸಿ) ಸಂ ೨೦೨, ೧೯೯೫). ಪರಿಸರಕ್ಕೆ ಸಂಬಂದಿಸಿದ ಸಾಮಾನ್ಯ ಸಂಗತಿಗಳಲ್ಲದೇ, ನ್ಯಾಯಾಲಯವು ಸೆಪ್ಟಂಬರ್ ೯, ೨೦೦೨ರ ತೀರ್ಪಿನಲ್ಲಿ ತನ್ನ ಆದೇಶ ಉಲ್ಲಂಘನೆ ಆಗುತ್ತಿರುವುದನ್ನು ಗಮನಿಸಿ, ಕೇಂದ್ರದ ಉನ್ನತಾಧಿಕಾರಿ ಸಮಿತಿಗೆ ನ್ಯಾಯಾಲಯ ಎಲ್ಲಾ ಆದೇಶಗಳ ಅನುಷ್ಠಾನದ ಮೇಲೂಸ್ತುವಾರಿ ಜವಾಬ್ದಾರಿಯನ್ನು ವಹಿಸಿತ್ತು. ಅಲ್ಲದೇ ತನ್ನೆಲ್ಲ ಆದೇಶಗಳನ್ನು ಪಾಲಿಸದಿರುವ ಪ್ರಕರಣಗಳಿಗೆ ಸಂಬಂದಿಸಿದಂತೆ ಮತ್ತು ಅರಣ್ಯ ಪ್ರದೇಶದ ಅತಿಕ್ರಮಣ, ಸಂಪತ್ತುಗಳ ಹೊರತೆಗೆಯುವಿಕೆ, ಕ್ರಿಯಾ ಯೋಜನೆಗಳ ಅನುಷ್ಠಾನ ಪರಿಹಾರತ್ಮಕ ಅರಣ್ಯೀಕರಣ ಮತ್ತು ಇತರೆ ಪರ್ಯಾವರಣ ಸಂರಕ್ಷಣಾತ್ಮಕ ಸಂಗತಿಗಳ ಮೇಲೆ ನಿಗಾ ಇಡುವ ಕಾರ್ಯಬಾರವನ್ನು ಸಮಿತಿಗೆ ವಹಿಸಿತ್ತು(ಸಮಾಜ ಪರಿವರ್ತನಾ ಕೇಂದ್ರ ರೀಟ್ ಮೊಕದ್ದಮೆ ಸಂಖ್ಯೆ ೫೬೨/೨೦೦೯, ಪು.ಸಂ ೨-೩).

೨೦೦೬ರಿಂದ೨೦೧೦ರವರೆಗೆ ಜಿಂದಾಲ್ ಸ್ಟೀಲ್ ಕಂಪನಿಯು ಕೇವಲ ೯.೬ ಮೆಟ್ರಿಕ್ ಟನ್‌ಗಳಷ್ಟು ಅದಿರನ್ನು ಉಪಯೋಗಿಸಿತ್ತು. ಜೆ.ಎಸ್.ಡಬ್ಲ್ಯೂ ಸ್ಟೀಲ್ ಕಂಪನಿಯ ನಿರ್ದೇಶಕರು ಮತ್ತು ಸಿ.ಇ.ಒ ಕರ್ನಾಟಕ ಸರ್ಕಾರದ ಕಾರ್ಯದರ್ಶಿಯವರಿಗೆ ಉಕ್ಕು ಕಾರ್ಖಾನೆಗೆ ೨೭.೧೫ ಮಿಲಿಯನ್ ಟನ್‌ನಷ್ಟು ಅದರಿನ ಅವಶ್ಯಕತೆ ಇದೆ ಎಂದೂ ದಿನಾಂಕ ೧೨/೦೪/೧೧ರಂದು ಬರೆದಿರುವ ಪತ್ರದಲ್ಲಿ ದಾಖಲಾಗಿದೆ. ಆದರೆ ೨೦೦೯ ಏಪ್ರೀಲ್‌ನಿಂದ ಜೂಲೈ ೨೦೧೦ರವರೆಗಿನ ಅವಧಿಯಲ್ಲಿ ೧,೩೫,೭೯,೧೪೮ ಮೆಟ್ರಿಕ್ ಕಬ್ಬಿಣದ ಅದಿರನ್ನು ಪಡೆದುಕೊಂಡಿದೆ. ಆದರೆ ಇದನ್ನು ಸರಬರಾಜು ಮಾಡಿದ ಲಾರಿಗಳ ಲೆಕ್ಕದೊಂದಿಗೆ ಹೋಲಿಸಿದಾಗ ಕಬ್ಬಿಣದ ಅದಿರನ್ನು ವಾಹನಗಳಲ್ಲಿ ಒವರ್ ಲೋಡ್ ಮಾಡುವ ಮೂಲಕ ಭಾರಿ ಮೊತ್ತದ ಅದಿರನ್ನು ಅಕ್ರಮವಾಗಿ ಕಂಪನಿಗಳು ಪಡೆದಿವೆ. ಇದು ರಾಜ್ಯ ಸರ್ಕಾರಕ್ಕೆ ಬರಬೇಕಾದ ಮೌಲ್ಯ ಬರದೇ ವಂಚಿತವಾಗಿದ್ದು ಮತ್ತು ಅಕ್ರಮವಾಗಿ ಸಾಗಿಸಿದ ಅದರಿನ ಮೇಲೆ ರಾಜಧಾನವನ್ನು ನೀಡಿಲ್ಲವೆಂದು ಲೋಕಾಯುಕ್ತ ತನಿಖಾ ವರದಿ ತಿಳಿಸುತ್ತದೆ (ಲೋಕಾಯುಕ್ತರ ತನಿಖಾ ವರದಿ, ಪು.ಸಂ ೧೧೯-೧೨೦). ಸರ್ವೋಚ್ಚ ನ್ಯಾಯಲಯದ ಮಧ್ಯ ಪ್ರವೇಶದ ಪರಿಣಾಮ ಸ್ವಲ್ಪ ಮಟ್ಟಿಗೆ ಬದಲಾವಣೆ ತಂದಿದೆ. ಆದರೆ ಗಣಿಗಾರಿಕೆಯ ಪರಿಣಾಮಗಳು ಗಣಿ ಗ್ರಾಮೀಣ ಪ್ರದೇಶದ ಜನ ಸಮುದಾಯದ ಮೇಲೆ ಮತ್ತೆ ಮತ್ತೆ ಮರುಕಳಿಸುತ್ತಿರುವುದು ಪ್ರಸ್ತುತ ಅಧ್ಯಯನ ಗುರುತಿಸಿದೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ನಾಲ್ಕು ಉದ್ದೇಶಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ರಚಿತ ಪ್ರಶ್ನಾವಳಿಯ ಮೂಲಕ ಪ್ರಾಥಮಿಕ ಮಾಹಿತಿಯನ್ನು ಹಾಗೂ ಕೇಸ್‌ಸ್ಟಡಿಯ ಮೂಲಕ ಸಂಗ್ರಹಿಸಿ ಬಿಡಿ ಬಿಡಿಯಾದ ಸಾರಾಂಶವನ್ನು ಹಿಡಿಯಾಗಿ ಅಧ್ಯಯನದ ಫಲಿತಗಳಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಪ್ರಸ್ತುತ ಅಧ್ಯಯನದ ಫಲಿತಗಳನ್ನು ಕಂಡುಕೊಳ್ಳಲು ಮೂರು ಭಾಗಗಳಾಗಿ ವಿಂಗಡಿಸಲಾಗಿದ್ದು, ಅದರಲ್ಲಿ ಮುಖ್ಯವಾಗಿ ಗಣಿಗಾರಿಕೆಯ ಗ್ರಾಮೀಣ ಪ್ರದೇಶದಲ್ಲಾಗಿರುವ ಸಾಮಾಜಿಕ, ಆರ್ಥಿಕತೆ ಮತ್ತು ಪರಿಸರದ ಪರಿಣಾಮಗಳ ವಿಶ್ಲೇಷಣೆ ಮಾಡುವಾಗ ಕಂಡು ಬಂದಿರುವ ಫಲಿತಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**೦೧. ಗಣಿ ಗ್ರಾಮೀಣ ಜನರ ಬದುಕಿನ ಮೇಲಾಗಿರುವ ಸಾಮಾಜಿಕ ಪರಿಣಾಮಗಳ ಫಲಿತಗಳು**

ಗಣಿಗಾರಿಕೆಯು ಶೈಕ್ಷಣಿಕ ವ್ಯವಸ್ಥೆಯ ಮೇಲೆ ಅದರಲ್ಲಿಯೂ ಶಾಲಾ ವ್ಯವಸ್ಥೆಯ ಮೇಲೆ ಯಾವ ಪರಿಣಾಮಗಳನ್ನು ಬೀರಿವೆಂಬುವುದನ್ನು ನೋಡಲು ಪ್ರಸ್ತುತ ಅಧ್ಯಯನ ಪ್ರಯತ್ನಿಸುತ್ತದೆ. ಈ ಹಂತದಲ್ಲಿಯೂ ಸಂಖ್ಯಾತ್ಮಕ ಸೂಚಕಗಳ ಮೂಲಕ ಮಕ್ಕಳ ಶಾಲಾ ಭಾಗವಹಿಸುವಿಕೆ, ಶಾಲಾ ಮಕ್ಕಳ ದಾಖಲಾತಿ, ಹಾಜರಾತಿ, ಶಾಲಾ ಬಿಟ್ಟ ಮಕ್ಕಳ ಪ್ರಮಾಣ, ಶಾಲಾ ಮಕ್ಕಳ ಉತ್ತೀರ್ಣತೆಯ ಪ್ರಮಾಣ ಇತ್ಯಾದಿ ಅಂಶಗಳನ್ನು ಸಂಖ್ಯಾತ್ಮಕವಾಗಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮಕ್ಕಳು ಶಾಲಾ ಕಾಲೇಜಿಗೆ ಹೋಗುವ ಪ್ರಮಾಣವನ್ನು ಗ್ರಹಿಸುವುದಾದರೆ, ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೭೩.೩೪ರಷ್ಟು, ಸಂಡೂರು ತಾಲ್ಲೂಕಿನಲ್ಲಿ ಶೇ.೬೫.೫೬ರಷ್ಟು, ಬಳ್ಳಾರಿ ತಾಲ್ಲೂಕಿನ ಶೇ.೮೦ರಷ್ಟು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಆದರೆ ಶಾಲೆಗೆ ಹೋಗುವ ಮಕ್ಕಳಲ್ಲಿ ಖಾಸಗಿ ಶಾಲೆಗೆ ಹೋಗುವವರು ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೨೭.೨೭ರಷ್ಟು, ಸಂಡೂರು ತಾಲ್ಲೂಕಿನಲ್ಲಿ ಶೇ.೧೫.೨೬ರಷ್ಟು, ಬಳ್ಳಾರಿ ತಾಲ್ಲೂಕಿನ ಶೇ.೨೬.೩೮ರಷ್ಟಿದರೆ, ಸರ್ಕಾರಿ ಶಾಲೆಗೆ ಹೋಗುವ ಮಕ್ಕಳು ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೭೭.೨೮ರಷ್ಟು, ಸಂಡೂರು ತಾಲ್ಲೂಕಿನಲ್ಲಿ ಶೇ.೪೮.೭೪ರಷ್ಟು, ಬಳ್ಳಾರಿ ತಾಲ್ಲೂಕಿನಲ್ಲಿ ಶೇ.೭೩.೬೨ರಷ್ಟಿರುವುದು ಕಂಡು ಬರುತ್ತದೆ. ಈ ಮೂರು ವಲಯಗಳಲ್ಲಿಯೇ ಖಾಸಗಿ ಶಾಲೆಗೆ ಹೋಗುವ ಮಕ್ಕಳ ಪ್ರಮಾಣಕ್ಕಿಂತ ಸರ್ಕಾರಿ ಶಾಲೆಗೆ ಹೋಗುವ ಮಕ್ಕಳ ಪ್ರಮಾಣ ಗಣಿ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬಂದಿದೆ.

- ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮಕ್ಕಳು ಶಾಲಾ ಬಿಟ್ಟವರ ಪ್ರಮಾಣವನ್ನು ಅರಿಯಲು ಪ್ರಯತ್ನ ಮಾಡಲಾಗಿದೆ. ಸಂಡೂರು ತಾಲ್ಲೂಕಿನ ಕುಟುಂಬಗಳಲ್ಲಿ ಪ್ರಾಥಮಿಕ ಶಾಲೆ ಮಕ್ಕಳು ಶೇ.೦೯.೯೪ರಷ್ಟು, ಹಿರಿಯ ಪ್ರಾಥಮಿಕ ಶಾಲೆ

ಶೇ.೧೫.೯ರಷ್ಟು, ಪ್ರೌಢಶಾಲೆ ಮಕ್ಕಳು ಶೇ.೨೬.೪೧ರಷ್ಟು, ಪದವಿ ಪೂರ್ವ ಕಾಲೇಜು ಶೇ.೧೩.೨೦ರಷ್ಟು, ಪದವಿ ಕಾಲೇಜು ಶೇ.೧೧.೩೨ರಷ್ಟು, ಇತರೆ ಶೇ.೨೪.೫೩ರಷ್ಟು ಮಕ್ಕಳು ಶಾಲಾ ಬಿಟ್ಟಿರುವುದು ಕಂಡು ಬಂದರೆ, ಹೊಸಪೇಟೆ ತಾಲ್ಲೂಕಿನ ಕುಟುಂಬಗಳಲ್ಲಿ ಪ್ರಾಥಮಿಕ ಶಾಲೆ ಮಕ್ಕಳು ಶೇ.೧೧.೭೭ರಷ್ಟು, ಹಿರಿಯ ಪ್ರಾಥಮಿಕ ಶಾಲೆ ಮಕ್ಕಳು ಶೇ.೨೦.೮೫ರಷ್ಟು, ಪ್ರೌಢಶಾಲೆ ಮಕ್ಕಳು ಶೇ.೧೭.೬೫ರಷ್ಟು, ಪದವಿ ಪೂರ್ವ ಕಾಲೇಜು ಮಕ್ಕಳು ಶೇ.೨೨.೦೫ರಷ್ಟು, ಪದವಿ ಕಾಲೇಜು ಮಕ್ಕಳು ಶೇ.೧೦.೨೬ರಷ್ಟು, ಇತರೆ ಶೇ.೧೭.೬೫ರಷ್ಟು ಮಕ್ಕಳು ಶಾಲೆ ಬಿಟ್ಟಿರುವುದು ಕಂಡು ಬಂದಿದೆ. ಹಾಗೂ ಬಳ್ಳಾರಿ ತಾಲ್ಲೂಕಿನ ಕುಟುಂಬಗಳಲ್ಲಿ ಪ್ರಾಥಮಿಕ ಶಾಲೆ ಮಕ್ಕಳು ಶೇ.೨೧.೮೭ರಷ್ಟು, ಹಿರಿಯ ಪ್ರಾಥಮಿಕ ಶಾಲೆ ಮಕ್ಕಳು ಶೇ.೨೦.೩೧ರಷ್ಟು, ಪ್ರೌಢಶಾಲೆ ಮಕ್ಕಳು ಶೇ.೧೨.೫೦ರಷ್ಟು, ಪದವಿ ಪೂರ್ವ ಕಾಲೇಜು ಮಕ್ಕಳು ಶೇ.೧೮.೭೫ರಷ್ಟು, ಪದವಿ ಕಾಲೇಜು ಮಕ್ಕಳು ಶೇ.೧೯.೩ರಷ್ಟು, ಇತರೆ ಶೇ.೧೫.೬೩ರಷ್ಟು ಶಾಲಾ ಬಿಟ್ಟಿರುವ ಮಕ್ಕಳು ಇರುವುದು ಕಂಡುಬಂದಿದೆ. ಈ ಮೂರು ಗಣಿ ವಲಯದ ಕುಟುಂಬಗಳ ಮಕ್ಕಳು ಶಾಲಾ ಬಿಡಲು ಕಾರಣ ಗಣಿಗಾರಿಕೆ ಶೇ.೨೪.೮೬ರಷ್ಟು, ಬಡತನ ಶೇ.೩೦.೨೭ರಷ್ಟು, ಆರ್ಥಿಕ ತೊಂದರೆ ಶೇ.೨೨.೭೦ರಷ್ಟು, ಜಾತಿ ಅವಮಾನ ಶೇ.೦೩.೨೪ರಷ್ಟು, ಶಾಲಾ ಅಂತರ ಶೇ.೧೧.೩೫ರಷ್ಟು, ಭಾಷೆ ಸಮಸ್ಯೆ ಶೇ.೦೭.೨೭ರಷ್ಟಿದೆ. ಇವು ಗ್ರಾಮೀಣ ಪ್ರದೇಶದ ಮಕ್ಕಳು ಶಾಲೆ ಬಿಡಲು ಕಾರಣವಾಗಿರುವ ಅಂಶಗಳಾಗಿವೆ.

- ಗಣಿ ಗ್ರಾಮೀಣ ಭಾಗದ ಕುಟುಂಬಗಳ ಮಕ್ಕಳು ಶಾಲಾ ವರ್ಗಾವಣೆಯ ಪ್ರಮಾಣವು ಹೊಸಪೇಟೆ ತಾಲ್ಲೂಕಿನ ಕುಟುಂಬಗಳ ಮಕ್ಕಳು ಶೇ.೪೪.೪೪ರಷ್ಟು, ಸಂಡೂರು ತಾಲ್ಲೂಕಿನ ಕುಟುಂಬಗಳ ಶೇ.೫೦ರಷ್ಟು ಹಾಗೂ ಬಳ್ಳಾರಿ ತಾಲ್ಲೂಕಿನ ಕುಟುಂಬಗಳ ಮಕ್ಕಳು ಶೇ.೭೦ರಷ್ಟು ಶಾಲಾಯಲ್ಲಿ ವರ್ಗಾವಣೆಯಾದರೆ, ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕಿನ ಕುಟುಂಬಗಳಲ್ಲಿ ಕ್ರಮವಾಗಿ ಶೇ.೫೫.೫೬ರಷ್ಟು, ಶೇ.೫೦ರಷ್ಟು, ಶೇ.೩೦ರಷ್ಟು ಮಕ್ಕಳು ಶಾಲೆಯಲ್ಲಿ ವರ್ಗಾವಣೆ ಆಗದಿರುವುದು ಕಂಡುಬಂದಿದೆ.

ವಿಶೇಷವಾಗಿ ಶಾಲಾ ಬಿಡುವ ಮಕ್ಕಳ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಶಾಲೆಯನ್ನು ಮಧ್ಯದಲೇ ಬಿಡುವ ಮಕ್ಕಳ ಹಿನ್ನಲೆಯೂ ಬಹುತೇಕ ಸಂದರ್ಭಗಳಲ್ಲಿ ಕೌಟಂಬಿಕ ಇಕ್ಕಟ್ಟುಗಳಿಂದ ಕೂಡಿರುವುದಾಗಿದೆ. ಅಂದರೆ ತನ್ನ ತಂದೆಗೆ ಅಥವಾ ತನ್ನ ಕುಟುಂಬದಲ್ಲಿರುವಂತ ಹಿರಿಯರಿಗೆ ದುಡಿಯುವ ಅವಕಾಶವಿಲ್ಲವಾದಾಗ, ಅಪಘಾತಕ್ಕೆ ಒಳಗಾದಾಗ, ರೋಗಕ್ಕೆ ತುತ್ತಾದಾಗ ಹಾಗೂ ಶಾಲಾ ಪರಿಸರದ ವಾತವರಣವನ್ನು ಒಳಗೊಂಡತೆ ಮಕ್ಕಳು ಶಾಲಾ ಬಿಟ್ಟು ದುಡಿಮೆಯ ವಲಯವನ್ನು ಪ್ರವೇಶಿಸಿರುವುದು ಅಧ್ಯಯನದ ಉದಕ್ಕೂ ತಿಳಿದು ಬರುತ್ತದೆ. ಇದಕ್ಕೆ ಒಂದು ಉತ್ತಮ ಕೇಸ್‌ಸ್ಟಡಿಯೆಂದರೆ ಬಳ್ಳಾರಿ ತಾಲ್ಲೂಕಿನ ಹನ್ನೊಳ್ಳಿ ಗ್ರಾಮದ ಟಿಪ್ಪರ್ ಚಾಲಕ (ವಿರಪ್ಪನ್) ಲೋಕನಾಯ್ಕ. ಅಂದರೆ ಲೋಕನಾಯ್ಕ ಅವರು ಮೈಸ ಗಣಿಗುಡ್ಡ ಪ್ರದೇಶದಲ್ಲಿ ತನ್ನ ೧೬ನೇಯ ವರ್ಷದಲ್ಲಿ ಗಣಿ ಅದಿರನ್ನು ಸಾಗಿಸುವ ಟೀಪ್ಪರ್ ವಾಹನದ ಕ್ಲೀನರ್ ಕೆಲಸವನ್ನು ಮಾಡಿ ೧೭ನೇ ವರ್ಷದಲ್ಲಿ ಚಾಲಕನಾದವನು. ಇಲ್ಲಿಂದ ಪ್ರರಾಂಭವಾದ ಅವರ ಗಣಿಯಲ್ಲಿ ಟಿಪ್ಪರ್ ಚಾಲಕನ್ನಾಗಿ ನೂರಿತ ಚಾಲಕನೆಂಬ ಹೆಸರನ್ನು ಗಳಿಸಿದ ಕೀರ್ತಿ ಹನ್ನೊಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮದವರೆಗೂ ಹಬ್ಬಿರುವಂತಹದ್ದು. ಅವರ ಮಾರ್ಗದರ್ಶನದಲ್ಲಿ ಟಿಪ್ಪರ್ ಚಾಲಕರಾಗಿ ಹೊರ ಬಂದ ಚಾಲಕರೇಷ್ಟೊ ಲೇಕ್ಕವಿಲ್ಲ, ಅದರಲ್ಲಿ ಈ ಮಹಾಪ್ರಬಂಧದ ಸಂಶೋಧಕರು ಒಬ್ಬರು. ಲೋಕನಾಯ್ಕ ಇವರು ತಮ್ಮ ಚಾಲಕ ವೃತ್ತಿಯಲ್ಲಿ ಸುಮಾರು ೩೩ವರ್ಷ ಅನುಭವವನ್ನು ಹೊಂದಿದ್ದರು. ಲೋಕನಾಯ್ಕ ಹೆಂಡತಿ ಶಾಂತಿಬಾಯಿ ದಂಪತಿಗೆ ಮೂರು ಜನ ಹೆಣ್ಣು ಮಕ್ಕಳು ಇದ್ದರು. ಲೋಕನಾಯ್ಕ ಅವರು ಗಣಿಗಾರಿಕೆಯ ಪರಿಣಾಮಕ್ಕೆ ಒಳಗಾಗಿ ಶಾಸ್ವಕೋಶ ರೋಗದಿಂದ ಬಳಲುತ್ತಿದ್ದರೂ, ಕಾಲಕ್ರಮೇಣ ಅವರ ಅನಾರೋಗ್ಯ ದಿನೆದಿನೆ ಹೆಚ್ಚಾಗುತ್ತಾ ಹೋಯಿತು. ೨೦೧೦ರಲ್ಲಿ ಅವರು ಶಾಸ್ವಕೋಶದ ತೊಂದರೆಯಿಂದಾಗಿ ಮರಣ ಹೊಂದಿದ್ದರು ಈ ಸಂಗತಿ ಕ್ಷೇತ್ರಕಾರ್ಯಕ್ಕಾಗಿ ಹೋದಾಗ ನನಗೆ ತಿಳಿದ್ದು. ಈ ಚಾಲಕನ ಮರಣದ ನಂತರ ಕುಟುಂಬಕ್ಕೆ ದಿಕ್ಕೂ ತೋಚದೆ ಅವರ ಮೂರು ಹೆಣ್ಣು ಮಕ್ಕಳು

ಶಾಲೆಯನ್ನು ತೊರೆದು ಗಣಿ ದುಡಿಮೆಯಲ್ಲಿ ತೊಡಗಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡು ಬರುತ್ತದೆ.

ಆರೋಗ್ಯ ಮತ್ತು ಆಹಾರ ಭದ್ರತೆಯ ಮೇಲೆ ಗಣಿಗಾರಿಕೆಯು ಉಂಟು ಮಾಡಿರುವ ಪರಿಣಾಮಗಳನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಸಂಖ್ಯಾತ್ಮಕವಾಗಿ ಆರೋಗ್ಯ ಮತ್ತು ಆಹಾರ ಭದ್ರತೆಯಲ್ಲಿ ಉಂಟಾಗಿರುವ ಬೆಳವಣಿಗೆಯನ್ನು ಗಮನಿಸಿದಾಗ ಹಲವು ಒಳನೋಟಗಳು ನಮ್ಮಗೆ ಕಾಣಸಿಗುತ್ತದೆ. ಗಣಿಗಾರಿಕೆಯು ದುಡಿಯುವ ವರ್ಗದ ಆರೋಗ್ಯದ ಮೇಲೆ ಅತ್ಯಂತ ಗಂಭೀರವಾದ ಪರಿಣಾಮವನ್ನು ಬೀರುತ್ತದೆ. ದುಡಿಮೆ ಸ್ವರೂಪದಲ್ಲಾಗುತ್ತಿರುವ ಬದಲಾವಣೆ ೧೦ರಿಂದ೧೫ ವರ್ಷಕ್ಕೆ ಮೊದಲು ಗಣಿಗಳಲ್ಲಿ ದುಡಿಯುತ್ತಿರುವ ಬಹುತೇಕ ದುಡಿಯುವ ವರ್ಗ ಸ್ಥಳೀಯ ಹಾಗೂ ಸ್ವಲ್ಪ ಮಟ್ಟಿಗೆ ಆಂಧ್ರ ಪ್ರದೇಶದ ಸಮುದಾಯಗಳಿಗೆ ಸೇರಿದವರಾಗಿದ್ದು, ಅಧ್ಯಯನಕ್ಕೆ ಒಳಪಡಿಸಿದ ಪ್ರದೇಶದಲ್ಲಿ ಹಿರಿಯರ ಜೊತೆ ನಡೆದ ಸಂವಾದ ಮತ್ತು ಚರ್ಚೆಯಿಂದ ದೊರೆತ ಅಂಶವಾಗಿದೆ. ಆದರೆ ಕಳೆದ ೧೦ರಿಂದ ೧೮ ವರ್ಷಗಳಿಂದ ಇಲ್ಲಿ ಗಣಿಗಳಲ್ಲಿ ಅತ್ಯಂತ ಶ್ರಮದಾಯಕ ಮಾಡುವ ವರ್ಗ ಬಹುತೇಕ ಹೊರಗಿನವರಾಗಿರುವುದು ತಿಳಿದು ಬರುತ್ತದೆ. ಅದರಲ್ಲಿಯೂ ಉತ್ತರ ಪ್ರದೇಶ, ಬೀಹಾರ, ಓರಿಸ್ಸಾ ಮತ್ತು ನಾರ್ಥಿಸ್ಟ್‌ಗಳಿಗೆ (ಈಶಾನ್ಯ ರಾಜ್ಯ) ಸೇರಿದವರಾಗಿದ್ದಾರೆ. ಈ ವರ್ಗ ತಳಹಂತಗಳಲ್ಲಿ ದುಡಿಮೆಯನ್ನು ಪ್ರವೇಶಿಸಿದ ನಂತರ ದುಡಿಯುವ ಸಮಯ  ವೇತನ ಒಬ್ಬ ವ್ಯಕ್ತಿ ಮತ್ತು ಸಮಯಕ್ಕೆ ಸಿಮಿತವಾದದು ಗುತ್ತಿಗೆಯ ಸ್ವರೂಪವನ್ನು ಪಡೆದುಕೊಂಡಿದೆ ಈ ಗುತ್ತಿಗೆಯ ಸ್ವರೂಪದಲ್ಲಿ ನಡೆಯುವ ದುಡಿಮೆಗೆ ನಿರ್ದಿಷ್ಟ ಸಮಯದಲ್ಲಿ ಎಷ್ಟು ಕೆಲಸವಾಗಿದೆಯೋ ಹೊರೆತು ಇಲ್ಲಿ ಕಾನೂನಿನ ನೀತಿ ನಿಯಮಗಳು ಮುಖ್ಯವಾಗಿಲ್ಲ ಎಂದು ತಿಳಿದು ಬರುತ್ತದೆ. ಈ ಬೆಳವಣಿಗೆಯು ದುಡಿಯುವ ಜನರ ದೈಹಿಕ ಮತ್ತು ಆರೋಗ್ಯದ ಸ್ವರೂಪದಲ್ಲಿ ಮಹತ್ತರ ಬದಲಾಣೆ ತಂದಿವೆ. ಇದಕ್ಕೆ ಇಲ್ಲಿ ಒಂದು ಉದಾಹರಣೆ ಹೇಳುವುದಾದರೇ ಗಣಿಯಿಂದ ಸ್ಟಾಕ್‌ಯಾರ್ಡ್‌ಗೆ ಅದಿರನ್ನು ಸಾಗಿಸುವ ವಾಹನ ಮತ್ತು ಚಾಲಕರಿಗೆ ಒಂದು ದಿನಕ್ಕೆ ಕನಿಷ್ಟ ಹತ್ತು ಟ್ರೀಪ್ ಮಾಡಬೇಕೆಂದಿರುತ್ತದೆ. ಇಲ್ಲಿ ಟ್ರೀಪ್‌ಗಿಂತಲೂ ಸ್ಟಾಕ್‌ಯಾರ್ಡ್‌ಗೆ ಮುಖ್ಯವಾಗಿ ಎಷ್ಟು ಟನೇಜ್‌ಗಳಷ್ಟು ಅದಿರನ್ನು ಗಣಿಯಿಂದ ಸ್ಟಾಕ್‌ಯಾರ್ಡ್‌ಗೆ ಸಾಗಿಸುತ್ತಾರೆಂಬುವುದು ಮಾನದಂಡವಾಗಿರುತ್ತದೆ. ಈ ಮಾನದಂಡದ ಆಧಾರದ ಮೇಲೆ ಕೂಲಿ ಅಥವಾ ಅವರಿಗೆ ಹಣವನ್ನು ನೀಡಲಾಗುತ್ತದೆ. ಈ ಅದಿರನ್ನು ಸಾಗಿಸುವುದು ಒಂದು ಸ್ಪರ್ಧೆಂತೆ ನಡೆಯುವ ಸಮಯ, ರಕ್ಷಣಾ, ಭದ್ರತೆ ಯಾವುದನ್ನು ಲೆಕ್ಕಿಸದೇ ಅಂದರೆ ಯಾವುದು ಸುರಕ್ಷಿತ ಮಾಪನಗಳನ್ನು ಪರಿಗಣಿಸದೆ, ಅದಿರನ್ನುಟನ್ ಲೆಕ್ಕದಲ್ಲಿ ಸಾಗಿಸುವುದೇ ಮುಖ್ಯವಾಗಿರುತ್ತದೆ. ಈ ಸ್ಪರ್ಧೆಯಲ್ಲಿ ಬಿಳುವ ವಾಹನ ಚಾಲಕರನ್ನು ಸಮಯದ ಹಿಗ್ಗಿಲ್ಲದೆ ದುಡಿಮೆಯಲ್ಲಿ ತೊಡಗಿರುತ್ತಾರೆ ಕಾರಣ ಅವರ ದುಡಿಮೆ ಹೆಚ್ಚಾಗಿರುತ್ತದೆಂದು ಕಾಣುತ್ತದೆ. ಚಾಲಕರು ತಮ್ಮ ದೇಹಕ್ಕೆ ವಿಶ್ರಾಂತಿ ನಿಡದೇ ದುಡಿಮೆಯಲ್ಲಿ ತೊಡಗುತ್ತಾರೆ. ಈ ಸಮಯದಲ್ಲಿ ಅವರು ತಮ್ಮ ನಿದ್ರೆಯನ್ನು ಮುಂದುಡಲು ಗುಟುಕ, ಪಾನ್‌ಮಾಸಲಾ, ಧೂಮಪಾನ, ಮಧ್ಯಪಾನ ಇತ್ಯಾದಿ ಚಟಗಳಿಗೆ ಬಲಿಯಾಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ಬಹುತೇಕ ಚಾಲಕರು ತಮ್ಮ ದುಡಿಮೆಯಲ್ಲಿ ಕನಿಷ್ಟ ಶೇ.೧೦ ರಿಂದ ಗರಿಷ್ಟ ಶೇ.೩೫ರಷ್ಟು ಹಣವನ್ನು ದುಡಿಯುವ ಸಮಯದಲ್ಲಿ ತಾವು ಬಳಸುವ ಮಾದಕ ಪದಾರ್ಥಗಳ ಮೇಲೆ ವಿನಿಯೋಗಿಸುವುದು ತಿಳಿಯುತ್ತದೆ.

ಹೀಗೆ ಸಮಯ ರಹಿತವಾಗಿ ದುಡಿಮೆಯಲ್ಲಿ ಸ್ಪರ್ಧೆಯನ್ನು ಹುಟ್ಟುಹಾಕಿ ಇರುವ ದುಡಿಸಿಕೊಳ್ಳುವ ವರ್ಗದ ಹಿತಶಕ್ತಿ ರಾಜಕರಣವೂ ದುಡಿಯುವ ವರ್ಗವನ್ನು ಅನಾರೋಗ್ಯ ಸ್ಥಿತಿಗೆ ತಲ್ಲುತ್ತಿದೆ. ಅಂದರೆ ದುಷ್ಚಟಗಳಿಗೆ ಒಳಗಾದ ವ್ಯಕ್ತಿಗಳು ತಮ್ಮ ೪೦ರಿಂದ೪೫ ವರ್ಷದ ಅವಧಿಯಲ್ಲಿ ಇತ್ತ ದುಡಿಯಲು ಆಗದೆ ಆನಾರೋಗ್ಯಕ್ಕೆ ತುತ್ತಾಗಿರುವುದು ಕಂಡುಬರುತ್ತದೆ. ಹೀಗೆ ಆನಾರೋಗ್ಯಕ್ಕೆ ಬಿಳುವ ಜನರ ಆರ್ಥಿಕ, ಸಾಮಾಜಿಕ ಹಿನ್ನಲೆಯನ್ನು ಗಮನಿಸಿದಾಗ ಅವರು ಅತ್ಯಂತ ಹಾಗೂ ನಿಗದಿತ ರೂಪದ ಆದಾಯವಿಲ್ಲದ ಜನ ವರ್ಗಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಅಪೌಷ್ಟಕತೆ, ರಕ್ತಹೀನತೆಯ ಪ್ರಮಾಣ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವುದರಿಂದ ಅವರು ಅನಾರೋಗ್ಯಕ್ಕೆ ಆಗಿಂದಾಗೆ ಒಳಗಾಗಿ ತಮ್ಮ

ಆರೋಗ್ಯದ ನಿರ್ವಹಣೆಗೆ ಹೆಚ್ಚು ಹಣ ವಿನಿಯೋಗಿಸಬೇಕಾದ ಸ್ಥಿತಿ ತಲುಪಿದೆ. ಈ ಸಂದರ್ಭದಲ್ಲಿ ಅವರು ತಮ್ಮ ಹಣಕಾಸಿನ ವ್ಯವಹಾರಕ್ಕೆ ಸ್ಥಳೀಯ ಬಡ್ಡಿ ವ್ಯವಹಾರಸ್ಥರ ಬಳಿ ದಿನ ಮತ್ತು ಸಮಯದ ಬಡ್ಡಿ ಲೆಕ್ಕದಲ್ಲಿ ಹಣಕಾಸಿನ ವ್ಯವಹಾರಕ್ಕೆ ಬಲಿಯಾಗುತ್ತಿದ್ದಾರೆ. ಈ ಬಡ್ಡಿ ವ್ಯವಹಾರ ಕನಿಷ್ಟ ೪ರಿಂದ ಪ್ರಾರಂಭಗೊಂಡು (ಮಾಸಿಕ) ೧೦ರವರೆಗೆ ನಡೆಯುತ್ತದೆ. ಈ ಬಡ್ಡಿ ವಿಷಚಕ್ರವು ಗಣಿ ಭಾಗಗಳಲ್ಲಿ ದುಡಿಯುವ ಜನರ ಜೀವ ಹಿಂಡುವ ವಿಷಚಕ್ರವಾಗಿದೆ. ಇಂತಹ ವಿಷಚಕ್ರಕ್ಕೆ ದುಡಿಯುವ ವರ್ಗದವರು ಬಲಿಯಾಗುತ್ತಿರಲು ಕಾರಣ ದುಡಿಯುವ ವರ್ಗಕ್ಕೆ ಬೇಕಾದ ಕನಿಷ್ಟ ಸುರಕ್ಷತೆ ಮತ್ತು ಭದ್ರತೆ ಇಲ್ಲದಿರುವುದಾಗಿದೆ. ಈ ಹಿನ್ನಲೆಯಲ್ಲಿ ನಮ್ಮ ಅಧ್ಯಯನವು ಗಣಿಗಳಲ್ಲಿ ತಿಂಗಳಿಗೆ ಕನಿಷ್ಟ ೨೦ದಿನಗಳ ದುಡಿಯುವ ವ್ಯತಿಗೆ ಅವರ ಲಿಂಗ ಆಧಾರದಲ್ಲಿ ಸಾಮಾಜಿಕ ಭದ್ರತೆಯನ್ನು ರೂಪಿಸುವ ಅಗತ್ಯವನ್ನು ಎತ್ತಿಹಿಡಿಯುತ್ತದೆ. ಇದು ಒಂದು ಕಡೆಯಾದರೆ ದುಡಿಯುವ ಜನರಿಗೆ ಅಗತ್ಯವಾಗಿ ಬೇಕಾದ ಭದ್ರತೆಗಳು ಸಿಗದಿರುವ ಪರಿಸ್ಥಿಯನ್ನು ನಾವು ಕಾಣತ್ತೇವೆ. ಅದರಲ್ಲಿಯೂ ಪ್ರಾರಂಭಿಕ ಹಂತದಲ್ಲಿ ಆರೋಗ್ಯ ಬಿಕ್ಕಟಿಗೆ ಒಳಗಾದ ದುಡಿಯುವ ಜನರು ಸ್ಥಳೀಯ ಹಂತದಲ್ಲಿ ತೊರುತ್ತಿರುವ ಆರೋಗ್ಯ ಸೌಲಭ್ಯವನ್ನು ಬಳಸಿಕೊಳ್ಳಲು ಅದಷ್ಟರ ಮಟ್ಟಗೆ ಅದನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಅವರ ಆರೋಗ್ಯ ಪರಿಸ್ಥಿತಿ ಹೆಚ್ಚು ಬಿಗಡಯಿಸುತ್ತಾ ಹೊದಂತೆ ಅವರು ಆರೋಗ್ಯದ ಮೇಲೆ ಹೂಡಬೇಕಾಗಿರುವ ಹೂಡಿಕೆಯ ಪ್ರಮಾಣ ಹೆಚ್ಚಾಗುತ್ತಿರುವುದು ಅಧ್ಯಯನ ಸಂದರ್ಭದಲ್ಲಿ ನಾವು ತಿಳಿದುಕೊಂಡ ವಿಷಯವಾಗಿದೆ. ಇದನ್ನು ನಾವು ಹೀಗೆ ವಿವರಿಸಬಹುದು, ಕೆಮ್ಮು, ಜ್ವರ, ನೆಗಡಿ ಇತ್ಯಾದಿ ಸಣ್ಣಪುಟ್ಟ ರೋಗರುಜ್ಜನೆಗಳು ಬಂದಾಗ ಅವರು ಸ್ಥಳೀಯವಾಗಿ ದೊರಕುವ ಆಹಾರ ಭದ್ರೆತೆಯಿಂದ ಸರಿಪಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಗಣಿಗಾರಿಕೆಯಿಂದ ಮತ್ತು ಅದರ ಪರಿಸರದಿಂದ ಉಂಟಾಗುವ ಶ್ವಾಸಕೋಶ, ಅಸ್ತಮಾ, ಮೂತ್ರಕೋಶ, ಕ್ಷಯ, ರಕ್ತಹೀನತೆ ಮುಂತಾದ ಆರೋಗ್ಯ ಸಮಸ್ಯೆಗಳಿಗೆ ಒಳಗಾಗುವ ಬಹತೇಕ ದುಡಿಯುವ ಜನರು ತಮ್ಮ ಅನಾರೋಗ್ಯದ ಹೆಚ್ಚಿನ ಸ್ಥಿತಿಗೆ ಮುಂದೆ ಹೋಗಲಾರದ ಸ್ಥಿತಿಯನ್ನು ತಲುಪಿದ್ದಾರೆ. ಇದಕ್ಕೆ ಮುಖ್ಯವಾದ ಕಾರಣ ಗಣಿಗಾರಿಕೆಯು ರೂಪಿಸಿರುವ ಅಸಮಾನ ಆರ್ಥಿಕ ವ್ಯವಸ್ಥೆಯ ಪರಿಣಾಮವಾಗಿದೆ.

- ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳು ಪಡೆದಿರುವ ಪಡಿತರ ಚೀಟಿಯ ಪ್ರಮಾಣವು ಹೊಸಪೇಟೆ ತಾಲ್ಲೂಕಿನ ಕುಟುಂಬಗಳು ಪಡಿತರ ಚೀಟಿ ವ್ಯವಸ್ಥೆ ಶೇ.೮೮.೮೮ರಷ್ಟು ಹೊಂದಿದ್ದು, ಪಡಿತರ ಚೀಟಿ ವ್ಯವಸ್ಥೆಯನ್ನು ಶೇ.೧೧.೧೨ರಷ್ಟು ಕುಟುಂಬಗಳು ಪಡೆದುಕೊಂಡಿಲ್ಲ. ಈ ವಲಯದ ಕುಟುಂಬಗಳು ಪಡಿತರ ಚೀಟಿಯಲ್ಲಿ ಎ.ಪಿಎಲ್ ಕಾರ್ಡು ಶೇ.೨೫.೫೦ರಷ್ಟು, ಬಿ.ಪಿ.ಎಲ್‌ಕಾರ್ಡು ಶೇ.೩೦ರಷ್ಟು, ಅಂತೋದ್ಯಯ ಕಾರ್ಡು ಶೇ.೨೬.೩೫ರಷ್ಟು, ಅಕ್ಷಯ ಕಾರ್ಡು ಶೇ.೨೧.೨೫ರಷ್ಟು ಪಡೆದಿದ್ದಾರೆ. ಸಂಡೂರು ತಾಲ್ಲೂಕಿನ ಕುಟುಂಬಗಳು ಪಡಿತರ ಚೀಟಿ ವ್ಯವಸ್ಥೆ ಶೇ.೮೮.೮೮ರಷ್ಟು ಪಡೆದಿದ್ದು, ಇನ್ನು ಶೇ.೧೧.೧೨ರಷ್ಟು ಕುಟುಂಬಗಳು ಪಡಿತರ ಚೀಟಿ ವ್ಯವಸ್ಥೆಯನ್ನು ಪಡೆದುಕೊಂಡಿಲ್ಲ. ಈ ವಲಯದ ಕುಟುಂಬಗಳು ಪಡಿತರ ಚೀಟಿಯಲ್ಲಿ ಎ.ಪಿಎಲ್ ಕಾರ್ಡು ಶೇ.೧೬.೨೫ರಷ್ಟು, ಬಿ.ಪಿ.ಎಲ್‌ಕಾರ್ಡು ಶೇ.೨೮.೭೫ರಷ್ಟು, ಅಂತೋದ್ಯಯ ಕಾರ್ಡು ಶೇ.೨೬.೩೧.೨೫ರಷ್ಟು, ಅಕ್ಷಯ ಕಾರ್ಡು ಶೇ.೨೩.೭೫ರಷ್ಟು ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಗಳಾಗಿವೆ. ಹಾಗೂ ಬಳ್ಳಾರಿ ತಾಲ್ಲೂಕಿನ ಕುಟುಂಬಗಳು ಶೇ.೮೧.೧೨ರಷ್ಟು ಪಡಿತರ ಚೀಟಿ ವ್ಯವಸ್ಥೆ ಹೊಂದಿದ್ದು, ಇನ್ನುಳಿದ ಕುಟುಂಬಗಳು ಶೇ.೧೮.೧೮ರಷ್ಟು ಪಡಿತರ ಚೀಟಿ ವ್ಯವಸ್ಥೆಯನ್ನು ಹೊಂದಿರುವುದಿಲ್ಲ. ಈ ವಲಯದ ಕುಟುಂಬಗಳು ಎ.ಪಿಎಲ್ ಕಾರ್ಡು ಶೇ.೨೧.೯೧ರಷ್ಟು, ಬಿ.ಪಿ.ಎಲ್ ಕಾರ್ಡು ಶೇ.೨೭.೦೨ರಷ್ಟು, ಅಂತೋದ್ಯಯ ಕಾರ್ಡು ಶೇ.೨೬.೦೩ರಷ್ಟು, ಅಕ್ಷಯ ಕಾರ್ಡು ಶೇ.೨೪.೬೭ರಷ್ಟು ಪಡಿತರ ಚೀಟಿಯನ್ನು ಹೊಂದಿರುವುದು ಕಂಡು ಬರುತ್ತದೆ.

- ಗಣಿ ವಲಯದ ಗ್ರಾಮೀಣ ಪ್ರದೇಶದ ಕುಟುಂಬಗಳು ಆಹಾರ ಪದಾರ್ಥವನ್ನು ಖರೀದಿಸಲು ತಿಂಗಳಿಗೆ ಮಾಡುವ ಖರ್ಚಿನ ಪ್ರಮಾಣವು ಸಂಡೂರು ಮತ್ತು ಬಳ್ಳಾರಿ ಗಣಿ ವಲಯದ ಕುಟುಂಬಗಳು ೨,೦೦೦ದಿಂದ೪,೦೦೦ರೂ ಕ್ರಮವಾಗಿ ಶೇ.೪೦.೦೨ರಷ್ಟು ಮತ್ತು ಶೇ.೩೩.೩೪ರಷ್ಟು ಅಧಿಕವಾಗಿ ಕಂಡು ಬಂದರೆ, ಹೊಸಪೇಟೆ ಗಣಿ ವಲಯದ ಕುಟುಂಬಗಳು ೪,೦೦೦ದಿಂದ೬,೦೦೦ರೂ ಶೇ.೩೮.೮೮ರಷ್ಟು, ತಿಂಗಳಿಗೆ ಆಹಾರ ಪದಾರ್ಥವನ್ನು ಕೊಳ್ಳಲು ಖರ್ಚು ಮಾಡಿರುವ ಪ್ರಮಾಣವಾಗಿದೆ. ಈ ಮೂರು ವಲಯದಲ್ಲಿಯೇ ಆಹಾರ ಪದಾರ್ಥವನ್ನು ಕೊಳ್ಳಲು ತಿಂಗಳಿಗೆ ಖರ್ಚು ಮಾಡುವ ಪ್ರಮಾಣ ಸಂಡೂರು ಗಣಿ ವಲಯದ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.
- ಗಣಿ ಗ್ರಾಮೀಣ ಪ್ರದೇಶದಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಕುಟುಂಬಗಳ ಅಧ್ಯಯನ ಫಲಿತವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೫೫.೫೬ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಈ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮಕ್ಕಳು ಶೇ.೩೪ರಷ್ಟು, ಮಹಿಳೆಯರು ಶೇ.೪೪ರಷ್ಟು, ಪರುಷರು ಶೇ.೨೨ರಷ್ಟು ಪೌಷ್ಟಿಕ ಕೊರತೆಗೆ ತುತ್ತಾಗಿದ್ದಾರೆ. ಇದರಲ್ಲಿ ಮಹಿಳೆಯರು (ಶೇ.೪೪) ಅಧಿಕವಾಗಿ ಅಪೌಷ್ಟಿಕತೆಯಿಂದ ಬಳಲುತ್ತಿರುವುದು ಕಂಡುಬಂದಿದೆ. ಈ ತಾಲ್ಲೂಕಿನ ಗಣಿಗಾರಿಕೆ ಪ್ರದೇಶದ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಶೇ.೨೭.೨೮ರಷ್ಟು ಮರಣಿಸಿದವರಿದ್ದಾರೆ. ಇದರಲ್ಲಿ ಮಕ್ಕಳು ಶೇ.೨೮ರಷ್ಟು, ಮಹಿಳೆಯರು ಶೇ.೫೨ರಷ್ಟು, ಪುರುಷರು ಶೇ.೨೦ರಷ್ಟು ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಮುಖ್ಯವಾಗಿ ಅಪೌಷ್ಠಿಕತೆಯಿಂದ (ಶೇ.೫೨) ಮಹಿಳೆಯರು ಅಧಿಕ ಪ್ರಮಾಣದಲ್ಲಿ ಮರಣಿಸಿದರೆ, ಪುರುಷರು ಶೇ೨೦ರಷ್ಟು ಕಡಿಮೆ ಪ್ರಮಾಣದಲ್ಲಿ ಅಪೌಷ್ಟಿಕತೆಯಿಂದ ಮರಣಿಸಿರುವುದು ಕಂಡುಬಂದಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೭೩.೧೨ರಷ್ಟು ಪೌಷ್ಟಿಕ ಕೊರತೆಯಿಂದ ಬಳಲುತ್ತಿದ್ದಾರೆ. ಇದರಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳು ಶೇ೨೮.೭೮ರಷ್ಟು, ಮಹಿಳೆಯರು ಶೇ.೫೩.೦೪ರಷ್ಟು, ಪುರುಷರು ಶೇ.೧೮.೧೮ರಷ್ಟಿದ್ದಾರೆ. ಅಪೌಷ್ಟಿಕತೆಯಿಂದ ಮಹಿಳೆಯರು ಹೆಚ್ಚಿನ ಪ್ರಮಾಣದಲ್ಲಿ ಬಳಲುತ್ತಿರುವುದು ತಿಳಿದುಬರುತ್ತದೆ. ಈ ವಲಯದ ಕುಟುಂಬಗಳಲ್ಲಿ ಅಪೌಷ್ಟಿಕತೆಯಿಂದ ಶೇ.೨೬.೬೭ರಷ್ಟು ಮರಣಿಸಿದ್ದಾರೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಅಪೌಷ್ಟಿಕತೆಯಿಂದ ಮರಣಿಸಿದ್ದ ಕುಟುಂಬಗಳಲ್ಲಿ ಮಕ್ಕಳು ಶೇ.೩೭.೫೧ರಷ್ಟು, ಮಹಿಳೆಯರು ಶೇ.೪೫.೮೩ರಷ್ಟು, ಪುರುಷರು ಶೇ.೧೬.೬೬ರಷ್ಟು, ಅಪೌಷ್ಟಿಕತೆಯಿಂದ ಮರಣಿಸಿದ್ದಾರೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಮಹಿಳೆಯರು ಅಪೌಷ್ಟಿಕತೆಯಿಂದ ಅಧಿಕವಾಗಿ ಮರಣಿಸಿರುವುದು ಕಂಡುಬಂದಿದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೬೮.೯೮ರಷ್ಟು ಅಪೌಷ್ಟಿಕತೆಯಿಂದ ಬಳಲುತ್ತಿದ್ದು, ಮಕ್ಕಳು ಶೇ.೩೦.೬೪ರಷ್ಟು, ಮಹಿಳೆಯರು ಶೇ.೪೧.೯೩ರಷ್ಟು, ಪುರುಷರು ಶೇ.೨೭.೪೩ರಷ್ಟಿದ್ದಾರೆ. ಈ ವಲಯದ ಕುಟುಂಬದವರು ಅಪೌಷ್ಟಿಕತೆಯಿಂದ ಶೇ.೫೪.೪೪ರಷ್ಟು ಮರಣಿಸಿದ್ದಾರೆ. ಇದರಲ್ಲಿ ಮಕ್ಕಳು ಶೇ.೩೨.೬೫ರಷ್ಟು, ಮಹಿಳೆಯರು ಶೇ.೪೪.೯೮ರಷ್ಟು, ಪುರುಷರು ಶೇ.೨೨.೪೫ರಷ್ಟು ಮರಣ ಹೊಂದಿದ್ದಾರೆ. ಅಪೌಷ್ಟಿಕತೆಯಿಂದ ಮರಣ ಹೊಂದಿರುವ ಪ್ರಮಾಣ ಮಹಿಳೆಯರಲ್ಲಿ ಅಧಿಕವಾಗಿದೆ. ಒಟ್ಟಾರೆ ಗಣಿ ವಲಯ ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುಗಳಲ್ಲಿ ಅಪೌಷ್ಟಿಕತೆಯಿಂದ (ಶೇ.೬೮.೧೧) ಹೆಚ್ಚಾಗಿ ಬಳ್ಳಾರಿ ತಾಲ್ಲೂಕಿನಲ್ಲಿ ಬಳಲುತ್ತಿದ್ದು, ಹೊಸಪೇಟೆ ತಾಲ್ಲೂಕಿನಲ್ಲಿ ಶೇ.೫೫.೫೫ರಷ್ಟು ಕಡಿಮೆ ಪ್ರಮಾಣದಲ್ಲಿ ಬಳಲುತ್ತಿರುವುದು ತಿಳಿದುಬಂದಿದೆ. ಅಪೌಷ್ಟಿಕತೆಯಿಂದ(ಶೇ.೫೪.೪೪) ಮರಣಿಸಿದ ಕುಟುಂಬಗಳು ಬಳ್ಳಾರಿ ತಾಲ್ಲೂಕಿನಲ್ಲಿ ಹೆಚ್ಚಾಗಿದೆ. ಇದರಲ್ಲಿ ಗ್ರಾಮೀಣ ಪ್ರದೇಶದ ಮಹಿಳೆಯರು ಅಧಿಕವಾಗಿ ಮರಣಿಸಿದವರಾಗಿದ್ದಾರೆ. ಈ ಅಪೌಷ್ಟಿಕತೆಯಿಂದ ಮರಣಿಸಿದ ಮಹಿಳೆಯರ ಪ್ರಮಾಣ ಹೊಸಪೇಟೆ ತಾಲ್ಲೂಕಿನಲ್ಲಿ (ಶೇ.೫೨) ಹೆಚ್ಚಾಗಿರುವುದು ಕಂಡು ಬರುತ್ತದೆ.

* ಗಣಿ ವಲಯ ಹೊಸಪೇಟೆ, ಸಂಡೂರು ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಗರ್ಭಿಣಿ ಮಹಿಳೆಯರ ಪ್ರಮಾಣ, ಸಾಂಸ್ಥಿಕ ಹೆರಿಗೆಯ ಕುರಿತ ಫಲಿತವು ಹೊಸಪೇಟೆ ತಾಲ್ಲೂಕಿನ ಕುಟುಂಬಗಳಲ್ಲಿ ಶೇ.೪೮.೮೮ರಷ್ಟು ಗರ್ಭಿಣಿ ಮಹಿಳೆಯರಿದ್ದಾರೆ. ಗರ್ಭಿಣಿ ಮಹಿಳೆಯರು ಇರುವ ಕುಟುಂಬಗಳು ಆಸ್ಪತ್ರೆಯಲ್ಲಿ ಶೇ.೭೨.೭೨ರಷ್ಟು ಹೆರಿಗೆಯನ್ನು ಮಾಡಿಸಿದ್ದು, ಮನೆಯಲ್ಲಿಯೇ ಶೇ.೨೭.೨೭ರಷ್ಟು ಕುಟುಂಬಗಳ ಗರ್ಭಿಣಿ ಮಹಿಳೆಯರಿಗೆ ಹೆರಿಗೆಯಾಗಿವೆ. ಆಸ್ಪತ್ರೆಯಲ್ಲಿ ಗರ್ಭಿಣಿ ಮಹಿಳೆಯರ ಹೆರಿಗೆ ಶೇ.೭೨.೭೨ರಷ್ಟು ಆಗಿದ್ದು, ಅದರಲ್ಲಿ ಸರ್ಕಾರಿ ಆಸ್ಪತ್ರೆಯಲ್ಲಿ ಶೇ.೭೫ರಷ್ಟು ಗರ್ಭಿಣಿ ಮಹಿಳೆಯರ ಹೆರಿಗೆ ಆಗಿವೆ. ಖಾಸಗಿ ಆಸ್ಪತ್ರೆಯಲ್ಲಿ ಶೇ.೨೫ರಷ್ಟು ಗರ್ಭಿಣಿ ಮಹಿಳೆಯರ ಹೆರಿಗೆಗಳಾಗಿವೆ. ಈ ತಾಲ್ಲೂಕಿನ ಗರ್ಭಿಣಿ ಮಹಿಳೆಯರ ಹೆರಿಗೆಯು ಖಾಸಗಿ ಆಸ್ಪತ್ರೆಗಿಂತ ಸರ್ಕಾರಿ ಆಸ್ಪತ್ರೆಯಲ್ಲೇ ಹೆಚ್ಚಾಗಿ ಆಗಿರುವುದು ಕಂಡುಬಂದಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೪೧.೧೭ರಷ್ಟು ಗರ್ಭಿಣಿ ಮಹಿಳೆಯರಿದ್ದಾರೆ. ಈ ಕುಟುಂಬದ ಗರ್ಭಿಣಿ ಮಹಿಳೆಯರು ಹೆರಿಗೆಯನ್ನು ಶೇ.೮೧.೦೯ರಷ್ಟು ಆಸ್ಪತ್ರೆಯಲ್ಲಾದರೆ, ಮನೆಯಲ್ಲಿ ಶೇ.೧೮.೯೭ರಷ್ಟು ಹೆರಿಗೆ ಆಗಿವೆ. ಗ್ರಾಮೀಣ ಪ್ರದೇಶದ ಗರ್ಭಿಣಿ ಮಹಿಳೆಯರು ಸರ್ಕಾರಿ ಆಸ್ಪತ್ರೆಯಲ್ಲಿ ಶೇ.೭೦ರಷ್ಟು, ಖಾಸಗಿ ಆಸ್ಪತ್ರೆಯಲ್ಲಿ ಶೇ.೩೦ರಷ್ಟು ಹೆರಿಗೆಯಾಗಿವೆ. ಈ ತಾಲ್ಲೂಕಿನ ಗರ್ಭಿಣಿ ಮಹಿಳೆಯರ ಹೆರಿಗೆಯು ಖಾಸಗಿ ಆಸ್ಪತ್ರೆಗಿಂತ ಸರ್ಕಾರಿ ಆಸ್ಪತ್ರೆಯಲ್ಲೇ ಅಧಿಕವಾಗಿರುವುದು ಕಂಡುಬಂದಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ಗ್ರಾಮೀಣ ಪ್ರದೇಶಗಳ ಗರ್ಭಿಣಿ ಮಹಿಳೆಯರು ಶೇ.೪೪.೪೪ರಷ್ಟಿದರೆ, ಕುಟುಂಬಗಳ ಗರ್ಭಿಣಿ ಹೆಂಗಸರು ಶೇ.೮೦ರಷ್ಟು ಆಸ್ಪತ್ರೆಯಲ್ಲಿ ಹೆರಿಗೆಯಾದರೆ, ಶೇ.೨೦ರಷ್ಟು ಗರ್ಭಿಣಿ ಮಹಿಳೆಯರು ಮನೆಯಲ್ಲಿ ಹೆರಿಗೆಗಳಾಗಿವೆ. ಸರ್ಕಾರಿ ಆಸ್ಪತ್ರೆಯಲ್ಲಿ ಶೇ೭೧.೮೭ರಷ್ಟು ಹಾಗೂ ಖಾಸಗಿ ಆಸ್ಪತ್ರೆಯಲ್ಲಿ ಶೇ.೨೮.೧೩ರಷ್ಟು ಗರ್ಭಿಣಿ ಮಹಿಳೆಯರ ಹೆರಿಗೆಗಳಾಗಿವೆ. ಒಟ್ಟಾರೆ ಗಣಿ ವಲಯದ ಗ್ರಾಮೀಣ ಪ್ರದೇಶಗಳಲ್ಲಿ ಗರ್ಭಿಣಿ ಮಹಿಳೆಯರ ಪ್ರಮಾಣವು ಹೊಸಪೇಟೆ ತಾಲ್ಲೂಕಿನಲ್ಲಿ ಹೆಚ್ಚಾಗಿರುವುದು ಕಂಡುಬಂದಿದೆ.
* ಗಣಿಯಿಂದಾಗಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಹರಡಿರುವ ರೋಗಗಳ ಪ್ರಮಾಣ, ಹಾಗೂ ಯಾವ ರೋಗಗಳಿಂದ ಬಳಲುತ್ತಿರುವ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಸಾಂಕ್ರಾಮಿಕ ರೋಗಗಳಿಂದ ಶೇ.೫೭.೭೮ರಷ್ಟು ಹಾನಿಗೊಳಗಾಗಿದ್ದಾರೆ.ಈ ಕುಟುಂಬಗಳಲ್ಲಿ ಅಸ್ತಮಾ ಶೇ೦೭.೯೯ರಷ್ಟು, ಉಸಿರಾಟ ತೊಂದರೆಗೆ ಶೇ.೨೫ರಷ್ಟು, ಶ್ವಾಸಕೋಶ ತೊಂದರೆಗೆ ಶೇ.೨೧ರಷ್ಟು, ಟಿ.ಬಿ ಶೇ.೩೦.೭೫ರಷ್ಟು ರೋಗಗಳಿಗೆ ತುತ್ತಾಗಿದ್ದಾರೆ. ಈ ಸಂಕ್ರಾಮಿಕ ರೋಗಗಳಲ್ಲಿಯೇ ಟಿ.ಬಿ ರೋಗಕ್ಕೆ ಹಾನಿಗೊಳಗಾದ ಕುಟುಂಬದವರು ಈ ವಲಯದ ತಾಲ್ಲೂಕಿನಲ್ಲಿ ಹೆಚ್ಚು ಇರುವುದು ಕಂಡು ಬಂದಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೫೩.೩೪ರಷ್ಟು ರೋಗಗಳ ಹಾನಿಗೆ ಒಳಾಗಾಗಿದೆ. ಈ ಕುಟುಂಬಗಳಲ್ಲಿ ಹರಡಿರುವ ರೋಗಗಳು ಅಸ್ತಮಾ ಶೇ.೦೪.೧೬ರಷ್ಟು, ಉಸಿರಾಟದ ತೊಂದರೆ ಶೇ.೨೫ರಷ್ಟು, ಶ್ವಾಸಕೋಶದ ತೊಂದರೆ ಶೇ.೩೭.೫೦ರಷ್ಟು, ಟಿ.ಬಿ ರೋಗವು ಶೇ.೩೩.೩೪ರಷ್ಟಿದೆ. ಕುಟುಂಬಗಳು ಶಾಸ್ವಕೋಶದ ತೊಂದರೆಗೆ ಬಳಲುತ್ತಿರುವ (ಶೇ.೩೭.೫೦) ಹೆಚ್ಚಾಗಿದೆ ಎಂದು ತಿಳಿದು ಬರುತ್ತದೆ. ಬಳ್ಳಾರಿ ತಾಲ್ಲೂಕಿನ ಕುಟುಂಬಗಳು ಶೇ.೮೮.೫೨ರಷ್ಟು ಸಂಕ್ರಾಮಿಕ ರೋಗಗಳು ಹರಡಿಕೊಂಡಿದ್ದು, ಆಸ್ತಮಾ ಶೇ.೨೭.೪೩ರಷ್ಟು, ಉಸಿರಾಟದ ತೊಂದರೆ ಶೇ.೨೦.೯೬ರಷ್ಟು, ಶ್ವಾಸಕೋಶದ ತೊಂದರೆ ಶೇ.೨೫.೮೦ರಷ್ಟು, ಟಿ.ಬಿ ಶೇ.೨೫.೮೦ರಷ್ಟು ಸಾಂಕ್ರಾಮಿಕ ರೋಗಗಳಿಗೆ ಒಳಗಾದ ಕುಟುಂಬಗಳಾಗಿವೆ. ಗಣಿ ವಲಯ ಬಳ್ಳಾರಿ, ಹೊಸಪೇಟೆ, ಸಂಡೂರು ಗ್ರಾಮೀಣ ಕುಟುಂಬಗಳಲ್ಲಿ ಸಾಂಕ್ರಾಮಿಕ ರೋಗಗಳು (ಶೇ.೮೮.೫೭) ಬಳ್ಳಾರಿ ಗಣಿ ವಲಯದಲ್ಲಿ ಹೆಚ್ಚಾಗಿದೆ. ಟಿ.ಬಿ ರೋಗಕ್ಕೆ ತುತ್ತಾದ ಕುಟುಂಬಗಳು (ಶೇ.೩೦.೭೬) ಹೊಸಪೇಟೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿದೆ. ಸಂಡೂರು ಗಣಿ ವಲಯಗಳಲ್ಲಿ ಶ್ವಾಸಕೋಶದ ತೊಂದರೆಗೆ ಒಳಗಾದ ರೋಗಿಗಳು (ಶೇ.೩೭.೫೦)ರಷ್ಟು ಹೆಚ್ಚಿದರೆ,

ಬಳ್ಳಾರಿ ಗಣಿ ವಲಯದಲ್ಲಿ ಅಸ್ತಮಾ ರೋಗಕ್ಕೆ ತುತ್ತಾದ ಕುಟುಂಬಗಳು (ಶೇ.೨೭.೪೩) ಅಧಿಕವಿದೆಂದು ತಿಳಿದುಬಂದಿದೆ.

- ಗಣಿ ಗ್ರಾಮೀಣ ಪ್ರದೇಶದಲ್ಲಿ ಹರಡಿರುವ ರೋಗಗಳಿಂದ ಮರಣ ಹೊಂದಿದ ಕುಟುಂಬಗಳ ಪ್ರಮಾಣವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೨೪.೪೪ರಷ್ಟು ಖಾಯಿಲೆಗಳಿಂದ ಮರಣಿಸಿದ್ದಾರೆ. ಇದರಲ್ಲಿ ಅಸ್ತಮಾ ಶೇ.೧೮.೧೮ರಷ್ಟು, ಉಸಿರಾಟದ ತೊಂದರೆ ಶೇ.೩೧.೮೩ರಷ್ಟು, ಶ್ವಾಸಕೋಶದ ತೊಂದರೆ ಶೇ.೨೨.೭೨ರಷ್ಟು, ಟಿ.ಬಿ ಖಾಯಿಲೆಯಿಂದ ಶೇ.೨೭.೨೭ರಷ್ಟು ಮರಣ ಹೊಂದಿರುವ ಪ್ರಮಾಣವಾಗಿದೆ. ಕುಟುಂಬ ಸದಸ್ಯರು ಮರಣ ಹೊಂದಲು ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯು ಶೇ.೩೨ರಷ್ಟು, ವಾಹನ ಅಪಘಾತದಿಂದ ಶೇ.೧೮ರಷ್ಟು ಹಾಗೂ ಅನಾರೋಗ್ಯದಿಂದ ಶೇ.೪೦ರಷ್ಟು ಕಾರಣಗಳಾಗಿವೆಂದು ತಿಳಿದುಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೨೭.೨೭ರಷ್ಟು ಖಾಯಿಲೆಯಿಂದ ಮರಣಿಸಿದ್ದಾರೆ. ಕುಟುಂಬ ಸದಸ್ಯರು ಅಸ್ತಮಾ ಶೇ.೨೦ರಷ್ಟು, ಉಸಿರಾಟದ ತೊಂದರೆ ಶೇ.೨೮ರಷ್ಟು, ಶ್ವಾಸಕೋಶದ ತೊಂದರೆ ಶೇ.೩೨ರಷ್ಟು, ಟಿ.ಬಿ ಶೇ.೨೦ರಷ್ಟು ರೋಗಗಳಿಂದ ಮರಣ ಹೊಂದಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಮರನ ಹೊಂದಲು ಗಣಿಗಾರಿಕೆಯಿಂದ ಶೇ.೩೩.೩೩ರಷ್ಟು, ವಾಹನ ಅಪಘಾತಗಳಿಂದ ಶೇ.೪.೪೪ರಷ್ಟು ಅನಾರೋಗ್ಯ ಶೇ.೪೨.೨೨ರಷ್ಟು ಕಾರಣಗಳಾಗಿವೆಂದು ಕಂಡುಬಂದಿದೆ. ಬಳ್ಳಾರಿ ಗಣಿ ವಲಯದ ಕುಟುಂಬಗಳಲ್ಲಿ ಖಾಯಿಲೆಯಿಂದ ಮರಣ ಹೊಂದಿದವರ ಪ್ರಮಾಣ ಶೇ.೩೦ರಷ್ಟಿದ್ದು, ಅಸ್ತಮಾ ಖಾಯಿಲೆಯಿಂದ ಶೇ.೩೭.೦೩ರಷ್ಟು, ಉಸಿರಾಟದ ತೊಂದರೆಯಿಂದ ಶೇ.೦೭.೪೦ರಷ್ಟು, ಶ್ವಾಸಕೋಶದ ತೊಂದರೆಗಳಿಂದ ಶೇ.೨೯.೬೨ರಷ್ಟು, ಟಿ.ಬಿ ಖಾಯಿಲೆಯಿಂದ ಶೇ.೨೫.೯೪ರಷ್ಟು ಮರಣ ಹೊಂದಿದ್ದಾರೆ.ಗಣಿಗಾರಿಕೆಯಿಂದ ಶೇ.೩೦.೦೦ರಷ್ಟು, ವಾಹನ ಅಪಘಾತಗಳಿಂದ ಶೇ.೨೩.೩೩ರಷ್ಟು, ಅನಾರೋಗ್ಯದಿಂದ ಶೇ.೨೬.೬೬ರಷ್ಟು ಇತ್ಯಾದಿ ಕಾರಣಗಳಿಂದ ಕುಟುಂಬಗಳಲ್ಲಿ ಮರಣಿಸಲು ಕಾರಣಗಳಾಗಿವೆಂದು ತಿಳಿದುಬರುತ್ತದೆ. ಒಟ್ಟಾರೆ ಈ ಮೂರು ವಲಯದಲ್ಲಿ ಖಾಯಿಲೆಯಿಂದ ಮರಣಿಸಲು ಗಣಿಗಾರಿಕೆಯೇ ಪ್ರಮುಖ ಕಾರಣವಾಗಿದೆ. ಗಣಿಗಾರಿಕೆಯ ಪರಿಣಾಮವಾಗಿಯೇ ಬಳ್ಳಾರಿಯಲ್ಲಿ ಶೇ.೩೦ರಷ್ಟು, ಸಂಡೂರಿನಲ್ಲಿ ಶೇ.೩೩.೩೩ರಷ್ಟು, ಹೊಸಪೇಟೆಯಲ್ಲಿ ಶೇ.೩೫.೫೫ರಷ್ಟು ಕುಟುಂಬಗಳಲ್ಲಿ ಮರಣಿಸಿರುವುದು ಕಂಡು ಬಂದಿದೆ.

ಇಲ್ಲಿಯ ಗಣಿಗಾರಿಕೆಯು ಸ್ಥಳೀಯ ಜನರ ಆರೋಗ್ಯದ ಮೇಲೆ ದುಷ್ಪರಿಣಾಮಗಳನ್ನು ಬೀರಿರುವ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಅನೇಕ ಚಲನಚಿತ್ರ ಹಾಗೂ ವೈದ್ಯಕೀಯ ಸಂಶೋಧನೆಗಳು ಇವೆ. ಉದಾಹರಣೆಗೆ ಹೆಚ್ಚು ಜನಪ್ರೀಯವಾಗಿರುವ ಪೃಥ್ವಿ ಚಲನಚಿತ್ರವು ಬಳ್ಳಾರಿ ಜಿಲ್ಲೆಯ ಅಕ್ರಮ ಗಣಿಗಾರಿಕೆ ಮತ್ತು ಜನರ ಮೇಲಾದ ಆರೋಗ್ಯದ ಪರಿಣಾಮಗಳನ್ನು ಚಿತ್ರಿಕರಿಸುತ್ತದೆ. ಇದು ಬಳ್ಳಾರಿ ಜಲ್ಲೆಯ ಗಣಿ ಉದ್ಯಮಗಳಿಂದಾಗುವ ಧೂಳು, ಗಣಿ ತಜ್ಯವಸ್ತುಗಳ ಕಲ್ಮಷ ಕುಡಿಯುವ ನೀರಿನಲ್ಲಿ ವಿಲೀನಗೊಂಡು ಜನರ ಆರೋಗ್ಯದ ಮೇಲಾಗಿರುವ ಪರಿಣಾಮ, ಗಣಿಸ್ಪೋಟದಿಂದಾಗಿ ಮಹಿಳೆಯರ ಗರ್ಭಪಾತದ ಪರಿಣಾಮ, ಗಣಿ ಗಡಿ ಪ್ರದೇಶದ ಬದಲಾವಣೆ, ಸ್ಥಳೀಯ ರೈತರ ಸಮಸ್ಯೆಯನ್ನು ಈ ಚಿತ್ರೀಕರಣವು ಎತ್ತಿಹಿಡಿದಿರುವದು ಕಾಣಸಿಗುತ್ತದೆ.

**೦೨. ಗಣಿ ಗಾಮೀಣ ಜನರ ಬದುಕಿನ ಮೇಲಾಗಿರುವ ಆರ್ಥಿಕತೆಯ ಪರಿಣಾಮಗಳ ಫಲಿತಗಳು**

ಗಣಿಗಾರಿಕೆಯು ಕೃಷಿಯ ಮೇಲೆ ಅದರಲ್ಲಿಯೂ ದುಡಿಯುವ ವರ್ಗದ ಮೇಲೆ ಯಾವ ಪರಿಣಾಮಗಳನ್ನು ಬೀರಿವೆಂಬುವುದನ್ನು ನೋಡಲು ಪ್ರಸ್ತುತ ಅಧ್ಯಯನ ಪ್ರಯತ್ನಿಸುತ್ತದೆ. ಈ ಹಂತದಲ್ಲಿಯೂ ಸಂಖ್ಯಾತ್ಮಕ ಸೂಚಕಗಳ ಮೂಲಕ ಕೃಷಿ ಭೂಹಿಡುವಳಿಯ ಪ್ರಮಾಣ, ಕೃಷಿ ಭೂಮಿ ಸಾಗುವಳಿ ಪ್ರಮಾಣ, ಕೃಷಿ ಭೂಮಿಯ ಇಳುವರಿ ಪ್ರಮಾಣ, ಕೃಷಿ ಬೆಳೆ ಹಾನಿಯ ಪ್ರಮಾಣ, ಕೃಷಿ, ಗಣಿಗಾರಿಕೆ ಮತ್ತು ಗಣಿ ಉದ್ಯಮದಲ್ಲಿ ದುಡಿಮೆಯ ಸ್ವರೂಪದ ಪ್ರಮಾಣ, ಸಂಪನ್ಮೂಲ ಒಡೆತನದ ಪ್ರಮಾಣ ಇತ್ಯಾದಿ ಅಂಶಗಳನ್ನು ಸಂಖ್ಯಾತ್ಮಕವಾಗಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

- ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೯೨.೨೩ರಷ್ಟು ಕುಟುಂಬಗಳು ಭೂ ಹಿಡುವಳಿಯನ್ನು ಹೊಂದಿದ್ದು, ಭೂಹಿಡುವಳಿಯನ್ನು ಹೊಂದಿರದ ಕುಟುಂಬಗಳು ಶೇ.೦೭.೭೭ರಷ್ಟಿದೆ. ಈ ಗಣಿ ವಲಯದಲ್ಲಿ ೧–೫ ಎಕರೆಯವರೆಗೆ ಶೇ.೩೦.೧೩ರಷ್ಟು, ೫–೧೦ ಎಕರೆಯವರೆಗೆ ಶೇ.೪೫.೭೮ರಷ್ಟು, ೧೦–೧೫ ಎಕರೆಯವರೆಗೆ ಶೇ.೨೪.೦೯ರಷ್ಟು ಪ್ರಮಾಣದ ಭೂಹಿಡುವಳಿಯನ್ನು ಹೊಂದಿರುವ ಕುಟುಂಬಗಳಾಗಿವೆ. ಭೂ ಹಿಡುವಳಿಯು ೫–೧೦ ಎಕರೆಯವರೆಗೆ ಹೊಂದಿರುವ ಕುಟುಂಬಗಳು (ಶೇ.೪೫.೭೮) ಹೆಚ್ಚಾಗಿದೆ. ಭೂಹಿಡುವಳಿ ಇಲ್ಲದವರು ಶೇ.೦೭.೭೭ರಷ್ಟಿದ್ದು, ಪಿತ್ರಾರ್ಜಿತವಾಗಿ ಭೂಮಿ ಹಂಚಿಕೆ ಆಗದಿರುವುದು ತಿಳಿದುಬಂದಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೯೪.೪೪ರಷ್ಟು ಭೂ ಹಿಡುವಳಿ ಹೊಂದಿದ್ದರೆ, ಶೇ.೦೫.೫೬ರಷ್ಟು ಭೂಹಿಡುವಳಿಯನ್ನು ಹೊಂದಿರದ ಕುಟುಂಬಗಳಾಗಿವೆ. ಅಂದರೆ ಸಾಗುವಳಿ ಮಾಡಲು ಕೃಷಿ ಭೂಮಿಯನ್ನು ಹೊಂದಿರದ ಕುಟುಂಬಗಳಾಗಿವೆ. ಭೂಹಿಡುವಳಿಯನ್ನು ಹೊಂದಿರುವ ಶೇ.೯೪.೪೪ರಷ್ಟು ಕುಟುಂಬಗಳಲ್ಲಿ ೧ರಿಂದ೫ ಎಕರೆಯವರೆಗೆ ಶೇ.೪೦.೦೧ರಷ್ಟು, ೫ರಿಂದ೧೦ ಎಕರೆಯವರಿಗೆ ಶೇ.೨೮.೨೩ರಷ್ಟು, ೧೦ರಿಂದ೧೫ ಎಕರೆಯವರೆಗೆ ಶೇ.೨೫.೮೮ರಷ್ಟು, ೧೫ಕ್ಕಿಂತ ಹೆಚ್ಚು ಎಕರೆಯನ್ನು ಶೇ.೦೫.೫೮ರಷ್ಟು ಭೂಹಿಡುವಳಿಯನ್ನು ಹೊಂದಿದ್ದಾರೆ. ಭೂ ಹಿಡುವಳಿಯನ್ನು ೧ರಿಂದ೫ ಎಕರೆಯವರೆಗೆ ಹೊಂದಿರುವ ಕುಟುಂಬಗಳು ಶೇ.೪೦.೦೧ರಷ್ಟಿದ್ದು, ಅದರ ಪ್ರಮಾಣ ಅಧಿಕವಾಗಿದೆ. ಇವರು ಸಣ್ಣ ಪ್ರಮಾಣದ ಭೂಹಿಡುವಳಿದಾರರಾಗಿದ್ದಾರೆ. ೧೫ಕ್ಕಿಂತ ಹೆಚ್ಚು ಎಕರೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಶೇ.೦೫.೫೫ರಷ್ಟಿದ್ದು, ಅತ್ಯಂತ ಕಡಿಮೆ ಪ್ರಮಾಣದಲ್ಲಿದ್ದಾರೆ. ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೯೧.೧೨ರಷ್ಟು ಭೂಹಿಡುವಳಿ ಹೊಂದಿದ್ದರೆ, ಶೇ.೦೮.೮೮ರಷ್ಟು ಕುಟುಂಬಗಳು ಸಾಗುವಳಿ ಮಾಡಲು ಭೂಹಿಡುವಳಿಯನ್ನು ಹೊಂದಿರುವುದಿಲ್ಲ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಭೂಹಿಡುವಳಿಯನ್ನು ಹೊಂದಿರುವ ಕುಟುಂಬಗಳು ೦೧–೦೫ ಎಕರೆಯವರೆಗೆ ಶೇ.೩೧.೭೧ರಷ್ಟು, ೫ರಿಂದ೧೦ ಎಕರೆಯವರೆಗೆ ಶೇ.೩೫.೩೬ರಷ್ಟು, ೧೦–೧೫ ಎಕರೆಯವರೆಗೆ ಶೇ.೩೨.೯೩ರಷ್ಟು ಭೂಹಿಡುವಳಿಯನ್ನು ಹೊಂದಿರುವ ಪ್ರಮಾಣವಾಗಿದೆ. ೫ರಿಂದ೧೦ ಎಕರೆಯವರೆಗೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಅಧಿಕವಾಗಿ ಇರುವುದು ಕಂಡು ಬರುತ್ತದೆ. ಒಟ್ಟಾರೆ ಈ ಮೂರು ವಲಯಗಳಲ್ಲಿ ಭೂಹಿಡುವಳಿಯ ಪ್ರಮಾಣವನ್ನು ತುಲನಾತ್ಮಕವಾಗಿ ಅವಲೋಕಿಸಿದಾಗ ಸಂಡೂರು ತಾಲೂಕಿನಲ್ಲಿ ಅಧಿಕ ಪ್ರಮಾಣದ (ಶೇ.೯೪.೪೪) ಭೂ ಹಿಡುವಳಿಯನ್ನು ಹೊಂದಿರುವ ಕುಟುಂಬಗಳಿದ್ದು, ಕಡಿಮೆ ಪ್ರಮಾಣದ ಭೂಹಿಡುವಳಿ ಹೊಂದಿರುವ ಕುಟುಂಬಗಳು (ಶೇ.೯೧.೧೨) ಬಳ್ಳಾರಿ ವಲಯದಲ್ಲಿ ಕಂಡು ಬರುತ್ತದೆ.
- ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳು ಹೊಂದಿರುವ ಕೃಷಿ ಭೂಮಿ ನೀರಾವರಿ ಅಥವಾ ನೀರಾವರಿ ಅಲ್ಲದ ಭೂಮಿಯ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೩೭.೩೪ರಷ್ಟಿದ್ದು, ೦೧–೦೫ ಎಕರೆವರೆಗೆ ಶೇ.೩೭.೪೮ರಷ್ಟು, ೫–೧೦ ಎಕರೆವರೆಗೆ ಶೇ.೪೧.೯೫ರಷ್ಟು, ೧೦–೧೫ ಎಕರೆ ಶೇ.೨೨.೫೮ರಷ್ಟು ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳಾಗಿವೆ. ನೀರಾವರಿ ಅಲ್ಲದ ಅಂದರೆ ಒಣ ಬೇಸಾಯ ಅವಲಂಬಿತ ಕುಟುಂಬಗಳು ಶೇ.೬೨.೬೫ರಷ್ಟಿದ್ದಾರೆ. ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶಗಳಾದ ಕಲ್ಹಳ್ಳಿ, ರಾಜಾಪುರ, ಪಾಪಿನಾಯಕನ ಹಳ್ಳಿಯಲ್ಲಿ ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಹೆಚ್ಚಾಗಿವೆ. ಈ ಕುಟುಂಬಗಳು ನೀರಾವರಿ ಅಲ್ಲದ ಕೃಷಿ ಭೂಮಿ ಹೊಂದಿರುವ ಕುಟಂಬಗಳ ಪ್ರಮಾಣ ೦೧–೦೫ ಎಕರೆವರೆಗೆ ಶೇ.೩೪.೬೨ರಷ್ಟು, ೦೫–೧೦ ಎಕರೆವರೆಗೆ ಶೇ.೩೨.೬೯ರಷ್ಟು, ೧೦–೧೫ ಎಕರೆವರೆಗೆ ಶೇ.೩೨.೬೯ರಷ್ಟಿದೆ. ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವವರು ೦೧–೦೫ ಎಕರೆ

ಇರುವ ಕುಟುಂಬಗಳು ಹೆಚ್ಚಾಗಿದ್ದು, ಅಂದರೆ ಅತಿ ಸಣ್ಣ ಭೂ ಹಿಡುವಳಿದಾರರು ಈ ವಲಯದಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೩೪.೧೭ರಷ್ಟಿದ್ದು, ನೀರಾವರಿವಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೬೫.೮೮ರಷ್ಟಿದ್ದಾರೆ. ಈ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ೦೧ರಿಂದ೦೫ಎಕರೆ ಶೇ.೫೫.೧೨ರಷ್ಟು, ೦೫ರಿಂದ೧೦ಎಕರೆ ಭೂಹಿಡುವಳಿ ಶೇ.೪೪.೮೩ರಷ್ಟಿದ್ದಾರೆ. ಸಕೃಷಿ ಭೂಮಿಯಲ್ಲಿ ನೀರಾವರಿ ಅಲ್ಲದ ಭೂಮಿಯನ್ನು ಹೊಂದಿರುವ ಕುಟುಂಬಗಳು ೦೧ರಿಂದ೦೫ ಎಕರೆ ಶೇ.೪೧.೦೨ರಷ್ಟು, ೦೫ರಿಂದ೧೦ ಎಕರೆ ಶೇ.೩೩.೯೩ರಷ್ಟು, ೧೦ರಿಂದ೧೫ ಎಕರೆ ಹಾಗೂ ೧೫ಕ್ಕಿಂತ ಹೆಚ್ಚು ಶೇ.೧೭.೫೦ರಷ್ಟಿದ್ದಾರೆ. ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ೧ರಿಂದ೫ ಎಕರೆವರೆಗೆ ಹೊಂದಿರುವ ಕುಟುಂಬಗಳು (ಶೇ.೪೧.೦೨) ಅಧಿಕ ಪ್ರಮಾಣದಲ್ಲಿದ್ದಾರೆ. ಇವರು ಅತೀ ಸಣ್ಣ ಭೂ ಹಿಡುವಳಿ ಹೊಂದಿರುವ ಕುಟುಂಬಗಳಾಗಿರುವುದು ಕಂಡು ಬರುತ್ತದೆ. ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ಶೇ.೭೯.೧೨ರಷ್ಟಿದ್ದರೆ, ನೀರಾವರಿವಲ್ಲದ ಕೃಷಿ ಭೂಮಿಯನ್ನು ಶೇ.೨೦.೨೩ರಷ್ಟು ಹೊಂದಿರುವ ಕುಟುಂಬಗಳಿವೆ. ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು ೦೧ರಿಂದ೦೫ ಎಕರೆವರೆಗೆ ಶೇ.೫೪.೧೬ರಷ್ಟು, ೦೫ರಿಂದ೧೦ ಎಕರೆವರೆಗೆ ಶೇ.೩೩.೩೩ರಷ್ಟು, ೧೦ರಿಂದ೧೫ಎಕರೆವರೆಗೆ ಶೇ.೧೭.೫೧ರಷ್ಟು ನಿರಾವರಿ ಭೂಮಿಯನ್ನು ಹೊಂದಿದ್ದಾರೆ. ಇದರಲ್ಲಿ ೦೧ರಿಂದ೦೫ಎಕರೆ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳೇ ಹೆಚ್ಚಾಗಿವೆ. ನೀರಾವರಿ ಅಲ್ಲದ ಕೃಷಿ ಭೂಮಿ ಹೊಂದಿರುವ ಕುಟುಂಬಗಳು ೦೧ರಿಂದ೦೫ಎಕರೆವರೆಗೆ ಶೇ.೪೮.೭೨ರಷ್ಟು, ೦೫ರಿಂದ೧೦ಎಕರೆವರೆಗೆ ಶೇ.೩೪.೪೮ರಷ್ಟು, ೧೦ರಿಂದ೧೫ ಎಕರೆವರೆಗೆ ಶೇ.೧೨.೭೫ರಷ್ಟಿದಾರೆ. ಈ ವಲಯದಲ್ಲಿಯೂ ೧ರಿಂದ೫ ಎಕರೆ ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಅತಿ ಸಣ್ಣ ಭೂಹಿಡುವಳಿದಾರರು ಅಧಿಕವಾಗಿದ್ದಾರೆ. ಒಟ್ಟಾರೆ ಗಣಿ ವಲಯಗಳಾದ ಹೊಸಪೇಟೆ, ಬಳ್ಳಾರಿ, ಸಂಡೂರು, ಗ್ರಾಮೀಣ ಪ್ರದೇಶದಲ್ಲಿ ನೀರಾವರಿ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು (ಶೇ.೩೨.೩೪), ಅಧಿಕವಾಗಿ ಹೊಸಪೇಟೆ ವಲಯದಲ್ಲಿ ಕಂಡು ಬಂದರೆ, ನೀರಾವರಿ ಅಲ್ಲದ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳು (ಶೇ.೨೦.೨೩) ಹೆಚ್ಚಾಗಿ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುತ್ತದೆ.

- ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಸಾಗುವಳಿ ತೊಡಗಿಸಿಕೊಂಡ ಕುಟುಂಬಗಳು ಶೇ.೨೫.೫೬ರಷ್ಟಿದ್ದರೇ, ಶೇ.೭೪.೪೪ರಷ್ಟು ಕುಟುಂಬಗಳು ಸಾಗುವಳಿ ಮಾಡಿರುವುದಿಲ್ಲ. ಸಾಗುವಳಿಯನ್ನು ತೊಡಗಿಸಿಕೊಂಡ ಕುಟುಂಬಗಳ ಕೃಷಿ ಭೂಮಿಯಲ್ಲಿ ಬಾಳೆ ಶೇ.೧೪.೨೦ರಷ್ಟು, ಮೆಕ್ಕೆಜೋಳ ಶೇ.೭೨.೯೪ರಷ್ಟು, ಜೋಳ ಶೇ.೧೪.೨೦ರಷ್ಟು, ರಾಗಿ ಶೇ.೦೪.೪೪ರಷ್ಟು, ಶೇಂಗಾ ಶೇ.೧೩.೭೩ರಷ್ಟು, ಕಬ್ಬು ಶೇ.೧೩.೭೩ರಷ್ಟು ಮತ್ತು ತರಕಾರಿ ಶೇ.೧೧.೨೬ರಷ್ಟು ಬೆಳೆದಿರುವ ಪ್ರಮಾಣವಾಗಿದೆ. ಈ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಮೆಕ್ಕೆ ಜೋಳವನ್ನು ಬೆಳೆದಿರುವ ಕುಟುಂಬಗಳು (ಶೇ.೭೨.೯೪) ಅಧಿಕ ಪ್ರಮಾಣದಲ್ಲಿದ್ದರೇ, ರಾಗಿಯನ್ನು ಬೆಳೆದಿರುವ ಕುಟುಂಬಗಳು (ಶೇ.೦೪.೪೪) ಪ್ರಮಾಣ ಕಡಿಮೆ ಇರುವುದು ಕಂಡು ಬಂದಿರುತ್ತದೆ. ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೮೭.೭೨ರಷ್ಟು ಕುಟುಂಬಗಳು ಕೃಷಿ ಭೂಮಿ ಸಾಗುವಳಿಯಲ್ಲಿ ತೊಡಗಿಸಿಕೊಂಡರೆ, ಇನ್ನುಳಿದ ಶೇ.೧೨.೨೮ರಷ್ಟು ಕುಟುಂಬಗಳು ಸಾಗುವಳಿಯಲ್ಲಿ ತೊಡಗಿರುವುದಿಲ್ಲ. ಕೃಷಿ ಭೂಮಿಯ ಸಾಗುವಳಿಯಲ್ಲಿ ತೊಡಗಿರುವ ಕುಟುಂಬಗಳು ಮುಖ್ಯವಾಗಿ ಮೆಕ್ಕೆಜೋಳ, ಜೋಳ, ರಾಗಿ, ಸಜ್ಜೆ, ಶೇಂಗಾ ಮತ್ತು ತರಕಾರಿಗಳನ್ನು ಬೆಳೆಯುತ್ತಿದ್ದಾರೆ. ಇದರಲ್ಲಿ ಮೆಕ್ಕೆಜೋಳವನ್ನು ಬೆಳೆದಿರುವ ಕುಟುಂಬಗಳ (ಶೇ.೩೫.೧೩) ಪ್ರಮಾಣ ಅಧಿಕವಾಗಿದೆ. ಸಜ್ಜೆಯನ್ನು ಬೆಳೆದಿರುವ ಕುಟುಂಬಗಳ (ಶೇ.೦೪.೦೫) ಪ್ರಮಾಣ ಕಡಿಮೆ ಇರುವುದು ಈ ವಲಯಗಳಲ್ಲಿ ಕಂಡು

ಬರುತ್ತದೆ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ಸಾಗುವಳಿಯನ್ನಾಗಿಸಿಕೊಂಡ ಕುಟುಂಬಗಳು ಶೇ.೬೩.೩೪ರಷ್ಟಿದ್ದರೆ, ಸಾಗುವಳಿಯಲ್ಲಿ ತೊಡಗದೇ ಇರುವ ಕುಟುಂಬಗಳು ಶೇ.೩೬.೬೬ರಷ್ಟರ ಪ್ರಮಾಣದಲ್ಲಿದೆ. ಈ ವಲಯದ ಕೃಷಿ ಭೂಮಿಯಲ್ಲಿ ಮೆಕ್ಕೆಜೋಳ, ಜೋಳ, ರಾಗಿ, ಹತ್ತಿ, ಶೇಂಗಾ ಮತ್ತು ತರಕಾರಿಯ ಇಳುವರಿಯನ್ನು ಮುಖ್ಯವಾಗಿ ಬೆಳೆಯುತ್ತಾರೆ. ಇದರಲ್ಲಿ ಶೇಂಗಾ ಇಳುವರಿ ಬೆಳೆದಿರುವ ಕುಟುಂಬಗಳ (ಶೇ.೨೨.೮೦) ಪ್ರಮಾಣ ಅಧಿಕವಾಗಿದೆ. ಕುಟುಂಬಗಳು ತರಕಾರಿಯನ್ನು ಶೇ.೦೭.೦೨ರಷ್ಟು ಪ್ರಮಾಣದಲ್ಲಿ ಬೆಳೆದಿದ್ದು, ಇದರ ಪ್ರಮಾಣ ಕಡಿಮೆಯಿದೆ. ಮುಖ್ಯವಾಗಿ ಹೊಸಪೇಟೆ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೪.೪೪ರಷ್ಟು, ಸಂಡೂರು ಗಣಿ ಪ್ರದೇಶದ ಕುಟುಂಬಗಳು ಶೇ.೧೭.೭೮ರಷ್ಟು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೩೬.೬೬ರಷ್ಟು ಕುಟುಂಬಗಳು ಸಾಗುವಳಿಯನ್ನು ಮಾಡುತ್ತಿಲ್ಲ. ಈ ಮೂರು ಗಣಿ ವಲಯದಲ್ಲಿ ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳು (ಶೇ.೩೬.೬೬) ಸಾಗುವಳಿ ಮಾಡದಿರುವುದು ಕಂಡು ಬರುತ್ತದೆ. ಆದರೆ ಬಳ್ಳಾರಿ–ಹೊಸಪೇಟೆ–ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಸಾಗುವಳಿ ಮಾಡದೇ ಇರುವ ಕುಟುಂಬಗಳಿವೆ. ಈ ಕುಟುಂಬಗಳು ಸಾಗುವಳಿ ಮಾಡದಿರಲು ಪಿತ್ರಾರ್ಜಿತವಾಗಿ ಭೂಮಿ ಹಂಚಿಕೆ ಆಗದಿರುವುದು, ಕೃಷಿ ಭೂಮಿಯಲ್ಲಿ ಗಣಿ ಡಿಗ್ಗಿಂಗ್ ಮಾಡಿರುವ ಪರಿಣಾಮ, ಮಳೆಯ ಅಭಾವವೇ ಕಾರಣವಾಗಿದೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

- ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಗಣಿಗಾರಿಕೆಯ ಸ್ಥಗಿತತೆಯ ನಂತರ ಸಾಗುವಳಿ ಅಥವಾ ಉಳುಮೆ ಮಾಡುತ್ತಿರುವುದಕ್ಕೆ ಕಂಡು ಬಂದ ಫಲಿತವು ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೮೨.೨೨ರಷ್ಟು ಕುಟುಂಬಗಳು ಕೃಷಿ ಭೂಮಿಯಲ್ಲಿ ಉಳುಮೆ ಮಾಡುತ್ತಿರುವ ಪ್ರಮಾಣ ಅಧಿಕವಾಗಿದೆ. ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಶೇ.೬೩.೩೩ರಷ್ಟು ಕಡಿಮೆ ಪ್ರಮಾಣದ ಕುಟುಂಬಗಳು ಕೃಷಿ ಭೂಮಿಯ ಸಾಗುವಳಿಯಲ್ಲಿ ತೊಡಗಿರುವುದು ಕಂಡು ಬರುತ್ತದೆ.

- ಹೊಸಪೇಟೆ, ಬಳ್ಳಾರಿ, ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ಗಣಿ ಕೈಗಾರಿಕೆಗೆ ಕೊಟ್ಟಿರುವ ಕುಟುಂಬಗಳ ಪ್ರಮಾಣದ ಫಲಿತವು ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ೧ರಿಂದ೩ಎಕರೆ ಶೇ.೪೬.೧೬ರಷ್ಟು, ೩ರಿಂದ೫ಎಕರೆ ಶೇ.೨೬.೯೨ರಷ್ಟು, ೫ರಿಂದ೭ಎಕರೆ ಶೇ.೨೬.೯೨ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿದ್ದಾರೆ. ಇದರಲ್ಲಿ ೧ರಿಂದ೩ಎಕರೆವರೆಗೆ ಬರುವ ಕುಟುಂಬಗಳು ಗಣಿಕೈಗಾರಿಕೆಗೆ ತಮ್ಮ ಕೃಷಿ ಭೂಮಿಯನ್ನು ಕೊಟ್ಟಿರುವ ಪ್ರಮಾಣ ಅಧಿಕವಾಗಿರುವುದು ತಿಳಿದು ಬರುತ್ತದೆ. ಸಂಡೂರು ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೩೬.೬೭ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿ ಕೈಗಾರಿಕೆಗಳಿಗೆ ಕೊಟ್ಟಿದ್ದಾರೆ. ಕೊಟ್ಟಿರುವ ಕೃಷಿ ಭೂಮಿಯಲ್ಲಿ ೧ರಿಂದ೩ ಎಕರೆವರೆಗೆ ಶೇ.೫೭.೫೭ರಷ್ಟು, ೩ರಿಂದ೫ ಎಕರೆ ಶೇ.೨೭.೨೮ರಷ್ಟು, ೫ರಿಂದ೭ ಎಕರೆ ಶೇ.೧೫.೧೬ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿ ಉದ್ಯಮಗಳಿಗೆ ನೀಡಿರುವುದು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕು ಗಣಿ ಗ್ರಾಮೀಣ ಪ್ರದೇಶದಲ್ಲಿ ಶೇ.೭೦ರಷ್ಟು ಕುಟುಂಬಗಳು ತಮ್ಮ ಕೃಷಿ ಭೂಮಿಯನ್ನು ಗಣಿ ಕೈಗಾರಿಕೆಗಳಿಗೆ ಮಾರಿದ್ದು, ೧ರಿಂದ೩ಎಕರೆ ಶೇ.೩೦.೧೫ರಷ್ಟು, ೩ರಿಂದ೫ಎಕರೆ ಶೇ ೩೮.೦೯ರಷ್ಟು, ೫ರಿಂದ೭ಎಕರೆ ಶೇ.೩೧.೭೬ರಷ್ಟು ತಮ್ಮ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿರುವ ಅಥವಾ ಮಾರಿರುವ ಕುಟುಂಬಗಳ ಪ್ರಮಾಣವಾಗಿದೆ. ಈ ಗಣಿ ವಲಯದಲ್ಲಿ ಹೆಚ್ಚಾಗಿ ಅಂದರೆ ೩ರಿಂದ೫ಎಕರೆ ಕೃಷಿ ಭೂಮಿಯನ್ನು ಗಣಿಕೈಗಾರಿಕೆಗೆ ಕೊಟ್ಟಿರುವ ಕುಟುಂಬಗಳು (ಶೇ.೩೮.೦೯) ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ.

- ಗಣಿ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಇಳುವರಿ ಹಾನಿ ಹಾಗೂ ಹಾನಿಯಾಗಲು ಕಾರಣಗಳ ನೀಡಿರುವ ಕುಟುಂಬಗಳ ಪ್ರಮಾಣವನ್ನು ಹೊಸಪೇಟೆ, ಸಂಡೂರು, ಬಳ್ಳಾರಿ ತಾಲ್ಲೂಕುವಾರು

ಅಧ್ಯಯನ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಶೇ.೯೦ರಷ್ಟು ಬೆಳೆ ಹಾನಿಯಾಗಿದೆ. ಕೃಷಿ ಭೂಮಿಯ ಬೆಳೆ ಹಾನಿಗೆ ಗಣಿ ಧೂಳು ಶೇ.೩೯.೫೧ರಷ್ಟು, ಗಣಿ ಡಿಗ್ಗಿಂಗ್ ಶೇ.೧೭.೨೮ರಷ್ಟು, ಗಣಿ ಧೂಳು ಶೇ.೩೩.೩೩ರಷ್ಟು, ಮಳೆ ಅಭಾವ ಶೇ.೦೯.೯೮ರಷ್ಟು ಕಾರಣಗಳಾಗಿರುವುದು ಕಂಡು ಬರುತ್ತದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಶೇ.೯೩.೩೪ರಷ್ಟು ಬೆಳೆ ಹಾನಿ ಒಳಗಾಗಿರುವ ಕುಟುಂಬಗಳಿವೆ. ಈ ವಲಯದ ಗಣಿಧೂಳು ಶೇ.೨೫ರಷ್ಟು, ಗಣಿ ಡಿಗ್ಗಿಂಗ್ ಶೇ.೩೮.೦೯ರಷ್ಟು, ಗಣಿಹೂಳು ಶೇ.೨೨.೬೩ರಷ್ಟು, ಮಳೆ ಅಭಾವ ಶೇ.೧೪.೨೮ರಷ್ಟು ಬೆಳೆ ಹಾನಿಗೆ ಕಾರಣಗಳಾಗಿವೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಡಿಗ್ಗಿಂಗ್ ಮಾಡಿರುವ ಪರಿಣಾಮವೇ ಬೆಳೆ ಹಾನಿಗೆ ಹೆಚ್ಚಿನ ಪ್ರಮಾಣದ ಕಾರಣವಾಗಿದೆ ಎಂಬ ಅಂಶಗಳು ಕಂಡು ಬರುತ್ತದೆ. ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಬೆಳೆ ಹಾನಿಯಾಗಿರುವ ಕುಟುಂಬಗಳ ಪ್ರಮಾಣ ಶೇ.೮೭.೭೮ರಷ್ಟಿದೆ. ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಗಣಿಧೂಳು ಶೇ.೨೯.೧೧ರಷ್ಟು, ಗಣಿ ಡಿಗ್ಗಿಂಗ್ ಶೇ.೨೯.೧೧ರಷ್ಟು, ಗಣಿ ಹೂಳು ಶೇ.೨೧.೫೨ರಷ್ಟು, ಮಳೆ ಅಭಾವ ಶೇ.೨೦.೨೬ರಷ್ಟು ಬೆಳೆ ಹಾನಿಗೆ ಕಾರಣಗಳಾಗಿವೆಂದು ತಿಳಿದು ಬರುತ್ತದೆ. ಈ ಬೆಳೆ ಹಾನಿಗೆ ಗಣಿ ಧೂಳು ಮತ್ತು ಗಣಿ ಡಿಗ್ಗಿಂಗ್ ಹೆಚ್ಚಿನ ಪ್ರಮಾಣದ ಕಾರಣಗಳಾಗಿವೆ. ಒಟ್ಟಾರೆ ಈ ಮೂರು ತಾಲ್ಲೂಕುಗಳಲ್ಲಿ ಬೆಳೆ ಹಾನಿಯ ಪ್ರಮಾಣವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ (ಶೇ.೯೦) ಅಧಿಕವಾಗಿದೆ. ಕೃಷಿ ಭೂಮಿಯಲ್ಲಿ ಬೆಳೆ ಹಾನಿಯಾಗಲು ಗಣಿಗಾರಿಕೆ ನಡೆದಾಗ ಮತ್ತು ಗಣಿ ಸ್ಥಗಿತತೆಯ ನಂತರವೂ ಅದರ ಪರಿಣಾಮಗಳು ತಟಸ್ಥವಾಗಿರದೆ ನಿರಂತರವಾಗಿ ಬೆಳೆ ಹಾನಿಗೆ ಗಣಿಗಾರಿಕೆ ಪ್ರಕ್ರೀಯೆ ಕಾರಣವಾಗಿದೆ ಎಂದು ತಿಳಿದು ಬರುತ್ತದೆ.

- ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೮೩.೩೩ರಷ್ಟು ಕೂಲಿ ವೃತ್ತಿಯಲ್ಲಿ ತೋಡಗಿದ್ದು ವ್ಯವಸಾಯ ಮಾಡುವ ವೃತ್ತಿಯಲ್ಲಿ, ಶೇ.೨೭.೨೭ರಷ್ಟು ಕುಟುಂಬಗಳು ತೊಡಗಿದ್ದಾರೆ. ಕೃಷಿ ದುಡಿಮೆಯಲ್ಲಿ ಶೇ.೪೬.೬೬ರಷ್ಟು ಕುಟುಂಬಗಳ ಕೂಲಿ ದುಡಿಮೆಗಾರರು ತೊಡಗಿದ್ದಾರೆ. ಗಣಿಯಲ್ಲಿ ದುಡಿಮೆಯಲ್ಲಿ ತೊಡಗಿದ ಕೂಲಿ ದುಡಿಮೆಗಾರ ಕುಟುಂಬಗಳು ಶೇ.೨೦.೦೧ರಷ್ಟಿದ್ದರೆ, ಗಣಿಕೈಗಾರಿಕೆಯ ದುಡಿಮೆಯಲ್ಲಿ ತೊಡಗಿದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೩೩.೩೩ರಷ್ಟಿರುವುದು ಕಂಡು ಬರುತ್ತದೆ. ಗಣಿ ಸ್ಥಗಿತತೆಯ ನಂತರ ಕೃಷಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರ ಪ್ರಮಾಣ ಅಧಿಕವಾಗಿರುವುದು ತಿಳಿದು ಬರುತ್ತದೆ. ಸಂಡೂರು ತಾಲ್ಲೂಕಿನಲ್ಲಿ ಕೂಲಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ದುಡಿಮೆಗಾರರ ಪ್ರಮಾಣ ಶೇ.೯೦ರಷ್ಟಿದ್ದು, ವ್ಯವಸಾಯದಲ್ಲಿ ತೊಡಗಿರುವ ಕುಟುಂಬಗಳ ದುಡಿಮೆಗಾರರು ಶೇ.೧೦ರಷ್ಟಿದ್ದಾರೆ. ಸಂಡೂರು ವಲಯದ ಕೂಲಿ ದುಡಿಮೆಗಾರರು ಕೃಷಿಯಲ್ಲಿ ಶೇ.೩೮.೨೭ರಷ್ಟು, ಗಣಿಯಲ್ಲಿ ಶೇ.೨೮.೩೯ರಷ್ಟು, ಗಣಿಗೈಗಾರಿಕೆಯಲ್ಲಿ ಶೇ.೩೩.೩೪ರಷ್ಟು ತೊಡಗಿರುವುದು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ದುಡಿಮೆಗಾರರು ಶೇ.೮೬.೬೬ರಷ್ಟು ಕೂಲಿ ದುಡಿಮೆಯಲ್ಲಿ ತೊಡಗಿದ್ದು, ವ್ಯವಸಾಯದ ವೃತ್ತಿಯನ್ನೇ ಅವಲಂಬಿಸಿರುವ ಕುಟುಂಬಗಳು ಶೇ.೧೩.೩೩ರಷ್ಟಿದೆ. ಕೂಲಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ದುಡಿಮೆಗಾರರು ಕೃಷಿಯಲ್ಲಿ ಶೇ.೪೧.೦೩ರಷ್ಟು, ಗಣಿಯಲ್ಲಿ ಶೇ.೩೦.೭೬ರಷ್ಟು, ಗಣಿಕೈಗಾರಿಕೆಯಲ್ಲಿ ಶೇ.೨೮.೨೧ರಷ್ಟಿದ್ದಾರೆ ಎಂದು ತಿಳಿದು ಬಂದಿದೆ. ಒಟ್ಟಾರೆ ಈ ಮೂರು ಗಣಿ ವಲಯದ ಗ್ರಾಮೀಣ ಪ್ರದೇಶದ ದುಡಿಮೆಗಾರರು ಕೂಲಿ ದುಡಿಮೆಯಲ್ಲಿ ತೊಡಗಿರುವುದು ಬಳ್ಳಾರಿ ತಾಲ್ಲೂಕಿನಲ್ಲಿ ಅಧಿಕವಾಗಿ ಕಂಡು ಬರುತ್ತದೆ.
- ಬಳ್ಳಾರಿ ಹೊಸಪೇಟೆ, ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕೃಷಿಯಲ್ಲಿ ಕೂಲಿ ದುಡಿಮೆಗೆ ತೊಡಗಿರುವ ದುಡಿಮೆಗಾರರ ಶೇಕಡವಾರು, ಕೃಷಿಯಲ್ಲಿ ತೊಡಗಿರುವ ಮಹಿಳೆ ಮತ್ತು

ಪುರುಷ ಕೂಲಿ ದುಡಿಮೆಗಾರರ ಶೇಕಡವಾರು ಪ್ರಮಾಣದ ಅಧ್ಯಯನ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ದುಡಿಮೆಗಾರರು ಕೃಷಿ ಕೂಲಿ ದುಡಿಮೆಯಲ್ಲಿ ಶೇ.೫೩.೩೪ರಷ್ಟು ತೊಡಗಿರುವ ಕುಟುಂಬಗಳಿವೆ. ಕೃಷಿಯಲ್ಲಿ ದುಡಿಮೆ ಮಾಡುವ ಕೂಲಿ ಮಹಿಳಾ ದುಡಿಮೆಗಾರರು ಶೇ.೩೯.೫೮ರಷ್ಟಿದ್ದರೆ, ಪುರುಷ ಕೂಲಿ ದುಡಿಮೆಗಾರರು ಶೇ.೬೦.೪ರಷ್ಟಿದ್ದಾರೆ. ಅಂದರೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಪುರುಷರಿಗಿಂತ ಮಹಿಳೆ ಕೂಲಿ ದುಡಿಮೆಗಾರರು ಶೇ.೨೦.೮೩ರಷ್ಟು ಅಧಿಕವಾಗಿ ಇರುವುದು ಕಂಡು ಬಂದಿದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಕೃಷಿಯಲ್ಲಿ ಶೇ.೫೮.೮೮ರಷ್ಟು ತೊಡಗಿದ್ದು, ಇದರಲ್ಲಿ ಮಹಿಳಾ ದುಡಿಮೆಗಾರರು ಶೇ.೬೦.೩೮ರಷ್ಟಿದ್ದರೇ, ಪುರುಷ ದುಡಿಮೆಗಾರರು ಶೇ.೩೯.೬೨ರಷ್ಟಿದ್ದಾರೆ. ಅಂದರೆ ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ಮಹಿಳಾ ದುಡಿಮೆಗಾರರು ಅಧಿಕವಾಗಿ ಕೃಷಿ ಚಟುವಟಿಕೆಯಲ್ಲಿ ತೊಡಗಿರುವುದು ಕಂಡು ಬಂದಿದೆ.ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೪೨.೨೨ರಷ್ಟು ಕೃಷಿ ದುಡಿಮೆಯಲ್ಲಿ ತೊಡಗಿದ್ದು, ಇದರಲ್ಲಿ ಮಹಿಳಾ ದುಡಿಮೆಗಾರರು ಶೇ.೬೩.೧೬ರಷ್ಟಿದ್ದರೆ, ಪುರುಷ ದುಡಿಮೆಗಾರರು ಶೇ.೩೬.೮೪ರಷ್ಟಿದ್ದಾರೆ. ಅಂದರೆ ಬಳ್ಳಾರಿ ಗಣಿ ವಲಯ ಗ್ರಾಮೀಣ ಕುಟುಂಬಗಳ ಕೃಷಿಯಲ್ಲಿ ತೊಡಗಿರುವ ಮಹಿಳಾ ದುಡಿಮೆಗಾರರಗಿಂತ ಪುರುಷ ದುಡಿಮೆಗಾರರು ಹೆಚ್ಚಾಗಿ ಕೃಷಿಯಲ್ಲಿ ತೊಡಗಿರುವುದು ಕಂಡು ಬರುತ್ತದೆ. ಗಣಿ ವಲಯದ ಕೃಷಿ ಚಟುವಟಿಕೆಯಲ್ಲಿ ಕೇವಲ ಆರು ತಿಂಗಳು ಮಾತ್ರ ದುಡಿಮೆಯಿದ್ದು. ಕೃಷಿಯಲ್ಲಿ ಮುಖ್ಯವಾಗಿ ಬೀಜ ಬಿತ್ತನೆ, ಕಳೆ ತೆಗೆಯುವುದು, ಬೆಳೆ ಕಟಾವು ಮಾಡುವ ಬೆಳೆಗಳಿಗೆ ಔಷಧಿ ಹೊಡೆಯುವ, ರಂಟೆ ಒಡೆಯುವ ಇತ್ಯಾದಿ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಕೃಷಿ ಭೂಮಿಯ ಬಿತ್ತನೆಯ ಸಮಯದಿಂದ ಇಳುವರಿ ಕಟಾವು ಮಾಡುವ ಸಂದರ್ಭದವರೆಗೂ ಮಾತ್ರ ಕೃಷಿಯಲ್ಲಿ ದುಡಿಮೆ ಲಭ್ಯವಿದ್ದು, ನಂತರದ ೬ ತಿಂಗಳು ಗ್ರಾಮೀಣ ಪ್ರದೇಶದ ಕುಟುಂಬಗಳ ದುಡಿಮೆಗಾರರು ಗಣಿ ಚಟುವಟಿಕೆಯ ದುಡಿಮೆಯಲ್ಲಿ ತೊಡಗುತ್ತಾರೆ ಎಂದು ತಿಳಿದು ಬರುತ್ತದೆ.

- ಹೊಸಪೇಟೆ, ಸಂಡೂರು, ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಗಣಿಗಾರಿಕೆ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರ ಪ್ರಮಾಣ, ಅದರಲ್ಲಿ ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರು ಪ್ರಮಾಣ, ಹಾಗೂ ಗಣಿಗಾರಿಕೆ ಚಟುವಟಿಕೆಯಲ್ಲಿ ಯಾವ ದುಡಿಮೆಗೆ ತೊಡಗಿದ್ದಾರೆ ಎಂಬುವುದರ ಶೇಕಡವಾರು ಪ್ರಮಾಣದ ಅಧ್ಯಯನ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಶೇ.೩೬.೬೬ರಷ್ಟು ಗಣಿ ಕೂಲಿ ದುಡಿಮೆಗಾರರಿದ್ದಾರೆ. ಗಣಿ ದುಡಿಮೆಗೆ ತೊಡಗಿರುವ ಮಹಿಳಾ ದುಡಿಮೆಗಾರರು ಶೇ.೨೭.೨೭ರಷ್ಟು ಮತ್ತು ಪುರುಷ ದುಡಿಮೆಗಾರರು ಶೇ.೭೨.೭೨ರಷ್ಟಿದ್ದಾರೆ. ಈ ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ವ್ಯಾಗನ್ ಲೋಡಿಂಗ್, ಡ್ರೈವರ್, ಅಪರೇಟರ್, ಕ್ಲೀನರ್, ಕಸ ಹೊಡೆಯುವ, ನೆಲ ಒರೆಸುವ, ಕಲ್ಲು ಸಂಗ್ರಹಣೆ ಮಾಡುವ ಇತ್ಯಾದಿ ಗಣಿ ದುಡಿಮೆಯಲ್ಲಿ ತೊಡಗಿರುತ್ತಾರೆ. ಗಣಿ ದುಡಿಮೆಯಲ್ಲಿ ವ್ಯಾಗನ್ ಲೋಡಿಂಗ್ ಶೇ.೧೮.೧೮ರಷ್ಟು, ಕಸ ಹೊಡೆಯುವವರ ಶೇ.೧೨.೧೨ರಷ್ಟು, ಕಲ್ಲು ಸಂಗ್ರಹ ಮಾಡುವವರು ಶೇ.೧೫.೧೬ರಷ್ಟು ಕುಟುಂಬಗಳ ಕೂಲಿ ದುಡಿಮೆಗಾರರು ತೊಡಗಿರುವುದು ಕಂಡು ಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೪೫.೫೬ರಷ್ಟು ಗಣಿ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿ ದುಡಿಮೆಯಲ್ಲಿ ಮಹಿಳಾ ಕೂಲಿ ದುಡಿಮೆಗಾರರು ಶೇ.೪೩.೯೦ರಷ್ಟು ಮತ್ತು ಪುರುಷ ಕೂಲಿ ದುಡಿಮೆಗಾರರು ಶೇ.೫೬.೦೯ರಷ್ಟಿದ್ದಾರೆ. ಅಂದರೆ ಗಣಿ ದುಡಿಮೆಯಲ್ಲಿ ಮಹಿಳಾ ಕೂಲಿ ದುಡಿಮೆಗಾರರಿಗಿಂತ ಪುರುಷ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿ ತೊಡಗಿದ್ದಾರೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಗಣಿ ಕೂಲಿ ದುಡಿಮೆಗಾರರು ವ್ಯಾಗನ್ ಲೋಡಿಂಗ್ ಶೇ.೧೨.೧೯ರಷ್ಟು, ಲಾರಿ ಡ್ರೈವರ್ ಶೇ.೧೪.೬೩ರಷ್ಟು, ಅಪರೇಟರ್ ಶೇ.೧೪.೬೩ರಷ್ಟು,

ಕ್ಲೀನರ್ ಶೇ.೧೨.೧೯ರಷ್ಟು, ಕಸ ಹೊಡೆಯುವವರು ಶೇ.೨೧.೯೭ರಷ್ಟು, ನೆಲ ಒರೆಸುವವರು ಶೇ.೦೭.೩೩ರಷ್ಟು, ಕಲ್ಲು ಸಂಗ್ರಹ ಮಾಡುವವರು ಶೇ.೧೭.೦೭ರಷ್ಟು ಗಣಿಗಾರಿಕೆಯ ವಿವಿಧ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿ ದುಡಿಮೆಯಲ್ಲಿ ಲಾರಿ ಡ್ರೈವರ್ ಹಾಗೂ ಅಪರೇಟರ್ ಕೂಲಿ ದುಡಿಮೆಗಾರರು ಹೆಚ್ಚಿನ ಪ್ರಮಾಣದಲ್ಲಿರುವುದು ತಿಳಿದು ಬರುತ್ತದೆ. ಗಣಿ ವಲಯವಾದ ಬಳ್ಳಾರಿ ತಾಲ್ಲೂಕು ಗ್ರಾಮೀಣ ಪ್ರದೇಶದ ಗಣಿ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೪೭.೭೭ರಷ್ಟಿದ್ದಾರೆ. ಇರದಲ್ಲಿ ಮಹಿಳಾ ಕೂಲಿ ದುಡಿಮೆಗಾರರು ಶೇ.೨೦.೯೪ರಷ್ಟಿದ್ದು, ಪರುಷ ಕೂಲಿ ದುಡಿಮೆಗಾರರು ಶೇ.೭೯.೦೬ರಷ್ಟಿದ್ದಾರೆ. ಅಂದರೆ ಬಳ್ಳಾರಿ ಗ್ರಾಮೀಣ ಪ್ರದೇಶದ ಗಣಿ ದುಡಿಮೆಯಲ್ಲಿ ಪುರುಷ ಕೂಲಿ ದುಡಿಮೆಗಾರರು ಅಧಿಕವಾಗಿದ್ದಾರೆ. ಈ ಗಣಿ ದುಡಿಮೆಯಲ್ಲಿ ತೊಡಗಿರುವ ದುಡಿಮೆಗಾರರು ಕುಟುಂಬಗಳ ವ್ಯಾಗನ್ ಲೋಡಿಂಗ್ ಶೇ.೨೩.೨೫ರಷ್ಟು, ಲಾರಿ ಡ್ರೈವರ್ ಶೇ.೨೩.೨೫ರಷ್ಟು, ಆಪರೇಟರ್ ಶೇ.೦೨.೩೪ರಷ್ಟು, ಕ್ಲೀನರ್ ಶೇ.೨೦.೯೩ರಷ್ಟು, ಕಸ ಹೊಡೆಯುವವರು ಶೇ.೧೩.೯೫ರಷ್ಟು, ನೆಲಹೊರೆಸುವವರು, ಶೇ.೧೬.೨೮ರಷ್ಟು ವಿವಿಧ ಗಣಿ ದುಡಿಮೆಯಲ್ಲಿ ತೊಡಗಿರುವುದು ಕ್ಷೇತ್ರ ಕಾರ್ಯದಿಂದ ಕಂಡು ಬಂದಿದೆ. ಒಟ್ಟಾರೆ ಗಣಿ ದುಡಿಮೆಯಲ್ಲಿ ನಿರತರಾದ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಕೂಲಿ ದುಡಿಮೆಗಾರರಲ್ಲಿ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳ ದುಡಿಮೆಗಾರರು (ಶೇ.೪೭.೭೮) ಅಧಿಕವಾಗಿರುವುದು ಕಂಡು ಬಂದಿದೆ.

- ಬಳ್ಳಾರಿ, ಹೊಸಪೇಟೆ, ಸಂಡೂರು ಪ್ರದೇಶದ ಗಣಿ ಗ್ರಾಮೀಣ ಕುಟುಂಬಗಳ ಕೂಲಿ ದುಡಿಮೆಗಾರರು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಪ್ರಮಾಣ, ಗಣಿ ಉದ್ಯಮದಲ್ಲಿ ನಿರತರಾದ ಮಹಿಳಾ ಮತ್ತು ಪುರುಷ ಕೂಲಿ ದುಡಿಮೆಗಾರರ ಪ್ರಮಾಣ ಹಾಗೂ ಗಣಿ ಉದ್ಯಮದಲ್ಲಿ ಯಾವ ಕೂಲಿಯನ್ನು ಮಾಡುತ್ತಿರುವ ಪ್ರಮಾಣದ ಫಲಿತವು ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ತೊಡಗಿರುವ ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ದುಡಿಮೆಗಾರರು ಶೇ.೨೨.೪೬ರಷ್ಟಿದ್ದಾರೆ. ಅದರಲ್ಲಿ ಮಹಿಳಾ ದುಡಿಮೆಗಾರರು ಶೇ.೧೩.೬೪ರಷ್ಟು ಹಾಗೂ ಪುರುಷ ದುಡಿಮೆಗಾರರು ಶೇ.೮೬.೩೬ರಷ್ಟು ಗಣಿ ಉದ್ಯಮದ ಕೂಲಿ ದುಡಿಮೆಯಲ್ಲಿ ತೊಡಗಿರುವುದು ಕಂಡು ಬರುತ್ತದೆ. ಅಂದರೆ ಮಹಿಳಾ ಕೂಲಿ ದುಡಿಮೆಗಾರರಿಗಿಂತ ಪುರುಷ ದುಡಿಮೆಗಾರರು ಶೇ.೭೨.೭೩ರಷ್ಟು ಅಧಿಕ ಪ್ರಮಾಣದಲ್ಲಿದ್ದಾರೆ. ಈ ವಲಯದ ಕೂಲಿ ದುಡಿಮೆಗಾರರು ಬಹುತೇಕವಾಗಿ ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್, ಲಾರಿ ಡ್ರೈವರ್, ಕ್ಲೀನರ್, ಜೆಸಿಬಿ ಆಪರೇಟರ್, ಕಸ ಹೊಡೆಯುವ, ನೆಲಹೊರೆಸುವ, ಕಲ್ಲು ಸಂಗ್ರಹಿಸುವ ಕೂಲಿ ಕೆಲಸವನ್ನು ಮಾಡುತ್ತಿದ್ದಾರೆ. ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್ ಶೇ.೧೮.೧೮ರಷ್ಟು, ಲಾರಿ ಡ್ರೈವರ್ ಶೇ.೧೩.೮೪ರಷ್ಟು, ಆಪರೇಟ್ ಶೇ.೨೨.೭೨ರಷ್ಟು, ಕ್ಲೀನರ್ ಶೇ.೧೩.೬೩ರಷ್ಟು, ಕಸ ಹೊಡೆಯುವ ಶೇ.೧೩.೬೩ರಷ್ಟು ಕೂಲಿ ದುಡಿಮೆಗೆ ತೊಡಗಿರುವ  ದುಡಿಮೆಗಾರರಿದ್ದಾರೆ. ಇದರಲ್ಲಿ ವ್ಯಾಗನ್ ಲೋಡಿಂಗ್ ಹಾಗೂ ಜೆಸಿಬಿ ಆಪರೇಟರ್ ಕೂಲಿ ದುಡಿಮೆಗೆ ಹೋಗುವ ದುಡಿಮೆಗಾರರು ಅಧಿಕವಾಗಿ ಗಣಿ ಉದ್ಯಮದಲ್ಲಿ ತೊಡಗಿರುವುದು ಕಂಡು ಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೨೭.೭೨ರಷ್ಟು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದ್ದು, ಮಹಿಳಾ ಕೂಲಿ ದುಡಿಮೆಗಾರರು ಶೇ.೩೨ರಷ್ಟು, ಪುರುಷ ಕೂಲಿ ದುಡಿಮೆಗಾರರು ಶೇ.೬೮ರಷ್ಟಿದಾರೆ. ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರಲ್ಲಿ ಪುರುಷ ದುಡಿಮೆಗಾರರು ಅಧಿಕ ಪ್ರಮಾಣ (ಶೇ.೬೮)ದಲ್ಲಿದ್ದು, ಗಣಿ ಉದ್ಯಮದಲ್ಲಿ ದುಡಿಯುವ ಮಹಿಳಾ ಕೂಲಿ ದುಡಿಮೆಗಾರರ ಪ್ರಮಾಣ ಕಡಿಮೆಯಿದೆ. ಈ ಗಣಿ ವಲಯದ ಗ್ರಾಮೀಣ ಕುಟುಂಬಗಳ ದುಡಿಮೆಗಾರರು ವ್ಯಾಗನ್ ಲೋಡಿಂಗ್ ಶೇ.೧೬ರಷ್ಟು, ಲಾರಿ ಡ್ರೈವರ್ ಶೇ.೧೨ರಷ್ಟು, ಜೆಸಿಬಿ ಆಪರೇಟರ್ ಶೇ.೨೦ರಷ್ಟು, ಕ್ಲೀನರ್ ಶೇ.೨೮ರಷ್ಟು, ಕಸ ಹೊಡೆಯುವ, ನೆಲ ಹೊರೆಸುವ ಕಲ್ಲು ಸಂಗ್ರಹ ಮಾಡುವವರು ಕ್ರಮಾನುಗತವಾಗಿ ಶೇ.೮ರಷ್ಟು ಗಣಿ ಉದ್ಯಮದಲ್ಲಿ ದುಡಿಯುತ್ತಿದ್ದಾರೆ.

ಇದರಲ್ಲಿ ಜೆಸಿಬಿ ಆಪರೇಟರ್ ಮತ್ತು ಲಾರಿ ಕ್ಲೀನರ್ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿದ್ದಾರೆ ಎಂದು ತಿಳಿದು ಬಂದಿದೆ. ಬಳ್ಳಾರಿ ಗ್ರಾಮೀಣ ಪ್ರದೇಶದ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೭೧.೧೨ರಷ್ಟು ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿ ಉದ್ಯಮದಲ್ಲಿ ಮಹಿಳಾ ಕೂಲಿ ದುಡಿಮೆಗಾರರು ಶೇ.೩೭.೫೦ರಷ್ಟು ಮತ್ತು ಪುರುಷ ಕೂಲಿ ದುಡಿಮೆಗಾರರು ಶೇ.೬೨.೫೦ರಷ್ಟು ದುಡಿಮೆಯನ್ನು ಮಾಡುತ್ತಿದ್ದಾರೆ. ಅಂದರೆ ಗಣಿ ಉದ್ಯಮದ ಕೂಲಿ ದುಡಿಮೆಗೆ ಹೋಗುವ ಕುಟುಂಬಗಳಲ್ಲಿ ಮಹಿಳಾ ಕೂಲಿ ದುಡಿಮೆಗಾರರಿಗಿಂತ ಶೇ.೨೫ರಷ್ಟು ಅಧಿಕವಾಗಿರುವುದು ಲಿಂಗ ಅಸಮಾನತೆ ಆಗಿರುವುದು ಕಂಡು ಬರುತ್ತದೆ. ಗಣಿ ಉದ್ಯಮದಲ್ಲಿ ವ್ಯಾಗನ್ ಲೋಡಿಂಗ್ ಶೇ.೧೨.೫೪ರಷ್ಟು, ಲಾರಿಡ್ರೈವರ್ ಶೇ.೨೧.೧೮ರಷ್ಟು, ಜೆಸಿಬಿ ಆಪರೇಟರ್ ಶೇ.೦೭.೮೧ರಷ್ಟು, ಕ್ಲೀನರ್ ಶೇ.೨೮ರಷ್ಟು, ಕಸ ಹೊಡೆಯುವ ಶೇ.೦೯ರಷ್ಟು, ನೆಲೆ ಒರೆಸುವುದು ಶೇ.೧೨ರಷ್ಟು, ಹಾಗೂ ಕಲ್ಲು ಸಂಗ್ರಹಣೆ ಶೇ.೦೩ರಷ್ಟು ವಿವಿಧ ದುಡಿಮೆಯಲ್ಲಿ ತೊಡಗಿರುವ ಕೂಲಿ ದುಡಿಮೆಗಾರರು ಇದ್ದಾರೆ. ಇದರಲ್ಲಿ ಲಾರಿಡ್ರೈವರ್ ಹಾಗೂ ಕ್ಲೀನರ್ ಕೂಲಿ ದುಡಿಮೆಗೆ ಹೋಗುವವರ ಪ್ರಮಾಣ ಅಧಿಕವಾಗಿರುವುದು ತಿಳಿದು ಬರುತ್ತದೆ. ಒಟ್ಟಾರೆ ಈ ಮೂರು ತಾಲ್ಲೂಕುಗಳಲ್ಲಿ ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಕುಟುಂಬಗಳ ಕೂಲಿ ದುಡಿಮೆಗಾರರು ಶೇ.೭೧.೧೨ರಷ್ಟು ಅಧಿಕವಾಗಿ ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುತ್ತದೆ. ಗಣಿ ಉದ್ಯಮದ ದುಡಿಮೆಯಲ್ಲಿ ತೊಡಗಿರುವ ಬಳ್ಳಾರಿ ಹೊಸಪೇಟೆ, ಸಂಡೂರು, ಗಣಿ ಗ್ರಾಮೀಣ ಪ್ರದೇಶದ ಮಹಿಳಾ ಕೂಲಿ ದುಡಿಮೆಗಾರರು ಕಡಿಮೆ ಪ್ರಮಾಣದಲ್ಲಿದ್ದು, ಪುರುಷ ಕೂಲಿ ದುಡಿಮೆಗಾರರು ಅಧಿಕವಾಗಿರುವುದು ಲಿಂಗ ಅಸಮಾನತೆ ಆಗಿದೆಂದು ತಿಳಿದು ಬರುತ್ತದೆ.

- ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ಹೊಸಪೇಟೆ ತಾಲ್ಲೂಕಿನ ಗಣಿ ಪ್ರದೇಶದ ಕುಟುಂಬಗಳು ಶೇ.೩೭.೭೮ರಷ್ಟಿದ್ದರೇ, ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಹೊಂದಿರದ ಕುಟುಂಬಗಳು ಶೇ.೬೨.೨೨ರಷ್ಟಿದೆ. ಈ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು, ಗಣಿಗಾರಿಕೆ ಪೂರ್ವದಲ್ಲಿ ಶೇ.೧೧.೭೬ರಷ್ಟು, ಗಣಿಗಾರಿಕೆ ನಡೆದಾಗ ಶೇ.೬೪.೭೧ರಷ್ಟು, ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೩.೫೩ರಷ್ಟು ಹೊಂದಿದ್ದಾರೆ, ಅಂದರೆ ಗಣಿಗಾರಿಕೆ ನಡೆದಾಗ ಕುಟುಂಬಗಳ ಸ್ಥಿರಾಸ್ತಿ ಮತ್ತು ಚರಾಸ್ತಿ ಸಂಪನ್ಮೂಲಗಳ ಒಡೆತನ ಅಧಿಕವಾಗಿ (ಶೇ.೬೪.೭೧) ಹೊಂದಿರುವುದು ಕಂಡುಬಂದಿದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಕುಟುಂಬಗಳು ಚರಾಸ್ಥಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡತನವನ್ನು ಶೇ.೫೨.೨೩ರಷ್ಟು ಹೊಂದಿರುವ ಪ್ರಮಾಣವಾಗಿದ್ದು, ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಶೇ.೪೭.೭೭ರಷ್ಟು ಹೊಂದದೆ ಇರುವ ಕುಟುಂಬಗಳಿವೆ. ಸಂಡೂರು ಗ್ರಾಮೀಣ ಭಾಗದಲ್ಲಿ ಸಂಪನ್ಮೂಲ ಒಡೆತನವನ್ನು ಗಣಿಗಾರಿಕೆ ಪೂರ್ವದಲ್ಲಿ ಶೇ.೨೩.೪೧ರಷ್ಟು, ಗಣಿಗಾರಿಕೆ ನಡೆದಾಗ ಶೇ.೫೫.೩೧ರಷ್ಟು, ಗಣಿಗಾರಿಕೆಯ ಸ್ಥಗಿತತೆಯ ನಂತರ ಶೇ.೨೧.೨೮ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಹೊಂದಿರುವ ಕುಟುಂಬಗಳ ಪ್ರಮಾಣವಾಗಿದೆ. ಆದರೆ ಗಣಿಗಾರಿಕೆ ನಡೆದಾಗ ಚರಾಸ್ಥಿ ಮತ್ತು ಸ್ಥಿರಾಸ್ತಿಯ ಪ್ರಮಾಣ (ಶೇ.೫೫.೫೧) ಅಧಿಕವಾಗಿ ಇರುವುದು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಶೇ.೪೨.೨೨ರಷ್ಟು ಹೊಂದಿರುವ ಪ್ರಮಾಣವಾದರೆ, ಇನ್ನು ಚರಾಸ್ಥಿ ಮತ್ತು ಸ್ಥಿರಾಸ್ತಿಯ ಸಂಪನ್ಮೂಲಗಳನ್ನು ಶೇ.೫೭.೭೮ರಷ್ಟು ಹೊಂದದೆ ಇರುವ ಕುಟುಂಬಗಳು ಈ ವಲಯದ ಗ್ರಾಮೀಣ ಪ್ರದೇಶಗಳಲ್ಲಿದೆ. ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೩.೬೯ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೭.೩೬ರಷ್ಟು ಹಾಗೂ ಗಣಿಗಾರಿಕೆಯ ಸ್ಥಗಿತತೆಯ ನಂತರ ಶೇ.೨೫.೯೫ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನವನ್ನು ಹೊಂದಿರುವ ಕುಟುಂಬಗಳಾಗಿವೆ. ಒಟ್ಟಾರೆ ಚರಾಸ್ತಿ ಮತ್ತು ಸ್ಥಿರಾಸ್ತಿ ಸಂಪನ್ಮೂಲಗಳ ಒಡೆತನ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿಯೇ ಸಂಡೂರು ತಾಲ್ಲೂಕಿನ ಕುಟುಂಬಗಳು ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಶೇ.೫೨.೨೩ರಷ್ಟು ಕುಟುಂಬಗಳು ಅಧಿಕ

ಪ್ರಮಾಣದಲ್ಲಿವೆ. ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಚರಾಸ್ಥಿ ಮತ್ತು ಸ್ಥಿರಾಸ್ತಿ ಸಂಪನ್ಮೂಲವನ್ನು (ಶೇ.೩೭.೭೮) ಕಡಿಮೆ ಪ್ರಮಾಣದಲ್ಲಿ ಹೊಂದಿರುವ ಕುಟುಂಬಗಳು ಕಾಣಸಿಗುತ್ತದೆ. ಬಳ್ಳಾರಿ, ಸಂಡೂರು, ಹೊಸಪೇಟೆ ಗ್ರಾಮೀಣ ಪ್ರದೇಶದ ಕುಟುಂಬಗಳು ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದ ಚರಾಸ್ತಿ ಮತ್ತು ಸ್ಥಿರಾಸ್ತಿಯನ್ನು ಹೊಂದಿದ್ದಾರೆ. ಅದರಲ್ಲಿ ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದ ಸಂಪನ್ಮೂಲ ಹೊಂದಿರುವ ಕುಟುಂಬಗಳು (ಶೇ.೬೪.೭೧) ಹೊಸಪೇಟೆ ತಾಲ್ಲೂಕಿನಲ್ಲಿ ಕಂಡು ಬಂದರೂ, ತದನಂತರ ಗಣಿಗಾರಿಕೆ ಸ್ಥಗಿತತೆಯ ನಂತರ ಚರಾಸ್ತಿ ಮತ್ತು ಸ್ಥಿರಾಸ್ತಿ ಹೊಂದಿರುವ ಕುಟುಂಬಗಳ ಪ್ರಮಾಣ ಕಡಿಮೆಯಾಗುತ್ತಾ ಬಂದಿರುವುದು ತಿಳಿದು ಬರುತ್ತದೆ.

- ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ನಿವೇಶನ ಮತ್ತು ನಿವೇಶನ ರಹಿತ ಪ್ರಮಾಣದ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೮.೮೯ರಷ್ಟು ನಿವೇಶನ ಹೊಂದಿದ್ದರೆ, ನಿವೇಶನ ರಹಿತ ಕುಟುಂಬಗಳು ಶೇ.೭೧.೧೧ರಷ್ಟಿದೆ. ನಿವೇಶನವನ್ನು ಹೊಂದಿರುವ ಕುಟುಂಬಗಳು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೩.೦೭ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೬.೧೫ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೩೦.೭೮ರಷ್ಟು, ನಿವೇಶವನ್ನು ಹೊಂದಿವೆ ಎಂದು ತಿಳಿದು ಬರುತ್ತದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೦ರಷ್ಟು ನಿವೇಶವನ್ನು ಹೊಂದಿದ್ದರೆ, ಇನ್ನುಳಿದ ಕುಟುಂಬಗಳು ಶೇ.೮೦ರಷ್ಟು ನಿವೇಶನ ರಹಿತ ಕುಟುಂಬಗಳಾಗಿವೆ.  ಕುಟುಂಬಗಳು ನಿವೇಶವನ್ನು ಗಣಿಗಾರಿಕೆ ಪೂರ್ವದಲ್ಲಿ ಶೇ.೨೭.೭೮ರಷ್ಟು, ಗಣಿಗಾರಿಕೆ ನಡೆದಾಗ ಶೇ.೫೫.೫೫ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೧೬.೬೭ರಷ್ಟು ಹೊಂದಿದ್ದಾರೆ. ಈ ವಲಯದಲ್ಲಿ ನಿವೇಶನವು ಗಣಿಗಾರಿಕೆ ನಡೆದಾಗ ಅಧಿಕ ಪ್ರಮಾಣದಲ್ಲಿ ಇರುವುದು ಕಂಡು ಬರುತ್ತದೆ.ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೨೭.೨೭ರಷ್ಟು ನಿವೇಶವನ್ನು ಹೊಂದಿದ್ದು, ಇನ್ನುಳಿದ ಕುಟುಂಬಗಳು ಶೇ.೭೨.೭೮ರಷ್ಟು ನಿವೇಶವನ್ನು ಹೊಂದಿರುವುದಿಲ್ಲವೆಂದು ಕಂಡು ಬಂದಿದೆ. ಈ ಕುಟುಂಬಗಳು ನಿವೇಶನವನ್ನು ಗಣಿಗಾರಿಕೆಯ ಪೂರ್ವದಲ್ಲಿ ಶೇ.೨೦ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೮ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೩೨ರಷ್ಟು ಹೊಂದಿರುವ ಪ್ರಮಾಣವಾಗಿದೆ. ಈ ವಲಯದಲ್ಲಿಯೂ ಗಣಿಗಾರಿಕೆ ನಡೆದಾಗ ಹೆಚ್ಚಿನ ಪ್ರಮಾಣದ ನಿವೇಶವನ್ನು ಹೊಂದಿರುವ ಕುಟುಂಬಗಳು ಇರುವುದು ಕಂಡು ಬರುತ್ತದೆ.
- ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಜಾನುವಾರು ಸಾಕಾಣಿಕೆಗೆ ತೊಡಗಿಸಿಕೊಂಡಿರುವ ಶೇ.೫೮.೮೮ರಷ್ಟು ಕುಟುಂಬಗಳಿದ್ದು, ಇನ್ನುಳಿದ ಕುಟುಂಬಗಳು ಶೇ.೪೧.೧೨ರಷ್ಟು ಜಾನುವಾರು (ಸಾಗಣೆ) ಪಾಲನೆಯನ್ನು ಹೊಂದಿರುವುದಿಲ್ಲ. ಜಾನುವಾರು ಹೊಂದಿರುವ ಕುಟುಂಬಗಳು ಗಣಿಗಾರಿಕೆ ಪೂರ್ವದಲ್ಲಿ ಶೇ.೩೩.೯೬ರಷ್ಟು ಗಣಿಗಾರಿಕೆ ನಡೆದಾಗ ಶೇ.೩೯.೬೨ರಷ್ಟು, ಗಣಿಗಾರಿಕೆಯ ಸ್ಥಗಿತತೆಯ ನಂತರ ಶೇ.೨೬.೪೨ರಷ್ಟರ ಪ್ರಮಾಣದ ಜಾನುವಾರುಗಳು ಈ ವಲಯದಲ್ಲಿ ಕಂಡು ಬಂದಿದೆ. ಗಣಿಗಾರಿಕೆ ಪೂರ್ವದಲ್ಲಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಅಧಿಕವಾಗಿ (ಶೇ.೩೯.೬೨) ಜಾನುವಾರನ್ನು ಹೊಂದಿದ್ದು, ಇದು ಗಣಿಗಾರಿಕೆಯ ಮಂದಗತಿಯಲ್ಲಿ ನಡೆದಿರುವುದನ್ನು ಸೂಚಿಸುತ್ತದೆ. ಸಂಡೂರು ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೪೮.೮೮ರಷ್ಟು ಜಾನುವಾರುಗಳನ್ನು ಹೊಂದಿದ್ದು, ಇನ್ನುಳಿದ ಕುಟುಂಬಗಳು ಶೇ.೫೧.೧೨ರಷ್ಟು ಜಾನುವಾರುಗಳನ್ನು ಹೊಂದಿಲ್ಲ. ಅಂದರೆ ಜಾನುವಾರು ಹೊಂದಿರುವ ಕುಟುಂಬಗಳ ಪ್ರಮಾಣ ಈ ಗಣಿ ವಲಯಗಳಲ್ಲಿ ಕಡಿಮೆ ಇರುವುದು ತಿಳಿದು ಬರುತ್ತದೆ. ಜಾನುವಾರು ಹೊಂದಿರುವ ಕುಟುಂಬಗಳು ಗಣಿಗಾರಿಕೆ ಪೂರ್ವದಲ್ಲಿ ಶೇ.೪೩.೧೮ರಷ್ಟು, ಗಣಿಗಾರಿಕೆ ನಡೆದಾಗ ಶೇ.೩೬.೩೬ರಷ್ಟು, ಗಣಿ ಸ್ಥಗಿತತೆಯ ನಂತರದಲ್ಲಿ ಶೇ.೨೦.೪೬ರಷ್ಟು ಕುಟುಂಬಗಳು ಜಾನುವಾರುಗಳನ್ನು ಹೊಂದಿವೆ. ಈ ಕುಟುಂಬಗಳಲ್ಲಿ

ಗಣಿಗಾರಿಕೆ ಪೂರ್ವದಲ್ಲಿ ಅಧಿಕ ಪ್ರಮಾಣದ (ಶೇ.೪೩.೧೮) ಜಾನುವಾರುಗಳನ್ನು ಹೊಂದಿರುವುದು ಕಂಡು ಬರುತ್ತದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೪೩.೩೪ರಷ್ಟು ಜಾನುವಾರು ಹೊಂದಿರುವ ಪ್ರಮಾಣವಾದರೆ, ಶೇ.೫೬.೬೬ರಷ್ಟು ಜಾನುವಾರು ಹೊಂದದೆ ಇರುವ ಕುಟಂಬಗಳು ಕಂಡು ಬರುತ್ತದೆ. ಈ ವಲಯದಲ್ಲಿ ಗಣಿಗಾರಿಕೆ ಪೂರ್ವದಲ್ಲಿ ಶೇ.೩೫.೮೯ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೩.೫೮ರಷ್ಟು, ಗಣಿ ಸ್ಥಗಿತತೆ ನಂತರ ಶೇ.೨೦.೫೩ರಷ್ಟು ಜಾನುವಾರುಗಳನ್ನು ಹೊಂದಿರುವ ಕುಟುಂಬಗಳಾಗಿವೆ. ಗಣಿಗಾರಿಕೆ ಪೂರ್ವದಲ್ಲಿ ಜಾನುವಾರು ಹೊಂದಿರುವ ಪ್ರಮಾಣಕ್ಕಿಂತ ಗಣಿಗಾರಿಕೆ ನಡೆದಾಗ ಇರುವ ಜಾನುವಾರುಗಳ ಪ್ರಮಾಣ ತುಂಬಾ ಕಡಿಮೆಯಾಗಿರುವುದು ಕಂಡು ಬರುತ್ತದೆ.

**೦೩.ಗಣಿ ಗಾಮೀಣ ಪ್ರದೇಶದ ಮೇಲಾಗಿರುವ ಪರಿಸರದ ಪರಿಣಾಮಗಳ ಫಲಿತಗಳು**

ಗಣಿಗಾರಿಕೆಯು ಧೂಳು, ಹೂಳು ಮತ್ತು ಸ್ಫೋಟ ಗ್ರಾಮೀಣ ಪದ್ರೇಶದ ಜನರ ಮೇಲೆ ಯಾವ ಪರಿಣಾಮಗಳನ್ನು ಬೀರಿವೆಂಬುವುದನ್ನು ನೋಡಲು ಪ್ರಸ್ತುತ ಅಧ್ಯಯನ ಪ್ರಯತ್ನಿಸುತ್ತದೆ. ಈ ಹಂತದಲ್ಲಿಯೂ ಸಂಖ್ಯಾತ್ಮಕ ಸೂಚಕಗಳ ಮೂಲಕ ಗಣಿ ಗ್ರಾಮೀಣ ಪ್ರದೇಶದಲ್ಲಿ ಉಂಟಾಗಿರುವ ಧೂಳಿನ ಪ್ರಮಾಣ, ಹೂಳಿನ ಪ್ರಮಾಣ, ಸ್ಫೋಟದಿಂದಾಗಿ ಮನೆ ಬಿರಕು ಬಿಟ್ಟರುವ ಪ್ರಮಾಣ ಇತ್ಯಾದಿ ಅಂಶಗಳನ್ನು ಸಂಖ್ಯಾತ್ಮಕವಾಗಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

- ಗಣಿ ವಲಯಗಳ ಗ್ರಾಮೀಣ ಪ್ರದೇಶದಲ್ಲಿ ಉಂಟಾಗಿರುವ ಧೂಳಿನ ಪ್ರಮಾಣವನ್ನು, ಧೂಳು ಉಂಟಾಗಲು ಕಾರಣಗಳನ್ನು ಹಾಗೂ ಧೂಳಿನಿಂದಾಗಿ ಬೀರಿರುವ ಪರಿಣಾಮಗಳ ಫಲಿತವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಶೇ.೯೨.೨೩ರಷ್ಟು ಧೂಳು ಉಂಟಾಗಿದೆ, ಇನ್ನುಳಿದ ಕುಟುಂಬಗಳು ಶೇ.೦೭.೭೭ರಷ್ಟು ಪರಿಸರದಲ್ಲಿ ಧೂಳಿನ ಸಮಸ್ಯೆ ಆಗಿಲ್ಲವೆಂದು ತಿಳಿದುಬಂದಿದೆ. ಆದರೆ ಶೇ.೯೨.೨೩ರಷ್ಟು ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ಧೂಳಿನ ಸಮಸ್ಯೆಯಿದೆ. ಗಣಿಗಾರಿಕೆ ಚಟುವಟಿಕೆಯಿಂದ ಶೇ.೩೨.೫೩ರಷ್ಟು, ಗಣಿ ಸ್ಫೋಟಗಳಿಂದ ಶೇ.೩೨.೫೧ರಷ್ಟು, ಗಣಿ ಕೈಗಾರಿಕಾಗಳಿಂದ ಶೇ.೦೮.೪೩ರಷ್ಟು ಗ್ರಾಮೀಣ ಪ್ರದೇಶದಲ್ಲಿ ಧೂಳಿನ ಸಮಸ್ಯೆ ಉಂಟಾಗಲು ಕಾರಣಗಳಾಗಿವೆ. ಗಣಿ ಚಟುವಟಿಕೆ ಹಾಗೂ ಗಣಿ ಸ್ಫೋಟಗಳಿಂದ ಗ್ರಾಮೀಣ ಪ್ರದೇಶದ ವಲಯಗಳಲ್ಲಿ ಧೂಳು, ಉಂಟಾಗಲು ಹೆಚ್ಚಿನ ಪ್ರಮಾಣದ ಕಾರಣಗಳಾಗಿವೆ. ಹೀಗೆ ಪರಿಸರದಲ್ಲಿ ಉಂಟಾದ ಧೂಳಿನಿಂದ ಯಾರ ಮೇಲೆ ಪರಿಣಾಮ ಬೀರಿದೆ ಎಂದರೆ ಗಣಿ ಧೂಳಿನ ಸಮಸ್ಯೆಯು ಜನರ ಮೇಲೆ ಶೇ.೨೬.೬೬ರಷ್ಟು, ಕೃಷಿ ಮೇಲೆ ಶೇ.೩೦.೦೧ರಷ್ಟು, ಪರಿಸರದ ಮೇಲೆ ಶೇ.೨೫.೫೫ರಷ್ಟು, ಹಾಗೂ ಜಾನುವಾರುಗಳ ಮೇಲೆ ಶೇ.೧೭.೭೮ರಷ್ಟು ಪರಿಣಾಮಗಳಾಗಿವೆ. ಈ ಧೂಳಿನ ಪರಿಣಾಮಗಳು (ಶೇ.೩೦.೦೧) ಅಧಿಕವಾಗಿ ಕೃಷಿಯ ಮೇಲೆ ಆಗಿರುವುದು ಈ ಕುಟುಂಬಗಳಿಂದ ತಿಳಿದು ಬಂದಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಕುಟುಂಬಗಳು ಪರಿಸರದಲ್ಲಿ ಶೇ.೮೦ರಷ್ಟು ಧೂಳು ಉಂಟಾಗಿದೆ. ಆದರೆ ಕುಟುಂಬಗಳು ಪರಿಸರದಲ್ಲಿ ಶೇ.೨೦ರಷ್ಟು ಧೂಳು ಉಂಟಾಗಿಲ್ಲವೆಂದು ತಿಳಿಸಿದ್ದಾರೆ. ಅಂದರೆ ಗಣಿ ವಲಯ ಪರಿಸರದಲ್ಲಿ ಗಣಿಗಾರಿಕೆಯ ಚಟುವಟಿಕೆ ಶೇ.೨೮.೧೬ರಷ್ಟು, ಗಣಿ ಸ್ಫೋಟ ಶೇ.೨೨.೫೫ರಷ್ಟು, ಗಣಿ ವಾಹನಗಳ ಓಡಾಟದಿಂದ ಶೇ.೧೮.೩೧ರಷ್ಟು, ಗಣಿ ಕೈಗಾರಿಕೆಯಿಂದ ಶೇ.೩೦.೯೮ರಷ್ಟು ಧೂಳಿನ ಸಮಸ್ಯೆ ಉಂಟಾಗಲು ಕಾರಣಗಳಾಗಿವೆ. ಗಣಿ ಗ್ರಾಮೀಣ ಪ್ರದೇಶದ ಜನರ ಮೇಲೆ ಶೇ.೩೪.೪೪ರಷ್ಟು, ಕೃಷಿ ಮೇಲೆ ಶೇ.೩೦ರಷ್ಟು, ಪರಿಸರದ ಮೇಲೆ ಶೇ.೨೨.೭೨ರಷ್ಟು ಹಾಗೂ ಜಾನುವಾರುಗಳ ಮೇಲೆ ಶೇ.೧೩.೩೩ರಷ್ಟು ಪರಿಣಾಮಗಳು ಬೀರಿದೆ. ಗಣಿ ಧೂಳು ಸಮಸ್ಯೆಯ ಪರಿಣಾಮ ಜನರ ಮೇಲೆ ಅಧಿಕವಾಗಿ (ಶೇ.೩೪.೪೪) ಬೀರಿರುವುದು ಈ ಕುಟುಂಬಗಳಿಂದ ಕಂಡುಬರುತ್ತವೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳು ಪರಿಸರದಲ್ಲಿ ಶೇ.೮೧.೧೧ರಷ್ಟು ಗಣಿ ಧೂಳು ಉಂಟಾಗಿದೆ. ಇನ್ನುಳಿದ ಕುಟುಂಬಗಳು ಪರಿಸರದಲ್ಲಿ ಶೇ.೧೮.೮೯ರಷ್ಟು ಗಣಿ ಧೂಳು ಉಂಟಾಗಿಲ್ಲ

ಎಂದು ಹೇಳಿದ್ದಾರೆ. ಗಣಿಗಾರಿಕೆಯಿಂದ ಶೇ.೨೪.೬೫ರಷ್ಟು, ಗಣಿ ಸ್ಫೋಟಕಗಳಿಂದ ಶೇ.೨೭.೩೯ರಷ್ಟು, ಗಣಿ ವಾಹನ ಓಡಾಟದಿಂದ ಶೇ.೧೭.೮೨ರಷ್ಟು, ಗಣಿಕೈಗಾರಿಕೆಯಿಂದಾಗಿ ಶೇ.೩೦.೩೧ರಷ್ಟು ಗ್ರಾಮೀಣ ಪರಿಸರದಲ್ಲಿ ಧೂಳು ಉಂಟಾಗಲು ಕಾರಣಗಳಾಗಿವೆ. ಅಂದರೆ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಗಣಿ ಧೂಳು ಉಂಟಾಗಲು ಗಣಿಸ್ಫೋಟ ಶೇ.೨೭.೩೯ರಷ್ಟು ಹಾಗೂ ಗಣಿ ಕೈಗಾರಿಕೆ ಶೇ.೩೦.೧೩ರಷ್ಟು, ಅಧಿಕ ಪ್ರಮಾಣದ ಕಾರಣಗಳಾಗಿರುವುದು ಕುಟುಂಬಗಳಿಂದ ತಿಳಿದು ಬರುತ್ತದೆ.ಆದರೆ ಬಳ್ಳಾರಿ ವಲಯ ಕುಟುಂಬಗಳಿಗೆ ಧೂಳಿನ ಪರಿಣಾಮ ಜನರ ಮೇಲೆ ಶೇ.೩೬.೬೬ರಷ್ಟು, ಕೃಷಿಯ ಮೇಲೆ ಶೇ.೨೭.೭೭ರಷ್ಟು, ಪರಿಸರದ ಮೇಲೆ ಶೇ.೨೧.೧೩ರಷ್ಟು, ಜಾನುವಾರುಗಳ ಮೇಲೆ ಶೇ.೧೪.೪೪ರಷ್ಟು ಪರಿಣಾಮಗಳಾಗಿವೆ. ಈ ಭಾಗದ ಗ್ರಾಮೀಣ ಪರಿಸರದಲ್ಲಿ ಗಣಿ ಧೂಳಿನ ಸಮಸ್ಯೆಯು ಜನರ ಮೇಲೆ ಶೇ.೩೬.೬೬ರಷ್ಟು ಅಧಿಕ ಪ್ರಮಾಣದ ಪರಿಣಾಮಗಳಾಗಿರುವುದು ಕಂಡುಬರುತ್ತದೆ. ಒಟ್ಟಾರೆ ಗಣಿ ವಲಯಗಳಲ್ಲಿ ಉದ್ಭವಗೊಂಡಿರುವ ಗಣಿ ಧೂಳಿನ ಸಮಸ್ಯೆಯು ಜನರು ಮತ್ತು ಜಾನುವಾರುಗಳ ಮೇಲೆ ಅನಾರೋಗ್ಯವನ್ನು ಉಂಟು ಮಾಡಿದರೆ, ಪರಿಸರದಲ್ಲಿ ಮಲೀನತೆಯನ್ನು ಹಾಗೂ ಕೃಷಿಯಲ್ಲಿ ಇಳುವರಿ ಕಡಿಮೆಯಾಗುವಂತಹ ತೀಕ್ಷ್ಣವಾದ ಪರಿಣಾಮಗಳಾಗಿವೆ. ಬಳ್ಳಾರಿ, ಸಂಡೂರು, ಹೊಸಪೇಟೆ ವಲಯಗಳ ಗ್ರಾಮೀಣ ಪ್ರದೇಶದ ಕುಟುಂಬಗಳಿಂದ ತಿಳಿದು ಬರುತ್ತದೆ. ಪರಿಸರದಲ್ಲಿ ಗಣಿ ಧೂಳು ಉಂಟಾಗಿದೆಂದು ತಿಳಿಸಿರುವ ಕುಟುಂಬಗಳು ಹೊಸಪೇಟೆ ತಾಲ್ಲೂಕಿನಲ್ಲಿ ಅಧಿಕವಾಗಿರುವುದು ಕಂಡು ಬಂದಿದೆ.

- ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ಧೂಳು ಯಾವ ಅವಧಿಯಲ್ಲಿ ಅಂದರೆ ಗಣಿ ಪೂರ್ವ, ಗಣಿ ನಡೆದಾಗ, ಗಣಿ ಸ್ಥಗಿತತೆ ನಂತರ, ಯಾವ ಪ್ರಮಾಣದ ಗಣಿ ಧೂಳು ಉಂಟಾಗಿರುವ ಅಧ್ಯಯನ ಫಲಿತವು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಪರಿಸರದಲ್ಲಿ ಶೇ.೯೨.೨೩ರಷ್ಟು ಗಣಿಧೂಳು ಉಂಟಾಗಿದ್ದು, ಗಣಿಗಾರಿಕೆ ಪೂರ್ವದಲ್ಲಿ ಶೇ.೨೦.೦೧ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೮.೮೮ರಷ್ಟು, ಗಣಿ ಸ್ಥಗಿತತೆಯ ನಂತರ ಶೇ.೩೧.೧೧ರಷ್ಟು ಗಣಿ ವಲಯ ಹೊಸಪೇಟೆ ಗ್ರಾಮೀಣ ಪ್ರದೇಶದಲ್ಲಿ ಧೂಳಿನ ಪ್ರಮಾಣ ಉಂಟಾಗಿದೆ. ಇದು ಗಣಿಗಾರಿಕೆಯ ಪೂರ್ವದಲ್ಲಿ ಧೂಳಿನ ಪ್ರಮಾಣ ಶೇ.೨೦ರಷ್ಟು ಕಡಿಮೆಯಿದ್ದು, ಗಣಿಗಾರಿಕೆ ನಡೆದಾಗ ಧೂಳಿನ ಪ್ರಮಾಣ (ಶೇ.೪೮.೮೮) ಅಧಿಕವಾಗಿರುವುದು ಕಂಡು ಬರುತ್ತದೆ. ಆದರೆ ಗಣಿಗಾರಿಕೆ ನಡೆದಾಗ ಪರಿಸರದಲ್ಲಿ ಉಂಟಾಗಿರುವ ಧೂಳಿನ ಪ್ರಮಾಣಕ್ಕಿಂತ ಗಣಿ ಸ್ಥಗಿತತೆಯ ನಂತರ ಶೇ.೧೭.೭೭ರಷ್ಟು ಈ ಭಾಗದ ಗ್ರಾಮೀಣ ಪರಿಸರದಲ್ಲಿ ಧೂಳಿನ ಪ್ರಮಾಣ ಕಡಿಮೆಯಾಗಿವೆ ಎಂಬುವುದು ಕ್ಷೇತ್ರ ಕಾರ್ಯದಿಂದ ತಿಳಿದು ಬರುತ್ತದೆ. ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪೂರ್ವ ಶೇ.೨೭.೭೭ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೭.೭೭ರಷ್ಟು, ಹಾಗೂ ಗಣಿಗಾರಿಕೆ ಸ್ಥಗಿತತೆಯ ನಂತರ ಶೇ.೨೪.೪೬ರಷ್ಟು ಗ್ರಾಮೀಣ ಪರಿಸರದಲ್ಲಿ ಧೂಳು ಉಂಟಾಗಿದೆ. ಅಂದರೆ ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪೂರ್ವ ಧೂಳಿನ ಪ್ರಮಾಣ (ಶೇ.೨೭.೭೭) ಕಡಿಮೆಯಿದ್ದು, ಗಣಿಗಾರಿಕೆ ನಡೆದಾಗ (ಶೇ.೪೭.೭೭) ಧೂಳಿನ ಪ್ರಮಾಣ ಅಧಿಕವಾಗಿರುವುದು ಕಂಡು ಬಂದಿದೆ. ಆದರೆ ಗಣಿ ಸ್ಥಗಿತತೆಯ ನಂತರ ಧೂಳಿನ ಪ್ರಮಾಣ ಶೇ.೨೪.೪೬ರಷ್ಟು ಕಡಿಮೆಯಾಗಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ಸಂಡೂರು ಗಣಿ ವಲಯ ಗ್ರಾಮೀಣ ಪ್ರದೇಶದ ಕುಟುಂಬಗಳ ಪ್ರಕಾರ ಪರಿಸರದಲ್ಲಿ ಧೂಳಿನ ಪ್ರಮಾಣ ಮತ್ತು ಪರಿಣಾಮಗಳು ಗಣಿಗಾರಿಕೆ ನಡೆದ ಅವಧಿಯಲ್ಲಿಯೇ ಅಧಿಕವಾಗಿದೆ ಹಾಗೂ ಗಣಿ ಸ್ಥಗಿತತೆಯ ನಂತರ ಸ್ವಲ್ಪಮಟ್ಟಗೆ ಸುಧಾರಣೆಗಳಾಗಿವೆ ಎಂಬುದು ತಿಳಿದು ಬರುತ್ತದೆ. ಬಳ್ಳಾರಿ ಗ್ರಾಮೀಣ ಗಣಿ ವಲಯದ ಗಣಿಗಾರಿಕೆ ಪೂರ್ವ ಅವಧಿಯಲ್ಲಿ ಶೇ.೨೬.೬೬ರಷ್ಟು, ಗಣಿಗಾರಿಕೆ ನಡೆದಾಗ ಶೇ.೪೩.೩೩ರಷ್ಟು, ಗಣಿಗಾರಿಕೆ ಸ್ಥಗಿತತೆಯ ನಂತರದ ಅವಧಿಯಲ್ಲಿ ಶೇ.೩೦.೦೧ರಷ್ಟು ಧೂಳಿನ ಪ್ರಮಾಣ ಆಗಿರುವುದು ಕಂಡು ಬಂದಿದೆ. ಅಂದರೆ ಬಳ್ಳಾರಿ ಗಣಿ ವಲಯದಲ್ಲೂ ಗಣಿ ಪೂರ್ವ ಅವಧಿಯಲ್ಲಿ ಧೂಳಿನ ಪ್ರಮಾಣ (ಶೇ.೨೬.೬೬) ಕಡಿಮೆಯಿದ್ದು, ಗಣಿ ನಡೆದಾಗ ಧೂಳಿನ ಪ್ರಮಾಣ

(ಶೇ.೪೩.೩೩) ಅಧಿಕವಾಗಿದೆ. ಆದರೆ ಬಳ್ಳಾರಿ ಗಣಿ ವಲಯ ಗ್ರಾಮೀಣ ಪ್ರದೇಶದಲ್ಲಿ ಗಣಿ ಸ್ಥಗಿತತೆಯ ನಂತರದ ಅವಧಿಯಲ್ಲಿ ಗಣಿಧೂಳು ಶೇ.೧೩.೩೩ರಷ್ಟು ಕಡಿಮೆಯಾಗಿರುವುದು ತಿಳಿದು ಬರುತ್ತದೆ. ಒಟ್ಟಾರೆ ಬಳ್ಳಾರಿ, ಹೊಸಪೇಟೆ, ಸಂಡೂರು ತಾಲ್ಲೂಕುಗಳ ಪರಿಸರದಲ್ಲಿ ಗಣಿಗಾರಿಕೆ ನಡೆದಾಗ ಧೂಳಿನ ಪ್ರಮಾಣ ಅಧಿಕವಾಗಿದ್ದು, ಈ ಮೂರು ತಾಲ್ಲೂಕುಗಳಲ್ಲಿಯೇ ಗಣಿಗಾರಿಕೆ ನಡೆದಾಗ ಪರಿಸರದಲ್ಲಿ ಧೂಳಿನ ಪ್ರಮಾಣ (ಶೇ.೫೩.೩೩) ಸಂಡೂರು ತಾಲ್ಲೂಕಿನಲ್ಲಿ ಅಧಿಕವಾಗಿರುವುದು ಕಂಡು ಬರುತ್ತದೆ.

- ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಸುತ್ತಮುತ್ತ ಶೇ.೭೧.೧೧ರಷ್ಟು ಕೆರೆ, ಬಾವಿ, ಹಳ್ಳ, ಅಣೆಕಟ್ಟುಗಳಿದ್ದು, ಗ್ರಾಮದ ಸುತ್ತಮುತ್ತ ಶೇ.೨೮.೮೯ರಷ್ಟು ಕೆರೆ, ಹಳ್ಳ, ಬಾವಿ, ಅಣೆಕಟ್ಟು ಕಂಡು ಬರುವುದಿಲ್ಲ. ಗ್ರಾಮದ ಸುತ್ತಮುತ್ತಲಿರುವ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಶೇ.೭೯.೬೮ರಷ್ಟು ಹೂಳು ತುಂಬಿದೆ. ಇನ್ನು ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಶೇ.೨೦.೩೨ರಷ್ಟು ಹೂಳು ತುಂಬಿಲ್ಲ ಎಂದು ಕ್ಷೇತ್ರಕಾರ್ಯದಿಂದ ಕಂಡು ಬರುತ್ತದೆ. ಗಣಿ ಗ್ರಾಮೀಣ ಪ್ರದೇಶದ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಗಣಿಗಾರಿಕೆಯ ಪ್ರಭಾವ ಶೇ.೩೫.೨೯ರಷ್ಟು, ಮಳೆ ಪ್ರಭಾವ ಶೇ.೧೫.೬೮ರಷ್ಟು, ಭೂಸವೆತ ಶೇ.೨೯.೪೨ರಷ್ಟು, ಪ್ರಕೃತಿಯ ವಿಕೋಪ ಶೇ.೧೯.೬೧ರಷ್ಟು ಕಾರಣವಾಗಿವೆ. ಕೆರೆ, ಬಾವಿ, ಅಣೆಕಟ್ಟುಗಳಲ್ಲಿ ಗಣಿಗಾರಿಕೆಯ ಪ್ರಭಾವದಿಂದ ಹೂಳು ತುಂಬಿರುವುದು ಜನರ ಮೇಲೆ ಶೇ.೨೫.೪೯ರಷ್ಟು, ಕೃಷಿಯ ಮೇಲೆ ಶೇ.೩೭.೨೫ರಷ್ಟು ಹಾಗೂ ಜಾನುವಾರುಗಳ ಮೇಲೆ ಶೇ.೨೭.೪೬ರಷ್ಟು ಪರಿಣಾಮಗಳಾಗಿವೆ. ಇದರಲ್ಲಿ ಕೆರೆ, ಬಾವಿ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆಯಿಂದ ಕೃಷಿಯ ಮೇಲೆ ಆಗಿರುವ ಪರಿಣಾಮಗಳು ಅಧಿಕವಾಗಿರುವುದು ಕುಟುಂಬಗಳಿಂದ ತಿಳಿದು ಬಂದಿದೆ. ಸಂಡೂರು, ತಾಲ್ಲೂಕಿನ ಗ್ರಾಮೀಣ ಪ್ರದೇಶದ ಗ್ರಾಮದ ಸುತ್ತಮುತ್ತ ಶೇ.೭೨.೨೨ರಷ್ಟು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆ. ಇನ್ನು ಗ್ರಾಮದ ಸುತ್ತಮುತ್ತ ಶೇ.೨೭.೭೮ರಷ್ಟು ಕೆರೆ, ಬಾವಿ, ಆಣೆಕಟ್ಟುಗಳು ಇಲ್ಲ ಎಂದು ಕುಟುಂಬಗಳಿಂದ ತಿಳಿದುಬರುತ್ತದೆ. ಗ್ರಾಮದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಶೇ.೮೯.೨೪ರಷ್ಟು ಹೂಳು ತುಂಬಿದೆ. ಆದರೆ ಶೇ.೧೦.೭೬ರಷ್ಟು ಇಲ್ಲ ಎಂಬ ಫಲಿತಾಂಶ ಕಂಡು ಬಂದಿದೆ. ಅಂದರೆ ಈ ವಲಯದ ಹೂಳು ತುಂಬಲು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬಲು ಗಣಿಗಾರಿಕೆಯ ಪ್ರಭಾವ ಶೇ.೩೪.೪೮ಗಷ್ಟು, ಮಳೆ ಪ್ರಭಾವ ಶೇ.೨೯.೩೧ರಷ್ಟು, ಭೂಸವೆತ ಶೇ.೧೭.೨೫ರಷ್ಟು, ಪ್ರಕೃತಿ ವಿಕೋಪ ಶೇ.೧೯.೬೦ರಷ್ಟು ಕಾರಣಗಳಾಗಿವೆ. ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಅಧಿಕ ಪ್ರಮಾಣದ ಹೂಳು ತುಂಬಿರಲು ಗಣಿಗಾರಿಕೆಯ ಪ್ರಭಾವವೇ ಪ್ರಬಲವಾದ ಕಾರಣವಾಗಿದೆ. ಹೂಳು ತುಂಬುವಿಕೆಯಿಂದಾಗಿ ಬೀರುವ ಪರಿಣಾಮಗಳು ಜನರ ಮೇಲೆ ಶೇ.೪೬.೫೫ರಷ್ಟು, ಕೃಷಿಯ ಮೇಲೆ ಶೇ.೩೧.೦೩ರಷ್ಟು ಜಾನುವಾರುಗಳ ಮೇಲೆ ಶೇ.೨೨.೪೨ರಷ್ಟಿದೆ ಸಂಡೂರು ವಲಯದ ಗ್ರಾಮೀಣ ಪ್ರದೇಶದಲ್ಲಿ ಹೂಳು ತುಂಬುವಿಕೆಯಿಂದ ಜನರ ಮೇಲೆ ಶೇ.೪೬.೫೫ರಷ್ಟು ಅಧಿಕವಾಗಿ ಪರಿಣಾಮ ಬೀರಿರುವುದು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕು ಗಣಿ ವಲಯ ಗ್ರಾಮೀಣ ಪ್ರದೇಶದ ಗ್ರಾಮಗಳ ಸುತ್ತಮುತ್ತ ಶೇ.೯೨.೨೨ರಷ್ಟು ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಿವೆ. ಹಾಗೂ ಗ್ರಾಮದ ಸುತ್ತಮುತ್ತ ಶೇ.೦೭.೭೮ರಷ್ಟು ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಿಲ್ಲ ಎಂದು ತಿಳಿದು ಬರುತ್ತದೆ. ಕೆರೆ, ಬಾವಿಗಳಲ್ಲಿ ಹೂಳು ಶೇ.೯೧.೫೬ರಷ್ಟು ತುಂಬಿದೆ. ಬಳ್ಳಾರಿ ವಲಯ ಗ್ರಾಮೀಣ ಪ್ರದೇಶದ ಸುತ್ತಮುತ್ತ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಗಣಿಗಾರಿಕೆಯ ಪ್ರಭಾವ ಶೇ.೩೨.೮೯ರಷ್ಟು, ಮಳೆ ಪ್ರಭಾವ ಶೇ.೧೪.೪೯ರಷ್ಟು, ಭೂಸವೆತ ಶೇ.೨೬.೩೧ರಷ್ಟು, ಪ್ರಕೃತಿ ವಿಕೋಪಗಳಿಂದ ಶೇ.೨೬.೩೧ರಷ್ಟು ಹೂಳು ತುಂಬಲು ಕಾರಣಗಳಾಗಿವೆ. ಈ ವಲಯದ ಗ್ರಾಮೀಣ ಪ್ರದೇಶದ ಸುತ್ತಮುತ್ತಲ್ಲಿರುವ ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿ ಹೂಳು ತುಂಬುವಿಕೆಯಿಂದ ಆಗಿರುವ ಪರಿಣಾಮಗಳು ಜನರ ಮೇಲೆ ಶೇ.೩೪.೨೨ರಷ್ಟು, ಕೃಷಿಯ ಮೇಲೆ ಶೇ.೩೬.೮೪ರಷ್ಟು, ಜಾನುವಾರುಗಳ ಮೇಲೆ ಶೇ.೨೮.೯೪ರಷ್ಟಾಗಿದೆ. ಕೆರೆ, ಬಾವಿ, ಹಳ್ಳ, ಆಣೆಕಟ್ಟುಗಳಲ್ಲಿರುವ ಹೂಳಿನಿಂದಾಗಿ ಕೃಷಿಯ ಮೇಲೆ

ಅಧಿಕ ಪ್ರಮಾಣದ ಪರಿಣಾಮಗಳಾಗಿರುವುದು ವಿಷಾದಕಾರ ಸಂಗತಿಯಾಗಿದೆ. ಒಟ್ಟಾರೆ ಹೂಳು ತುಂಬುವಿಕೆಯ ಪ್ರಮಾಣವು ಕೆರೆ, ಹಳ್ಳ, ಬಾವಿ, ಆಣೆಕಟ್ಟುಗಳಲ್ಲಿ ಅಧಿಕವಾಗಿ (ಶೇ.೯೨.೨೨) ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಇರುವುದು ಕಂಡು ಬಂದಿದೆ. ಗಣಿ ವಲಯ ಹೊಸಪೇಟೆ, ಬಳ್ಳಾರಿ, ಸಂಡೂರು ಗ್ರಾಮೀಣ ಪ್ರದೇಶದ ಕೆರೆ, ಬಾವಿ, ಹಳ್ಳ ಆಣೆಕಟ್ಟುಗಳಲ್ಲಿ ಹೂಳು ತುಂಬಿರಲು ಗಣಿಗಾರಿಕೆಯ ಪ್ರಭಾವವೇ ಪ್ರಮುಖವಾದ ಕಾರಣವಾಗಿದ್ದು, ಹೊಸಪೇಟೆ ತಾಲ್ಲೂಕಿನಲ್ಲೇ ಹೂಳು ತುಂಬುವಿಕೆಗೆ ಗಣಿಗಾರಿಕೆಯ ಪ್ರಭಾವವೇ ಅಧಿಕ ಪ್ರಮಾಣದ ಕಾರಣಗಳಾಗಿವೆ ಎಂದು ಕುಟುಂಬಗಳ ಕ್ಷೇತ್ರ ಕಾರ್ಯದಿಂದ ತಿಳಿದ ಸಂಗತಿಯಾಗಿದೆ.

- ಗಣಿಗಾರಿಕೆಯಿಂದ ಹೊಸಪೇಟೆ ಸಂಡೂರು, ಬಳ್ಳಾರಿ ತಾಲ್ಲೂಕುಗಳ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯ ಮೇಲಾಗಿರುವ ಭೂ ಸವೆತದ ಪ್ರಮಾಣ, ಭೂ ಸವೆತಕ್ಕೆ ಕಾರಣಗಳು ಮತ್ತು ಪರಿಣಾಮಗಳ ಫಲಿತವು ಹೊಸಪೇಟೆ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕುಟಂಬಗಳ ಕೃಷಿ ಭೂಮಿಯ ಮೇಲೆ ಶೇ.೯೪.೪೪ರಷ್ಟು ಭೂಸವೇತವಾಗಿದೆ. ಇನ್ನು ಕುಟುಂಬಗಳ ಕೃಷಿ ಭೂಮಿಯಲ್ಲಿ ಶೇ.೦೫.೫೬ರಷ್ಟು ಭೂಸವೆತ ಉಂಟಾಗಿಲ್ಲವೆಂದು ತಿಳಿದುಬಂದಿದೆ. ಆದರೆ ಗಣಿ ಗ್ರಾಮೀಣ ಪ್ರದೇಶದಲ್ಲಿ ಗಣಿಗಾರಿಕೆಯ ಪ್ರಭಾವದಿಂದ ಶೇ.೪೯.೪೧ರಷ್ಟು, ಮಣ್ಣಿನ ಸಾಗಣೆಕೆಯಿಂದ ಶೇ.೩೧.೭೬ರಷ್ಟು, ನೈಸರ್ಗಿಕ ವಿಕೋಪಗಳೇ ಶೇ.೧೮.೮೨ರಷ್ಟು ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಕಾರಣಗಳಾಗಿವೆ. ಈ ಮೂರು ಕಾರಣಗಳಲ್ಲಿಯೇ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಶೇ.೪೯.೪೧ರಷ್ಟು ಭೂಸವೇತ ಉಂಟಾಗಲು ಗಣಿಗಾರಿಕೆಯೇ ಅಧಿಕ ಪ್ರಮಾಣದ ಕಾರಣವಾಗಿರುವುದು ಕುಟುಂಬಗಳ ದತ್ತಾಂಶದಿಂದ ಕಂಡು ಬರುತ್ತದೆ. ಹಾಗೆಯೇ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೇತದ ಪರಿಣಾಮಗಳು ಕೃಷಿಯ ಮೇಲೆ ಶೇ.೩೫.೨೯ರಷ್ಟು, ಮಣ್ಣಿನ ನಾಶ ಶೇ.೩೦.೫೮ರಷ್ಟು, ಕಡಿಮೆ ಫಲವತ್ತತೆ ಶೇ.೧೭.೬೪ರಷ್ಟು ಹಾಗೂ ಕಡಿಮೆ ಇಳುವರಿ ಶೇ.೧೬.೪೮ರಷ್ಟು ಭೂಸವೇತದ ಪರಿಣಾಮಗಳಾಗಿವೆ. ಇದರಲ್ಲಿ ಶೇ.೩೦.೫೮ರಷ್ಟು ಕೃಷಿ ಕುಂಠಿತಗೊಳ್ಳುತ್ತಿರುವ ಪರಿಣಾಮಗಳ ಪ್ರಮಾಣ ಅಧಿಕವಾಗಿದೆಂದು ಕ್ಷೇತ್ರಕಾರ್ಯದಿಂದ ಕಂಡು ಬಂದಿದೆ. ಸಂಡೂರು ತಾಲ್ಲೂಕಿನ ಗ್ರಾಮೀಣ ಗಣಿ ವಲಯದ ಕೃಷಿ ಭೂಮಿಯ ಮೇಲೆ ಶೇ.೮೭.೭೮ರಷ್ಟು ಭೂಸವೆತ ಉಂಟಾಗಿದೆ. ಇನ್ನುಳಿದ ಕುಟುಂಬಗಳು ಕೃಷಿ ಭೂಮಿಯ ಮೇಲೆ ಶೇ.೧೨.೨೨ರಷ್ಟು ಭೂಸವೆತ ಉಂಟಾಗಿಲ್ಲವೆಂಬ ಹೇಳಿಕೆಯು ಸಮೀಕ್ಷೆಯ ದತ್ತಾಂಶಗಳಿಂದ ಕಂಡುಬಂದಿದೆ. ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಗಣಿಗಾರಿಕೆ ಹಾವಳಿ ಶೇ.೪೩.೦೫ರಷ್ಟು, ಮಣ್ಣು ಸಾಗಾಣಿಕೆ ಶೇ.೩೭.೯೭ರಷ್ಟು, ನೈಸರ್ಗಿಕ ವಿಕೋಪ ಶೇ.೧೮.೯೮ರಷ್ಟು ಕಾರಣವಾಗಿವೆಂದು ತಿಳಿದು ಬರುತ್ತದೆ. ಈ ವಲಯದ ಗ್ರಾಮೀಣ ಕೃಷಿ ಭೂಮಿಯಲ್ಲಿ ಭೂಸವೆತ ಉಂಟಾಗಲು ಗಣಿಗಾರಿಕೆ ಹಾವಳಿಯ (ಶೇ.೪೩.೦೫) ಅಧಿಕವಾಗಿದ್ದು, ಪ್ರಬಲವಾದ ಕಾರಣವಾಗಿದೆ. ಕೃಷಿ ಭೂಮಿಯಲ್ಲಿ ಭೂ ಸವೆತ ಉಂಟಾದಾಗ ಕೃಷಿ ಕುಂಠಿತ ಶೇ.೩೯ರಷ್ಟು, ಮಣ್ಣು ನಾಶ ಶೇ.೨೫.೩೨ರಷ್ಟು, ಕಡಿಮೆ ಫಲವತತ್ತೆ ಶೇ.೧೫.೧೮ರಷ್ಟು ಹಾಗೂ ಕಡಿಮೆ ಇಳುವರಿ ಶೇ.೨೦.೨೧ರಷ್ಟು ಪರಿಣಾಮಗಳು ಬೀರಿರುವುದು ಕಂಡು ಬಂದಿದೆ. ಒಟ್ಟಾರೆ ಈ ಗಣಿ ಗ್ರಾಮೀಣ ಪ್ರದೇಶದಲ್ಲಿ ಭೂಸವೇತದಿಂದಾಗಿ ಶೇ.೩೯.೨೪ರಷ್ಟು ಕೃಷಿ ಕುಂಠಿತಗೊಳ್ಳುತ್ತಿರುವ ಪರಿಣಾಮ ಅಧಿಕವಾಗಿ ಕಂಡು ಬಂದರೆ, ಕಡಿಮೆ ಫಲವತತ್ತೆಯು ಶೇ.೧೫.೧೮ರಷ್ಟು ಕಡಿಮೆ ಪ್ರಮಾಣದ ಪರಿಣಾಮಗಳಾಗಿರುವುದು ಕಂಡು ಬಂದಿದೆ. ಬಳ್ಳಾರಿ ತಾಲ್ಲೂಕಿನ ಗಣಿ ಗ್ರಾಮೀಣ ಪ್ರದೇಶದ ಕೃಷಿ ಭೂಮಿಯಲ್ಲಿ ಭೂಸವೇತವು ಶೇ.೯೭.೭೭ರಷ್ಟು ಉಂಟಾಗಿದೆ. ಹಾಗೂ ಕೃಷಿ ಭೂಮಿಯಲ್ಲಿ ಶೇ.೦೨.೨೩ರಷ್ಟು ಭೂಸವೆತ ಉಂಟಾಗಿರುವುದಿಲ್ಲವೆಂದು ತಿಳಿದುಬಂದಿದೆ. ಆದರೆ ಕೃಷಿ ಭೂಮಿಯಲ್ಲಿ ಭೂಸವೆತ ಸಂಭವಿಸಲು ಗಣಿಗಾರಿಕೆ ಹಾವಳಿ ಶೇ.೪೦.೯೧ರಷ್ಟು, ಮಣ್ಣು ಸಾಗಣಿಕೆ ಶೇ.೩೯.೭೭ರಷ್ಟು, ನೈಸರ್ಗಿಕ ವಿಕೋಪಗಳು ಶೇ.೧೯.೩೨ರಷ್ಟು ಕಾರಣವಾಗಿವೆ. ಇದರಲ್ಲಿ ಬಹುಮುಖ್ಯವಾಗಿ ಗ್ರಹಿಸಬೇಕಾದ ಅಂಶವೆಂದರೆ ಕೃಷಿ ಭೂಮಿಯಲ್ಲಿ ಭೂಸವೇತ ಉಂಟಾಗಲು

ಗಣಿಗಾರಿಕೆಯ ಹಾವಳಿಯೇ ಅಧಿಕವಾಗಿದೆ. ಈ ಗಣಿ ವಲಯ ಗ್ರಾಮೀಣ ಕೃಷಿ ಭೂಮಿಯಲ್ಲಿ ಭೂಸವೇತದಿಂದಾಗಿ ಮಣ್ಣಿನ ನಾಶ ಶೇ.೧೮.೧೮ರಷ್ಟು, ಕೃಷಿ ಕುಂಠಿತ ಶೇ.೫೦.೦೧ರಷ್ಟು, ಕಡಿಮೆ ಫಲವತ್ತತೆ ಶೇ.೧೩.೬೩ರಷ್ಟು, ಕಡಿಮೆ ಇಳುವರಿಯು ಶೇ.೧೮.೧೮ರಷ್ಟು ಪರಿಣಾಮಗಳಾಗಿವೆಂದು ತಿಳಿದು ಬರುತ್ತದೆ.

- ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮನೆ ಬಿರುಕು ಬಿಟ್ಟಿರುವ ಪ್ರಮಾಣದ ಫಲಿತವು ಹೊಸಪೇಟೆ ಗಣಿ ಗ್ರಾಮೀಣ ಪ್ರದೇಶದ ಮನೆ ಬಿರುಕು ಶೇ.೮೮.೮೮ರಷ್ಟು ಬಿಟ್ಟಿದೆ ಎಂದು ತಿಳಿದು ಬರುತ್ತದೆ. ಮನೆ ಬಿರುಕು ಬಿಡಲು ಗಣಿ ಸ್ಫೋಟದಿಂದ ಶೇ.೭೬.೨೫ರಷ್ಟು, ಪ್ರಕೃತಿ ವಿಕೋಪಗಳಿಂದ ಶೇ.೨೩.೭೫ರಷ್ಟು ಮನೆಗಳು ಬಿರುಕು ಬಿಡಲು ಕಾರಣಗಳಾಗಿವೆ. ಮನೆ ಬಿರಕು ಬಿಡಲು ಗಣಿ ಸ್ಫೋಟದ ಕಾರಣಗಳು ಅಧಿಕವಾಗಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಮನೆಗಳು ಶೇ.೭೦.೮೪ರಷ್ಟು ಬಿರುಕು ಬಿಟ್ಟಿದೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಈ ವಲಯದಲ್ಲಿಯೂ ಮನೆ ಬಿರುಕು ಬಿಟ್ಟರುವ ಪ್ರಮಾಣ ಅಧಿಕವಾಗಿ ಗೋಚರಿಸುತ್ತದೆ. ಮನೆ ಬಿರುಕು ಬಿಡಲು ಗಣಿ ಸ್ಫೋಟ್ಟ ಶೇ.೭೦.೮೪ರಷ್ಟು, ಪ್ರಕೃತಿ ವಿಕೋಪ ಶೇ.೨೯.೧೬ರಷ್ಟು ಕಾರಣವಾಗಿವೆ. ಈ ವಲಯದಲ್ಲೂ ಮನೆ ಬಿರುಕು ಬಿಡಲು ಗಣಿ ಸ್ಫೋಟವೇ ಅಧಿಕ ಪ್ರಮಾಣದ ಕಾರಣವಾಗಿದೆಂದು ಕ್ಷೇತ್ರಕಾರ್ಯದಿಂದ ಕಂಡು ಬಂದಿದೆ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದಲ್ಲಿ ಮನೆಗಳು ಶೇ.೭೮.೮೮ರಷ್ಟು ಬಿರುಕು ಬಿಟ್ಟಿವೆಂದು ತಿಳಿದು ಬರುತ್ತದೆ. ಮನೆ ಬಿರುಕು ಬಿಡಲು ಗಣಿಸ್ಫೋಟ ಶೇ.೮೦.೨೮ರಷ್ಟು, ಪ್ರಕೃತಿ ವಿಕೋಪವೂ ಶೇ.೧೯.೭೨ರಷ್ಟು ಕಾರಣವಾಗಿದೆ. ಗಣಿಸ್ಫೋಟವೇ (ಶೇ.೮೦.೨೮) ಮನೆ ಬಿರುಕು ಬಿಡಲು ಅಧಿಕವಾಗಿ ಕಾರಣವಾಗಿರುವುದು ತಿಳಿದು ಬರುತ್ತದೆ. ಒಟ್ಟಾರೆ ಹೊಸಪೇಟೆ–ಬಳ್ಳಾರಿ–ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳ ಮನೆಗಳು ಬಿರುಕು ಬಿಡಲು ಗಣಿ ಸ್ಫೋಟ್ಟವೇ ಕಾರಣವಾಗಿದೆ. ಹೊಸಪೇಟೆ ತಾಲ್ಲೂಕಿನ ಕುಟುಂಬಗಳ ಮನೆಗಳು (ಶೇ.೮೮.೮೮) ಅಧಿಕವಾಗಿ ಬಿರುಕು ಬಿಟ್ಟಿವೆ. ಆದರೆ ಕಡಿಮೆ ಪ್ರಮಾಣದಲ್ಲಿ ಮನೆ ಬಿರುಕು ಬಿಟ್ಟರುವ ಕುಟುಂಬಗಳು (ಶೇ.೭೮.೮೮) ಬಳ್ಳಾರಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುತ್ತದೆ. ಗಣಿ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಮನೆ ಬಿರುಕು ಬಿಡಲು ಕಾರಣ ಬಳ್ಳಾರಿ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ (ಶೇ.೮೦.೨೮) ಅಧಿಕವಾಗಿ ಕಂಡು ಬಂದರೆ, ಕಡಿಮೆ ಪ್ರಮಾಣದ ಮನೆ ಬಿರುಕು ಬಿಡಲು ಕಾರಣ (ಶೇ.೭೦.೮೩) ಸಂಡೂರು ಗಣಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬಂದಿದೆ.
- ಗಣಿ ಗ್ರಾಮೀಣ ಪ್ರದೇಶದ ಸುತ್ತಮುತ್ತಲ್ಲಿನ ಕೆರೆ–ಬಾವಿ–ಅಣೆಕಟ್ಟುಗಳ ನೀರು ಶೇ.೯೦ರಷ್ಟು ಬಳಸಲು ಅಥವಾ ಕುಡಿಯಲು ಯೋಗ್ಯವಾಗಿಲ್ಲ. ಈ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದೆ ಇರಲು ಗಣಿ ಹೂಳು ಶೇ.೪೪.೪೫ರಷ್ಟು, ಗಣಿತಾಜ್ಯ ಶೇ.೩೪.೫೭ರಷ್ಟು, ಕಲುಷಿತ ಶೇ.೨೦.೯೮ರಷ್ಟು ಕಾರಣವಾಗಿದೆ. ಇದರಲ್ಲಿಯೇ ಕೆರೆ–ಬಾವಿ–ಅಣೆಕಟ್ಟುಗಳ ನೀರು ಯೋಗ್ಯವಾದಿರಲು ಗಣಿಹೂಳು (ಶೇ.೪೪.೪೫) ಅಧಿಕವಾಗಿ ಕಂಡು ಬರುತ್ತದೆ. ಸಂಡೂರು ಗಣಿ ಗ್ರಾಮೀಣ ಪ್ರದೇಶದ ಸುತ್ತಮುತ್ತಲಲ್ಲಿ ಇರುವ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಶೇ.೬೬.೬೬ರಷ್ಟು ಯೋಗ್ಯವಾಗಿರುವುದಿಲ್ಲವೆಂದು ತಿಳಿದಿದೆ. ಈ ನೀರು ಯಾಕೆ ಬಳಸಲು ಯೋಗ್ಯವಿಲ್ಲವೆಂದರೆ ಗಣಿ ಹೂಳು ಶೇ.೨೬.೬೭ರಷ್ಟು, ಗಣಿತಾಜ್ಯ ಶೇ.೪೧.೬೫ರಷ್ಟು, ಕಲುಷಿತ ಶೇ.೩೧.೬೮ರಷ್ಟು ಕಾರಣವಾಗಿವೆ. ಇದರಲ್ಲಿ ಕೆರೆ–ಬಾವಿ–ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು (ಶೇ.೪೧.೬೫) ಗಣಿ ಹೂಳು ಕಾರಣಗಳೇ ಅಧಿಕವಾಗಿ ಕಂಡು ಬರುತ್ತದೆ. ಬಳ್ಳಾರಿ ಗಣಿ ಗ್ರಾಮೀಣ ಪ್ರದೇಶದ ಕೆರೆ–ಬಾವಿ–ಅಣೆಕಟ್ಟುಗಳ ನೀರು ಬಳಸಲು ಶೇ.೭೦ರಷ್ಟು ಯೋಗ್ಯವಾಗಿಲ್ಲ ಎಂಬ ಅಂಶ ಕ್ಷೇತ್ರಕಾರ್ಯದ ದತ್ತಾಂಶಗಳಿಂದ ತಿಳಿದು ಬರುತ್ತದೆ. ಆದರೆ ಇವುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗದಿರಲು ಗಣಿಹೂಳು ಶೇ.೪೪.೪೪ರಷ್ಟು, ಗಣಿತಾಜ್ಯ ಶೇ.೧೫.೮ರಷ್ಟು, ಕಲುಷಿತ ಶೇ.೩೯.೬೯ರಷ್ಟು ಅಂಶಗಳು ಕಾರಣವಾಗಿದೆಂದು ಕಂಡು ಬರುತ್ತದೆ.

ಇದರಲ್ಲಿ ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು (ಶೇ.೪೪.೪೪) ಗಣಿಹೂಳು ಕಾರಣಗಳು ಅಧಿಕವಾಗಿರುವುದು ತಿಳಿದುಬಂದಿದೆ. ಒಟ್ಟಾರೆ ಹೊಸಪೇಟೆ-ಬಳ್ಳಾರಿ-ಸಂಡೂರು ಗಣಿ ಗ್ರಾಮೀಣ ಪ್ರದೇಶದ ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸಲು ಯೋಗ್ಯವಾಗಿಲ್ಲ ಎಂಬ ಅಂಶ ಹೆಚ್ಚಾಗಿ (ಶೇ.೯೦) ಹೊಸಪೇಟೆ ಗಣಿ ಗ್ರಾಮೀಣ ಭಾಗದಲ್ಲಿ ಕಂಡು ಬಂದಿದ್ದು, ಕೆರೆ-ಬಾವಿ-ಅಣೆಕಟ್ಟುಗಳ ನೀರು ಕುಡಿಯಲು ಅಥವಾ ಬಳಸದಿರಲು ಕಾರಣಗಳು ಹೊಸಪೇಟೆ ತಾಲ್ಲೂಕಿನ ಗಣಿ ವಲಯಗಳಲ್ಲಿ ಅಧಿಕವಾಗಿ ಕಾಣಸಿಗುತ್ತದೆ. ಈ ಪ್ರಮಾಣದ ಕಾರಣಗಳು ಗಣಿಗಾರಿಕೆ ನಡೆದಾಗ ಅಧಿಕವಾಗಿದ್ದು, ಗಣಿ ಸ್ಥಗಿತತೆಯ ನಂತರ ಇದರ ಪ್ರಮಾಣ ಸ್ವಲ್ಪಮಟ್ಟಿಗೆ ಕಡಿಮೆಯಾಗಿರುವುದು ತಿಳಿದು ಬರುತ್ತದೆ. ಹೀಗೆ ಅದ್ಯಯನದ ಒಟ್ಟು ಫಲಿತಗಳನ್ನು ಕೇಂದ್ರಿಕರಿಸಿ ಹಿಡಿದಿಡಲಾಗಿದೆ.

ಬಳ್ಳಾರಿ ಜಿಲ್ಲೆಯ ಗಣಿ ವಲಯಗಳಾದ ಹೊಸಪೇಟೆ, ಸಂಡೂರು ಮತ್ತು ಬಳ್ಳಾರಿ ತಾಲ್ಲೂಕುಗಳ ಒಟ್ಟು ೯ ಗ್ರಾಮೀಣ ಪ್ರದೇಶಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳೆಂದರೆ ಕಲ್ಹಳ್ಳಿ, ರಾಜಾಪುರ, ಪಿ.ಕೆ.ಹಳ್ಳಿ, ಜೈಸಿಂಗ್‌ಪುರ, ಸುಶೀಲನಗರ, ತುಮಟಿ ಬೆಲಗಲ್, ಜಾನೆಕುಂಟೆ, ಹನ್ನೊಳ್ಳಿ ಗ್ರಾಮಗಳನ್ನು ಅಧ್ಯಯನಕ್ಕೆ ಒಳಪಡಿಸಿ ಈ ಮಹಾಪ್ರಬಂಧವನ್ನು ರಚಿಸಲಾಗಿದೆ. ಈ ಅಧ್ಯಯನವು ಗಣಿಗಾರಿಕೆಯಿಂದ ಗ್ರಾಮೀಣ ಪ್ರದೇಶದ ಮೇಲಾದ ಸಾಮಾಜಿಕ, ಆರ್ಥಿಕ ಮತ್ತು ಪರಿಸರಾತ್ಮಕ ಪರಿಣಾಮಗಳನ್ನು ವಿಶ್ಲೇಷಿಸುತ್ತದೆ. ಗಣಿಗಾರಿಕೆ ಬಗ್ಗೆ ಅಧ್ಯಯನ ಕೈಗೊಳ್ಳುವ ಮುಂದಿನ ಸಂಶೋಧಕರಿಗೆ ಈ ಮಹಾಪ್ರಬಂಧವು ಪೂರಕವಾಗುತ್ತದೆ. ಮುಂದೆ ಅಧ್ಯಯನ ಕೈಗೊಳ್ಳುವ ಸಂಶೋಧಕರು ಗಣಿ ವಲಯದ ವ್ಯಾಪ್ತಿಗೆ ಬರುವ ಬೇರೆ ಬೇರೆ ಗ್ರಾಮೀಣ ಪ್ರದೇಶಗಳನ್ನು ಆಯ್ದುಕೊಂಡು ಗಣಿಗಾರಿಕೆಯ ಸಂಶೋಧನೆಗಳನ್ನು ಕೈಗೊಳ್ಳುವ ಅವಶ್ಯಕತೆಯಿದೆ. ಹಾಗಾಗಿ ಸಂಶೋಧನೆಯ ಪ್ರಕ್ರಿಯೆಯು ತಟಸ್ಥವಾದುದ್ದಲ್ಲ, ಅದೊಂದು ನಿರಂತರ ಪ್ರಕ್ರಿಯೆಯಾಗಿದೆ. ಮುಂದಿನ ದಿನಗಳಲ್ಲಿ, ಗಣಿಕೈಗಾರಿಕೆಯಿಂದ ಗ್ರಾಮೀಣ ಪ್ರದೇಶದ ಮೇಲಾದ ಪರಿಣಾಮಗಳು, ಗಣಿಕೈಗಾರಿಕೆ ಮತ್ತು ದುಡಿಮೆಯ ವಾಸ್ತವ ಸ್ಥಿತ್ಯಂತರಗಳು, ಬಳ್ಳಾರಿ ಜಿಲ್ಲೆಯಲ್ಲಿ ಗಣಿಗಾರಿಕೆ ನಡೆದಾಗ ಮತ್ತು ಗಣಿ ಸ್ಥಗಿತತೆ ನಂತರದ ಖನಿಜ ಸಂಪನ್ಮೂಲಗಳ ಮಹತ್ವ, ಗಣಿ ಸ್ಥಗಿತತೆ ನಂತರದಲ್ಲಾದ ಕೃಷಿ ಪಲ್ಲಟಗಳು ಹೀಗೆ ಇತ್ಯಾದಿ ವಿಷಯಗಳ ಸಂಶೋಧನೆಯನ್ನು ಕೈಗೊಳ್ಳಲು ಪ್ರಸ್ತುತ ಮಹಾಪ್ರಬಂಧವು ಮುಂದೆ ಬರುವ ಸಂಶೋಧಕರಿಗೆ ಹಾದಿಯಾಗಲಿದೆ. ಹೀಗೆ ಸಂಶೋಧನೆಯು ಸತ್ಯ ಸಂಗತಿಗಳನ್ನು ಪರಿಶೋಧಿಸಿ, ವಾಸ್ತವ ಸಂಗತಿಗಳನ್ನು ಸಮಾಜಕ್ಕೆ ಬಿಚ್ಚಿಡುವ ಪರಿಕರವಾಗಿದೆ.

## ಆಕರ ಗ್ರಂಥಗಳು


೦೧. ಆ್ಯಂಜರ್ ಫೆರೋಜ್ ಆಹಮ್ಮದ್ ಅಂಡ್ ಅದರ್ಸ್, (೨೦೧೪), 'ಇಂಫ್ಯಾಕ್ಟ್ ಆಫ್ ಮೈನಿಂಗ್ ಆ್ಯಕ್ಟಿವಿಟಿಸ್ ಆನ್ ವೈರಸ್ ಎನ್ವಿರಾನ್ಮೆಂಟಲ್ ಆ್ಯಟ್ರಿಬ್ಯೂಟ್ಸ್ ವಿಥ್ ಸ್ಪೇಸಿಫಿಕ್ಸ್ ಕೆಫರೆನ್ಸ್ ಟು ಹೇಲ್ಥ್ ಇಂಫ್ಯಾಕ್ಟ್ ಇನ್ ಶತಾಬ್ಧಿಪುರಂ ಸ್ವಾಲಿಯರ್, ಇಂಡಿಯಾ', ಇಂಟರ್ ನ್ಯಾಷನಲ್ ರಿಸರ್ಚ್ ಜರ್ನಲ್ ಆಫ್ ಎನ್ವಿರಾನ್ಮೆಂಟ್ ಸೈನ್ಸ್, ವ್ಯಾಲ್ಯೂಮ್ ೩(೬), ಪು.ಸಂ ೮೧–೮೭.

೦೨. ಆದ್ಯವೆಂಕಟೇಶ, (೨೦೧೧), **ಕರ್ನಾಟಕದಲ್ಲಿ ಅಕ್ರಮ ಗಣಿಗಾರಿಕೆಯ ಬಗ್ಗೆ ಲೋಕಾಯುಕ್ತ ತನಿಖಾ ವರದಿ**, ಲಂಕೇಶ ಪ್ರಕಾಶನ, ಬೆಂಗಳೂರು.

೦೩. ಆರ್ಗನೈಸ್ಡ್ ಬೈ ಸಮತ, (೨೦೦೮), **ಕನ್ಸ್ಯೂಲೆಷನ್ ಆನ್ ದಿ ಇಂಪ್ಯಾಕ್ಟ್ ಆಫ್ ಮೈನಿಂಗ್ ಆನ್ ಚಿಲ್ಡ್ರನ್ ಇನ್ ಇಂಡಿಯಾ**, ಹೈದ್ರಾಬಾದ್.

೦೪. ಇಲಿಂಗೋವನ್ ರಾಜಶೇಖರ್, (೨೦೧೮), 'ಡೇತ್ ಇನ್ ದಿ ಹಿಲ್ಸ್, ಫ್ರಂಟ್ ಲೈನ್, ಇಂಡಿಯ ನ್ಯಾಷನಲ್ ಮ್ಯಾಗಜೀನ್', ವ್ಯಾಲ್ಯೂಮ್ ೩೫(೦೭), ಪು.ಸಂ ೧೧೮–೧೨೪.

೦೫. ಇಯಾನ್ ರೆಂಗ್ಯೂ, (೨೦೧೨), **ಮೈನಿಂಗ್ ಅರ್ಥಶಾಸ್ತ್ರ**, ಡಿಸ್ಕವರಿ ಮಂಗೋಲಿಯಾ ಯು.ಎಸ್.ಎ.

೦೬. ಇಂಡಿಯನ್ ಬ್ಯಾರೋ ಆಫ್ ಮೈನ್ಸ್, (೧೯೯೯), **ಇಂಡಿಯನ್ ಮಿನರಲ್ ಇಯರ್ ಬುಕ್ ೧೯೯೮ ಅಂಡ್ ೧೯೯೯**, ಕಂಟ್ರೋಲರ್ ಜನರಲ್ ಐ.ಬಿ.ಎಂ, ನಾಗ್ಪುರ್.

೦೭. ಇಂಡಿಯನ್ ಬ್ಯಾರೋ ಆಫ್ ಮೈನ್ಸ್, (೨೦೦೫), **ಇಂಡಿಯನ್ ಮಿನರಲ್ ಇಯರ್ ಬುಕ್ ೨೦೦೪**, ಕಂಟ್ರೋಲರ್ ಜನರಲ್ ಐ.ಬಿ.ಎಂ, ನಾಗ್ಪುರ್.

೦೮. ಇಂಡಿಯನ್ ಬ್ಯಾರೋ ಆಫ್ ಮೈನ್ಸ್, (೨೦೦೬), **ಇಂಡಿಯನ್ ಮಿನರಲ್ ಇಯರ್ ಬುಕ್ ೨೦೦೫**, ಕಂಟ್ರೋಲರ್ ಜನರಲ್ ಐ.ಬಿ.ಎಂ, ನಾಗ್ಪುರ್.

೦೯. ಇಂಡಿಯನ್ ಬ್ಯಾರೋ ಆಫ್ ಮೈನ್ಸ್, (೨೦೧೭), **ಇಂಡಿಯನ್ ಮಿನರಲ್ ಇಯರ್ ಬುಕ್ ೨೦೧೫**, ಕಂಟ್ರೋಲರ್ ಜನರಲ್ ಐ.ಬಿ.ಎಂ, ನಾಗ್ಪುರ್.

೧೦. ಎಕಲಾಜಿಕಲ್ ಯೂನಿಟ್, ಇನ್ಸ್ಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೈಂಜ್ (೧೯೯೯) 'ಎನ್ವಾರನ್ಮೆಂಟ್ ಇನ್ ಕರ್ನಾಟಕ್: ಎ ಸ್ಟೆಚ್ಯೂ ರೀಪೋರ್ಟ್', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೊಲಿಟಿಕಲ್ ವಿಕ್ಲಿ, ವ್ಯಾಲ್ಯೂಮ್ ೩೪(೩೮), ಪುಸಂ ೨೭೩೫–೨೨೪೪.

೧೧. ಎಸ್ ಪಾಂಡ ಮತ್ತು ಅನೀಲ್ ಬೇರಿಕ್, (೨೦೧೦), 'ಇಂಪ್ಯಾಕ್ಟ್ ಆಫ್ ಐರನ್ ಒರ್ ಮೈನ್ಸ್ ಜೆನೆರೆಡೇಡ್ ಪೋಲ್ಯೂಟೆಂಟ್ ಆನ್ ಪೇರಿಫೈರಲ್ ಎನ್ವಿರಾನ್ಮೆಂಟ್ – ಎ ಕೇಸ್ ಸ್ಟಡಿ ಆಫ್ ಕೊಯಿರಾ ರಿಜಿಯನ್ ಒಡಿಶಾ', ಡಿಪಾರ್ಟ್ಮೆಂಟ್ ಆಫ್ ಮಿನರಲ್ ಪ್ರೋಸಸ್ ಅಂಡ್ ಟೆಕ್ನಾಲಜಿ, ಒಡಿಶಾ, ಪು.ಸಂ–೧೧೪೭–೧೧೫೬.

೧೨. ಐ.ಎಲ್.ಒ, (೨೦೦೨), **ದಿ ಇವೆಲ್ಯೂವೇಷನ್ ಆಫ್ ಎಂಪ್ಲ್ಯಾಮೆಂಟ್, ವರ್ಕಿಂಗ್ ಟೈಮ್ ಅಂಟ್ ದಿ ಮೈನಿಂಗ್ ಇಂಡಸ್ಟ್ರಿ**, ಡಾಕ್ಯೂಮೆಂಟ್ ಟಿ.ಎಂ.ಎಂ.ಐ/೨೦೦೨, ಇಂಟರ್ನ್ಯಾಷನಲ್ ಲೇಬರ್ ಆರ್ಗನೈಜೇಷನ್, ಜಿನಿವಾ.

೧೩. ಕರ್ನಾಟಕ ಸರ್ಕಾರ, (೨೦೧೨), **ಆರ್ಥಿಕ ಸಮೀಕ್ಷೆ ೨೦೦೯–೧೦**, ಬೆಂಗಳೂರು.

೧೪. ಕರ್ನಾಟಕ ಸರ್ಕಾರ, (೨೦೦೬), **ಕನಾಟಕ ಮಾನವ ಅಭಿವೃದ್ಧಿ ವರದಿ ೨೦೦೫**, ಯೋಜನಾ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

೧೫. ಕರಣ್.ಎ ವುಡ್ಸ್‌ನ ಎಡ್ವರ್ಡ್ ಇತರರು, (೨೦೧೧), 'ಮೈನ್ ವೆಸ್ಟ್, ಪಾಸ್ಟ್, ಪ್ರೆಸೆಂಟ್, ಫ್ಯೂಚರ್', ಎಲಿಮೆಂಟ್ಸ್ ವ್ಯಾಲ್ಯೂಮ್ ೭, ಪು.ಸಂ ೩೭೫–೩೮೦.

೧೬. ಕಿತುಲಾ ಎನ್.ಜಿ.ಎ, (೨೦೦೫), 'ಎನ್ವಾರನ್ಮೆಂಟಲ್ ಅಂಡ್ ಸೋಷಿಯೋ–ಎಕನಾಮಿಕ್ ಇಂಪ್ಯಾಕ್ಟ್ಸ್ ಆಫ್ ಮೈನಿಂಗ್ ಆನ್ ಲೋಕಲ್ ಲೈವ್ಲೀವುಡ್ ಇನ್ ಟಂಜನೀಯಾ: ಎ ಕೇಸ್ ಸ್ಟಡಿ

ಆಫ್ ಗಯಾಟ ಡಿಸ್ಟಿಕ್', ಜರ್ನಲ್ ಆಫ್ ಕ್ಲೀನರ್ ಪ್ರೋಡಕ್ಷನ್, ವ್ಯಾಲ್ಯೂಮ್ ೧೪, ಪು.ಸಂ ೪೦೫–೪೧೪.

೧೭. ಕುನಾಲ್ ಶಂಕರ್, (೨೦೧೮), 'ಅನಟೋಮಿ ಆಫ್ ಎ ಲ್ಯಾಂಡ್ ಗ್ರಾಫ್, ಫ್ರಂಟ್ ಲೈನ್, ಇಂಡಿಯ ನ್ಯಾಷನಲ್ ಮ್ಯಾಗಜೀನ್', ವ್ಯಾಲ್ಯೂಮ್ ೩೫(೦೫), ಪು.ಸಂ ೧೦೨–೧೧೯.

೧೮. ಕುಜ್ನೆಟ್ ಸೈಮನ್, (೧೯೬೬), 'ಮಾರ್ಡನ್ ಎಕನಾಮಿಕ್ ಗ್ರೋತ್, ಯಾಲೇ ಯೂನಿರ್ವಸಿಟಿ ಪ್ರೇಸ್, ನ್ಯೂ ಡೆಲ್ಲಿ ಕುಂತಲ್, ಲಹರಿ ದತ್ ಅಂಡ್ ಅದರ್ಸ್ (೨೦೦೫) ದೀ ಕೋಲ್ ಸೈಕಲ್; ಸ್ಮಲ್ ಸ್ಕೇಲ್ ಆಫ್ ಇಲ್‌ಲೀಗಲ್ ಕೋಲ್ ಸಪ್ಲೇ ಇನ್ ಎಸ್ಟ್ರನ್ ಇಂಡಿಯಾ, ರಿಸೋರ್ಸ್', ಎನರ್ಜಿ ಅಂಡ್ ಡೆವೆಲಪ್ಮೆಂಟ್, ವ್ಯಾಲ್ಯೂಮ್ ೨(೨), ಪುಸಂ ೯೩–೧೦೫.

೧೯. ಕುಮುದ್ ಡೂಬ್ಲೇ, (೨೦೧೭), 'ಸೋಷಿಯೋ ಎಕನಾಮಿಕ್ ಇಂಫ್ಯಾಕ್ಟ್ ಸ್ಟಡಿ ಆಫ್ ಮೈನಿಂಗ್ ಪಾಲಿಸಿ ಆನ್ ದೀ ಲೇವ್ಲಿವುಡ್ಸ್ ಆಫ್ ಲೋಕಲ್ ಪಾಪ್ಯೂಲೇಶನ್ ಇನ್ ದೀ ವಿಂದ್ಯಾನ್ ರಿಜಿಯನ್ ಆಫ್ ಉತ್ತರ್‌ಪ್ರದೇಶ್', ಸೆಂಟರ್ ಫಾರ್ ಸೋಷಿಯಲ್ ಫಾರೆಸ್ಟ್ರೀ ಅಂಡ್ ಎಕೋ–ರ್ಹೇಬ್ಲಿಷನ್, ಅಲಹಬಾದ್.

೨೦. ಕೆಂಪ್ ಡಿ.ಆರ್ ಅಂಡ್ ಅದರ್ಸ್, (೨೦೦೬), 'ಕಮ್ಯೂನಿಟಿ ರಿಲೇಷನ್ಸ್ ಮ್ಯಾನೇಜ್ಮೆಂಟ್ ಸಿಸ್ಟಮ್ಸ್ ಇನ್ ದೀ ಮೈನಿಂಗ್ ಇಂಡಸ್ಟ್ರೀ: ಕಾಂಬ್ಯಾನಿಂಗ್ ಕಾನ್ವೆಷನಲ್ ಅಂಡ್ ಸ್ಟಾಕ್‌ಹೋಲ್ಡರ್ ಡ್ರೈವನ್ ಅಪ್ರೋಚ್ಸ್', ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸಸ್ಟೈನೇಬಲ್ ಡೆವೆಲಪ್ಮೆಂಟ್, ವ್ಯಾಲ್ಯೂಮ್ ೯(೪), ಪುಸಂ ೩೯೦–೪೦೩.

೨೧. ಕ್ರೇನ್ ಎ ವುಡ್ಸನ್ ಎಡ್ವರ್ಡ್, ಹೈದರ್ ಇ ಜೇಮ್ಸನ್, ಬ್ರೇಂಡ್ ಜಿ, (೨೦೧೧), 'ಮೈನ್ ವೇಸ್ಟ್: ಪಾಸ್ಟ್, ಪ್ರಸೆಂಟ್, ಫ್ಯೂಚರ್', ಎಲಿಮೆಂಟ್ಸ್, ವ್ಯಾಲ್ಯೂಮ್ ೭, ಪು.ಸಂ ೩೭೫–೩೮೦.

೨೨. ಕೃಷ್ಣ ಮೂರ್ತಿ.ಎಂ.ಕೆ ಮತ್ತು ಹರಿಪ್ರಸಾದ್, (೧೯೮೦), **ಪರಿಸರ ಮಾಲಿನ್ಯ**, ಪ್ರಾಸಾರಾಂಗ, ಮೈಸೂರು ವಿಶ್ವವಿದ್ಯಾಲಯದ, ಮೈಸೂರು.

೨೩. ಗವರ್ನ್‌ಮೆಂಟ್ ಆಫ್ ಇಂಡಿಯಾ, (೨೦೦೪), **ಮೈನಿಂಗ್ ಅಂಡ್ ಕ್ವಾರಿಯಿಂಗ್ ಇನ್ ಸ್ಟೇಟ್ ಆಫ್ ದಿ ಎನ್ವಾರನ್ಮೆಂಟ್**, ಬೆಂಗಳೂರು.

೨೪. ಗವರ್ನ್‌ಮೆಂಟ್ ಆಫ್ ಕರ್ನಾಟಕ, (೨೦೧೫), **ಹ್ಯೂಮನ್ ಡೆವಲಪ್ಮೆಂಟ್ ಪ್ರೀಫರೆನ್ಸ್ ಆಫ್ ಗ್ರಾಮ ಪಂಚಾಯತ್ ಇನ್ ಕರ್ನಾಟಕ**, ಪ್ಲಾನಿಂಗ್ ಪ್ರೋಗ್ರಾಮ್ ಮಾನಿಟರಿಂಗ ಅಂಡ್ ಸ್ಟಾಟಿಸ್ಟಿಕ್ಸ್ ಡಿಪಾರ್ಟ್‌ಮೆಂಟ್ , ಗವರ್ನ್‌ಮೆಂಟ್ ಆಫ್ ಕರ್ನಾಟಕ.

೨೫. ಗುಪ್ತ ಪಿ.ಕೆ, (೨೦೦೦), **ಮೆಥೆಡ್ಸ್ ಇನ್ ಎನ್ವಾರನ್ಮೆಂಟಲ್ ಅನೈಲಿಸ್ಸ್: ವಾಟರ್, ಸ್ವೈಲ್ ಅಂಡ್ ಎರ್**, ಅಗ್ರೋಬಿಯಸ್ ಪಬ್ಲಿಕೇಷನ್ಸ್, ಜೋದ್‌ಪುರ್, ಇಂಡಿಯಾ.

೨೬. ಗೋಸ್ ಎಂ.ಕೆ ಆಂಡ್ ಮಜೀ ಎಸ್ ಆರ್, (೨೦೦೦), 'ಕ್ಯಾರೆಕ್ಟಸ್ಟಿಕ್ಸ್ ಆಫ್ ಹಜಾರ್ಡೋಸ್ ಏರ್ ಬೋನ್ ಡಸ್ಟ್ ಅರೌಂಡ್ ಆ್ಯನ್ ಇಂಡಿಯನ್ ಸರ್ಫಸ್ ಕೋಲ್ ಮೈನಿಂಗ್ ಏರಿಯಾ', ಎನ್ವಾರನ್ಮೆಂಟ್ ಇಂಟರ್ ನ್ಯಾಷನಲ್, ವ್ಯಾಲ್ಯೂಮ್ ೨೬(೧), ಪು.ಸಂ ೮೧–೮೫.

೨೭. ಗೋಸ್ ಎಂ.ಕೆ, (೧೯೮೯), 'ಲ್ಯಾಂಡ್ ರೀಕ್ಲೈಮೇಶನ್ ಆಫ್ ಎನ್ವಾರನ್ಮೆಂಟ್ ಫಾರ್ಮ್ ದೀ ಎಫೆಕ್ಟಿವ್ ಆಫ್ ಕೋಲ್ ಮೈನಿಂಗ್ ಅಪರೇಷನ್', ಜರ್ನಲ್ ಆಫ್ ಮೈನ್ –ಟೆಕ್ನಾಲಾಜಿ, ವ್ಯಾಲ್ಯೂಮ್ ೧೦(೫), ಪು.ಸಂ ೩೫–೩೯.

೨೮. ಗೋಠೆ ಎಂ.ಎನ್, (೧೯೯೧), **ಖನಿಜ ಸಂಸ್ಕರಣ ಪರಿಚಯ**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೨೯. ಗೋಪಾಲ್.ಕೆ.ಕಡೆಕೋಡಿ, ಪ್ರಣಬ್ ಮುಖ್ಯೋಪಾದ್ಯಾಯ, (೨೦೧೧), 'ಮಿಸ್ಸಿಂಗ್ ದಿ ವುಡ್ಸ್ ಫಾರ್ ಒರ್: ಗೋವಾಸ್ ಡೆವೆಲಪ್ಮೆಂಟ್ ಮಾಫಿಯಾ', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೊಲಿಟಿಕಲ್ ವಿಕ್ಲಿ, ವ್ಯಾಲ್ಯೂಮ್ ೪೬(೪೬), ಪು ಸಂ ೬೧–೬೭.

೩೦. ಚಕ್ರವರ್ತಿ ಎಂ.ಕೆ, ಅಹ್ಮದ್ ಎಂ ಅಂಡ್ ಅದರ್ಸ್, (೨೦೦೨), 'ಡಿಟರ್ಮಿನೇಷನ್ ಆಫ್ ದೀ ಎಮೀಷನ್ ರೆಟ್ ಫಾರ್ಮ್ ವಾರಿಯಸ್ ಒಪನ್‌ಕಾಸ್ಟ್ ಮೈನಿಂಗ್ ಅಪರೇಷನ್ಸ್', ಎನ್ವಾರನ್ಮೆಂಟ್ ಮಾಡಲ್ ಸಾಫ್ಟ್‌ವೆರ್, ವ್ಯಾಲ್ಯೂಮ್ ೧೭, ಪು.ಸಂ ೪೬೭-೪೮೦.

೩೧. ಚಂದ್ರಶೇಖರ್ ಟಿ.ಆರ್, (೨೦೧೩), **ಕರ್ನಾಟಕ ಸರ್ಕಾರದ ಮುಂದಿರುವ ಸವಾಲುಗಳು**, ನವ ಕರ್ನಾಟಕ ಪಬ್ಲಿಕೇಶನ್, ಬೆಂಗಳೂರು ಪು.ಸಂ ೧-೧೬

೩೨. ಚಂದ್ರಶೇಖರ್ ಟಿ.ಆರ್, (೨೦೦೫), **ಜನರ ಯೋಜನೆ; ಕರ್ನಾಟಕದ ಅನುಭವಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ಚಂದ್ರಶೇಖರ್ ಟಿ.ಆರ್, (೨೦೧೧), **ವಿಜಾಪುರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಚಂದ್ರಶೇಖರ್ ಟಿ.ಆರ್, (೨೦೧೪), **ಮಾನವ ಅಭಿವೃದ್ಧಿ, ಮಾನವ ಬಡತನ ಮತ್ತು ಮಾನವ ಹಕ್ಕುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಚಂದ್ರಶೇಖರ್ ಟಿ.ಆರ್, (೨೦೦೮), **ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ಚಂದ್ರಶೇಖರ್ ಟಿ.ಆರ್, (೨೦೧೦), **ಆಹಾರ ಮತ್ತು ಆಹಾರದ ಹಕ್ಕು**, ಅಭಿವೃದ್ಧಿ ಅಧ್ಯಯನ, ಸಂಪುಟ ೮, ಸಂಚಿಕೆ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು,ಸಂ ೧೨-೩೨.

೩೭. ಚಂದ್ರಭೂಷನ್, (೨೦೦೫), 'ರಿಚ್ ಲ್ಯಾಂಡ್ ಪೂರ್ ಪೀಪಲ್ ದಿ ಸೋಷಿಯೋ ಎನ್ವಾರನ್ಮೆಂಟಲ್ ಚಾಲೆಂಜಸ್ ಆಫ್ ಮೈನಿಂಗ್ ಇನ್ ಇಂಡಿಯಾ', ಜರ್ನಲ್ ಆಫ್ ಸೈನ್ಸ್ ಸೆಂಟರ್ ಅಂಡ್ ಎನ್ವಿರಾನ್ಮೆಂಟಲ್, ದೆಹಲಿ.

೩೮. ಚಂದ್ರಶೇಖರ್ ಡಿ.ಎಂ ಅಂಡ್ ಅದರ್ಸ್, (೧೯೮೭), 'ಸೋಷಿಯಲ್ ಫಾರೆಸ್ಟ್ರೀ ಇನ್ ಕರ್ನಾಟಕ್; ಆ್ಯನ್ ಇಂಫ್ಯಾಕ್ಟ್ ಅನಾಲಿಸ್ಸ್', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೋಲಿಟಿಕಲ್ ವಿಕ್ಲಿ, ವ್ಯಾಲ್ಯೂಮ್ ೨೨(೨೪), ಪು ಸಂ ೯೩೫-೯೪೧.

೩೯. ಚಂದ್ರಪೂಜಾರಿ.ಎಂ, (೨೦೧೪), **ಸಂಶೋಧನಾ ಪರಿಭಾಷೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ಚಂದ್ರಪೂಜಾರಿ.ಎಂ, (೨೦೧೭), **ಅಭಿವೃದ್ಧಿ ಸಿದ್ಧಾಂತಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಚಂದ್ರಪೂಜಾರಿ.ಎಂ, (೨೦೧೪), **ಬಡತನ ಮತ್ತು ಪ್ರಜಾಪ್ರಭುತ್ವ**, ಗಾಯತ್ರಿ ಪ್ರಕಾಶನ, ಬಳ್ಳಾರಿ.

೪೨. ಚಂದ್ರಪೂಜಾರಿ.ಎಂ, (೨೦೦೫),ಜಂಟಿ ಅರಣ್ಯ ನಿರ್ವಹಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಚಂದ್ರಪೂಜಾರಿ.ಎಂ, (೨೦೧೦), **ಕರ್ನಾಟಕದ ಪಂಚವಾರ್ಷಿಕ ಯೋಜನೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಚಂದ್ರಪೂಜಾರಿ.ಎಂ, (೨೦೦೨), 'ಸೋಶಿಯಲ್ ಕ್ಯಾಪಿಟಲ್-ಅಭಿವೃದ್ಧಿಯ ಹೊಸ ಮಿಸ್ಸಿಂಗ್ ಲಿಂಕ್', ಅಭಿವೃದ್ಧಿ ಅಧ್ಯಯನ, ಸಂಚಿಕೆ.೧, ಸಂಪುಟ.೨, ಪು.ಸಂ ೧೧-೩೨.

೪೫. ಚೌವ್ಹಾನ್ ಎಸ್.ಎಸ್, (೨೦೧೦), 'ಮೈನಿಂಗ್ ಡೆವೆಲಪ್ಮೆಂಟ್ ಅಂಡ್ ಎನ್ವಾರನ್ಮೆಂಟ್: ಎ ಕೇಸ್ ಸ್ಟಡಿ ಆಫ್ ಬಿಜೋಲಿಯಾ ಮೈನಿಂಗ್ ಎರಿಯಾ ಇನ್ ರಾಜಸ್ಥಾನ, ಇಂಡಿಯಾ', ಜರ್ನಲ್ ಆಫ್ ಹ್ಯೂಮನ್ ಎಕಲಾಜಿ, ವ್ಯಾಲ್ಯೂಮ್ ೩೧(೧), ಪು.ಸಂ ೫-೭೨.

೪೬. ಜಾನ್ಸನ್ ಎಂ, (೨೦೦೪), 'ಪಿ.ಜಿ.ಎಂ ಮೈನಿಂಗ್ ಇನ್ ರಷ್ಯ:ಇನ್ ಪ್ಲಾಟಿನಂ ೨೦೦೪', ಲಂಡನ್, ಯೂಕೆ, ಪು.ಸಂ ೧೬-೨೧.

೪೭. ಜಿ.ಆರ್ ಸತ್ಯಲಿಂಗರಾಜು, (೨೦೦೫), ಜಲ ಮಾಲಿನ್ಯ ನಿಯಂತ್ರಣ ಮತ್ತು ತಡೆಗಟ್ಟುವಿಕೆ ಅಧಿನಿಯಮ ೧೯೭೪, ೧೯೭೫, ಉಪಕರ ಅಧಿನಿಯಮ ೧೯೭೮, ಚೇತನ್ ಬುಕ್ ಹೌಸ್, ಮೈಸೂರು.
೪೮. ಜಿ. ಆರ್ ಸತ್ಯಲಿಂಗರಾಜು, (೨೦೦೫), ಮಗುವಿನ ಹಕ್ಕುಗಳ ಮೇಲಿನ ಒಡಂಬಡಿಕೆ, ಚೇತನ್ ಬುಕ್ ಹೌಸ್, ಮೈಸೂರು.
೪೯. ಜನಾರ್ದನ, (೨೦೧೦), 'ಸರ್ವಶಿಕ್ಷಣ ಅಭಿಯಾನ ಮತ್ತು ವಸತಿ ಶಾಲೆಗಳು', ಅಭಿವೃದ್ಧಿ ಅಧ್ಯಯನ, ಸಂ.೮, ಸಂಚಿಕೆ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨೭-೧೪೪.
೫೦. ಜಿಲ್ಲಾಡಳಿತ ಗುಲ್ಬರ್ಗಾ, (೨೦೧೪), ಹೈದ್ರಾಬಾದ್-ಕರ್ನಾಟಕ: ಅಂದು, ಇಂದು, ಮುಂದೆ, ಶ್ರೀವಾಸವಿ ಪ್ರಿಂಟರಸ್, ಗುಲ್ಬರ್ಗಾ, ಪು.ಸಂ ೩೨-೬೨.
೫೧. ಜೆನ್ನಿ ಲ್ಯಾನ್ ನೆಲ್ಸನ್, ಜೋಹಾನ್ ರ್‍ಯಾಂಡ್ಹೆಮ್, (೨೦೦೮), 'ಎನ್ವಾರನ್ಮೆಂಟಲ್ ಇಂಪ್ಯಾಕ್ಟ್ ಅಂಡ್ ಹೆಲ್ತ್ ಅಸ್ಪೆಟ್ ಇನ್ ದೀ ಮೈನಿಂಗ್ ಇಂಡಸ್ಟ್ರೀ, ಡಿಪಾರ್ಟ್‌ಮೆಂಟ್ ಆಫ್ ಎನರ್ಜಿ ಅಂಡ್ ಎನ್ವಾರನ್ಮೆಂಟ್', ಗೇಟ್‌ಬಾರ್ಗ್, ಸ್ವೀಡನ್, ರಿಪೋರ್ಟ್ ನಂ ೨೦೦೮:೨೦.
೫೨. ಜೋಶ್‌ಚಿನ್, (೨೦೦೬), 'ಬಳ್ಳಾರಿಯ ಗಣಿಗಾರಿಕೆ, ಭಾರತದ ರಾಷ್ಟ್ರೀಯ ಮ್ಯಾಗನೀಸ್ ಫ್ರಂಟ್‌ಲೈನ್', ಸಂಪುಟ-೨೩, ಸಂಚಿಕೆ-೧೧ ಜೂನ್, ೨೦೦೬.
೫೩. ಜಾರ್ಜ್ ಎಂ. ಒಸಿಂಗ್, (೨೦೧೦), 'ಇಂಪ್ಯಾಕ್ಟ್ ಆಫ್ ಮೈನಿಂಗ್ ಆನ್ ವಾಟರ್ ರಿಸೋರ್ಸ್ ಇನ್ ಸೌತ್ ಆಫ್ರಿಕಾ ಎ ರಿವ್ಯೂವ್, ಸೆಂಟಿಫಿಕ್ ರಿಸರ್ಚ್ ಅಂಡ್ ಎಸ್ಸೆಸ್ ಅಕಡಾಮಿಕ್ ಜರ್ನಲ್', ವ್ಯಾಲ್ಯೂಮ್ ೫(೨೨), ಪು.ಸಂ ೩೩೫೧-೩೩೫೭.
೫೪. ಜಾನ್ ಹ್ಯಾರಿಸ್ ಅಂಡ್ ಅದರ್ಸ್, (೨೦೧೦), 'ಲ್ಯಾಂಡ್, ಲೇಬರ್ ಅಂಡ್ ಕಾಸ್ಟ್ ಪಾಲಿಟಿಕ್ಸ್ ಇನ್ ತಮಿಳ್‌ನಾಡು ಇನ್ ೨೦ನೇ ಸೆಂಚೂರಿ : ಇರುವಲ್ಲಟ್ (೧೯೧೬-೨೦೦೮)', ಜರ್ನಲ್ ಆಫ್ ಎಕನಾಮಿಕ್ ಅಂಡ್ ಪೋಲಿಟಿಕಲ್ ವಿಕ್ಲಿ, ವ್ಯಾಲ್ಯೂಮ್ ೪೫(೩೧) ಜುಲೈ ೩೧.
೫೫. ಜುಲಿಯೊ ಹೆನೊ ಅಂಡ್ ಅದರ್ಸ್, (೨೦೦೬), 'ಅಗ್ರಿಕಲ್ಚರಲ್ ಪ್ರೊಡೆಕ್ಷನ್ ಅಂಡ್ ಸ್ವಾಯಲ್ ನ್ಯೂಟ್ರೇಟ್ ಮೈನಿಂಗ್ ಇನ್ ಆಫ್ರಿಕಾ : ಇಂಪ್ಲಿಕೇಶನ್ ಫಾರ್ ರಿಸೋರ್ಸ್ ಕಂಜರ್‌ವೇಶನ್ ಅಂಡ್ ಪಾಲಿಸಿ ಡೆವಲಪ್‌ಮೆಂಟ್, ಆನ್ ಇಂಟರ್ ನ್ಯಾಷನಲ್ ಸೆಂಟರ್ ಫಾರ್ ಸ್ವಾಯಲ್ ಫೇಟ್ರೀಲಿಟಿ ಅಂಡ್ ಅಗ್ರೀಕಲ್ಚರ್ ಡೆವಲಪ್‌ಮೆಂಟ್', ಯು.ಎಸ್.ಎ ಪು.ಸಂ ೧-೧೩.
೫೬. ಜೈಕುಮಾರ್, (೨೦೦೯), ಪರಿಸರ ಸ್ನೇಹಿ, ಕೃಷಿ ಕ್ಯೂಬಾ ಮಾದರಿ, ಕ್ರಿಯಾ ಪ್ರಕಾಶನ ಬೆಂಗಳೂರು.
೫೭. ಟೆರೆನ್ಸ್ ಜಾರ್ಜ್ ಅಂಡ್ ಅದರ್ಸ್, (೨೦೧೩), 'ಸರ್ವೆ ಆಫ್ ಎನ್ವಿರಾನ್ಮೆಂಟಲ್ ಅಂಡ್ ಸೋಷಿಯೋ ಎಕನಾಮಿಕ್ ಇಂಪ್ಯಾಕ್ಟ್ ಆಫ್ ಇನ್ವರ್ಮ್ ಬ್ಯಾನ್ ಆನ್ ಮೈನಿಂಗ್ ಇನ್ ಗೋವಾ', ಎ.ಇ.ಎ ರಿಸೋರ್ಸ್ ಅಂಡ್ ರೆಸ್ಪಾನ್ಸ್ ಸೆಂಟರ್, ಗೋವಾ, ಇಂಡಿಯಾ, ಪು.ಸಂ ೧-೪೪.
೫೮. ಡಿಪಾರ್ಟ್ಮೆಂಟ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್, (೨೦೦೭) ಡಿಸ್ಟಿಕ್ ಇಂಡಸ್ಟ್ರೀಯಲ್ ಡೆವೆಲಪ್‌ಮೆಂಟ್ ಪ್ಲಾನ್ ೨೦೦೬-೧೧ ಬಳ್ಳಾರಿ ಡಿಸ್ಟಿಕ್, ಬೆಂಗಳೂರು.
೫೯. ಡೀ ಎ.ಕೆ, (೨೦೦೬), ಎನ್ವಾರನ್ಮೆಂಟಲ್ ಕೆಮಿಸ್ಟ್ರಿ ,ನ್ಯೂ ಎಜ್ ಪಬ್ಲೀಷರ್ಸ್, ನ್ಯೂ ಡೆಲ್ಲಿ, ಇಂಡಿಯಾ.
೬೦. ಡುಕಾ.ಎಸ್, ಆರ್ಡಿನೋ ಡಿ.ಸಿ, (೧೯೯೭), 'ಎನ್ವಾರನ್ಮೆಂಟಲ್ ಇಂಪ್ಯಾಕ್ಟ್ಸ್ ಆಫ್ ಮೆಟಲ್ ಒರ್ ಮೈನಿಂಗ್ ಅಂಡ್ ಪ್ರೋಸೆಸಿಂಗ್ ಎ ರಿವ್ಯೂವ್, ಜರ್ನಲ್ ಆಫ್ ಎನ್ವಾರನ್ಮೆಂಟ್', ಕ್ವ್ಯಾಲ್ ೨೬, ಪು.ಸಂ ೫೯೦-೬೦೨
೬೧. ಡೂಬೆ ಕೆ ಅಂಡ್ ಡೂಬೆ ಪಿ.ಕೆ, (೨೦೧೧), 'ಇಂಪ್ಯಾಕ್ಟ್ ಮೈನಿಂಗ್ ಆನ್ ಟ್ರಿ ಡ್ರೈವರ್‌ಸಿಟಿ ಆಫ್ ದಿ ಸಿಲಿಕಾ ಮೈನಿಂಗ್ ಫಾರೆಸ್ಟ್ ಎರಿಯಾ ಅಟ್ ಶಂಕರ್‌ಘಡ್ ಆಲಹಬಾದ್, ಇಂಡಿಯಾ', ಜರ್ನಲ್ ಆಫ್ ಫಾರೆಸ್ಟ್ರಿ ರಿಸರ್ಚ್, ವ್ಯಾಲ್ಯೂಮ್ ೨೨(೪), ಪು.ಸಂ ೫೨೭-೫೩೭.

